# ರವಿ ಬೆಳಗೆರೆಯವರ ಸಾಹಿತ್ಯ ಮತ್ತು ಭಾಷೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ. ಮಹಾಪ್ರಬಂಧ)


ಸಂಶೋಧಕ

ಬಸವರಾಜ ಎಚ್. ಅಯ್ಯಪ್ಪ ಎಚ್

ಮಾರ್ಗದರ್ಶಕರು

ಡಾ. ಸಾಂಬಮೂರ್ತಿ

ಪ್ರಾಧ್ಯಾಪಕರು





ಭಾಷಾ ನಿಕಾಯ

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೫

# ರವಿ ಬೆಳಗೆರೆಯವರ ಸಾಹಿತ್ಯ ಮತ್ತು ಭಾಷೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ ಮಹಾಪ್ರಬಂಧ)



ಸಂಶೋಧಕ

**ಬಸವರಾಜ ಎಚ್. ಅಯ್ಯಪ್ಪ ಎಚ್**

ಮಾರ್ಗದರ್ಶಕರು

**ಡಾ. ಸಾಂಬಮೂರ್ತಿ**

ಪ್ರಾಧ್ಯಾಪಕರು



ಭಾಷಾ ನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬
೨೦೧೫

# ಸಂಶೋಧಕರ ಪ್ರಮಾಣ ಪತ್ರ

**ಬಸವರಾಜ ಎಚ್. ಅಯ್ಯಪ್ಪ ಎಚ್** ಆದ ನಾನು **"ರವಿ ಬೆಳಗೆರೆಯವರ ಸಾಹಿತ್ಯ ಮತ್ತು ಭಾಷೆ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ.ಸಾಂಬಮೂರ್ತಿ ಪ್ರಾಧ್ಯಾಪಕರು, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

ಸ್ಥಳ : ವಿದ್ಯಾರಣ್ಯ
ದಿನಾಂಕ: ೨೪ /೦೬ /೨೦೧೫

**ಬಸವರಾಜ ಎಚ್. ಅಯ್ಯಪ್ಪ ಎಚ್**
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಮಾರ್ಗದರ್ಶಕರ ದೃಢೀಕರಣ ಪತ್ರ

**ಬಸವರಾಜ ಎಚ್. ಅಯ್ಯಪ್ಪ ಎಚ್** ಅವರು **"ರವಿ ಬೆಳಗೆರೆಯವರ ಸಾಹಿತ್ಯ ಮತ್ತು ಭಾಷೆ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಪ್ರಸ್ತುತ ಮಹಾಪ್ರಬಂಧವನ್ನು ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು
**ಡಾ. ಸಾಂಬಮೂರ್ತಿ**
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: ೫/ ೬ /೨೦೧೫

## ಒಡಲು

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

**ಪ್ರಸ್ತಾವನೆ**

ಸಾಹಿತ್ಯವು ನಿರಂತರ ಚಲನಶೀಲವಾಗಿರುವ ಸಾಂಸ್ಕೃತಿಕ ಕ್ರಿಯೆ. ಮಾನವ ಜೀವನದ ಎಲ್ಲಾ ಸಾಧ್ಯತೆಗಳನ್ನು ಹುಡುಕಾಟ, ನಂಬಿಕೆ, ಪುರಾಣ, ಪದ್ಧತಿ, ಆಚಾರ–ವಿಚಾರ, ಧರ್ಮ, ಹುಟ್ಟು–ಸಾವು ಮುಂತಾದವುಗಳನ್ನೆಲ್ಲಾ ಸಾಹಿತ್ಯವು ಶೋಧಿಸುತ್ತದೆ. ಮಾನವನ ತೀವ್ರವಾದ ಅನುಭವ, ದಿಗ್ಭ್ರಮೆ, ಬದುಕಿನ ವಿಶಿಷ್ಟ ಕ್ಷಣಗಳನ್ನು ದಾಖಲಿಸುತ್ತದೆ. ಜೀವನದ ನಿಗೂಢತೆಯ ದ್ವಂದ್ವಗಳನ್ನೆಲ್ಲಾ ತನ್ನ ಉತ್ಕೃಷ್ಟ ಭಾಷೆಯಲ್ಲಿ ಸಮರ್ಥವಾದ ರೂಪಕ, ಪ್ರತಿಮೆ, ಸಂಕೇತಗಳ ಮೂಲಕ ಶೋಧಿಸುತ್ತದೆ. ಹಾಗೆಯೇ ಅದು ಮಾನವೀಯತೆಯ ಅತ್ಯುನ್ನತ ಮಟ್ಟದಲ್ಲಿ, ತೀವ್ರ ಪ್ರೀತಿಯಲ್ಲಿ ವ್ಯಕ್ತಪಡಿಸುವತ್ತಾ ಸದಾ ಗಮನಹರಿಸುತ್ತಿರುತ್ತದೆ. ಭಾಷೆಯಾದ ಜೀವನಾನುಭವಗಳನ್ನು ಅಭಿವ್ಯಕ್ತಿಸುವ ಮಾಧ್ಯಮ ಕಾರಣ, ಸಾಹಿತ್ಯ ಸೃಷ್ಟಿಯೆಂಬುದು ಭಾಷೆಯಲ್ಲೇ ಮೈದಾಳುತ್ತದೆ. ಶೈಲಿ ಶಾಸ್ತ್ರಜ್ಞರು ಗುರುತಿಸುವಂತೆ ಸಾಹಿತ್ಯವೆಂದರೆ ಭಾಷೆಯೇ ಆಗಿದೆ.

ಹೀಗೆ ಸಾಹಿತ್ಯದಲ್ಲಿ ಮಂಡಿತವಾಗುತ್ತಿರುವ ಮಾನವ ಜೀವನದ ಎಲ್ಲಾ ಮುಖಗಳನ್ನು ಸಮರ್ಥವಾದ ಭಾಷೆ, ತಂತ್ರ, ವಸ್ತು ಮುಂತಾದವುಗಳ ಮೂಲಕ ನಿರೂಪಿಸುತ್ತದೆ. ಇಂತಹ ಕನ್ನಡ ಸಾಹಿತ್ಯ ಮತ್ತು ಕನ್ನಡ ಭಾಷೆ ತನ್ನದೇ ಆದ ಚರಿತ್ರೆಯನ್ನು ಹೊಂದಿವೆ. ಅದರ ವ್ಯಾಪ್ತಿ ವಿಸ್ತಾರವುಳ್ಳದ್ದು. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ವಿದ್ವಾಂಸರು, ಸೃಜನಶೀಲ ಲೇಖಕರು ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ. ಮೂಲತಃ ಬೇರೊಂದು ಕ್ಷೇತ್ರದಲ್ಲಿ ವೃತ್ತಿಜೀವನವನ್ನು ನಡೆಸುತ್ತ ತಮ್ಮ ಸೃಜನಶೀಲತೆಯಿಂದ ಕನ್ನಡ ಸಾಹಿತ್ಯ ರಚನೆಯಲ್ಲಿ ತೊಡಗಿರುವ ಲೇಖಕರ ದೊಡ್ಡ ಗುಂಪನ್ನೇ ಕಾಣಬಹುದು. ಅಂತಹ ಕೆಲವು ಬರಹಗಾರರೆಂದರೆ ನಿರಂಜನ, ಯಶವಂತ ಚಿತ್ತಾಲ, ವ್ಯಾಸರಾಯ ಬಲ್ಲಾಳ, ಅನುಪಮಾ ನಿರಂಜನ, ರಾವಬಹದ್ದೂರ, ಅ.ನ.ಕೃಷ್ಣರಾಯ, ನಿರಂಜನ ಮುಂತಾದ ಮಹನೀಯರ ದೀರ್ಘ ಪಟ್ಟಿಯನ್ನೇ ಕೊಡಬಹುದು. ಇಂತಹವರ ಸಾಲಿನಲ್ಲಿ ಪಿ.ಲಂಕೇಶ್ ಮತ್ತು ರವಿ ಬೆಳಗೆರೆಯವರೂ ಸೇರಿಕೊಳ್ಳುತ್ತಾರೆ. ತಮ್ಮ ಸೂಕ್ಷ್ಮ

ಸೃಜನಶೀಲ ಬರಹಗಳಿಂದ ಕನ್ನಡ ಸಾಹಿತ್ಯ ಮತ್ತು ಪತ್ರಿಕೋದ್ಯಮಕ್ಕೆ ಹೊಸ ರೂಪು ನೀಡಿದ್ದಾರೆ. ಈ ಲೇಖಕರ ಸಾಹಿತ್ಯ, ಭಾಷೆ, ವಸ್ತು, ಸಂವೇದನಾಶೀಲತೆಯನ್ನು ಕುರಿತು ಅಧ್ಯಯನ ಮಾಡುವ ಅಗತ್ಯ ಪ್ರಸ್ತುತ ದಿನಮಾನಗಳಲ್ಲಿದೆ ಎನಿಸುತ್ತದೆ. ಆ ದೃಷ್ಟಿಯಿಂದ 'ರವಿ ಬೆಳಗೆರೆಯವರ ಸಾಹಿತ್ಯ ಮತ್ತು ಭಾಷೆ'ಯನ್ನು ಕುರಿತಂತೆ ಹಲವಾರು ಚಿಂತನೆಗಳನ್ನು ಈ ಪ್ರಬಂಧದಲ್ಲಿ ಸ್ಥೂಲವಾಗಿ ವಿಶ್ಲೇಷಿಸಲಾಗಿದೆ.

ರವಿ ಬೆಳಗೆರೆಯವರು ಪರಿಚಿತರಾದದ್ದು 'ಕರ್ಮವೀರ', 'ಕಸ್ತೂರಿ' ಪತ್ರಿಕೆಗಳಲ್ಲಿ ತಂದ ಹೊಸತನ ಮತ್ತು ಜೀವಂತಿಕೆಯಿಂದ. ೮೦ರ ದಶಕದ ಆರಂಭದಲ್ಲಿ ಕಂಡುಬರುವ ಪ್ರಮುಖ ಬರಹಗಾರರಲ್ಲಿ ಅವರು ಒಬ್ಬರು. 'ಬೆಳಗೆರೆ' ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಪುಟ್ಟಗ್ರಾಮ. ಆದರೆ ರವಿಯವರು ಹುಟ್ಟಿ ಬೆಳೆದದ್ದು ಹಾಗೂ ಸಾಹಿತ್ಯದ ಕೃಷಿ ಮಾಡಲು ಆರಂಭಿಸಿದ್ದು ಬಳ್ಳಾರಿಯಲ್ಲೇ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ 'ಬೆಳಗೆರೆ' ಕುಟುಂಬದ ಹೆಸರು ಮರೆಯಲಾರದಂತದ್ದು, ಅಜ್ಜಂದಿರಾದ ಶ್ರೀ ಚಂದ್ರಶೇಖರ ಶಾಸ್ತ್ರಿಗಳ ಪದ್ಯ ರಚನೆಯ ಜಾನಪದೀಯ ಜಾಣ್ಮೆ, ದೊಡ್ಡಮ್ಮ ಜಾನಕಮ್ಮನ ಭಾವತನ್ಮಯ ಅಂತಃಕರಣ, ಸೋದರಮಾವಂದಿರಾದ ಸೀತಾರಾಮ ಶಾಸ್ತ್ರಿ(ಕ್ಷೀರ ಸಾಗರ) ಅವರ ಜನಪದ ನಾಟಕ, ಸೃಜನ ಕೌಶಲ ಕೃಷ್ಣಶಾಸ್ತ್ರಿಯವರ ಗ್ರಾಮ್ಯ ಜೀವನಾನುಭವ ಮತ್ತು ವ್ಯಕ್ತಿ ಸಂಪರ್ಕ, ತಾಯಿ ಪಾರ್ವತಮ್ಮನ ಪುಸ್ತಕ ವಾಚನಾಭಿರುಚಿ ಇಂತಹ ಪ್ರತಿಭಾಸಂಪನ್ನ ಮನೆತನಕ್ಕೆ ಸಂಬಂಧಿಸಿದವರು ರವಿ ಬೆಳಗೆರೆ.

ತಮ್ಮ ಸಂಪಾದಕತ್ವದಲ್ಲಿ 'ಬಳ್ಳಾರಿ ಪತ್ರಿಕೆ'ಯನ್ನು ಪ್ರಾರಂಭಿಸುವುದರ ಮೂಲಕ ಪತ್ರಕರ್ತರಾಗಿ ರೂಪುಗೊಂಡದ್ದು ಬಳ್ಳಾರಿಯಲ್ಲಿಯೇ. ರವಿ ಬೆಳಗೆರೆಯವರು ಮೂಲತಃ ಪತ್ರಕರ್ತರು. ಪ್ರಸ್ತುತ 'ಹಾಯ್ ಬೆಂಗಳೂರ್! ವಾರ ಪತ್ರಿಕೆ ಮತ್ತು 'ಓ ಮನಸ್ಸೇ...' ಪಾಕ್ಷಿಕದ ಸಂಪಾದಕರು. 'ಪತ್ರಿಕೋದ್ಯಮದ ಭಾಷೆ ಸೃಜನಶೀಲತೆಯನ್ನು ಮೊಟಕುಗೊಳಿಸುತ್ತದೆ' ಎಂಬ ಆರೋಪವೊಂದಿದೆ. ಪತ್ರಿಕೋದ್ಯಮದಲ್ಲಿ ಇದ್ದುಕೊಂಡೇ ಸೃಜನಶೀಲ ಬರಹಗಾರರಾಗಿ ಉಳಿದವರು ಇಲ್ಲವೆಂಬಷ್ಟು ವಿರಳ. ಭಾರತೀಯ ಇಂಗ್ಲೀಶ್‌ನಲ್ಲಿ ಖುಷ್‌ವಂತ್ ಸಿಂಗ್, ಕನ್ನಡದಲ್ಲಿ ಪಿ.ಲಂಕೇಶ್ ಮೊದಲಿಗರಾಗುತ್ತಾರೆ. ನಂತರದವರೇ ರವಿ ಬೆಳಗೆರೆ. ಕನ್ನಡದ ಮಟ್ಟಿಗೆ ಈ ಇಬ್ಬರು ತಮ್ಮ ಸಾಹಿತ್ಯ ಮತ್ತು ಭಾಷೆಯ ಮೂಲಕ ಕನ್ನಡ ಸಾಹಿತ್ಯ ಮತ್ತು ಪತ್ರಿಕೋದ್ಯಮದಲ್ಲಿ ಅತಿ ಪ್ರಮುಖವಾದ ಹಾಗೂ ಅಷ್ಟೇ ಶಕ್ತಿಯುತ ಬರಹಗಾರರು ಎನಿಸಿಕೊಂಡಿದ್ದಾರೆ. ಪತ್ರಿಕಾ ಭಾಷೆ ಸೃಜನಶೀಲತೆಯನ್ನು ಮೊಟಕುಗೊಳಿಸುತ್ತದೆ ಎಂಬ ಆರೋಪದಿಂದ ಮುಕ್ತರಾದ ರವಿ ಬೆಳಗೆರೆಯವರು ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆ, ಕಾದಂಬರಿ, ಅನುವಾದ(ಪುನರ್ಸೃಷ್ಟಿ), ಪ್ರವಾಸ ಕಥನ, ಜೀವನ ಚರಿತ್ರೆ, ಅಪರಾಧಿ(ಕ್ರೈಮ್) ಬರಹಗಳು, ಅಂಕಣ ಬರಹ, ಆತ್ಮ ಕಥನ ಮತ್ತು ಪತ್ರ ಸಾಹಿತ್ಯ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಸಾಹಿತ್ಯ ರಚನೆ ಮಾಡಿದ ಬಹುಮುಖ ಪ್ರತಿಭೆ.

ಚಂದ್ರಶೇಖರ ಪಾಟೀಲರು ತಮ್ಮ ಒಂದು ಲೇಖನದಲ್ಲಿ 'ಕನ್ನಡ ನುಡಿಯನ್ನು ಅದರ ಎಲ್ಲ ಥಳಕು ಬಳುಕುಗಳೊಂದಿಗೆ ಬಳಸಿಕೊಳ್ಳಬಲ್ಲ ಈ ಲೇಖಕ' ಎನ್ನುತ್ತಾರೆ. ಅವರ ಮಾತಿನಂತೆ ಬರೀ ಬರವಣಿಗೆ ಅಷ್ಟೇ ಅಲ್ಲ ಮಾತುಗಾರಿಕೆಯಲ್ಲೂ ಓದುಗನನ್ನು, ಕೇಳುಗನನ್ನು ಕ್ಷಣ ಮಾತ್ರದಲ್ಲಿ ಬೆರಗುಗೊಳಿಸುತ್ತಾರೆ. ಹೊಸ ಹೊಸ ಪದಗಳನ್ನು ಟಂಕಿಸುತ್ತಾ, ವಾಕ್ಯಗಳಲ್ಲಿ ನವಿರು-ಬಳಕುಗಳ ನಾವೀನ್ಯತೆ ತೋರುತ್ತಾ, ಕನ್ನಡ ಸಾಹಿತ್ಯ-ಪತ್ರಿಕೋದ್ಯಮದಲ್ಲಿ 'ಹೊಸತನದ ಹರಿಕಾರ'ರಾಗಿರುವುದು ಸತ್ಯ. ಅವರ ಸ್ಪಷ್ಟ ಸ್ವರ ಉಚ್ಚಾರ, ಧ್ವನಿ ಏರಿಳಿಕೆಯ ಗತ್ತು, ಸನ್ನಿವೇಶಕ್ಕೆ ತಕ್ಕಂತೆ ವಾಕ್ಯಗಳ ಸರಮಾಲೆ, ಅನ್ಯದೇಶಿ ಪದಗಳ ಬಳಕೆ ಇವೆಲ್ಲ ಕೇಳುಗನ, ಓದುಗನ, ಬುದ್ಧಿ-ಭಾವನೆಗಳನ್ನು ಥಟ್ಟನೆ ತಟ್ಟಿ ಮನಸೂರೆಗೊಳ್ಳುವ ಮಾಂತ್ರಿಕತೆಯವು.

'ಬರವಣಿಗೆಯೊಂದರಿಂದಲೇ ಅನ್ನ ಮತ್ತು ಆತ್ಮ ಸಂತೋಷ ದುಡಿದುಕೊಳ್ಳಲು ತೀರ್ಮಾನಿಸಿದಂತೆ ಬದುಕುತ್ತಿರುವವನು ನಾನು. ಬರವಣಿಗೆ ಬಿಟ್ಟು ಬೇರೆ ಏನನ್ನು ಮಾಡಲು ನನಗೆ ಬಾರದು ಅಂತ ತೀರ್ಮಾನಿಸಿ ಆಗಿದೆ' ಎಂದು ತಮ್ಮ 'ಅಫಿಡವಿಟ್ಟು'ನಲ್ಲಿ ಹೇಳಿಕೊಳ್ಳುತ್ತಾರೆ. ಅದರಂತೆ ತಮ್ಮ ವಿಭಿನ್ನವಾದ ಬರವಣಿಗೆಯ ಶೈಲಿಯಿಂದ ತಮ್ಮದೇ ಆದ ಓದುಗರನ್ನು ಮತ್ತು ಓದುಗರಷ್ಟೇ ಇವರನ್ನು ಕಂಡರಾಗದವರನ್ನೂ ಸಮಾನವಾಗಿ ಬೆಳೆಸಿಕೊಂಡಿರುವ ಇವರು ಕನ್ನಡದ ಅಪರೂಪದ ಬರಹಗಾರರು ಹಾಗೂ ಜನಪ್ರಿಯ ಪತ್ರಕರ್ತರು. ಇಷ್ಟೆಲ್ಲ ಸಾಹಿತ್ಯ ರಚನೆ ಮಾಡಿದರೂ ಅವರ ಕಥೆ, ಕಾದಂಬರಿಗಳು ವಿಮರ್ಶಕರ ನಿರ್ಲಕ್ಷ್ಯಕ್ಕೆ ಒಳಗಾಗಿರುವುದು ಸೋಜಿಗ. ಹಾಗಿದ್ದರೂ ಓದುಗರ ಮನಸ್ಸಿನಲ್ಲಿ ಗಟ್ಟಿಯಾಗಿ ನೆಲೆ ನಿಲ್ಲಬಲ್ಲ ಸತ್ವ ರವಿ ಬೆಳಗೆರೆಯವರ ಬರಹಕ್ಕಿದೆ ಎಂದರೆ ಅತಿಶಯೋಕ್ತಿಯಲ್ಲ.

ಕೆಲವು ವರ್ಷಗಳ ಹಿಂದೆ ಪಿ. ಲಂಕೇಶ್‌ರು ತಮ್ಮ ನಿರ್ದಿಷ್ಟ ದೃಷ್ಟಿಕೋನ, ಬರವಣಿಗೆಯಲ್ಲಿನ ತೀವ್ರತೆಯಿಂದ ಪತ್ರಿಕೆಯ ಮೂಲಕ ಮೂಡಿಸಿದ ಹೊಸತನದ ರುಚಿ, ಅಚ್ಚುಕಟ್ಟುಗಳು ವಿಶಿಷ್ಟವಾದವು. ಆದರೆ ಒಂದು ಮಾಧ್ಯಮವಾಗಿ ಪತ್ರಿಕೋದ್ಯಮದ ಹಣೆ ಬರಹವೆಂತಹದ್ದೆಂದರೆ ಇವತ್ತಿನ ಪತ್ರಿಕೆಯಲ್ಲಿ ಬದಲಾವಣೆ, ಹೊಸತನಕ್ಕೆ, ಚಲನಶೀಲತೆಗೆ ಕಾರಣವಾದ ಅಂಶಗಳೆಲ್ಲಾ ಬೆಳಗಾಗುವುದರೊಳಗೆ ಯಾಂತ್ರಿಕವಾಗಿರುತ್ತವೆ, ಸಪ್ಪೆಯಾಗಿರುತ್ತವೆ. ಇಂಥ ಯಾಂತ್ರಿಕತೆಯನ್ನು ಮೀರಲೆಂದೇ ಕೆಲವು ಸೂಕ್ಷ್ಮ ಪತ್ರಕರ್ತರಾದವರೂ ಸೃಜನಶೀಲ ಬರವಣಿಗೆ ಕಡೆಗೆ ಹೊರಟಿರಬೇಕು. ರವಿ ಬೆಳಗೆರೆಯವರೂ ಈ ವರ್ಗಕ್ಕೆ ಸೇರಿದವರೇ. ಜೀವನವನ್ನು ಒಳಗಣ್ಣಿನಿಂದ ನೋಡುವ ಕೆಲಸ ಎಷ್ಟು ನಿಧಾನದ್ದು, ಎಷ್ಟು ಕಷ್ಟದ್ದು, ಆದರೂ ಎಷ್ಟು ಅಗತ್ಯವಾದದ್ದು, ಮನುಷ್ಯನ ಮನಸ್ಸು, ಸ್ವಭಾವವೆಲ್ಲ ಕಾಲಾಂತರದಲ್ಲಿ ಮಾಗುವ, ಪಕ್ವವಾಗುವ, ಹಣ್ಣಾಗುವ ಪರಿಯ ಸ್ವರೂಪ ಎಂತಹದೆಂಬುದನ್ನು ಅವರ ವಸ್ತುವಿನಲ್ಲಿ, ವಿಧಾನದಲ್ಲಿ, ಪುನರುಕ್ತಿಯಲ್ಲಿ, ವ್ಯಾಮೋಹದಲ್ಲಿ, ವ್ಯಂಗ್ಯದಲ್ಲಿ ಆಕರ್ಷಕವಾಗಿ ಹೇಳುತ್ತಾ ಹೋಗುತ್ತವೆ.

ರವಿ ಬೆಳಗೆರೆಯವರು ಒಂದು ವಿಷಯ. ಸಂಗತಿ ಇಟ್ಟುಕೊಂಡು ಬರೆದವರಲ್ಲ. ಮನುಷ್ಯ ಸಂಬಂಧಗಳು ಅವರ ಆಸಕ್ತಿಯ ಪ್ರಥಮ ವಿಷಯ, ಆದರೆ ಅವರು ಅಷ್ಟೇ ಆಸಕ್ತಿಯಿಂದ ದೇಶ, ಇತಿಹಾಸ, ಯುದ್ಧಗಳ ಬಗ್ಗೆ ಬರೆದಿದ್ದಾರೆ. ಅಂತೆಯೇ ಅವರ ಕಾದಂಬರಿಗಳಲ್ಲಿ ಪ್ರೀತಿ, ಪ್ರೇಮ, ತಂತ್ರ, ಭೂಗತಲೋಕ, ರಾಜಕಾರಣ, ಕಾಮ, ಟೆರರಿಸಂ ಕಾಣಿಸಿಕೊಂಡಿವೆ, ತನಿಖಾ ವರದಿಗಳು ಪುಸ್ತಕವಾಗಿವೆ. ಮೂಲತಃ ಕಥೆಗಾರರೆಂದೇ ಹೆಸರಾದ ಅವರು ತಮ್ಮ ಇಷ್ಟ ಕವಿ ಸಾಹಿರ್ ಲುಧಿಯಾನವಿಯಿಂದ ಹಿಡಿದು ತೆಲುಗು ಲೇಖಕ ಗುಡಿಪಾಟು ವೆಂಕಟಾಚಲಂರ ತನಕ ಅನೇಕರ ಜೀವನ ಕಥನಗಳನ್ನು ಬರೆದಿದ್ದಾರೆ. ಅನುವಾದಿಸಿದ್ದಾರೆ. ಕ್ರೈಮ್ ಎಂಬುದು ಬೆಳಗೆರೆಯವರ ಬರಹದ ಮತ್ತೊಂದು ಅಂಗ. ಅವರು ಪ್ರತಿವಾರ ಬರೆಯುವ 'ಖಾಸ್‌ಬಾತ್' ಅಂಕಣವೇ 'ಹಾಯ್ ಬೆಂಗಳೂರ್!' ಪತ್ರಿಕೆಯ ಜೀವಾಳ. ತಮ್ಮ ಬದುಕಿನ ಪದರುಗಳನ್ನು, ಅನುಭಾವಗಳನ್ನು ತೆರೆದಿಡುತ್ತಾ ಹೋಗುವ ಈ ಅಂಕಣ ಒಮ್ಮೊಮ್ಮೆ ಭಾವುಕರನ್ನಾಗಿಸಿದರೆ, ಮತ್ತೊಮ್ಮೆ ಬದುಕಿನ ಪಾಠವಾಗುತ್ತದೆ. ಅದರೊಂದಿಗೆ ಸ್ಪರ್ಧೆಗೆ ಬೀಳುವ ಅಂಕಣವೇ 'ಬಾಟಮ್ ಐಟಮ್'. ಜೀವನ ಪ್ರತಿ ಚಿಕ್ಕ ಸಂಗತಿಯ ಮೇಲೂ ಬೆಳಕು ಚೆಲ್ಲುವ, ತಿದ್ದುವ, ಪ್ರೇರೇಪಿಸುವ, ಪ್ರೋತ್ಸಾಹಿಸುವಂತೆ ಮಾಡುವ ಅಂಕಣ. ಹೀಗೆ ಅವರು ಹೆಚ್ಚು ಬರೆದ, ಓದಿಸಿಕೊಳ್ಳುವ ಲೇಖಕ ಪತ್ರಕರ್ತರು.

ಬಡವರ ಬಗ್ಗೆ, ಬಡತನದ ಬಗ್ಗೆ ಮಾತ್ರವೇ ಇರುವಂತಹ ಎಷ್ಟೊಂದು ಕಥೆ, ಕಾದಂಬರಿಗಳನ್ನು ಓದಿದ್ದೇವೆ. ಓದಿರುತ್ತೇವೆ; ಓದುವಾಗ ಪ್ರಾಮಾಣಿಕವಾಗಿ ಮರುಗಿಯೂ ಇರುತ್ತೇವೆ. ಆ ನಂತರ ಮಾತ್ರ ನಮ್ಮ ಮನಸ್ಸು ಹಿಂದಿನ ಎಲ್ಲಾ ಅಭ್ಯಾಸಗಳಿಗೆ ಹಿಂದಿರುಗಿ ಬಿಡುತ್ತದೆ. ಎಲ್ಲಾ ತರಹದ, ಪಂಥದ ಕಥೆ, ಕಾದಂಬರಿಗಳನ್ನು ರವಿಯವರು ಬರೆದಿದ್ದಾರೆ. ಇಂತಹುದೇ ಕಥೆ, ಕಾದಂಬರಿಯನ್ನು ಹೀಗೆ ಬರೆಯಬೇಕು. ಇಂತಿಂತಹ ವಸ್ತುಗಳನ್ನು ಕುರಿತು ಮಾತ್ರವೇ ಬರೆಯಬೇಕು ಎನ್ನುವ ಠರಾವಿನ ಕಾಲ ನಮ್ಮದು. ಇಂತಹ ನಿಯಮಗಳನ್ನೆಲ್ಲಾ ಮರೆತು ತೆರೆದ ಮನಸ್ಸಿನಿಂದ ಓದುವಂತೆ ಪ್ರೇರೇಪಿಸುವ ಶಕ್ತಿ ರವಿ ಬೆಳಗೆರೆಯವರ ಬರಹಕ್ಕಿದೆ. ಈ ಕುತೂಹಲವೇ ಅವರ ಬರಹಗಳ ಬಗೆಗಿನ ಅಧ್ಯಯನಕ್ಕೆ ಪ್ರೇರಣೆ.

### ೧.೧. ಅಧ್ಯಯನದ ಉದ್ದೇಶ

ರವಿ ಬೆಳಗೆರೆಯವರು ಪತ್ರಕರ್ತರಾಗಿದ್ದುಕೊಂಡು ಮಾಧ್ಯಮದ ಒತ್ತಡದ ಮಧ್ಯದಲ್ಲಿಯೇ ತಮ್ಮ ಸೃಜನಶೀಲ ಬರವಣಿಗೆಯಿಂದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ಪ್ರಸ್ತುತ ಅಧ್ಯಯನವನ್ನು ಎರಡು ಭಾಗಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ. ಮೊದಲನೆಯ ಭಾಗದಲ್ಲಿ ಸಾಹಿತ್ಯಿಕ ಕೊಡುಗೆಯನ್ನು ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಡುವುದು. ಅಂದರೆ ಸಾಹಿತ್ಯದಲ್ಲಿ ಅಷ್ಟೊಂದು ಕೃಷಿ ಮಾಡಿದ್ದರೂ ಅವರ ಸಾಹಿತ್ಯವನ್ನು ಕುರಿತಾಗಿ ಹೆಚ್ಚಿನ ವಿಮರ್ಶೆ ನಡೆದಿಲ್ಲ. ಅದಕ್ಕೆ ಕಾರಣಗಳೇನು? ಸಾಹಿತ್ಯದಿಂದ ಬೇರೆಯಾಗಿ ನೋಡಲು ಅವರ ಬರಹಗಳಲ್ಲಿನ ನ್ಯೂನತೆಗಳೇನು? ಯಾವ ಕಾರಣಕ್ಕಾಗಿ ಅವರ ಸಾಹಿತ್ಯ ಕೃತಿಗಳು ವಿಮರ್ಶಾ ಲೋಕದಿಂದ ಹೊರಗುಳಿದಿವೆ ಎಂಬುದನ್ನು ಕಂಡುಕೊಳ್ಳುವ ಉದ್ದೇಶದಿಂದ ಈ ಅಧ್ಯಯನ ಸಾಗುತ್ತದೆ.

ಎರಡನೆಯ ಭಾಗ ಸಂಪೂರ್ಣವಾಗಿ ಅವರ ಒಟ್ಟಾರೆ ಬರಹಗಳ(ಪ್ರಕಟಿತ) ಭಾಷಾ ಬಳಕೆ, ಶೈಲಿ, ಪದಗಳ ವೈಶಿಷ್ಟ್ಯ, ಲೀಲಾಜಾಲವಾಗಿ ಹರಿಯುವ ಮಾತಿನ ಸರಣಿ, ವಾಕ್ಯ ಪ್ರಯೋಗ, ನುಡಿ ಬೆರಕೆ, ನುಡಿ ಜಿಗಿತ ಪ್ರಮುಖವಾಗಿ ಅವರು ಅಪರಾಧ(ಕ್ರೈಮ್) ಬರಹಗಳಿಗೆ ಸಂಬಂಧಿಸಿದಂತೆ ಬಳಸಿದ ಭಾಷೆ, ಅಂಕಣ ಮತ್ತು ಪತ್ರ ಸಾಹಿತ್ಯದ ಭಾಷೆಯನ್ನು ಗಮನಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಒಂದರ್ಥದಲ್ಲಿ ಅವರ ಒಟ್ಟು ಬರಹಗಳ ಭಾಷೆಯನ್ನು ಗಮನಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ರವಿ ಬೆಳಗೆರೆಯವರ ಬರಹದ ವ್ಯಾಪ್ತಿ ವಿಸ್ತಾರವಾದದ್ದು. ಅಧ್ಯಯನದ ಶೀರ್ಷಿಕೆಯನ್ನು ಖಚಿತ ಪಡಿಸಿಕೊಳ್ಳುವ ಸಂದರ್ಭದಲ್ಲಿ ಇದರ ಹರವು ಅರಿವಾಗದೇ ರವಿ ಬೆಳಗೆರೆಯವರ ಸಾಹಿತ್ಯ ಮತ್ತು ಭಾಷೆ ಎಂದು ಆಯ್ಕೆ ಮಾಡಿಕೊಳ್ಳಲಾಯಿತು. ಎರಡು ಪ್ರತ್ಯೇಕ ಅಧ್ಯಯನಗಳಿಗೆ ವಸ್ತುವಾಗಬಲ್ಲ ಈ ಸಂಯುಕ್ತ ವಾಕ್ಯ ಪ್ರಸ್ತುತ ಅಧ್ಯಯನದ ಶೀರ್ಷಿಕೆಯಾಗಿ ಖಚಿತವಾಯಿತು. ಆದರೂ ಅಧ್ಯಯನದ ದೃಷ್ಟಿಯಿಂದ ಅವೆಲ್ಲವೂ ಪೂರಕ ಮತ್ತು ಅವಶ್ಯವಿದ್ದ ಕಾರಣ ಅವರ ಎಲ್ಲ ಸಾಹಿತ್ಯ ಪ್ರಕಾರಗಳು ಅಧ್ಯಯನ ವ್ಯಾಪ್ತಿಗೆ ಒಳಗಾಗಲೇ ಬೇಕಾದಾಗ ಎಲ್ಲವನ್ನು ಇಲ್ಲಿ ಕೂಲಂಕಷವಾಗಿ ವಿಶ್ಲೇಷಣೆ ಮಾಡುವುದು, ಸಮಯ ಮತ್ತು ಮಿತಿಯ ದೃಷ್ಟಿಯಿಂದ ಕಷ್ಟಸಾಧ್ಯ. ಈ ಅಂಶವನ್ನು ಗಮನದಲ್ಲಿರಿಸಿಕೊಂಡು ಅವರ ಎಲ್ಲಾ ಬರಹಗಳ ಹಿನ್ನೆಲೆಯಲ್ಲಿ ಪ್ರಾತಿನಿಧಿಕ ಕೃತಿಗಳ ಬಗೆಗಷ್ಟೇ ಪ್ರಸ್ತಾಪಿಸಿ ವಿವರಣೆಯೊಂದಿಗೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ೧.೩.ಅಧ್ಯಯನದ ವೈಧಾನಿಕತೆ

ರವಿ ಬೆಳಗೆರೆಯವರು ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ಓದಿಕೊಂಡವರು. ಜೊತೆಗೆ ಪತ್ರಿಕೋದ್ಯಮ. ಆದಕಾರಣ ಸಹಜವಾಗಿಯೇ ಅವರ ಬರಹಗಳಲ್ಲಿ ಅನ್ಯಜ್ಞಾನ ಶಿಸ್ತುಗಳನ್ನು ಕಾಣಬಹುದಾಗಿದೆ. ಅಲ್ಲದೆ ಈ ಅಧ್ಯಯನ 'ಸಾಹಿತ್ಯ ಮತ್ತು ಭಾಷೆ' ಎಂಬ ಎರಡು ವಿಭಾಗಗಳಲ್ಲಿರುವ ಕಾರಣ ಒಂದೇ ಅಂಶದ ಬಗೆಗೆ ಹೆಚ್ಚು ಗಮನಹರಿಸಲು ವಿಷಯ ಅಷ್ಟೊಂದು ಅವಕಾಶವನ್ನು ಒದಗಿಸಲಾರದು. ಆದ್ದರಿಂದ ಪ್ರಸ್ತುತ ಈ ಅಧ್ಯಯನಕ್ಕೆ 'ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕ' ಅಧ್ಯಯನ ಮಾದರಿಯನ್ನು ಅಳವಡಿಸಿಕೊಳ್ಳಲಾಗಿದೆ.

### ೧.೪. ಅಧ್ಯಯನದ ಸ್ವರೂಪ

ಪ್ರಗತಿಶೀಲರ ಕಾಲದ ಹೋಲಿಕೆ ರವಿಯವರ ಬರಹಗಳಲ್ಲಿ ಕಂಡರೂ ಯಾವುದೇ ಸಾಹಿತ್ಯ ಪಂಥಕ್ಕೆ ಸೇರದೆ ಎಲ್ಲ ಕಡೆ, ಎಲ್ಲ ಕಾಲಕ್ಕೂ ಸಲ್ಲುವಂತಹ ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡಿದ್ದರೂ, ಸಾಹಿತ್ಯ ಕ್ಷೇತ್ರದಿಂದ ಹೊರಗುಳಿದಿರುವ ರವಿ ಬೆಳಗೆರೆಯವರ ಸಾಹಿತ್ಯ ಮತ್ತು ಭಾಷೆಯನ್ನು ಕುರಿತ ಈ ಅಧ್ಯಯನ, ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಅವುಗಳ ಸ್ಥೂಲ ಸ್ವರೂಪ ಇಂತಿದೆ.

ಅಧ್ಯಾಯ ಒಂದು : ತಾಂತ್ರಿಕ ಅಧ್ಯಾಯವಾದ ಇಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪವನ್ನು ಕುರಿತ ವಿವರಗಳನ್ನು ನೀಡಲಾಗಿದೆ.

ಅಧ್ಯಾಯ ಎರಡು : ರವಿ ಬೆಳಗೆರೆಯವರ ಬರಹಗಳಿಗೆ ಸಂಬಂಧಿಸಿದಂತೆ ಈ ಹಿಂದೆ ಅಥವಾ ಇಲ್ಲಿಯವರೆಗೆ ನಡೆದಿರುವ ಅಧ್ಯಯನ, ವಿಮರ್ಶೆ, ಇನ್ನಿತರ ಶಿಸ್ತುಬದ್ಧವಾದ ಯಾವುದೇ ಬರಹಗಳ ಸಮೀಕ್ಷೆಯ ವಿವರಗಳನ್ನು ಈ ಅಧ್ಯಾಯ ಒದಗಿಸುತ್ತದೆ.

ಅಧ್ಯಾಯ ಮೂರು : ಈ ಅಧ್ಯಾಯವು ರವಿ ಬೆಳಗೆರೆಯವರ ಒಟ್ಟಾರೆ ಸಾಹಿತ್ಯದ ಮತ್ತು ಬರಹಗಳನ್ನು ಅವುಗಳ ವಿಶೇಷತೆಯೊಂದಿಗೆ ಸಂಕ್ಷಿಪ್ತವಾಗಿ ಪರಿಚಯಿಸುತ್ತದೆ ಹಾಗೂ ಅವರ ಬರಹಗಳ ವಸ್ತು, ವೈವಿಧ್ಯತೆಯನ್ನು ವಿವರಣೆಯೊಂದಿಗೆ ಈ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ.

ಅಧ್ಯಾಯ ನಾಲ್ಕು : ಇಲ್ಲಿ ರವಿ ಬೆಳಗೆರೆಯವರ ಒಟ್ಟು ಬರಹಗಳ ಭಾಷೆಯ ಸ್ವರೂಪ, ನಿರೂಪಣೆ, ತಂತ್ರ, ವೈಶಿಷ್ಟ್ಯ, ವೈವಿಧ್ಯ, ವಾಕ್ಯ ಪ್ರಯೋಗ, ಪದ ಬಳಕೆ, ನುಡಿ ಜಿಗಿತ ಮಿಶ್ರಣ ಮತ್ತು ಕ್ರೈಮ್ ಬರಹದ ಭಾಷೆ ಮುಂತಾದ ಅಂಶಗಳ ವಿವರಣೆಯನ್ನು ಉದಾಹರಣೆಗಳ ಸಹಿತ ವಿವರಿಸಲಾಗಿದೆ.

ಅಧ್ಯಾಯ ಐದು : ಈ ಅಧ್ಯಾಯದಲ್ಲಿ ಕನ್ನಡ ಭಾಷೆಗೆ ರವಿ ಬೆಳಗೆರೆಯವರ ಕೊಡುಗೆ ಏನೆಂಬುದನ್ನು ಗಮನಿಸಲಾಗಿದೆ. ಅವರ ಭಾಷಾ ಪ್ರಯೋಗ, ಪ್ರೇರಣೆ ಇಂದಿನ ಮಾಧ್ಯಮಗಳಲ್ಲಿ ಬಳಸುವ ಭಾಷೆಯ ಮೂಲಕ ಅವರ ಭಾಷಾ ಪ್ರಭಾವವನ್ನು ಅರಿಯುವ ಪ್ರಯತ್ನ ಈ ಅಧ್ಯಾಯ ಒಳಗೊಂಡಿದೆ.

ಅಧ್ಯಾಯ ಆರು : ಇದರಲ್ಲಿ ಈ ಅಧ್ಯಯನದಲ್ಲಿ ಕಂಡುಕೊಂಡ ಅಂಶಗಳನ್ನು ಪ್ರಸ್ತಾಪಿಸಲಾಗಿದೆ. ಒಂದು ಅಧ್ಯಯನ ಫಲಿತಗಳು ಎರಡು ಈ ಅಧ್ಯಯನದ ಮಿತಿ ಹಿನ್ನಡೆ/ವಿಫಲತೆಯ ಅಂಶಗಳನ್ನು ಒದಗಿಸುತ್ತದೆ. ಒಟ್ಟಾರೆ ಸಮಾರೋಪದಲ್ಲಿ ಈ ಪ್ರಬಂಧದ ಹಿಂದಿನ ಎಲ್ಲಾ ಅಧ್ಯಾಯಗಳಲ್ಲಿ ಪ್ರಸ್ತಾಪಿಸಿದ, ಚರ್ಚಿಸಿದ ಮತ್ತು ವಿವರಿಸಿದ ವಿಷಯಗಳನ್ನು ಪುನಾರಾವಲೋಕನ ಮಾಡಿರುವುದಲ್ಲದೆ ಮೇಲಿನ ವಿಷಯಗಳನ್ನು ಕೊಡಲಾಗಿದೆ. ಕೊನೆಗೆ ಅನುಬಂಧದಲ್ಲಿ 'ಅಫಿಡವಿಟ್ಟು', ರವಿಯವರ 'ಪ್ರಕಟಿತ' ಮತ್ತು ಅಪ್ರಕಟಿತ ಕೃತಿಗಳ ಪಟ್ಟಿ, ಪ್ರಬಂಧದ ರಚನೆಗೆ ಆಕರವಾದ ಮತ್ತು ಪರಾಮರ್ಶನ ಪುಸ್ತಕಗಳ ಪಟ್ಟಿಯನ್ನು ನೀಡಲಾಗಿದೆ.

## ಅಧ್ಯಾಯ ಎರಡು

## ಅಧ್ಯಯನಗಳ ಸಮೀಕ್ಷೆ

ಕನ್ನಡದಲ್ಲಿ ಗದ್ಯ ಸಾಹಿತ್ಯ ಎಂಬ ಪ್ರಕಾರ ಸಾಕಷ್ಟು ಹಳೆಯದಾದರೂ ಅದನ್ನೊಂದು ಸಮೂಹ ಮಾಧ್ಯಮದ ಸಾಧನವನ್ನಾಗಿ ಸಮರ್ಥವಾಗಿ ಬಳಸಿದ ಮತ್ತು ಬೆಳೆಸಿದ ಶ್ರೇಯಸ್ಸು ಪತ್ರಿಕಾ ಪ್ರಪಂಚಕ್ಕೆ ಸಲ್ಲುತ್ತದೆ. ಪತ್ರಿಕೆಗಳು ತಲೆಯೆತ್ತುವವರೆಗೆ ಸಾಹಿತ್ಯ ನಿರ್ಮಾಣದಲ್ಲಿ ಗದ್ಯಕ್ಕೆ ಅಷ್ಟೊಂದು ಪ್ರಾಶಸ್ತ್ಯವಿರಲಿಲ್ಲ. ಪದ್ಯರಚನೆಯಾದರೇ ಸಾಹಿತ್ಯ ಎಂಬ ದೃಢವಾದ ಪರಂಪರೆ ನೆಲೆಯೂರಿಬಿಟ್ಟಿತ್ತು. ೧೯ನೆಯ ಶತಮಾನದೊಡನೆಯೇ ಕನ್ನಡದ ನೆಲದಲ್ಲಿ ನೆಲೆಯೂರಿದ ಇಂಗ್ಲೀಶರ ಆಳ್ವಿಕೆ ಇಲ್ಲಿಯ ಜನಜೀವನದಲ್ಲಿ ಉಂಟುಮಾಡಿದ ಕ್ರಾಂತಿ, ಪತ್ರಿಕಾ ಸಾಹಿತ್ಯಕ್ಕೆ ಮೂಲ ಹೂರಣವಾದ ಗದ್ಯ ಸಾಹಿತ್ಯ ರಚನೆಗೂ ಕಾರಣವಾಯಿತು. ಪತ್ರಿಕಾ ಪ್ರಪಂಚ ಆಸ್ತಿತ್ವಕ್ಕೆ ಬಂದ ಮೇಲೆ ಸಾಹಿತ್ಯಕ್ಕೆ ಒಂದು ಹೊಸ ಅಂಗವನ್ನೇ ಸೇರಿಸಿದೆ, ಅಂದೆಂದರೆ ಪತ್ರಿಕಾ ವರದಿಗಳು. ಮೊದಮೊದಲು ಸಭೆ ಸಮ್ಮೇಳನಗಳ ಅಥವಾ ಘಟನೆಗಳ ನೀರಸ ನಿರೂಪಣೆಯಾಗಿದ್ದ ಈ ವಿಭಾಗ ಕ್ರಮೇಣ ವಿಕಾಸಗೊಳ್ಳುತ್ತ ಈಗ ಅದೊಂದು ಕಲೆಯಾಗಿ ಪರಿಣಮಿಸಿದೆ. ಕತೆ, ಕವಿತೆ, ಕಾದಂಬರಿ, ಹರಟೆ, ವಿಮರ್ಶೆ ಪ್ರಬಂಧ ಮುಂತಾದ ಜನಪ್ರಿಯ ಸಾಹಿತ್ಯ ಪ್ರಕಾರಗಳಿಗಂತೂ ಪ್ರಥಮ ಪ್ರಕಟಣೆಗೆ ಪತ್ರಿಕೆಗಳೇ ಅವಕಾಶ ಕೊಡುತ್ತವೆಂದರೆ ಅತಿಶಯೋಕ್ತಿ ಅಲ್ಲ.

ಇಂತಹ ಪತ್ರಿಕಾ ಜಗತ್ತು ಮುಂದೆ ಅನೇಕ ಪ್ರಕಾರಗಳಲ್ಲಿ ಕವಲೊಡೆಯಿತು. ದಿನಪತ್ರಿಕೆ, ವಾರಪತ್ರಿಕೆ, ಪಾಕ್ಷಿಕ, ಮಾಸಿಕ, ತ್ರೈಮಾಸಿಕ, ವಾರ್ಷಿಕ ಹೀಗೆ ತನ್ನನ್ನೇ ತಾನು ವಿಸ್ತರಿಸಿಕೊಳ್ಳತೊಡಗಿತು. ಈ ರೀತಿ ವಿಸ್ತಾರಗೊಳ್ಳುತ್ತಿರುವಾಗಲೇ 'ಟ್ಯಾಬ್ಲಾಯ್ಡ್' ಎಂಬ ಮಾದರಿ ಕನ್ನಡ ಪತ್ರಿಕೋದ್ಯಮದ ಮಟ್ಟಿಗೆ ಒಂದು ಕ್ರಾಂತಿಯನ್ನೇ ಉಂಟುಮಾಡಿತು. ಈ ಪತ್ರಿಕೆಯ ಮೂಲಕ ಕನ್ನಡ ಪತ್ರಿಕಾ ರಂಗದಲ್ಲಿ ಮೊದಲು ಹೊಸ ಅಲೆಯನ್ನುಂಟು ಮಾಡಿದವರು. ಪಿ.ಲಂಕೇಶ್. ೧೯೭೫ರಲ್ಲಿ ಅವರು 'ಲಂಕೇಶ್ ಪತ್ರಿಕೆ'ಯನ್ನು ಹುಟ್ಟುಹಾಕುವ ಮೂಲಕ ಹೊಸ ಕ್ರಾಂತಿಯನ್ನುಂಟು ಮಾಡಿದರು. ಅದರಂತೆಯೇ ಅದಕ್ಕಿಂತ ಸ್ವಲ್ಪ ಮುಂದೆ ಬಂದು ಸರಿಸುಮಾರು ಎರಡು ದಶಕದ ನಂತರ ರವಿ ಬೆಳಗೆರೆ ೧೯೯೫ರಲ್ಲಿ 'ಹಾಯ್ ಬೆಂಗಳೂರು!' ಎಂಬ ಕಪ್ಪು ಬಿಳುಪಿನ ಪತ್ರಿಕೆಯನ್ನು ಬೆಳಕಿಗೆ ತಂದರು. ಪತ್ರಿಕಾ ಜಗತ್ತಿನಲ್ಲಿ ವಾದ-ವಿವಾದ ಸೃಷ್ಟಿಸಿದ ಈ ಇಬ್ಬರು ತಮ್ಮದೇ ಆದ ಓದುಗರನ್ನು

ಸೃಷ್ಟಿಸಿಕೊಂಡವರು. ನಮ್ಮ ಅಕಾಡೆಮಿಕ್ ವಲಯಗಳಲ್ಲಿ ಲಂಕೇಶರ ಕುರಿತು ಅನೇಕ ಅಧ್ಯಯನಗಳು ನಡೆದಿವೆ. ಆದರೆ, ಅದೇ ಸಾಲಿನಲ್ಲಿ ಬರುವ ರವಿ ಬೆಳಗೆರೆಯವರನ್ನು ಕುರಿತಾಗಲೀ, ಅವರ ಸಾಹಿತ್ಯವನ್ನು ಕುರಿತಾಗಲೀ ಹೆಚ್ಚಿನ ಅಧ್ಯಯನಗಳು ನಡೆದಿಲ್ಲ: ಒಂದೆರಡು ಬಿಡಿ ಲೇಖನಗಳನ್ನು ಹೊರತುಪಡಿಸಿ. ಆ ಪಕ್ಷಿನೋಟದ ಸಂಕ್ಷಿಪ್ತ ವರದಿಯೇ ಈ ಅಧ್ಯಾಯ.

ರವಿ ಬೆಳಗೆರೆಯವರ ಬರಹಕ್ಕೆ ಪ್ರಮುಖವಾಗಿ ಎರಡು ಮುಖಗಳು. ಒಂದು ಪತ್ರಿಕೆಯಾದರೆ ಮತ್ತೊಂದು ಸಾಹಿತ್ಯ. ಇದರಾಚೆಯೂ ಅವರ ಕೆಲಸ ವಿಸ್ತಾರವನ್ನು ಪಡೆದುಕೊಂಡಿದೆ. ಪ್ರಸ್ತುತ ಅಧ್ಯಾಯವು ಈ ಅಧ್ಯಯನದ ಮುಂದುವರೆಕೆಗೆ ಪ್ರಾಥಮಿಕ ಆಕರಗಳ ಹಿನ್ನೋಟವನ್ನು ಒಳಗೊಂಡಿದೆ. ರವಿಯವರ ಸಾಹಿತ್ಯ ಕುರಿತು ಇದುವರೆಗೂ ಬಂದಿರುವ ವಿಮರ್ಶೆ ಮತ್ತು ಅಧ್ಯಯನಗಳ ವಿವರವನ್ನಿಲ್ಲಿ ಗಮನಿಸಲಾಗಿದೆ.

ರವಿ ಬೆಳಗೆರೆಯವರು ಕನ್ನಡ ಸಾಹಿತ್ಯಕ್ಕೆ ಪರಿಚಯವಾದದ್ದು ಕಥೆಗಾರರಾಗಿ ಅವರು ಒಟ್ಟು ಎರಡು ಕಥಾಸಂಕಲನಗಳನ್ನು ಹೊರತಂದಿದ್ದಾರೆ. ಮೊದಲನೆಯದು 'ದಾರಿ' ೧೯೮೦ರಲ್ಲಿ ಪ್ರಕಟವಾಗಿದೆ. ಇದರ ಬಗ್ಗೆ ಯಾವುದೇ ವಿಮರ್ಶೆ ಬಂದಿಲ್ಲ. ಇನ್ನು ಎರಡನೆಯದು 'ಪಾ.ವೆಂ.ಹೇಳಿದ ಕಥೆ' ೧೯೯೫ರಲ್ಲಿ ಪ್ರಕಟಗೊಂಡಿದೆ. ಈ ಸಂಕಲನಕ್ಕೆ ಮುನ್ನುಡಿಯನ್ನು ಬರೆಯುತ್ತಾ ಕೆ.ಸತ್ಯನಾರಾಯಣರು 'ಕಥೆ ಓದಿದ ಮೇಲೆ ಬದುಕಿನ ಬಗ್ಗೆ ಮನುಷ್ಯರ ಬಗ್ಗೆ ನನ್ನಲ್ಲಿ ಒಂದಷ್ಟು ವಿನಯವೂ ಬೆರಗೂ ಮೂಡಿದರೆ ಅಷ್ಟೇ ಸಾಕು ಇದು ಯಾವ ಪಂಥದ ಕಥೆಗಳಾದರೂ ಆಗಬಹುದು. ನವ್ಯ ನವ್ಯೇತರ, ದಲಿತ–ಬಂಡಾಯ, ರೊಮ್ಯಾಂಟಿಕ್ ಯಾವ ಜಾತಿಯ ಕಥೆಗಳಾದರೂ ಸರಿಯೇ ಮ್ಯಾಗ್‌ಝಿನ್ ಕಥೆಯಾದರೂ ಅಡ್ಡಿಯಿಲ್ಲ. ಈ ಮಾತು ಇಲ್ಲಿ ಯಾಕೆಂದರೆ, ರವಿ ಬರೆದಿರುವ ಕಥೆಗಳು ಎಲ್ಲಾ ಜಾತಿಗಳಿಗೂ ಸೇರಿದ್ದವಾದ್ದರಿಂದ ಹೀಗೆ ಬೇರೆ ಬೇರೆ ಜಾತಿಗೆ ಸೇರಿಯೂ(ಉದಾ: ವಿತಥ, ಪಾ.ವೆಂ.ಹೇಳಿದ ಕಥೆ, ಭ್ರೂಣ ಸಂಭಾಷಣೆ) ಒಳ್ಳೆಯ ಕಥೆಗಳು ನಮ್ಮ ಮನಸ್ಸಿನ ಮೇಲೆ ಮಾಡಬೇಕಾದ ಪರಿಣಾಮವನ್ನೇ ಮಾಡುವುದರಿಂದ...' ಮುಂದುವರೆದು '...ಬಡತನವನ್ನು ಕಷ್ಟವನ್ನು ಕುರಿತು ಅವುಗಳ ಮೇಲೆಯೇ ನೇರವಾಗಿ ಬರೆದ ಕಥೆಗಳಿಗಿಂತಲೂ ಬಡತವನ್ನು ಕಷ್ಟವನ್ನು ಒಟ್ಟು ಬದುಕಿನ ಒಂದು ಭಾಗವಾಗಿ ನೋಡಿ ಬರೆದ ಕಥೆಗಳೇ ನಮ್ಮ ಮನಸ್ಸಿನಲ್ಲಿ ಬಹಳ ಕಾಲ ಉಳಿಯುತ್ತವೆ. ರವಿಯವರ ಕಥೆಗಳ ಬಗ್ಗೆಯೂ ಈ ಮಾತು ನಿಜ'ವೆಂದು ಹೇಳುತ್ತಾರೆ.[೧] ಅವರು ಈ ಬರಹದಲ್ಲಿ ಸಾಹಿತ್ಯ ಬದುಕು, ಸಮಾಜ ಮತ್ತು ಮನುಷ್ಯ ಇವೆಲ್ಲವನ್ನು ಒಟ್ಟಾಗಿ ನೋಡಲು ಪ್ರಯತ್ನಿಸಿದ್ದಾರೆ. ಕಥೆಯ ವಸ್ತು ಅವು ಬೀರುವ ಪರಿಣಾಮದ ಬಗ್ಗೆ ಹೆಚ್ಚು ಗಮನ ಹರಿಸಿ ಸಾಹಿತ್ಯದ ಅಭಿವ್ಯಕ್ತಿಗೆ ಸಾಧನವಾದ ಭಾಷೆಯನ್ನು ಮರೆತುಬಿಟ್ಟಿದ್ದಾರೆ. ಸಾಹಿತ್ಯವೆಂಬುದು ಭಾಷೆಯ ಮೂಲಕವೇ ಮಾತಿನ ರೂಪವನ್ನು ಪಡೆದುಕೊಂಡಿರುತ್ತದೆ. ಪ್ರಕಟಗೊಂಡ ಪ್ರತಿಯೊಂದು ಬರಹದಲ್ಲೂ ಭಾಷೆ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುತ್ತದೆ. ಅದು ರವಿಯವರ ಬರಹಕ್ಕೆ ಹೊರತಾದುದಲ್ಲ. ಈ ಎಲ್ಲಾ ಕಥೆಗಳು ಭಾಷೆಯ ದೃಷ್ಟಿಯಿಂದ ವಿಶಿಷ್ಟವಾದವುಗಳೇ. ಆದರೆ, ಸತ್ಯನಾರಾಯಣರು ಕಥೆಗಳಲ್ಲಿ ಬಳಸಿಕೊಂಡಿರುವ ಭಾಷೆ ವೈಶಿಷ್ಟ್ಯ ಮತ್ತು ಶೈಲಿಯ ಬಗ್ಗೆ ಎಲ್ಲಿಯೂ ಪ್ರಸ್ತಾಪಿಸಿಲ್ಲ.

ಇದೇ ಸಂಕಲನದ ಕುರಿತು 'ಋಜುವಾತು' ಪತ್ರಿಕೆಯಲ್ಲಿ ಮೊದಲು ಪ್ರಕಟವಾಗಿ ನಂತರ ಸಂಕಲನದಲ್ಲಿ ಬಳಸಿಕೊಳ್ಳಲಾದ ಜಿ.ರಾಜಶೇಖರ್ ಅವರ ವಿಮರ್ಶಾ ಲೇಖನವನ್ನು ಪರಾಮರ್ಶನಕ್ಕಾಗಿ ಸಂಕಲನದಿಂದಲೇ ತೆಗೆದುಕೊಳ್ಳಲಾಗಿದೆ. ಅದರಲ್ಲಿ ಕಥೆಗಳ ಬಗ್ಗೆ ಅವರು 'ರವಿ ಪತ್ರಕರ್ತ, ಭಾವುಕ, ಪ್ರಗತಿಶೀಲ ಮತ್ತು ಕಥೆಗಾರ ಅಂದ ಮೇಲೆ ಇವರ ಬರವಣಿಗೆ ಹೇಗಿದ್ದೀತು? ಮಹಾ ಉಡಾಳನಂತೆ ಇವರು ತಮ್ಮ ಕಥೆಗಳಲ್ಲಿ ಭಾಷೆಯನ್ನು, ಭಾವನೆಗಳನ್ನು ಪೋಲು ಮಾಡಿರಬಹುದು ಎಂದು ನಾವು ಊಹಿಸಿರುವುದು ಸಹಜ. ಆದರೆ ಈ ಸಂಕಲನದ ಕಥೆಗಳು ಹೀಗಿಲ್ಲ. ರೌಡಿಗಳ ಕುರಿತು ಅವರ ಲೇಖನ ಕೂಡ ಹೀಗಿರಲಿಲ್ಲ. ರವಿ ತನ್ನ ಲೇಖನದಲ್ಲಿ ಓದುಗರ ಆಸಕ್ತಿಯನ್ನು ಹಿಡಿದಿಡಲು ಜನಪ್ರಿಯ ಗದ್ಯದ ತಂತ್ರಗಳನ್ನೆಲ್ಲ ಬಳಸಿದ್ದರು' ಎಂದು ರವಿಯವರ ಭೂಗತ ಲೋಕದ ಬರಹದ ಬಗ್ಗೆ ಪ್ರಸ್ತಾಪಿಸುತ್ತಾ, ಅದರ ಜೊತೆಗೆ ಕೆ.ಸತ್ಯನಾರಾಯಣ ಅವರು ಗಮನಿಸದೆ ಉಳಿದ ಕಥೆಗಳ ಬಗ್ಗೆ ಮಾತಾಡುತ್ತಾ 'ರವಿ ತನ್ನ ಸಫಲ ಕಥೆಗಳಲ್ಲಿ ಭಾಷೆಯನ್ನು ಅದರ ಅರ್ಥಕ್ಕಾಗಿ ಮಾತ್ರವಲ್ಲದೆ, ಧ್ವನಿಗಾಗಿ ಕೂಡ ಬಳಸುತ್ತಾರೆ. ಆದರೆ ಈ ಕಥೆಗಳ ಭಾಷೆಗೆ ಧ್ವನಿಯೇ ಇಲ್ಲ. ಅವನ್ನು ಯಾವ ಊರಿನಲ್ಲಿ, ಯಾವ ಪ್ರದೇಶದಲ್ಲಿ ಬೇಕಾದರೂ ಇಡಬಹುದು. ಈ ಕಥೆಗಳಲ್ಲಿ ಪ್ರಾದೇಶಿಕ ಸೊಗಡು ಇಲ್ಲ ಎಂಬುದು ನನ್ನ ದೂರಲ್ಲ. ಪ್ರಾದೇಶಿಕತೆಯ ಗಂಧವೇ ಇಲ್ಲದ ಒಳ್ಳೆಯ ಕಥೆಗಳಿಗೆ ಅಸಂಖ್ಯ ಉದಾಹರಣೆಗಳಿವೆ[೨] ಎನ್ನುತ್ತಾರೆ. ಇಲ್ಲಿ ಅವರು ರವಿಯವರ ಭಾಷೆಯನ್ನು ಮೊದಲು ಒಪ್ಪಿ ನಂತರ ಅಸಮಾಧಾನವನ್ನು ಸೂಚಿಸುತ್ತಾರೆ. ಆ ಅಸಮಾಧಾನವೂ ಒಂದು ರೀತಿಯ ಜಾರಿಕೊಳ್ಳುವ ಪ್ರಯತ್ನದಂತಿದೆ. ಭಾಷೆಯ ಕುರಿತು ಪ್ರಾಸಂಗಿಕವಾಗಿ ಪ್ರಸ್ತಾಪಿಸಿದ್ದರೂ ಈ ಇಬ್ಬರು ಲೇಖಕರ ದೃಷ್ಟಿ ಸಂಪೂರ್ಣವಾಗಿ ಕಥೆಗಳ ವಸ್ತು ಮತ್ತು ಅವು ಬೀರುವ ಪರಿಣಾಮಗಳ ಕಡೆಗೆ ಹೆಚ್ಚಿನ ಗಮನವನ್ನು ಹಾಯಿಸಿದ್ದಾರೆ. ಕಥೆಗಳಲ್ಲಿನ ಭಾಷೆಯನ್ನು ಅವರು ಗಮನಿಸಿಲ್ಲವೆಂದೇ ಹೇಳಬಹುದು. ರವಿಯವರ ಕಥೆಗಳನ್ನು ಪ್ರವೇಶಿಸಲು ಮತ್ತಷ್ಟು ಅರ್ಥೈಸಿಕೊಳ್ಳಲು ಸಾಹಿತ್ಯಿಕವಾಗಿ ಒಳ್ಳೆಯ ವಿಮರ್ಶಾ ಲೇಖನಗಳೆಂದು ಹೇಳಬಹುದಾದರೂ ಭಾಷಿಕವಾಗಿ ಯಾವುದೇ ಮಾಹಿತಿಯನ್ನು ಇವು ನೀಡಲಾರವು.

'ದಾರಿ' ಮತ್ತು 'ಪಾ.ವೆಂ.ಹೇಳಿದ ಕಥೆ' ಈ ಎರಡು ಸಂಕಲನಗಳನ್ನು ಒಟ್ಟಾಗಿ ಸೇರಿಸಿ ೧೯೯೮ರಲ್ಲಿ ಭಾವನಾ ಪ್ರಕಾಶನ 'ಒಟ್ಟಾರೆ ಕಥೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಿಸಿದೆ. ಈ ಸಂಕಲನ ಕುರಿತು ಬಂಜಗೆರೆ ಜಯಪ್ರಕಾಶ್ ಅವರು 'ಓದಿನ ಖುಷಿ ಕೊಡುವ ಕಥೆಗಳು' ಎಂಬ ತಮ್ಮ ಲೇಖನವೊಂದರಲ್ಲಿ 'ಖಾಸ್‌ಬಾತ್'ನ ಬರಹಗಳನ್ನು ಕೂಡ ಮನಸಿಟ್ಟು ಓದಬೇಕಾದ ಬರಹಗಳೆಂಬಂತೆ ಬರೆಯಬಲ್ಲ ರವಿಯವರ ಬರಹ ಕುಶಲತೆಯಾಗಲೀ, ಅವರ ಭಾವುಕತೆಯ ರಂಜನೆಗಳಾಗಲೀ, ಸರಳ ಮನಸ್ಸಿನ ವ್ಯಗ್ರತೆಗಳಾಗಲೀ ಕಥೆಗಾರರಾಗಿ ಅವರನ್ನು ಓದುವಾಗ ನಮಗೆ ಮುಖ್ಯವಾಗಬಾರದು. ಬದಲಾಗಿ ಕನ್ನಡ ಸಾಹಿತ್ಯ ತನ್ನ ನೆನಪಿನ ಕೋಶದಲ್ಲಿ ಸಂಚಯಿಸಿಕೊಳ್ಳುವ ಅನುಭವಗಳಾಗಬೇಕಾದ ಕಥೆಗಳನ್ನು ನಾವು ಹುಡುಕಬೇಕು. ಅಂತಹ ಸತ್ವ

ಮತ್ತು ಸಾಮರ್ಥ್ಯ ಒಟ್ಟಾರೆ ಕಥೆಗಳು ಸಂಕಲನದ ಕೆಲವು ಕಥೆಗಳಲ್ಲಿದೆ. ಪಾ.ವೆಂ.ಹೇಳಿದ ಕಥೆ, ಹೆಣದ ಮನೆಯಲ್ಲಿ, ಮೈಕು, ಹಂತ, ಕತ್ತಲೆ ನೋವು ಮತ್ತು ಹೆಣ, ವಿತಥ, ಪರಿಚಯ, ವೇಷಗಳು, ಮಸೀದಿ ಬಿದ್ದ ಮಾರನೆಯ ದಿನ, ನೆರಳು ಮುಂತಾದ ಕಥೆಗಳೊಳಗೆ ಮಂಡಿತವಾಗುವ ಜೀವನ ಹಾಗೂ ಅವುಗಳನ್ನು ಮಂಡಿಸುವ ಲೇಖನಿಯ ಜೀವನಾನುಭವ ಸಾರ್ಥಕ ಕಥೆಗಳ ಮಾದರಿಯನ್ನು ನಮಗೆ ಪರಿಚಯಿಸುತ್ತವೆಂದು ಹೇಳುತ್ತಾರೆ. ಮುಂದುವರೆದು '...ಪತ್ರಿಕಾ ಬರಹಗಾರನಾಗಿಯೂ ಬೆಳೆದು ಬಂದ ಲೇಖಕನೊಬ್ಬನಿಗೆ ಸಾಧ್ಯವಾಗುವಂತೆ ವೈವಿಧ್ಯಮಯವಾದ ವಿವರಗಳು, ಬದುಕಿನ ರಿವಾಜುಗಳನ್ನು ನಮ್ಮ ಮುಂದೆ ತೆರೆದಿಡಬಲ್ಲರು. ತಮ್ಮ ಬದುಕಿನ ಅಪಾರ ಪರಿಶ್ರಮಗಳ ನಡುವೆ ಮತ್ತಷ್ಟು ಸಾಹಿತ್ಯಿಕ ಮುಲಾಜುಗಳನ್ನು ಹಚ್ಚಿಕೊಂಡರೆ ಕನ್ನಡಕ್ಕೆ ಮತ್ತೊಬ್ಬ 'ಮಾಸ್ತಿ'ಯಂತಹ ಕಥೆಗಾರ ದೊರೆಯಬಹುದೆಂಬ ಬಗ್ಗೆ ದಟ್ಟವಾದ ಎಲ್ಲಾ ನಿದರ್ಶನಗಳನ್ನು ಒಟ್ಟಾರೆ ಕಥೆಗಳು ನೀಡುತ್ತಿವೆ'[3] ಎಂಬ ಆಶಾಭಾವವನ್ನು ವ್ಯಕ್ತಪಡಿಸುತ್ತಾರೆ. ಬದುಕಿನ ಅತೀ ಸಣ್ಣ ವಿಷಯದ ಬಗ್ಗೆ ವಿವರವಾಗಿ, ಪರಿಣಾಮಕಾರಿಯಾಗಿ ಬರೆಯಬಲ್ಲ ರವಿ ಕಥೆಗಾರರಾಗಿ ಕನ್ನಡ ಸಾಹಿತ್ಯ ಲೋಕವನ್ನು ಪ್ರವೇಶಿಸಿದವರು ತಮ್ಮ ಆಕರ್ಷಕ, ಭಾವುಕ ನಿರೂಪಣಾ ಶೈಲಿಯಿಂದ ವಸ್ತುವಿನ ಆಯ್ಕೆ, ತಂತ್ರ ಮತ್ತು ವಿಶಿಷ್ಟ ಭಾಷೆಯ ಮೂಲಕ ಒಳ್ಳೆಯ ಕಥೆಗಾರರಾಗಿ ಗುರುತಿಸಿಕೊಂಡರು ನಿಜ. ಆದರೆ ಪತ್ರಿಕೋದ್ಯಮದ ನಿತ್ಯ ಜಂಜಡದಲ್ಲಿ ಕಥೆಗಾರ ರವಿ ಬೆಳಗೆರೆ ಕಳೆದುಹೋದರು.

ಕಥೆಗಳ ಬರವಣಿಗೆಯಿಂದ ದೂರ ಸರಿದರೆನಂತೆ 'ಹರಿಯೋ ನದಿಗೆ ನೂರಾರು ಕವಲುಗಳು' ಎಂಬಂತೆ ಪತ್ರಿಕೆಯ ಜಂಜಡದ ಮಧ್ಯೆಯೂ ಅವರು ಕಾದಂಬರಿ, ಅನುವಾದ, ಕ್ರೈಮ್ ವರದಿ, ಪ್ರವಾಸ ಕಥನ, ಜೀವನ ಚರಿತ್ರೆ ಹೀಗೆ ಬರೆಯುತ್ತಲೇ ಇದ್ದಾರೆ. ರವಿ ಬೆಳಗೆರೆಯವರ ಬರಹವನ್ನು ಕುರಿತು ಚಂದ್ರಶೇಖರ ಪಾಟೀಲ್‌ರು 'ಕನ್ನಡ ನುಡಿಯನ್ನು ಅದರೆಲ್ಲ ಥಳುಕು ಬಳುಕುಗಳೊಂದಿಗೆ ಬಳಸಿಕೊಳ್ಳಬಲ್ಲ ಈ ಲೇಖಕ[4](ಅವರ ಅಭಿಪ್ರಾಯವನ್ನು ಹೊರತುಪಡಿಸಿ ಈ ಮಾತನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.)' ಎಂದು ಹೇಳುತ್ತಾರೆ. ಹಾಗೆ ನೋಡಿದರೆ ಬರಹವನ್ನೇ ಬಂಡವಾಳವಾಗಿಸಿಕೊಂಡು ಅಲ್ಪ ಅವಧಿಯಲ್ಲೇ ಆರ್ಥಿಕ ಸುಭದ್ರತೆ ಕಂಡಿರುವುದು ರವಿಯವರ ಮತ್ತೊಂದು ಯಶೋಗಾಥೆ. ಅವರ ಬರವಣಿಗೆಗಳಲ್ಲಿ ಕ್ರೈಮ್‌ಗೆ ಸಂಬಂಧಿಸಿದ ಬರಹಗಳೇ ಹೆಚ್ಚಿನದಾಗಿ ಕಾಣಬಹುದು. ಕ್ರೈಮ್ ಅನ್ನು ವಿಭಿನ್ನವಾದ ದೃಷ್ಟಿಯಿಂದ ನೋಡಿದವರು ರವಿ ಬೆಳಗೆರೆ. ಅವರು 'ಈ ಟಿ.ವಿ'ಯಲ್ಲಿ ನಡೆಸಿಕೊಡುತ್ತಿದ್ದ 'ಕ್ರೈಮ್ ಡೈರಿ'ಯ ನಿರೂಪಣಾ ಶೈಲಿಯಿಂದ ಏಕಕಾಲದಲ್ಲಿ ಕರ್ನಾಟಕದಾದ್ಯಂತ ಎಲ್ಲಾ ರೀತಿಯ ಜನರಲ್ಲಿಯೂ ಹೆಸರುವಾಸಿಯಾದರು. ಅದೇ ರವಿಯವರ ನಿರೂಪಣಾ ಮತ್ತು ವಾಕ್ ಶೈಲಿಯನ್ನು ಇಂದಿಗೂ ದೂರದರ್ಶನ ವಾಹಿನಿಗಳು ಮುಂದುವರೆಸಿ ರುವುದನ್ನು ಕಾಣಬಹುದಾಗಿದೆ. ಇಂತಹದೊಂದು ಹೊಸತನಕ್ಕೆ ಅವರ ಭಾಷೆಯ ಗತ್ತು ನಿರೂಪಣ ಶೈಲಿ ಕಾರಣವೆಂದು ಹೇಳಬಹುದು.

ರವಿಯವರ ಹುಟ್ಟುಹಬ್ಬದ ಕಾಣಿಕೆಯಾಗಿ ನೀಡಿರುವುದೇ 'ಫಸ್ಟ್ ಹಾಫ್' ಎಂಬ ಐವತ್ತನೆಯ ವರ್ಷದ ಸಂಭಾವನಾ ಗ್ರಂಥ. ಈ ಹೆಸರನ್ನು ಬದುಕಿನ ಮೊದಲ ಐವತ್ತು ವರ್ಷಗಳು ಎಂಬ ಅರ್ಥದಲ್ಲಿ ಆಯ್ಕೆ ಮಾಡಿಕೊಳ್ಳಲಾಗಿದೆ. ಅವರ ಹುಟ್ಟಿನಿಂದ ಈ ಐವತ್ತು ವರ್ಷಗಳ ಅವಧಿಯ

ಸಾಧನೆ, ಸಿದ್ಧಿಗಳನ್ನು, ಏಳು–ಬೀಳುಗಳ ಚಿತ್ರಣವನ್ನು ಸೆರೆಹಿಡಿಯಲು ಈ ಕೃತಿಯಲ್ಲಿ ಪ್ರಯತ್ನಿಸಲಾಗಿದೆ ಎಂದು ಸಂಪಾದಕರೇ ಹೇಳಿಕೊಂಡಿದ್ದಾರೆ. ಜೊತೆಗೆ 'ಬಾಲ್ಯದ ಬಿ.ರವಿ Photo album, ಹಿರಿಯರು–ಗೆಳೆಯರು ಕಂಡ ರವಿ, ಕುಟುಂಬದವರು ಕಂಡ ರವಿ, ನಮ್ಮ ಬಾಸ್, ಜೊತೆಗೆ ರವಿಯವರ Biodata-ಪ್ರಶಸ್ತಿ–ಪುರಸ್ಕಾರಗಳು, ಪ್ರಕಟಿತ ಕೃತಿಗಳ ಯಾದಿ–ವಿಮರ್ಶೆ ಹೀಗೆ ಎಲ್ಲಾ ವಿವರ ಅಂಶಗಳನ್ನೊಳಗೊಂಡರೆ ಭವಿಷ್ಯದಲ್ಲಿ ಈ ಕೃತಿ ಸಮಗ್ರ ಮಾಹಿತಿ ನೀಡುವ ಆಕರವಾಗಬಹುದೆಂಬ ಆಸೆಯಿಂದ 'ಫಸ್ಟ್ ಹಾಫ್'ನ ರೂಪು–ರೇಷೆ ಸಿದ್ಧವಾಯಿತು'[೫] ಎನ್ನುತ್ತಾರೆ ಸಂಪಾದಕರಾದ ಶರತ್ ಕಲ್ಕೋಡ್. ಇವರ ಮಾತಿನಂತೆ ಈ ಕೃತಿಯಲ್ಲಿ ಆಕರವಾಗಬಹುದಾದ ಲೇಖನಗಳು ಇವೆ; ವ್ಯಕ್ತಿಗತವಾದ ಲೇಖನಗಳು ಇವೆ. ಆ ಕಾರಣದಿಂದ ಈ ಅಧ್ಯಯನಕ್ಕೆ ಪ್ರಾಥಮಿಕ ಆಕರವಾಗಬಲ್ಲ ಲೇಖನಗಳನ್ನಷ್ಟೇ ಅಧ್ಯಯನದ ಸಮೀಕ್ಷೆಯ ಭಾಗವಾಗಿ ಪ್ರಸ್ತಾಪಿಸಲಾಗಿದೆ.

ಕನ್ನಡ ಸಾಹಿತ್ಯಕ್ಕೆ 'ಬೆಳಗೆರೆ'ಯವರ ಕುಟುಂಬ ನೀಡಿರುವ ಕೊಡುಗೆಯನ್ನು ನೆನೆಯುತ್ತಾ ಸಾಧಾರಣ ಅನುವಾದಕರು ಮನಕೊಡದ 'ಹಿಮಾಲಯನ್ ಬ್ಲಂಡರ್', 'ಗಾಂಧಿ ಹತ್ಯೆ ಮತ್ತು ಗೋಡ್ಸೆ'ಯಂಥ ಪುಸ್ತಕಗಳನ್ನು ಕನ್ನಡಕ್ಕೆ ತರುವ ಸತ್ಯನಿಷ್ಠೆ ಮತ್ತು ಅವರು ಇತರ ಪುಸ್ತಕಗಳ ಮೂಲಕ ಹೊರಹಾಕಿರುವ ಸಂಗತಿಗಳು 'ಟ್ಯಾಬ್ಲಾಯ್ಡ್' ಜಾತಿಯ ರಂಜಕಗಳಲ್ಲ; ಉಳಿದವರು ಮುಚ್ಚಿಟ್ಟಿದ್ದ, ಮುಚ್ಚಿಡ ಬಯಸುವ ಸತ್ಯ'[೬] ಎಂದು ಎಸ್.ಎಲ್.ಭೈರಪ್ಪನವರು ಹೇಳುತ್ತಾರೆ. ಒಬ್ಬ ಲೇಖಕನ ಸಾಮಾಜಿಕ ಕಳಕಳಿ ಮತ್ತು ಜವಾಬ್ದಾರಿ, ಮುಚ್ಚಿಟ್ಟ ಸತ್ಯಗಳನ್ನು ಬರೆಯುವಾಗಿನ ಎಚ್ಚರಿಕೆ, ಬರೆದಾದ ಮೇಲಿನ ಗಟ್ಟಿತನವನ್ನು ಕುರಿತು ಭೈರಪ್ಪನವರು ಹೇಳುತ್ತಾರೆ. ಇಲ್ಲಿ ಅವರು ರವಿಯವರ ಕೃತಿಗಳನ್ನು ಪರಿಚಯಿಸಿ ಕೊಡುತ್ತಾರಷ್ಟೇ, ಆದರೆ ಅವುಗಳ ಬಗ್ಗೆ ಮಾತನಾಡುವುದರ ಬದಲಾಗಿ ಬೆಳಗೆರೆ ಕುಟುಂಬದ ಸಾಹಿತ್ಯಿಕ ಹಿನ್ನೆಲೆಯನ್ನು ನೀಡುತ್ತಾರೆ.

ನಿಸಾರ್ ಅಹಮದ್ ಅವರು 'ರವಿ ಬೆಳಗೆರೆಯವರು ಮುಖ್ಯವಾಗಿ ಕನ್ನಡ ಪತ್ರಿಕೋದ್ಯಮಕ್ಕೆ ಪ್ರಾಸಂಗಿಕವಾಗಿ ಸಾಹಿತ್ಯಕ್ಕೆ ಒದಗಿಸಿರುವ ನುಡಿಗಟ್ಟಿನ, ಶೈಲಿಯ, ಹೊಸ ಪದಗಳ ನಿರೂಪಣೆಯ ಬಳುವಳಿ ಉಲ್ಲೇಖನ ಯೋಗ್ಯ ಹಾಗೂ ಅತ್ಯನನ್ಯ, ಸುಲಭಗ್ರಾಹ್ಯ ಪದಗಳ ಅಜಟಿಲ ವಾಕ್ಯಾವಳಿ, ದಿಟ್ಟ ಅರ್ಥವಾಹಿಕತ್ವದ ತಂಗುದಾಣ, ನಿಂದನೆ, ಪರಿಹಾಸ್ಯ, ಕುಚೋದ್ಯ ಕಟಕಿ, ವಿಡಂಬನೆ, ವ್ಯಂಗ್ಯಾಲೋಚನೆಯಾಗಲಿ, ಎಂತಹ ರೂಕ್ಷ ಭಾವನೆಯೇ ಆಗಲಿ–ಅವುಗಳ ಅಭಿವ್ಯಕ್ತಿಯ ಅರ್ಥ ಸಾರ್ಥಕ್ಯದ ಶಿಲ್ಪವನ್ನಾಗಿಸುವ ಜಾಣ'[೭] ಎಂದು ರವಿಯವರ ಬರಹದ ಲಕ್ಷಣ ಮತ್ತು ಅವುಗಳಲ್ಲಿನ ಚಾಣಾಕ್ಷತೆಯನ್ನು ಕುರಿತು ಹೇಳುತ್ತಾರೆ. ಅವರ ಬರಹಗಳಲ್ಲಿ ಮೇಲಿನ ಈ ಎಲ್ಲಾ ಲಕ್ಷಣಗಳನ್ನು ಗುರುತಿಸಲು ಸಾಧ್ಯ ಎಂಬುದನ್ನು ತುಂಬ ಅರ್ಥಪೂರ್ಣವಾಗಿ ಹೇಳುತ್ತಾರೆ. ಇಂದು ನಮ್ಮ ಬರಹಗಾರರ ಭಾಷಾಭಿವ್ಯಕ್ತಿ ಹಾಗೂ ಶೈಲಿಯ ಮೇಲೆ 'ಇದು ರವಿ ಬೆಳಗೆರೆಯ ರೀತಿ' ಎಂಬಷ್ಟು ಪ್ರಭಾವ ಬೀರಿದ್ದಾರೆ ಎಂದು ರವಿಯವರ ಲೇಖನಿಯ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸುತ್ತಾರೆ. ಜೊತೆಗೆ ರವಿಯವರು ಹೆಚ್ಚಾಗಿ ಬಳಸುವ ಆಂಗ್ಲ ಪದ/ಶಬ್ದಗಳ ಬಗ್ಗೆ ಅಸಮಾಧಾನವನ್ನು ಸೂಚಿಸುತ್ತಾರೆ. ಈ ರೀತಿ ಅನ್ಯಭಾಷಾ ಪದಗಳ ಬಳಕೆ ಆಕರ್ಷಣೆಯಾಗಿಯೋ

ಅಥವಾ ಅರ್ಥೈಸುವ ದೃಷ್ಟಿಯಿಂದಲೋ, ಇಲ್ಲ ಮಾಧ್ಯಮದ ಒತ್ತಡದಿಂದಾಗಿಯೋ ಅನ್ಯಭಾಷಾ ಪದಗಳ ಹೇರಳವಾದ ಬಳಕೆಯನ್ನು ಅವರ ಬರಹಗಳಲ್ಲಿ ಕಾಣಬಹುದು. ಇದು ಅವರ ಪತ್ರಿಕಾ ಬರಹಗಳಲ್ಲಷ್ಟೇ ಹೆಚ್ಚಿನದಾಗಿ ಕಾಣಬಹುದು. ಉಳಿದಂತೆ ಇನ್ನಿತರ ಬರಹಗಳಲ್ಲಿ ವಿರಳವೆಂದು ಹೇಳಬಹುದು.

ರವಿ ಬಳಗೆರೆಯವರ ಬರಹಗಳ ಬಗ್ಗೆ ಮಾತಾಡುತ್ತಾ ಚಂದ್ರಶೇಖರ ಕಂಬಾರರು 'ನಾನು ಅವರ ಬರವಣಿಗೆಯಿಂದ ಬಹಳ ಆಕರ್ಷಿತವಾದದು ಯಾವಾಗ 'ಮಾಂಡೋವಿ' ಅಂತ ಒಂದು ಕಾದಂಬರಿ ಇದ್ಯಲ್ಲ... ಅನುವಾದ ಮಾಡಿದ್ದು... ಅದನ್ನು ಓದಿದಾಗ. ಅದಕ್ಕೆ ಅನುವಾದ ಅಂತ ಹೇಳ್ತಾರೆ. ಆದ್ರೆ ಕ್ರಿಯೇಟಿವ್ ಆಗಿ ಬದಲಾವಣೆಗಳನ್ನು ಮಾಡಿದ್ದಾರೆ ಕಥೆಯಲ್ಲಿ' ಎಂದು ಮಾಂಡೋವಿ ಕಾದಂಬರಿಯನ್ನು ಕುರಿತು ಹೇಳುತ್ತಾರೆ. ಆದರೂ 'ಯಾಕಿ ನಮ್ಮ ಅಕಾದೆಮಿಗಳು ಇವರ ಕೃತಿಗಳನ್ನು ಮರೆತಿವೆ ಅಂತ ನಂಗೆ ಗೊತ್ತಾಗ್ತಾ ಇಲ್ಲ. ಆ Prose ಆಗ್ಲಿ ಮತ್ತೆ ಆ ಬರವಣಿಗೆ ಆಗ್ಲಿ, ಮಾಂಡೋವಿ ಕೃತಿಯಲ್ಲಿ ಎಷ್ಟು ಅದ್ಭುತವಾಗಿದೆ ಅಂದ್ರೆ ನಮಗೆ ಕೆಲವು ಹೊಸ ಚಿಂತನೆಗಳನ್ನು ನಮ್ಮ ಎದುರಿಗೆ ತೆರೆದಿಡತಕ್ಕಂಥ ಕೃತಿ ಅದು'[೮] ಎಂದು ಮಾಂಡೋವಿ ಕೃತಿಯನ್ನು ಪರಿಚಯಿಸಿ ಅದಕಿಷ್ಟು ಪ್ರವೇಶಿಕೆಯ ಮಾತನಾಡುತ್ತಾರೆ. ಅನುವಾದ ಹೇಗಿರ ಬೇಕೆಂಬುದನ್ನು ಸಮರ್ಥವಾಗಿ ತೋರಿಸಿಕೊಟ್ಟ ಕೃತಿ ಇದು ಎನ್ನುತ್ತಾರೆ. ಈ ಸಂಶೋಧನೆಯ ಉದ್ದೇಶಗಳಲ್ಲಿ ಒಂದಾಗಿರುವಂತಹದ್ದೂ ಮತ್ತು ಕಂಬಾರರ ಪ್ರಶ್ನೆಯೂ ಆಗಿರುವಂತಹದ್ದು ಏನೆಂದರೆ, ಯಾಕೆ ವಿಮರ್ಶಕರಾಗಲಿ, ಅಕಾದೆಮಿಗಳಾಗಿ ಇವರ ಕೃತಿಗಳನ್ನು ದೂರವಿಟ್ಟಿವೆ? ಒಂದು ಕೃತಿ ಓದುಗರನ್ನು ಹಿಡಿದುಕೊಳ್ಳುವುದು ಚಿಂತನೆಗೊಳಪಡಿಸಿದಾಗಲೇ. ಆ ಮೂಲಕ ಒಂದು ಕೃತಿ ತನ್ನ ಜೀವಂತಿಕೆಯನ್ನು ಕಂಡುಕೊಳ್ಳಲು ಸಾಧ್ಯ. ಬಹುಶಃ ಸಾಹಿತ್ಯ ಕೃತಿಯ ಸಾರ್ಥಕತೆ ಇದೇ ಅನಿಸುತ್ತದೆ.

ಬಿ.ಎಸ್.ವೆಂಕಟಲಕ್ಷ್ಮಿಯವರು ರವಿ ಬೆಳಗೆರೆಯವರ ಬಗೆಗೆ ತಮ್ಮ ಗೆಳೆಯನನ್ನು ಕೇಳಿದಾಗ 'ಇವನ ಹಾಗೆ ಯಾರೂ ಭಾಷೆಯನ್ನು ವ್ಯಾಪಾರಕ್ಕಿಟ್ಟಿಲ್ಲ ಹಾಗೂ ಅದೇ ಸಮಯಕ್ಕೆ ಯಾರೂ ನಮ್ಮಲ್ಲಿ ಭಾಷೆಯನ್ನು ಯಶಸ್ವಿಯಾಗಿ ಬಳಸಿಕೊಂಡೇ ಇವನಷ್ಟು ಮೇಲ್ಮಟ್ಟಕ್ಕೆ ಬಂದು ಉದ್ಧಾರವಾಗಿಲ್ಲ' ಎಂಬ ಉತ್ತರ ಬಂತಂತೆ. ಈ ಮಾತನ್ನು ಕೇಳಿದ ವೆಂಕಟಲಕ್ಷ್ಮಿಯವರಿಗೆ 'ರವಿಯನ್ನು ಕುರಿತ ಬೆಸ್ಟ್ ಎಕ್ಸ್‌ಪ್ಲೆನೇಶನ್ ಇದು' ಅಂತ ಅನಿಸಿತು ಎಂದು ಹೇಳುತ್ತಾರೆ. ಜೊತೆಗೆ 'ರವಿ ನಂಗೆ ಗ್ರೇಟ್ ಅನ್ನಿಸೋದು ಭಾಷೆ ಹಾಗೂ ಶೈಲಿಯೊಂದನ್ನು ಹುಟ್ಟುಹಾಕಿದ ಪ್ರವರ್ತಕನಾಗಿ 'ರವಿ ಬೆಳಗೆರೆ ಬಳಸೋ ಶಬ್ದಗಳ ನಿಘಂಟು' ಅನ್ನೋ ಪ್ರಕಟಣೆಯನ್ನು ಯಾರೂ ಹೊರತಂದಿರಬಹುದು. ಕನ್ನಡ ಸಾಹಿತ್ಯವನ್ನು ಕುರಿತು ಹಗಲೂ ರಾತ್ರಿ ಚರ್ಚಿಸೋ ನಮ್ಮ ಪಂಡಿತರುಗಳು ಇಂಥದೊಂದು ಕಾಲಘಟ್ಟದಲ್ಲಿ ಇಂಥದೊಂದು ಭಾಷೆ ಬಳಕೆಗೆ ಬಂತು ಎಂಬುದನ್ನು ದಾಖಲಿಸುವಂಥ ಧಾರಾಳತನವನ್ನು ಪ್ರದರ್ಶಿಸದಿರಬಹುದು. ಆದರೆ ಆಡುಮಾತಿನ ಮೂಲಕವೇ ಬರವಣಿಗೆಯೊಂದು ಎಲ್ಲರನ್ನು ಮುಟ್ಟಬಹುದು ಅಂತ ನಂಬಿರೋ ನನ್ನಂಥವರಿಗೆ ಮಾತ್ರ ಈ ಭಾಷೆ. ಶೈಲಿ ಅದ್ಭುತ

ಅನ್ನಿಸಿಬಿಡುತ್ತೆ' ಎಂದು ರವಿ ಬೆಳಗೆರೆಯವರ ಒಟ್ಟಾರೆ ಬರಹದ ಸ್ವರೂಪವನ್ನು ಹೇಳಲು ಪ್ರಯತ್ನಸಿದ್ದಾರೆ. ನಿಜ, ಬರವಣಿಗೆ ಒಂದರಿಂದಲೇ ಗಟ್ಟಿಯಾಗಿ ನೆಲೆನಿಂತ ರವಿಯವರು ತಮ್ಮ ವಿಶಿಷ್ಟವಾದ ಭಾಷೆ ಶೈಲಿಯ ಮೂಲಕ ಹೊಸತನವನ್ನು ಹುಟ್ಟುಹಾಕಿದ್ದಲ್ಲದೆ ಇಂದಿಗೂ ಜೀವಂತವಾಗಿಸಿದ್ದಾರೆ.

'ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರವಿ ಬೆಳಗೆರೆ ಸ್ಥಾನಮಾನವೇನು ಅನ್ನುವ ಪ್ರಶ್ನೆಗೆ ಉತ್ತರಿಸುವ ಅಗತ್ಯವಿಲ್ಲ. ಯಾಕೆಂದರೆ, ಚರಿತ್ರೆ ನಿರ್ಮಾಪಕರು ಯಾರು ಎಂಬ ಪ್ರಶ್ನೆಗೆ ತುಂಬ ಅಸಮರ್ಪಕವಾದ ಉತ್ತರ ಸಿಗುತ್ತದೆ. ಇವತ್ತು ಕನ್ನಡದಲ್ಲಿ ಅತ್ಯಂತ ಹೆಚ್ಚು ಮಾರಾಟವಾಗುವುದು ರವಿ ಬೆಳಗೆರೆ ಕೃತಿ. ಎರಡನೆಯ ಸ್ಥಾನ ಡಾ.ಎಸ್.ಎಲ್.ಭೈರಪ್ಪ. ಮೂರನೆಯ ಸ್ಥಾನದಲ್ಲಿ ತೇಜಸ್ವಿ ಇದ್ದಾರೆ.' ಎಂದು ಜೋಗಿಯವರು ಹೇಳುತ್ತಾರೆ. ಮುಂದುವರೆದು 'ಸಂತೋಷದ ಸಂಗತಿಯೆಂದರೆ ಈ ಮೂವರೂ ವಿಮರ್ಶೆಯನ್ನು ವಿಮರ್ಶಕರನ್ನು ಮೀರಿದವರು. ಕನ್ನಡ ಓದುಗರ ಬಳಗ ಹೆಚ್ಚಿಸಿದವರು, ಇವರ ಪುಸ್ತಕ ಹೀಗಿದೆ ಎಂದು ಯಾರೂ ಸರ್ಟಿಫಿಕೇಟು ಕೊಡಬೇಕಾಗಿಲ್ಲ. ಹೇಗಿದ್ದರೂ ಓದುತ್ತಾರೆ ಮತ್ತು ಹೇಗಿದೆ ಅನ್ನುವುದು ಎಲ್ಲರಿಗೂ ಗೊತ್ತಿರುತ್ತದೆ. ಯುಟಿಲಿಟಿ ಬಯಸುವ ಲೆಕ್ಕಾಚಾರದ ಓದುಗರಿಗೂ ಕೇವಲ ಆನಂದವನ್ನಷ್ಟೇ ಬಯಸುವ ನಿಜದ ಓದುಗನಿಗೂ ಏಕಕಾಲಕ್ಕೆ ಸಂತೋಷ ಕೊಡುವಂತೆ ಬರೆಯಬಲ್ಲವರು ಈ ಮೂವರು' ಎನ್ನುತ್ತಾರೆ. ಇಷ್ಟಕ್ಕೂ ವಿಮರ್ಶೆ ಎನ್ನುವುದು ಒಂದು ಕೃತಿಯನ್ನು ಪ್ರವೇಶಿಸಲು ಕಂಡುಕೊಂಡ ದಾರಿ ಅಥವಾ ಮತ್ತಷ್ಟು ಅರ್ಥೈಸಿಕೊಳ್ಳಲು ಇರುವ ಮಾರ್ಗ. ಅದೇ ಆ ಕೃತಿಯ ಮಹತ್ವವನ್ನು ನಿರ್ಧರಿಸಲಾರದು. ವಿಮರ್ಶೆಗೊಳಪಟ್ಟ ಕೃತಿಯೇ ಶ್ರೇಷ್ಠ ಕೃತಿ ಎಂದೇನೂ ಹೇಳಲಾಗದು. ವಿಮರ್ಶೆಯಿಂದ ಹೊರಗುಳಿದದ್ದು ಸಾಹಿತ್ಯ ಕೃತಿಯೇ ಅಲ್ಲವೆಂದು ಹೇಳುವುದು ಎಷ್ಟರ ಮಟ್ಟಿಗೆ ಸರಿ? 'ಕನ್ನಡ ಸಾಹಿತ್ಯ ಚರಿತ್ರೆ ಹೀಗೆ ಅನೇಕರನ್ನು ಸಾಹಿತ್ಯ ಚರಿತ್ರೆಯ ಯಾವುದೇ ಕಾಲಘಟ್ಟಕ್ಕಾಗಲೀ, ಪಂಥಕ್ಕಾಗಲೀ ಸೇರಿಸುವಲ್ಲಿ ಸೋತು ಕುಂತಿದೆ. ಅ.ನ.ಕೃ. ರಾಮಮೂರ್ತಿ, ತರಾಸು, ಬೀಚಿ, ಟಿ.ಕೆ.ರಾಮರಾವ್, ದೇವುಡು, ತೇಜಸ್ವಿ, ಭೈರಪ್ಪ, ಇವರೆಲ್ಲ ನವ್ಯವೂ ಅಲ್ಲದ, ನವ್ಯೋತ್ತರವೂ ಅಲ್ಲದ ಪ್ರಗತಿಶೀಲರೂ ಅಲ್ಲದ ಕನ್ನಡ ಓದುಗರನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆಯುತ್ತಾ ಹೋದವರು. ಕನ್ನಡದ ಕಣ್ತೆರೆಸಿದ ಲೇಖಕರು ಎಂದು ಕರೆಯಬಹುದಾದವರು ಆ ಸಾಲಲ್ಲೇ ರವಿ ಬೆಳಗೆರೆ ಕೂಡ ಬರುತ್ತಾರೆ' ಎನ್ನುತ್ತಾರೆ ಜೋಗಿಯವರು.

ಕೃತಿಗಳಲ್ಲಿ ಜೀವನ ದೃಷ್ಟಿ, ಮಾನವ ಸಂಬಂಧ, ಬಡತನ, ಅಸಮಾನತೆ, ಶೋಷಣೆ, ಸಾಮಾಜಿಕತೆ, ಅಸ್ತಿತ್ವ, ಮಹಿಳೆ, ಎಂಬಿತ್ಯಾದಿ ಸಿದ್ಧ ಸಿದ್ಧಾಂತಗಳನ್ನು ಇಟ್ಟುಕೊಂಡು ವಿಮರ್ಶಿಸಲು ಹೊರಟರೆ ರವಿ ಬೆಳಗೆರೆಯವರ ಕೃತಿಗಳು ಗಾಬರಿ ಹುಟ್ಟಿಸುತ್ತವೆ. ವಿಮರ್ಶೆಯ ಮಾನದಂಡಗಳಿಗೆ ಅವು ಹೊಂದುವುದಿಲ್ಲ. ಆ ಪರಿಭಾಷೆ, ಮಾನದಂಡಗಳನ್ನು ದಾಟಿ ವಿಮರ್ಶೆ ಇನ್ನೂ ಹೊರಬಂದಿಲ್ಲ. ಹೀಗಾಗಿ ಜನ ಓದುವ ಕೃತಿಗಳಿಗೂ ಕೆಲವೇ ಜನ ಓದುವ ಕೃತಿಗಳಿಗೂ ಇರುವ ವ್ಯತ್ಯಾಸವನ್ನು

ವಿಮರ್ಶೆ ಗುರುತಿಸುವುದಕ್ಕೂ ಹೋಗುವುದಿಲ್ಲ. ಅಷ್ಟಕ್ಕೂ ವಿಮರ್ಶೆ ಕೃತಿಗಾಗಿಯೇ ಹೊರತು ಕೃತಿಯೇ ವಿಮರ್ಶೆಗಾಗಿಯಲ್ಲವಲ್ಲ. ವಿಮರ್ಶೆ ಕೃತಿ ಹುಟ್ಟು ಹಾಕುವ ಚಿಂತನೆಯನ್ನು ಗುರುತಿಸಬೇಕೆ ಹೊರತು ಈಗಾಗಲೇ ರೂಪಿಸಿಕೊಂಡಿರುವ ಸಿದ್ಧಾಂತದ ಕಣ್ಣಪಟ್ಟಿ ನೇರಕ್ಕೆ ಕೃತಿಯೇ ಬರಬೇಕು ಎಂಬುದು ಎಷ್ಟರಮಟ್ಟಿಗೆ ಸರಿಯೋ ತಿಳಿಯದು!

**ರವಿ ಬೆಳಗೆರೆ ಅವರ ಕಥೆಗಳು: ಸಾಹಿತ್ಯಿಕ ವಿಶ್ಲೇಷಣೆ**

ರವಿ ಬೆಳಗೆರೆಯವರ ಬಗ್ಗೆ ಆಗಲಿ ಅಥವಾ ಅವರ ಬರಹಗಳ ಬಗ್ಗೆಯಾಗಲೀ ಯಾವುದೇ ಅಧ್ಯಯನಗಳು ನಡೆದಿಲ್ಲ. ಇತ್ತೀಚಿಗಷ್ಟೇ ರಾಜೇಂದ್ರ ಅವರು 'ರವಿ ಬೆಳಗೆರೆ ಅವರ ಕಥೆಗಳು: ಸಾಹಿತ್ಯಿಕ ವಿಶ್ಲೇಷಣೆ' ಎಂಬ ವಿಷಯವನ್ನು ಕುರಿತು ಎಂ.ಫಿಲ್ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ರವಿಯವರ ಒಟ್ಟು ಕಥೆಗಳನ್ನಷ್ಟೇ ಈ ಅಧ್ಯಯನದ ವ್ಯಾಪ್ತಿಯಲ್ಲಿ ತೆಗೆದುಕೊಳ್ಳಲಾಗಿದೆ. ಕಥಾವಸ್ತು, ಪಾತ್ರ ಚಿತ್ರಣ, ಕಥನ ಕ್ರಮಗಳನ್ನು ಕುರಿತು ಸಾಹಿತ್ಯಿಕ ವಿಶ್ಲೇಷಣೆ ಮಾಡಲಾಗಿದೆ. ಭಾಷೆಯನ್ನು ಕುರಿತು ಈ ಅಧ್ಯಯನದಲ್ಲಿ ಮಾತನಾಡಲಾಗಿದೆಯಾದರೂ ಅದು ಅಷ್ಟಕ್ಕಷ್ಟೆ. ಕೆಲವು ಕಥೆಗಳಲ್ಲಿ ಬರುವ ಪ್ರಾದೇಶಿಕ ಪದಗಳನ್ನು ಸಂಶೋಧಕರು ಗುರುತಿಸುತ್ತಾರೆ. ಉತ್ತರ ಕರ್ನಾಟಕದ ಭಾಷೆ ಅದರಲ್ಲೂ ಹುಬ್ಬಳ್ಳಿ-ಧಾರವಾಡ ಭಾಷೆ ಕೆಲವು ಕಥೆಗಳಲ್ಲಿ ಬಳ್ಳಾರಿಯ ಪ್ರಾದೇಶಿಕ ಮತ್ತು ತೆಲುಗು ಭಾಷೆ ಬಳಕೆಯಾಗಿರುವುದನ್ನು ಉದಾಹರಣೆಗಳ ಸಹಿತ ಪಟ್ಟಿ ಮಾಡಿದ್ದಾರೆ. ಜೊತೆಯಲ್ಲಿ ಕೆಲವು ಕಥೆಗಳಲ್ಲಿ ಇಂಗ್ಲೀಶ್ ಬಳಸಿರುವುದನ್ನು ಪಟ್ಟಿ ಮಾಡಿದ್ದಾರೆ.

**ರವಿ ಬೆಳಗೆರೆಯವರ ಪ್ರಾತಿನಿಧಿಕ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರ ಚಿತ್ರಣದ ಸ್ವರೂಪ.**

೨೦೧೧-೧೨ನೇ ಸಾಲಿನಲ್ಲಿ ನಿಂಗಪ್ಪ ಬ.ಸಂಗ್ರೇಜಿಕೊಪ್ಪನವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದ ಎಂ.ಫಿಲ್ ಸಂಪ್ರಬಂಧ ರವಿ ಬೆಳಗರೆಯವರ ಪ್ರಾತಿನಿಧಿಕ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರ ಚಿತ್ರಣ ಸ್ವರೂಪ ಒಟ್ಟು ಆರು ಆಧ್ಯಾಯಗಳನ್ನು ಹೊಂದಿದೆ. ಎರಡು ಕಾದಂಬರಿಗಳನ್ನು ಈ ಸಂಪ್ರಬಂಧದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯನದಲ್ಲಿ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನವನ್ನು ಕುರಿತು ಹೇಳಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಕಾದಂಬರಿಯ ನಾಯಕಿಯ ಪಾತ್ರದ ಸ್ವರೂಪ ಕುರಿತಂತೆ ಮಾತನಾಡಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಮಾನಸಿಕ ಆಘಾತಕ್ಕೆ ಒಳಗಾದವರು ವರ್ತಿಸುವ ವಿಲಕ್ಷಣ ಪ್ರವೃತ್ತಿಯ ಲಕ್ಷಣಗಳನ್ನು ಕುರಿತಂತೆ ಮತ್ತು ಪ್ರವೃತ್ತಿಯವರ ಸ್ವರೂಪದ ಬಗ್ಗೆ ಚರ್ಚಿಸಲಾಗಿದೆ. ಲೈಂಗಿಕವಾಗಿ ಶೋಷಣೆಗೆ ಒಳಗಾದವರ ಜೀವನ ಮತ್ತು ಕಾರಣಗಳನ್ನು ಕುರಿತಂತೆ ಅಧ್ಯಾಯ ನಾಲ್ಕರಲ್ಲಿ ಚರ್ಚಿಸಲಾಗಿದೆ. ಕಾದಂಬರಿಯಲ್ಲಿ ಬರುವ ಅನೇಕ ಶೋಷಿತ ಪೋಷಿತ ಪಾತ್ರಗಳು ಮತ್ತು ಸಂಬಂಧಗಳ ಬಗೆಗೆ ಅಧ್ಯಾಯ ಐದರಲ್ಲಿ ಚಿತ್ರಿಸಲಾಗಿದೆ. ಕೊನೆಯ ಅಧ್ಯಾಯವಾದ ಸಮಾರೋಪದಲ್ಲಿ ರವಿಯವರ ಕಾದಂಬರಿಗಳ ಬಗ್ಗೆ ಪ್ರಸ್ತಾಪಿಸುತ್ತಾ ಅವುಗಳ ವೈಶಿಷ್ಟ್ಯವನ್ನು ಹೇಳಲಾಗಿದೆ. ಅನುಬಂಧದಲ್ಲಿ ಪರಿಚಯ, ಪುಸ್ತಕಗಳ ಪಟ್ಟಿಯನ್ನು ಸಂಶೋಧಕರು ನೀಡಿದ್ದಾರೆ.

ಒಟ್ಟಾರೆ ಈ ಸಂಪ್ರಬಂಧ ಎರಡು ಕಾದಂಬರಿಯ ಸ್ತ್ರೀಪಾತ್ರಗಳನ್ನಷ್ಟೇ ಕ್ರೋಢೀಕರಿಸಿ ಕೆಲವು ಪಾತ್ರ, ಶೋಷಣೆ, ಪೋಷಣೆ, ಲೈಂಗಿಕತೆ, ವಿಲಕ್ಷಣತೆ ಮುಂತಾದ ನಾಲ್ಕೈದು ವಿಧಗಳಲ್ಲಿ ಕಾದಂಬರಿಯಲ್ಲಿ ಬರುವ ಸ್ತ್ರೀಪಾತ್ರಗಳನ್ನು ನೋಡಲಾಗಿದೆ. ಕಾದಂಬರಿಯ ವಸ್ತು, ತಂತ್ರ, ವೈಶಿಷ್ಟ್ಯ ಅವುಗಳ ವಿಶೇಷ ಇತ್ಯಾದಿ ಅಂಶಗಳೆಡೆಗೆ ಸಂಶೋಧಕರು ಗಮನವನ್ನು ಪ್ರಸ್ತಾವಿಕವಾಗಿಯಾದರೂ ಪ್ರಸ್ತಾಪಿಸಿಲ್ಲ. ಅದು ಅವರ ಉದ್ದೇಶವೂ ಅಲ್ಲ, ಸ್ತ್ರೀ ಪಾತ್ರಗಳ ಬಗ್ಗೆ ಬೇರೆ ಬೇರೆ ಮಜಲುಗಳನ್ನು ಗಮನದಲ್ಲಿರಿಸಿಕೊಂಡು ಮಾಡಿದ ಅಧ್ಯಯನವೆಂದು ಹೇಳಬಹುದು.

ಈ ಅಪ್ರಕಟಿತ ಸಂಪ್ರಬಂಧವನ್ನು ರವಿ ಬೆಳಗೆರೆಯವರ ಕಥೆಗಳಿಗಷ್ಟೇ ಸೀಮಿತ ವ್ಯಾಪ್ತಿಯನ್ನು ಮಾಡಿಕೊಂಡು ಅಧ್ಯಯನ ಮಾಡಲಾಗಿದ್ದು, ಜೊತೆಗೆ ರವಿಯವರ ಸಾಹಿತ್ಯ ಕೃಷಿ ಕಥೆಗಳಿಗಷ್ಟೇ ನಿಲ್ಲುವುದಿಲ್ಲ. ಕಾದಂಬರಿ, ಅನುವಾದ, ಜೀವನ ಚರಿತ್ರೆ, ಭೂಗತ ಜಗತ್ತು ಇತ್ಯಾದಿಯಾಗಿ ಮುಂದುವರೆಯುತ್ತದೆ. ಆದರೆ, ರವಿಯವರ ಕಥೆಗಳ ಬಗ್ಗೆ ಒಂದೆರಡು ವಿಮರ್ಶೆ ಅಧ್ಯಯನ ನಡೆದಿದ್ದರೂ ಉಳಿದ ಸಾಹಿತ್ಯದ ಬಗ್ಗೆ ಯಾವುದೇ ವಿಮರ್ಶೆಯ ಅಧ್ಯಯನ ನಡೆದಿಲ್ಲ. ಯಾಕೆ ಅಕಾದೆಮಿಗಳಾಗಲಿ ವಿಮರ್ಶಕರಾಗಲೀ ಅವರ ಬರಹಗಳ ಬಗ್ಗೆ ನಿರ್ಲಕ್ಷಿಸುತ್ತಿದ್ದಾರೆ? ಎಂಬುದು ವಿಷಾದನೀಯ ಸಂಗತಿ. ಓದುಗರೆಂದೂ ಅವರ ಕೃತಿಗಳನ್ನು ದೂರ ಸರಿಸಿಲ್ಲ. ವಿಮರ್ಶೆಯನ್ನು ಮೀರಿಯೂ ಬರಹದ ಸತ್ವ ಜೀವಂತವಿರಿಸಿಕೊಂಡು ಇಂದಿಗೂ ಸಾಹಿತ್ಯ ಕೃಷಿ ಮಾಡುತ್ತಲೇ ಇದ್ದಾರೆ ರವಿ ಬೆಳಗೆರೆಯವರು. ಅಂತಹ ಬರಹಗಳೆಡೆಗೆ ಕಣ್ಣು ಹಾಯಿಸುವ ಪ್ರಯತ್ನವಿದು.

**ಅಡಿ ಟಿಪ್ಪಣಿ**

೧. ಪಾ.ವೆಂ. ಹೇಳಿದ ಕಥೆ ಪ್ರವೇಶ ರವಿ ಬೆಳಗೆರೆ ಪು. ೦೬

೨. ಒಟ್ಪಾರೆ ಕಥೆಗಳು ಮುನ್ನುಡಿಯಿಂದ, ರವಿ ಬೆಳಗೆರೆ. ಪು. ೫೨

೩. ಓದಿನ ಖುಷಿ ಕೊಡುವ ಕಥೆಗಳು, ಉಲಿಯ ಉಯ್ಯಾಲೆ, ಬಂಜಗೆರೆ ಜಯಪ್ರಕಾಶ್, ಪು. ೧೨೧

೪. ಚಂಪಾಂಕಣ ಸಂ.೧, ಚಂದ್ರಶೇಖರ ಪಾಟೀಲ್, ಪು. ೬೨

೫. ಫಸ್ಟ್ ಹಾಫ್ ಮುನ್ನುಡಿಯಿಂದ, ಸಂ. ಶರತ್ ಕಲ್ಕೋಡ್.

೬. ಅದೇ ಪುಸ್ತಕ, ಪು. ೨೫

೭. ಅದೇ ಪುಸ್ತಕ, ಪು. ೨೮

೮. ಅದೇ ಪುಸ್ತಕ, ಪು. ೩೦

೯. ಅದೇ ಪುಸ್ತಕ, ಪು. ೫೩

೧೦. ಅದೇ ಪುಸ್ತಕ, ಪು. ೨೩೧

೧೧. ರವಿ ಬೆಳಗೆರೆ ಅವರ ಕಥೆಗಳು: ಸಾಹಿತ್ಯಿಕ ವಿಶ್ಲೇಷಣೆ, ರಾಜೇಂದ್ರ (ಅಪ್ರಕಟಿತ ಎಂ.ಫಿಲ್. ನಿಬಂಧ)

೧೨. ರವಿ ಬೆಳಗೆರೆಯವರ ಪ್ರಾತಿನಿಧಿಕ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರದ ಚಿತ್ರಣದ ಸ್ವರೂಪ, ನಿಂಗಪ್ಪ ಬ. ಸಂಗ್ರೇಜಿಕೊಪ್ಪ, (ಅಪ್ರಕಟಿತ ಎಂ.ಫಿಲ್. ನಿಬಂಧ)

## ಅಧ್ಯಾಯ ಮೂರು

## ಕನ್ನಡ ಸಾಹಿತ್ಯಕ್ಕೆ ರವಿ ಬೆಳಗೆರೆಯವರ ಕೊಡುಗೆ

### ೩.೧. ಸಂಕ್ಷಿಪ್ತ ಜೀವನ ಚರಿತ್ರೆ

ಜಗತ್ತಿನಲ್ಲಿ ಅದೆಷ್ಟೋ ಸಾಹಿತಿಗಳು, ಲೇಖಕರು, ಅಂಕಣಕಾರರು, ಅನುವಾದಕರು, ಪತ್ರಕರ್ತರು ಇದ್ದಾರೆ. ಆದರೆ ಕೆಲವರ ಬರಹಗಳು ಓದುಗರ ಮನಸ್ಸಿಗೆ ತೀರಾ ಹತ್ತಿರವಾಗಿರುತ್ತವೆ. ನಿತ್ಯ ಅವರ ಬರವಣಿಗೆಗಳನ್ನು ಓದಲು ಸಾಹಿತ್ಯಾಸಕ್ತರು ಕಾಯುತ್ತಿರುತ್ತಾರೆ. ಇಂತಹವರ ಸಾಲಿನಲ್ಲಿ ಓದಿನ ಖುಷಿ ತುಂಬುವ ಪತ್ರಕರ್ತ ಎನಿಸಿಕೊಂಡಿದ್ದವರು ರವಿ ಬೆಳಗೆರೆ.

ರವಿ ಬೆಳಗೆರೆಯವರ ಪೂರ್ವಜರು ಆಂಧ್ರಪ್ರದೇಶದ ಮುಲಕನಾಡು ಪ್ರದೇಶದಿಂದ ೧೭ನೆಯ ಶತಮಾನದಲ್ಲಿ ಕರ್ನಾಟಕಕ್ಕೆ ವಲಸೆ ಬಂದು ನೆಲೆಸಿದವರು. ಮೈಸೂರಿನ ಮಹಾರಾಜರು ನೀಡಿದ ಇನಾಮತಿ ಜಮೀನಿನಲ್ಲಿ ಜೀವನ ಸಾಗಿಸುತ್ತಿದ್ದರು. ರವಿಯವರ ಮುತ್ತಜ್ಜ(ತಾಯಿಯ ತಾತ) ನರಸಿಂಹಭಟ್ಟರು ಕಂಚಿಯಲ್ಲಿ ವಿದ್ಯಾಭ್ಯಾಸ ಮಾಡಿ ಸಂಸ್ಕೃತದಲ್ಲಿ ಪ್ರಕಾಂಡ ಪಾಂಡಿತ್ಯ ಗಳಿಸಿಕೊಂಡು ಛಂದೋಬದ್ಧವಾಗಿ ಕಾವ್ಯ ರಚನೆ ಮಾಡುತ್ತಿದ್ದರು. ಇವರ ಮಗ ಚಂದ್ರಶೇಖರ ಶಾಸ್ತ್ರಿಗಳ ಕಿರಿಯ ಮಗಳಾದ ಬೆಳಗೆರೆ ಪಾರ್ವತಮ್ಮನವರು ರವಿಯವರ ತಾಯಿ. ಪಾರ್ವತಮ್ಮನವರೂ ಸ್ವತಃ ಕವಯತ್ರಿ ಹಾಗೂ ಕಥೆಗಾರ್ತಿಯಾಗಿದ್ದರು. ನವೋದಯ ಕಾಲಘಟ್ಟದ ಮೊದಲ ಕವಯತ್ರಿ ಬೆಳಗೆರೆ ಜಾನಕಮ್ಮ ರವಿಯವರ ದೊಡ್ಡಮ್ಮ. 'ಕವಿ ಪರಿಸರದ ಕೂಸು' ಎಂದು ಹೇಳುತ್ತಾರೆ. ಹೀಗೆ ರವಿ ಬೆಳಗೆರೆಯವರು ಸಾಹಿತ್ಯ ಪರಂಪರೆಯನ್ನು ಹೊಂದಿದ ಸುಸಂಸ್ಕೃತ ಕುಟುಂಬದಿಂದ ಬಂದವರು.

'ಬೆಳಗೆರೆ' ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಪುಟ್ಟ ಗ್ರಾಮ. ಇದು ರವಿಯವರ ತಾಯಿ ಪಾರ್ವತಮ್ಮನವರ ಹುಟ್ಟೂರು. ಆದರೆ, ರವಿಯವರು ೧೫, ಮಾರ್ಚ್ ೧೯೫೮ರಂದು ಬಳ್ಳಾರಿಯ ಸತ್ಯನಾರಾಯಣ ಪೇಟೆಯಲ್ಲಿ ಜನಿಸಿದರು. ಅವರು ಹುಟ್ಟಿ ಬೆಳೆದದ್ದು ಹಾಗೂ ಸಾಹಿತ್ಯಿಕ ಕೃಷಿ ಮಾಡಲು ಆರಂಭಿಸಿದ್ದೂ ಬಳ್ಳಾರಿಯಿಂದಲೇ. ಜೊತೆಗೆ ಬಳ್ಳಾರಿಯಲ್ಲಿ ಮೊದಲ ಬಾರಿಗೆ ತಮ್ಮ ಸಂಪಾದಕತ್ವದಲ್ಲಿ 'ಬಳ್ಳಾರಿ ಪತ್ರಿಕೆ'ಯನ್ನು ಪ್ರಾರಂಭಿಸುವುದರ ಮೂಲಕ ಪತ್ರಕರ್ತರಾಗಿ ರೂಪುಗೊಂಡರು.

ಎರಡು ವರ್ಷ ತುಮಕೂರಿನ ಸಿದ್ಧಗಂಗಾ ಹೈಸ್ಕೂಲಿನಲ್ಲಿ ಓದನ್ನು ಬಿಟ್ಟರೆ ಬಿ.ಎ.ವರೆಗಿನ ವ್ಯಾಸಂಗ ನಡೆದದ್ದು ಬಳ್ಳಾರಿಯಲ್ಲಿ. ನಂತರ ಸ್ನಾತಕೋತ್ತರ ಪದವಿ ಓದಿದ್ದು ಧಾರವಾಡದಲ್ಲಿ: ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ. ಕೆಲಕಾಲ ಬಳ್ಳಾರಿ, ಹಾಸನ ಮತ್ತು ಹುಬ್ಬಳ್ಳಿಯ ಕಾಲೇಜುಗಳಲ್ಲಿ ಇತಿಹಾಸ ಉಪನ್ಯಾಸಕರಾಗಿ ಕೆಲಸ ನಿರ್ವಹಿಸಿದ್ದರು. ಅದಕ್ಕೂ ಮೊದಲು ಮತ್ತು ಅದರ ನಂತರ ಸರಿಸುಮಾರು ವೃತ್ತಿಗಳನ್ನು ಬದಲಾಯಿಸಿದ್ದಾರೆ. ಹೈಸ್ಕೂಲು ಮೇಷ್ಟ್ರು, ಹೋಟೆಲ್ ಮಾಣಿ, ರೂಮ್ ಬಾಯ್, ರಿಸೆಪ್ಷನಿಸ್ಟ್, ಹಾಲು ಮಾರುವುದು, ದಿನಪತ್ರಿಕೆ ಹಂಚುವುದು, ಮೆಡಿಕಲ್ ರೆಪ್ರೆಸೆಂಟೇಟಿವ್, ಪ್ರಿಂಟಿಂಗ್ ಪ್ರೆಸ್‌ನ ಮಾಲೀಕ, ಥೇಟರಿನಲ್ಲಿ ಗೇಟ್ ಕೀಪರ್, ಮನೆ ಪಾಠದ ಮೇಷ್ಟ್ರು ಹೀಗೆ ಅನೇಕ ಕಡೆ ದುಡಿದಿದ್ದಾರೆ. ಕರ್ನಾಟಕದ ಅನೇಕ ಪತ್ರಿಕೆಗಳಲ್ಲಿ ಕೆಲಸ ಮಾಡಿದ್ದಾರೆ. ತಮಗಿಂತಲೂ ಹೆಚ್ಚು ವಯಸ್ಸಾದ ಪತ್ರಿಕೆಗೆ ಸಂಪಾದಕರಾಗಿದ್ದಾರೆ.

ಅತ್ಯಂತ ಚಿಕ್ಕ ವಯಸ್ಸಿನಲ್ಲಿ ನೋವು, ನಿರಾಸೆ, ಅವಮಾನ, ಬಡತನ, ಸೋಲುಗಳನ್ನು ಅನುಭವಿಸಿದ ರವಿ ಬೆಳಗೆರೆಯವರು ನಂತರ ಸಾಧಿಸಿದ ಸಾಧನೆಗಳು ನಿಜಕ್ಕೂ ಅಚ್ಚರಿ ಮೂಡಿಸುತ್ತವೆ. ೧೯೯೫ರಲ್ಲಿ ಪ್ರಾರಂಭಿಸಿದ 'ಹಾಯ್ ಬೆಂಗಳೂರ್!' ಎಂಬ 'ಟ್ಯಾಬ್ಲಾಯ್ಡ್' ವಾರ ಪತ್ರಿಕೆ ಅವರ ಬದುಕಿನಲ್ಲಿ ಯಶಸ್ಸು ಖ್ಯಾತಿಗಳ ಅಲೆಯನ್ನೇ ತಂದಿತು. ಮುಂದೆ ಅದರ ಜೊತೆಗೆ ತಂದ 'ಓ ಮನಸ್ಸೇ...' ಪಾಕ್ಷಿಕ(ಇದಕ್ಕೂ ಮೊದಲು 'ಅಚ್ಚರಿ' ಎಂಬ ಮಾಸಪತ್ರಿಕೆಯನ್ನು ಜೂನ್ ೧೯೯೭ರಲ್ಲಿ ಕೇವಲ ಒಂದೇ ಒಂದು ಸಂಚಿಕೆ ತಂದರು. ಅದು ಕಾರಣಾಂತರಗಳಿಂದ ಮತ್ತೆ ಬರಲಿಲ್ಲ.) ಅವರಿಗೆ ಮತ್ತಷ್ಟು ಜನಪ್ರಿಯತೆಯನ್ನು ತಂದುಕೊಟ್ಟಿತು. ಪತ್ರಿಕೋದ್ಯಮವನ್ನು ವೃತ್ತಿಯಾಗಿಸಿಕೊಂಡ ಅವರು ಸಾಹಿತ್ಯ ಕೃಷಿಯನ್ನು ಪ್ರವೃತ್ತಿಯನ್ನಾಗಿಸಿಕೊಂಡು, ಅದರಲ್ಲೂ ಯಶಸ್ಸು ಮತ್ತು ಜನಪ್ರಿಯತೆಯನ್ನು ಗಳಿಸಿಕೊಂಡರು. ಅದಕ್ಕೆ ಸಾಕ್ಷಿ ಎಂಬಂತೆ ಎರಡು ಬಾರಿ 'ಕರ್ನಾಟಕ ಸಾಹಿತ್ಯ ಅಕಾದೆಮಿ ಪ್ರಶಸ್ತಿ'(ವಿವಾಹ: ಹುಟ್ಟು ಮತ್ತು ಪೂರ್ವೋತ್ತರ ತೆಲುಗಿನ ಅನುವಾದಿತ ಕೃತಿಗೆ ೧೯೮೮ರಲ್ಲಿ ಮತ್ತು ಪಾ.ವೆಂ. ಹೇಳಿದ ಕಥೆ ಕಥಾ ಸಂಕಲನಕ್ಕೆ ೧೯೯೭ರಲ್ಲಿ), 'ಹೇಳಿ ಹೋಗು ಕಾರಣ' ಕಾದಂಬರಿಗೆ ೨೦೦೩ರಲ್ಲಿ 'ಶಿವರಾಮ ಕಾರಂತ ಪ್ರತಿಷ್ಠಾನ ಪ್ರಶಸ್ತಿ' ಸಾಹಿತ್ಯ ಹಾಗೂ ಪತ್ರಿಕೋದ್ಯಮ ಕ್ಷೇತ್ರದಲ್ಲಿನ ಸಾಧನೆಗಾಗಿ ೨೦೦೭ರಲ್ಲಿ 'ಶಿವರಾಮ ಕಾರಂತರ ಹುಟ್ಟೂರು ಪ್ರಶಸ್ತಿ' ಇದೇ ವರ್ಷದಲ್ಲಿ 'ಜೀವಮಾನ ಸಾಧನೆಗಾಗಿ 'ಮಾಧ್ಯಮ ಅಕಾದೆಮಿ ಪ್ರಶಸ್ತಿ' ಜೊತೆಗೆ ಸಾಹಿತ್ಯ, ಪತ್ರಿಕೋದ್ಯಮ ಈ ಎರಡೂ ಕ್ಷೇತ್ರದಲ್ಲಿಯ ಸಾಧನೆಗಾಗಿ 'ರಾಜ್ಯೋತ್ಸವ ಪ್ರಶಸ್ತಿ'ಯನ್ನು ಪಡೆದುಕೊಂಡಿದ್ದಾರೆ. ಜೊತೆಗೆ ಚಲಂ ಎಂಬ ತೆಲುಗು ಲೇಖಕನ ಆತ್ಮಚರಿತ್ರೆಯ ಅನುವಾದಕ್ಕೆ 'ಕುವೆಂಪು ಭಾಷಾ ಭಾರತಿ ಅಕಾದೆಮಿ ಪ್ರಶಸ್ತಿ'ಯೂ ಬಂದಿದೆ. ಇತ್ತೀಚಿಗೆ 'ಈ ಟಿ.ವಿ' ಕನ್ನಡ ವಾಹಿನಿಯವರು 'ಮಾತಿನ ಮಾಂತ್ರಿಕ' ಎಂದು ಕರೆದು ಸನ್ಮಾನಿಸಿ, ಗೌರವಿಸಿದ್ದಾರೆ.

ಪತ್ರಿಕೋದ್ಯಮದ ಜೊತೆಗೆ ಕನ್ನಡಸಾಹಿತ್ಯ ಲೋಕದಲ್ಲಿ ಗುರುತಿಸಿಕೊಂಡಿರುವ ರವಿ ಬೆಳಗೆರೆಯವರು ತಮ್ಮ ವಿಶಿಷ್ಟ ಬರಹಗಳ ಮೂಲಕ ತಮ್ಮದೇ ಆದ ಬೃಹತ್ ಓದುಗ ಸಮೂಹವನ್ನು ಸೃಷ್ಟಿಸಿಕೊಂಡಿದ್ದಾರೆ ಮತ್ತು ಅಷ್ಟೇ ಪ್ರಮಾಣದ ವಿರೋಧಿಗಳನ್ನು ಸೃಷ್ಟಿಸಿಕೊಂಡಿರುವುದು

ಅತಿಶಯೋಕ್ತಿಯೇನಲ್ಲ. ಕನ್ನಡ, ಇಂಗ್ಲೀಶ್, ಹಿಂದಿ, ಉರ್ದು ಮತ್ತು ತೆಲುಗು ಹೀಗೆ ಈ ಐದು ಭಾಷೆಗಳಲ್ಲಿ ಪರಿಣತಿಯನ್ನು ಪಡೆದುಕೊಂಡಿರುವ ಅವರು ಆ ಭಾಷೆಗಳಲ್ಲಿನ ಅಪರೂಪದ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅನುವಾದ ಎಂಬುದಕ್ಕಿಂತ ಅವುಗಳಿಂದ ಪ್ರೇರಣೆ ಪಡೆದು ಕನ್ನಡದಲ್ಲಿ ಹೊಸಹುಟ್ಟು ಪಡೆದ 'ಮರುಸೃಷ್ಟಿ'ಗಳು ಎಂದು ಕರೆದರೆ ಸೂಕ್ತವೆಂದೆನಿಸುತ್ತದೆ. ಹೀಗೆ ಇತರ ಭಾಷೆಯ ಅಪರೂಪದ ಕೃತಿಗಳನ್ನು ಮರುಸೃಷ್ಟಿ ಮಾಡುವ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ವಿಶ್ವವಿಖ್ಯಾತ ಲೇಖಕರಾದ ಖುಷ್ವಂತ್ ಸಿಂಗ್, ಬ್ರಿಗೆಡಿಯರ್ ಜಾನ್, ಪಿ.ದಳವಿ, ಮನೋಹರ ಮಳಗಾಂವಕರ್, ಪ್ರೋತಿಮಾ ಬೇಡಿ, ಯಂಡಮೂರಿ ವೀರೇಂದ್ರನಾಥ್, ಸಿ.ದಿನಕರ್, ಪ್ರವೀಣ್ ಮಹಾಜನ್, ರಾಜೇಂದ್ರರ್ ಮನೆನ್, ದೇವ್ ಆನಂದ, ಫಾತಿಮಾ ಭುಟ್ಟೋ, ಮಾಧುರಿ ಬ್ಯಾನರ್ಜಿ, ಹುಸೇನ್ ಜೈದಿ, ಚಲಂ, ವಿನೋದ ಮೆಹ್ತಾ, ರಜನೀಶ್ ಮುಂತಾದ ಅನೇಕರನ್ನು ಕನ್ನಡಕ್ಕೆ ಕರೆತಂದಿರುವ ರವಿ ಬೆಳಗೆರೆಯವರು, ಸ್ಪ್ಯಾನಿಶ್ ಲೇಖಕ ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೇಜ್‌ರನ್ನೂ ಹೊರತುಪಡಿಸಿಲ್ಲ.

ಹೀಗೆ ಕಳೆದ ಮೂವತ್ತು ವರ್ಷಗಳಿಂದ ಪತ್ರಿಕೋದ್ಯಮದ ಜೊತೆ ಜೊತೆಯಲ್ಲಿ ಸಾಹಿತ್ಯಿಕ ಕೃತಿಗಳನ್ನು ರಚಿಸುತ್ತ, ಎರಡರಲ್ಲೂ ಜನಪ್ರಿಯತೆಯನ್ನು ಉಳಿಸಿಕೊಂಡ ಬರಹಗಾರರೆನಿಸಿಕೊಂಡಿದ್ದಾರೆ. ಇಲ್ಲಿಯವರೆಗೆ ಸರಿಸುಮಾರು ಎಪ್ಪತ್ತೈದಕ್ಕೂ ಹೆಚ್ಚು ಕೃತಿಗಳನ್ನು ರಚಿಸಿರುವ ಅವರು ಕನ್ನಡದ ಅಪರೂಪದ ಬರಹಗಾರರಲ್ಲಿ ಒಬ್ಬರಾಗಿದ್ದಾರೆ. ಅವರ ಕೃತಿಗಳೂ ಅಷ್ಟೇ ವೈವಿಧ್ಯಮಯ ವಾದವುಗಳು. ಕಥೆ, ಕಾವ್ಯ, ಕಾದಂಬರಿ, ಅಂಕಣ ಮತ್ತು ಪತ್ರ ಸಾಹಿತ್ಯ, ಆತ್ಮ ಕಥನ, ಜೀವನ ಕಥನ, ಅನುವಾದ, ಪ್ರವಾಸ ಕಥನ, ಯುದ್ಧದ ವರದಿಗಾರಿಕೆ, ಇತಿಹಾಸ, ಭಯೋತ್ಪಾದನೆ, ರಾಜಕೀಯ, ಭೂಗತ ಜಗತ್ತು, ವಾಮಾಚಾರ ಮತ್ತು ತನಿಖೆ ಹೀಗೆ ವಿಸ್ತಾರಗೊಳ್ಳುತ್ತಾ ಸಾಗುತ್ತದೆ. ರವಿಯವರು ಬಹುತೇಕ ನಾಟಕ ಪ್ರಕಾರವೊಂದನ್ನು(ಈ ಹಿಂದೆ ನಾಟಕವನ್ನು ರಚಿಸಿದ್ದರು ಆದರೆ, ಅವು ಅಧಿಕೃತವಾಗಿ ಎಲ್ಲೂ ಪ್ರಕಟಗೊಂಡಿಲ್ಲ) ಹೊರತುಪಡಿಸಿದರೆ ಸಾಹಿತ್ಯದ ಉಳಿದೆಲ್ಲ ಪ್ರಕಾರಗಳಲ್ಲಿಯೂ ಕೃತಿ ರಚನೆ ಮಾಡಿದ್ದಾರೆ. ಇದಿಷ್ಟೇ ಅಲ್ಲದೆ ಮುದ್ರಣ ಮಾಧ್ಯಮದ ಜೊತೆಗೆ ಇಲೆಕ್ಟ್ರಾನಿಕ್ ಮಾಧ್ಯಮದ(ದೂರದರ್ಶನ, ರೇಡಿಯೋ, ಅಂತರ್ಜಾಲ, ಸಿಡಿ) ಮೂಲಕವೂ ಓದುಗರನ್ನು, ಕೇಳುಗರನ್ನು, ವೀಕ್ಷಕರನ್ನು ತಲುಪಿದ್ದಾರೆ. ಸುಮಾರು ವರ್ಷಗಳ ಹಿಂದೆ 'ಈ .ಟಿ.ವಿ' ವಾಹಿನಿಯಲ್ಲಿ 'ಕ್ರೈಮ್ ಡೈರಿ'ಯ ನಿರೂಪಣಾ ಶೈಲಿಯ ಮೂಲಕ ಹಳ್ಳಿ ಹಳ್ಳಿಯಲ್ಲೂ ಹೆಸರುವಾಸಿಯಾಗಿದ್ದವರು. 'ಕ್ರೈಮ್ ಡೈರಿ'ಯ ಶೈಲಿಯನ್ನು ಇಂದಿನ ವಾಹಿನಿಗಳು ಮುಂದುವರೆಸಿರುವುದನ್ನು ನೋಡಿದರೆ ಅವರ ಜನಪ್ರಿಯತೆಯ ಅರಿವಾಗುತ್ತದೆ. ಇಂತಹ ಭೂಗತ ಲೋಕದ ವರದಿಗಳನ್ನು ದೂರದರ್ಶನ ವಾಹಿನಿಗಳಲ್ಲಿ ಪ್ರಸಾರ ಮಾಡಿದವರಲ್ಲಿ ರವಿಯವರು ಮೊದಲಿಗರೆನಲ್ಲ. ಅವರಿಗಿಂತಲೂ ಮುಂಚೆ ಬಾಲಕೃಷ್ಣ ಕಾಕತ್ಕರ್ ಎಂಬುವವರು ಈ ಪ್ರಯೋಗವನ್ನು ಮಾಡಿದ್ದರು. ಕನ್ನಡದ ಶ್ರೇಷ್ಠ ಕವಿಗಳ ಭಾವಗೀತೆಯನ್ನು ಕೇಳಿಸುವುದರ ಜೊತೆಗೆ ಅವರ ಪರಿಚಯವನ್ನು ಮಾಡಿಕೊಡುತ್ತಿದ್ದರು. ಅದರಿಂದ ಎಷ್ಟೊ ತಿಳಿದಿರದ ವಿಷಯಗಳು ತಿಳಿಯುತ್ತಿದ್ದವು. ಆದರೆ ಆ ಕಾರ್ಯಕ್ರಮಕ್ಕೆ ಒಂದು ಹೊಸ ಶೈಲಿ ಮತ್ತು ಜನಪ್ರಿಯತೆಯನ್ನು ತಂದುಕೊಟ್ಟವರು ಮಾತ್ರ ರವಿ ಬೆಳಗೆರೆಯವರು. ಈ ಇಲೆಕ್ಟ್ರಾನಿಕ್

ಮಾಧ್ಯಮವನ್ನಲ್ಲದೆ ಚಲನಚಿತ್ರಗಳಿಗೂ ಕಥೆ, ಚಿತ್ರಕಥೆ, ಸಂಭಾಷಣೆಯನ್ನು ಬರೆದಿರುವ ಅವರು ಕೆಲವು ಚಲನಚಿತ್ರಗಳಲ್ಲಿ(ವಾರಸ್ದಾರ, ಮಾದೇಶ, ಗಂಡ ಹೆಂಡತಿ ಮುಂತಾದವುಗಳು), ಟಿ.ಎಸ್. ಸೀತಾರಾಮ್ ನಿರ್ದೇಶನದ 'ಮುಕ್ತ' ಎಂಬ ದೂರದರ್ಶನ ಧಾರವಾಹಿಯಲ್ಲೂ ಕಾಣಿಸಿಕೊಂಡಿದ್ದಾರೆ. ಅಲ್ಲದೇ 'ಮುಖ್ಯಮಂತ್ರಿ ಐ ಲವ್ ಯು' ಎಂಬ ಕನ್ನಡ ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿ, ಕಥೆ, ಸಂಭಾಷಣೆಯನ್ನು ಬರೆಯುವುದರೊಂದಿಗೆ, ಆ ಚಿತ್ರದ ಮುಖ್ಯ ಪಾತ್ರದಲ್ಲಿ ನಟಿಸಿದ್ದಾರೆ(ಕಾರಣಾಂತರದಿಂದ ಈ ಚಿತ್ರ ಬಿಡುಗಡೆಯಾಗದೆ ಕೋರ್ಟ್‌ನಲ್ಲಿದೆ). ಇಷ್ಟಲ್ಲದೆ ರವಿ ಬೆಳಗೆರೆಯವರ ಪತ್ರಿಕೆಯನ್ನಾಧಾರಿತ ಚಿತ್ರವನ್ನು ಮಾಡಲಾಗಿದೆ. 'ಹಾಯ್ ಬೆಂಗಳೂರು'(೧೯೯೭) ಎಂಬುದು ಆ ಚಲನಚಿತ್ರದ ಹೆಸರು. ಅದರಲ್ಲಿ ನಟ ಶಶಿಕುಮಾರ್ ರವಿ ಬೆಳಗೆರೆಯವರ ಪಾತ್ರಕ್ಕೆ ಜೀವ ತುಂಬಿದ್ದಾರೆ. ಇವೆಲ್ಲವೂ ಅವರ ಕ್ರಿಯಾಶೀಲತೆ, ಸೃಜನಶೀಲತೆಯ ವಿವಿಧ ರೂಪಗಳನ್ನು ಪರಿಚಯಿಸುತ್ತವೆ.

ಚಿಕ್ಕ ವಯಸ್ಸಿನಲ್ಲೇ ನಿರಾಸೆ, ಅವಮಾನ, ಬಡತನ, ಸೋಲು ಕಂಡ ಅವರ ಬದುಕಿನಲ್ಲಿ ಪತ್ರಿಕೆಯ ಯಶಸ್ಸು ಮತ್ತು ಕೀರ್ತಿಯನ್ನು ತಂದಿಕ್ಕಿತು. ಆತ್ಮ ಕಥನವನ್ನು ಮನಸ್ಸಿಟ್ಟು ಓದಿಕೊಳ್ಳುವಂತೆ ಬರೆಯುವ ರವಿಯವರು, ತಮ್ಮ 'ಖಾಸ್‌ಬಾತ್'ನಲ್ಲಿ ಬದುಕಿನ ಏಳು–ಬೀಳು, ಸೋಲು, ನೋವು–ನಲಿವುಗಳನ್ನು, ಪ್ರೇಮ ವೈಫಲ್ಯವನ್ನು, ನಿರ್ಲಜ್ಜ ಸ್ಥಿತಿಯನ್ನು, ಕುಡಿತದ ದಿನಗಳನ್ನು, ಬದುಕಿನಲ್ಲಿ ಅನುಭವಿಸಿದ ಸಣ್ಣ ಘಟನೆಯನ್ನೂ ಬಿಡದೆ ಅತ್ಯಂತ ಸ್ಪಷ್ಟವಾಗಿ ಪ್ರಾಮಾಣಿಕವಾಗಿ ಹೇಳಿಕೊಂಡಿದ್ದಾರೆ. ತಮ್ಮ ಇಡೀ ಬದುಕಿನ ಚಿತ್ರಣವನ್ನು ತಮ್ಮದೇ ಆದ ಬರವಣಿಗೆಯಲ್ಲಿ ಕೆಲವೇ ಸಾಲುಗಳ ವಿಶಿಷ್ಟವಾದ ಶೈಲಿಯಲ್ಲಿ ಓದುಗರಿಗೆ ಪರಿಚಯಿಸಿಕೊಳ್ಳುವ ರೀತಿಯನ್ನು ಅವರ 'ಅಫಿಡವಿಟ್ಟು' (ಅನುಬಂಧದಲ್ಲಿ ಕೊಡಲಾಗಿದೆ)ವನ್ನು ನೋಡಬಹುದು. ಇಷ್ಟೆಲ್ಲ ಯಶಸ್ಸು, ಜನಪ್ರಿಯತೆಯನ್ನುಗಳಿಸಿದ ಮೇಲೆಯೂ ತೃಪ್ತರಾಗದೆ, ತಮ್ಮ ಕ್ರಿಯಾಶೀಲತೆಗೆ ವಿರಾಮವನ್ನು ಹೇಳದೆ 'ಪ್ರಾರ್ಥನಾ ಶಾಲೆ'ಯನ್ನು ಕಟ್ಟಿ ಬೆಳೆಸಿದರು. ತಮ್ಮದೇ ಒಡೆತನದ 'ಭಾವನಾ ಪ್ರಕಾಶನ' ಮತ್ತು 'ಬಿ.ಬಿ.ಸಿ(ಬೆಳಗೆರೆ ಬುಕ್ಸ್ ಆ್ಯಂಡ್ ಕಾಫಿ) ಪಬ್ಲಿಕೇಷನ್ ಪ್ರಾರಂಭಿಸಿದ್ದರು. ಪುಸ್ತಕ ಪ್ರೇಮಿಗಳಿಗಾಗಿ ಗಾಂಧಿ ಬಜಾರ್ ಮುಖ್ಯರಸ್ತೆಯಲ್ಲಿ 'ಬೆಳಗೆರೆ ಬುಕ್ಸ್ ಆ್ಯಂಡ್ ಕಾಫಿ' ಎಂಬ ಪುಸ್ತಕ ಮಳಿಗೆಯನ್ನು ತೆರೆದರು. ಹೀಗೆ ರವಿ ಬೆಳಗೆರೆಯವರು ಏನನ್ನು ಆಗಲು ಬಯಸಿದವರಲ್ಲ, ಬದಲಾಗಿ ಸಾಗಲು ಬಯಸಿದವರು. ಆಗುವಿಕೆಯೇ ಅಂತ್ಯ ಸಾಗುವಿಕೆಯೇ ಜೀವಂತ ಎನ್ನುವ ಧೋರಣೆ ಅವರದು. ಅವರು ನಡೆದ ಹಾದಿಯನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ. ಇಬ್ಬರು ಪತ್ನಿಯರು, ನಾಲ್ಕು ಜನ ಮಕ್ಕಳ ತುಂಬು ಕುಟುಂಬವನ್ನು ಹೊಂದಿರುವ ಅವರು ಸದ್ಯಕ್ಕೆ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಪ್ರಸ್ತುತ 'ಹಾಯ್ ಬೆಂಗಳೂರು!' ವಾರ ಪತ್ರಿಕೆ 'ಓ ಮನಸ್ಸೇ...' ಪಾಕ್ಷಿಕದ ಸಂಪಾದಕರಾಗಿ ಮತ್ತು 'ಜನಶ್ರೀ' ಸುದ್ದಿ ವಾಹಿನಿಯ 'ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿ(ಸಿ.ಇ.ಓ)ಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

### ೩.೨. ಕಥೆಗಳು

ಸಾಹಿತ್ಯವು ನಿರಂತರವಾಗಿ ಚಲನೆಗೊಳ್ಳುವ ಸಾಂಸ್ಕೃತಿಕ ಕ್ರಿಯೆ. ಮಾನವ ಜೀವನದ ಎಲ್ಲಾ ಸಾಧ್ಯತೆಗಳ ಹುಡುಕಾಟ, ನಂಬಿಕೆ, ಪುರಾಣ ಪದ್ಧತಿ, ಆಚಾರ, ವಿಚಾರ, ಧರ್ಮ, ಹುಟ್ಟು–ಸಾವು

ಮುಂತಾದವುಗಳನ್ನೆಲ್ಲಾ ಸಾಹಿತ್ಯವು ಶೋಧಿಸುತ್ತದೆ. ಮಾನವನ ತೀವ್ರವಾದ ಅನುಭವ, ದಿಗ್ಭ್ರಮೆ, ಬದುಕಿನ ವಿಶಿಷ್ಟ ಕ್ಷಣಗಳನ್ನು ದಾಖಲಿಸುತ್ತದೆ. ಜೀವನದ ನಿಗೂಢತೆಯ ದ್ವಂದ್ವಗಳನ್ನೆಲ್ಲಾ ತನ್ನ ಉತ್ಕೃಷ್ಟ ಭಾಷೆಯಲ್ಲಿ ಸಮರ್ಥವಾದ ರೂಪಕ ಪ್ರತಿಮೆ ಸಂಕೇತಗಳ ಮೂಲಕ ಹೇಳುತ್ತದೆ. ಹಾಗೆಯೇ ಅದು ಮಾನವೀಯತೆಯನ್ನು ಅನ್ಯುನ್ನುತ ಮಟ್ಟದಲ್ಲಿ ತೀವ್ರ ಪ್ರೀತಿಯಲ್ಲಿ ವ್ಯಕ್ತಪಡಿಸುವತ್ತ ಸದಾ ಗಮನ ಹರಿಸುತ್ತಿರುತ್ತದೆ.

ಹೀಗೆ ಸಾಹಿತ್ಯದಲ್ಲಿ ಮಂಡಿತವಾಗುತ್ತಿರುವ ಮಾನವ ಬದುಕಿನ ಎಲ್ಲಾ ಮುಖಗಳನ್ನು ಸಮರ್ಥವಾದ ಭಾಷೆ, ತಂತ್ರ, ವಸ್ತು ಮುಂತಾದವುಗಳ ಮೂಲಕ ಸಾಹಿತ್ಯವೂ ನಿರೂಪಿಸುತ್ತದೆ. ಕನ್ನಡ ನವ್ಯ ಸಂದರ್ಭದಲ್ಲಿ ಪ್ರಧಾನವಾಗಿ ಈ ರೀತಿಯಾದ ಭಾಷೆ, ತಂತ್ರ, ವಸ್ತು ಮುಂತಾದವುಗಳ ಅಭಿವ್ಯಕ್ತಿ ಅನುಭವದಲ್ಲಿ ಪರಿಣಾಮಕಾರಿಯಾಗಿ ಮಂಡಿತವಾಗಿವೆ. ಯಾವಾಗಲೂ ಮನಸ್ಸಿನ ಓತಪ್ರೇತ ಏನು? ಭಾವನೆಗಳನ್ನು ಕೃತಕವೆನಿಸದ ಹಾಗೆ ಚಿತ್ರಿಸಲಾಗಿದೆ. ಸಮಕಾಲೀನ ವಸ್ತುಗಳು, ಸತ್ಯಗಳು ಸರ್ವಕಾಲಿಕವಾಗಿಯೂ ಪ್ರಸ್ತುತವಾಗುತ್ತವೆಂಬುದನ್ನು ಈ ಕಾಲದಲ್ಲಿನ ಕಥೆಗಳಲ್ಲಿ ಗಮನಿಸಬಹುದು. ನವ್ಯ ಕಥೆಗಳಲ್ಲಿ ಮುಖ್ಯವಾಗಿ ರಾಜಕೀಯ, ಧಾರ್ಮಿಕ, ಪರಕೀಯ, ಆಧುನಿಕ, ದಾಂಪತ್ಯ, ಪ್ರೇಮ, ಹಳ್ಳಿಯ ಸಂಕಷ್ಟಗಳು ಹೀಗೆ ಹಲವಾರು ವಿಧದ ವಸ್ತುಗಳನ್ನು ಶೋಧಿಸುವಲ್ಲಿ ಪ್ರಮುಖವೆನಿಸಿದೆ. ಬಹುಮುಖ್ಯವಾಗಿ ಕೇಂದ್ರ ಪಾತ್ರವೊಂದರಲ್ಲಿನ ತೀವ್ರ ಪರಕೀಯ ಸ್ಥಿತಿಯನ್ನು, ಹಳ್ಳಿ–ನಗರಗಳ ಸಂಬಂಧ ಇವೆರಡೂ ಸಮಾಜದಲ್ಲಿ ಹಿಂಸೆ, ಕ್ರೌರ್ಯ, ದೌರ್ಜನ್ಯ, ಶೋಷಣೆಯ ವಿವಿಧ ಬಗೆಯ ಸಮಸ್ಯೆಗಳನ್ನು ಹಿಡಿದಿಟ್ಟಿವೆ. ಹಾಗೆಯೇ ಆಧುನಿಕತೆಯು ತೀವ್ರವಾಗಿ ಎದುರಾದಾಗ ಅದನ್ನು ಎದುರಿಸುವ ದೇಶಿ ಮಾದರಿಯ ಒಳನೋಟಗಳನ್ನು ಜಾತಿರಹಿತ ಮುಕ್ತ ಸಮಾಜವನ್ನು ಬಯಸುವ ಪಾತ್ರಗಳು, ವಸ್ತುಗಳನ್ನು ಕಾಣಬಹುದು.

ಮುಖ್ಯವಾಗಿ ನವ್ಯ ಸಾಹಿತ್ಯದ ಮೂಲಭೂತ ಧೋರಣೆ ಭಾಷೆಯ ಉಪಯೋಗಕ್ಕೆ ಸಂಬಂಧಿಸಿದ್ದಾಗಿದೆ. ಆದರೆ ಈ ಧೋರಣೆಯ ಪ್ರಕಾರ ಸಾಹಿತ್ಯದಲ್ಲಿ ಪ್ರತಿಪಾದನೆಗೆಂದು ಉಪಯೋಗಿಸಿದ ಭಾಷೆಗಿಂತ ಶೋಧನೆಗೆಂದು ತೊಡಗಿಸಿದ ಭಾಷೆ ಹೆಚ್ಚು ಮಹತ್ವವುಳ್ಳದೆಂದು ಬಗೆಯುವುದರಿಂದ ನವ್ಯ ಸಾಹಿತಿ ಜೀವನವನ್ನು ಪರಿಭಾವಿಸುವ ರೀತಿಯು ಹಿಂದಿನದಕ್ಕಿಂತ ಬೇರೆಯಾಗಿದೆ. ಈ ಮಾತಿನ ಧೋರಣೆಯೂ ಭಾಷೆಯಾಗಿದೆ. ನವ್ಯ ಸಾಹಿತ್ಯದಲ್ಲಿ ಹೀಗೆ ಕನ್ನಡ ಭಾಷೆಯನ್ನು ಹೆಚ್ಚು ಸೃಜನಶೀಲವಾಗಿ ಬಳಸಿಕೊಂಡವರೆಂದರೆ ಯು.ಆರ್.ಅನಂತಮೂರ್ತಿ, ಪಿ. ಲಂಕೇಶ್ ಮತ್ತು ಪೂರ್ಣಚಂದ್ರ ತೇಜಸ್ವಿ ಮುಂತಾದವರು. ಇವರು ತಮ್ಮ ವಸ್ತುಗಳಿಗೆ ತಕ್ಕಂತೆ ಕಥೆಯ ಭಾಷೆಯನ್ನು ಹೊಸ ಸಂವೇದನೆಗೆ ಬಗ್ಗಿಸುವುದರ ಮೂಲಕ ಭಾಷೆಯನ್ನು ಹೆಚ್ಚು ಜೀವಂತಿಕೆಯಿಂದ ಇರಿಸಿದ್ದಾರೆ. ಪೂರ್ಣಚಂದ್ರ ತೇಜಸ್ವಿಯವರ 'ಹುಲಿಯೂರಿನ ಸರಹದ್ದು' ಕಥಾ ಸಂಕಲನದ ಮುನ್ನುಡಿಯಲ್ಲಿ ಭಾಷೆಯನ್ನು, ಅನುಭವದ ಸೂಕ್ಷ್ಮಾತಿಸೂಕ್ಷ್ಮಗಳನ್ನು, ಆಳ–ಪಾತಾಳದ ಸತ್ಯಗಳನ್ನು ಅಭಿವ್ಯಕ್ತಿಸಲು ಹೇಗೆ ಬಳಸಿದ್ದಾರೆ ಎಂಬುದನ್ನು ಗಮನಿಸಬಹುದು.

ಇಲ್ಲಿ ನವ್ಯ ಸಾಹಿತ್ಯದ ವಿವರಣೆಗೆ ಕಾರಣವಿಷ್ಟೇ. ರವಿ ಬೆಳಗೆರೆಯವರು ತಮ್ಮ ಬರವಣಿಗೆಯನ್ನು ಆರಂಭಿಸಿದ್ದು ಸರಿಸುಮಾರು ನವ್ಯ ಸಾಹಿತ್ಯದ ಇಳಿಗಾಲದಲ್ಲಿ ಅಂದ ಮಾತ್ರಕ್ಕೆ ಅವರದು ನವ್ಯ

ಸಾಹಿತ್ಯ ಪ್ರಕಾರದ ಬರವಣಿಗೆ ಎಂದುಕೊಳ್ಳಬೇಕಿಲ್ಲ. ಅವರ ಬರಹಗಳನ್ನು ಯಾವ ಪಂಥಕ್ಕೂ ಸೇರಿಸಲಾಗದು. ಹಾಗೆಯೇ ಯಾವುದೊಂದು ಪಂಥದಿಂದ ಹೊರಗಿಡಲು ಆಗದು. ಸ್ವಲ್ಪ ಮಟ್ಟಿಗೆ ಪ್ರಗತಿಶೀಲ ಬರವಣಿಗೆಯನ್ನು ಹೋಲುವಂತಹದು ನಿಜ.

ಸಾಂಘಿಕ ಜೀವನದ ಉತ್ಕೃಷ್ಟ ಕೊಡುಗೆ ಎಂದರೆ ಪರಸ್ಪರ ಕೊಡುಕೊಳುವಿಕೆ. ಭಾವನೆ ಅದಕ್ಕೆ ಹೊರತಾದುದಲ್ಲ. ಈ ಭಾವನೆಯ ಹಿಂದೆ ಮನುಷ್ಯನ ವಿಸ್ಮಯ, ಭಯ, ಆಶ್ಚರ್ಯ, ಸಂತೋಷ, ದುಃಖ ಎಲ್ಲವೂ ಮೇಳೈಸಿರುತ್ತವೆ. ವ್ಯಕ್ತಿ ಘನಿಭೂತಗೊಂಡ ತನ್ನ ಮನದ ಅನುಭವವನ್ನು ತನ್ನವರ ಮುಂದೆ ಹೇಳಿಕೊಳ್ಳಬೇಕು ಎಂದು ತವಕಿಸುತ್ತಾನೆ. ಈ ತವಕವೇ ಕಥೆಯ ಹುಟ್ಟಿಗೆ ಕಾರಣವಾಗಿರಬೇಕೆಂದು ಹೇಳಬಹುದು. ಕಥೆ ಹೇಗೆ ಸೃಷ್ಟಿಯಾಯಿತು? ಹಾಗೆ ಸೃಷ್ಟಿಯಾದ ಕಥಾ ಜಗತ್ತು ಎಂಥದ್ದು ಎಂಬ ಪ್ರಶ್ನೆ ಮನುಷ್ಯ ಹೇಗೆ ಹುಟ್ಟಿದ ಎನ್ನುವ ಪ್ರಶ್ನೆಯಷ್ಟೇ ಜಟಿಲವಾದುದು. ಮಾನವನ ಹುಟ್ಟಿನಿಂದ ಸಾವಿನವರೆಗೆ ಕಥೆಗಳು ಹರಡಿಕೊಂಡಿವೆ. ಒಂದರ್ಥದಲ್ಲಿ ಮನುಷ್ಯ ಜೀವನವೇ ಒಂದು ಕಥೆಯಾಗಿದೆ.

ಯುರೋಪಿನಲ್ಲಿ ನಡೆದ ಕೈಗಾರಿಕಾ ಕ್ರಾಂತಿಯ ಬಿಸಿ ಔದ್ಯೋಗಿಕ ಕ್ಷೇತ್ರದಲ್ಲಷ್ಟೇ ಕಾಣಿಸಿಕೊಳ್ಳದೇ ಪ್ರತಿಯೊಂದು ಕ್ಷೇತ್ರದಲ್ಲೂ ತನ್ನ ಪರಿಣಾಮವನ್ನು ಬೀರಿತು. ಅದು ಸಾಹಿತ್ಯ ಕ್ಷೇತ್ರವನ್ನು ಆವರಿಸಿಕೊಂಡಿತು. ಔದ್ಯೋಗಿಕ ಕ್ರಾಂತಿಯ ಮೂಲಕ ಬದಲಾವಣೆಗೊಂಡ ಪ್ರಪಂಚದ ಸಾಹಿತ್ಯಿಕ ಲೋಕದ ಬಿಸಿಯು ಬಂಗಾಲದ ಬಾಗಿಲಿನ ಮೂಲಕ ಭಾರತಕ್ಕೆ ಪ್ರವೇಶಿಸಿತು. ೨೦ನೆಯ ಶತಮಾನಕ್ಕೆ ಕಾಲಿಡುವಷ್ಟರಲ್ಲೇ ಕನ್ನಡದಲ್ಲಿ ಕಥಾ ಪ್ರಕಾರ ತುಂಬ ಜನಪ್ರಿಯ ಸಾಹಿತ್ಯ ಪ್ರಕಾರವಾಗಿ ಬೆಳೆಯಿತು. ಕನ್ನಡದ ಮೊದಲ ಸಣ್ಣ ಕಥೆಗಾರರೆಂದು ಪಂಜೆ ಮಂಗೇಶರಾಯರು, ಕೆರೂರು ವಾಸುದೇವಾಚಾರ್ಯರನ್ನು ಗುರುತಿಸಲಾಗುತ್ತದೆ. ನಂತರ ೧೯೨೦ರ ಸುಮಾರಿಗೆ ಕನ್ನಡ ಕಥೆಗಾರರ ಮುಂದೆ ಕಥೆಯ ಬಗೆಗೆ ಸ್ಪಷ್ಟವಾದ ರೂಪರೇಷೆಗಳಿದ್ದವು. ಸಣ್ಣ ಕಥೆಗಳ ಬರವಣಿಗೆಯ ಜೊತೆಗೆ ಅವುಗಳ ಬಗ್ಗೆ ವಿಮರ್ಶೆಯೂ ಆರಂಭವಾಯಿತು. ಬದುಕಿನ ಸಂಗ್ರಾಮದಲ್ಲಿ ಕತೆಗಾರನ ಅತೃಪ್ತ ಮನೋಭೂಮಿಕೆಯಲ್ಲಿ ಕಾವು ಹುಟ್ಟಿಸಿದಂತೆ ಸ್ವಾತಂತ್ರ್ಯ ಚಳುವಳಿಯೂ ಹೊಸ ಹೊಸ ಸಮಸ್ಯೆ, ಚಿಂತನೆ, ಭಾವನೆಗಳನ್ನು ಜನರ ಮನಸ್ಸಿನಲ್ಲಿ ಉಂಟುಮಾಡಿತು.

ಇದರಿಂದ ಸಮಾಜದ ಮೇಲೆ, ಜನರ ಬದುಕಿನ ಮೇಲೆ, ದೇಶದ ಮೇಲೆ ಯಾವ ರೀತಿಯ ಪರಿಣಾಮವಾಯಿತು ಎಂಬುದಕ್ಕಿಂತಲೂ ಕಥಾ ಸಾಹಿತ್ಯಕ್ಕೆ ವೇಗ ಹೆಚ್ಚಿತು ಎಂಬುದು ಮುಖ್ಯ. ತಂತ್ರ, ಶೈಲಿ, ವಸ್ತುಗಳಲ್ಲಿ ವೈವಿಧ್ಯತೆ ಕಾಣಸಿಕೊಂಡವು. ರೈತರ, ಕೂಲಿಕಾರರ, ದೀನ ದಲಿತರ ಜೀವನದ ಬವಣೆ, ಬೆಗುದಿ ಕಥಾ ವಸ್ತುಗಳಾಗಲು ಆರಂಭಿಸಿದವು. ನಿರೂಪಕನ ಶಕ್ತಿ ಅಲಗಿನ ಮೊನೆಯಷ್ಟೇ ಹರಿತವಾಗಿ ಓದುಗರ ಮನಸ್ಸನ್ನು ತಿವಿಯಲು ಆರಂಭಿಸಿತು. ಸಮಾಜದಲ್ಲಿ ಮನುಷ್ಯ ಮನುಷ್ಯರ ನಡುವಿನ ಸಂಬಂಧಗಳು ಬಹಳಷ್ಟು ಸಂಕೀರ್ಣಗೊಳ್ಳುತ್ತಿರುವಾಗ ಅದರಿಂದುಂಟಾಗುವ ಅನಾಥ ಪ್ರಜ್ಞೆ, ಒಂಟಿತನ, ಅಸಹಾಯಕತೆಯಾಗಲಿ, ಮನುಷ್ಯನನ್ನು ಕಾಡದೆ ಇರದು. ಇಂತಹ ಸಮಯದಲ್ಲಿ ಬರಹಗಾರ ಅಂತರಂಗ ಶೋಧನೆಯ ಅವಶ್ಯಕತೆಯನ್ನು

ಗಂಭೀರವಾಗಿ ಚಿಂತಿಸಿದ ಮನುಷ್ಯ ಸಾಮಾಜಿಕವಾಗಿ, ವೈಯಕ್ತಿಕವಾಗಿ, ಲೈಂಗಿಕವಾಗಿ ಸತ್ಯಕ್ಕೆ ಶರಣಾದಾಗ ಅಭಿವ್ಯಕ್ತಿಯಲ್ಲಿ ಪ್ರಾಮಾಣಿಕತೆಯನ್ನು ಬಯಸಿದ. ಅದರಂತೆಯೇ ಇರಲು ಬಯಸಿದ. ಸಾಹಿತ್ಯ ಲೈಂಗಿಕತೆಯ ಬಗ್ಗೆ ಬಹಳಷ್ಟು ಮಡಿವಂತಿಕೆಯ ಮನೋಭಾವವನ್ನು ಬೆಳೆಸಿಕೊಂಡು ಬಂದಿತ್ತು. ಇಂತಹ ಸಂದರ್ಭದಲ್ಲಿ ಲೈಂಗಿಕತೆಯ ಬಗೆಗೆ ಇರುವ ಕಟ್ಟುಪಾಡುಗಳನ್ನು ಕಿತ್ತು, ಹೆಣ್ಣು-ಗಂಡಿನ ಸಂಬಂಧಗಳ ಬಗ್ಗೆ ಮುಕ್ತವಾದ ಚಿಂತನೆಗೆ ದಾರಿ ಮಾಡಿಕೊಟ್ಟವರೆಂದರೆ ನವ್ಯ ಕಾಲದ ಸಾಹಿತಿಗಳು. ಹೊಸ ಆಲೋಚನ ದಿಕ್ಕು, ಹೊಸ ಸಂವೇದನೆ, ಪ್ರಾಮಾಣಿಕ ಅಭಿವ್ಯಕ್ತಿ, ನಿಗೂಢದ ಜೊತೆ ಚರ್ಚೆ, ಅಜ್ಞಾತ ಚಿತ್ತದ ಬಗೆಗಿನ ಆಸಕ್ತಿ, ಆತ್ಮರತಿ ಇವು ನವ್ಯ ಕಥೆಗಳ ಲಕ್ಷಣಗಳೆನಿಸಿಕೊಂಡವು. ಬಿ.ಸಿ. ರಾಮಚಂದ್ರ ಶರ್ಮ, ಯು.ಆರ್. ಅನಂತಮೂರ್ತಿ, ಸದಾಶಿವ, ತ.ರಾ.ಸು, ಯಶವಂತ ಚಿತ್ತಾಲ, ರಾಜಲಕ್ಷ್ಮಿ ಎನ್. ರಾವ್, ವೀಣಾ ಶಾಂತೇಶ್ವರ, ಶಾಂತಿನಾಥ ದೇಸಾಯಿ, ಪಿ. ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಕ.ವೆಂ.ರಾಜಗೋಪಾಲ ಮುಂತಾದವರು ಕನ್ನಡ ನವ್ಯ ಕತೆಗಾರರಲ್ಲಿ ಪ್ರಮುಖರು.

ನವ್ಯಸಾಹಿತ್ಯ ಪ್ರಕಾರ ಆಂತರಿಕ ಗೊಂದಲಗಳು ಅವ್ಯವಸ್ಥೆಯ ಮಡಿಲಲ್ಲಿ ಸಿಕ್ಕು ಅಲ್ಲಿಯ ಸೂಕ್ಷ್ಮಾತಿಸೂಕ್ಷ್ಮ ವಿಚಾರ ಸಂವೇದನೆಗಳನ್ನು ಸಹೃದಯರ ಮಟ್ಟಕ್ಕೆ ತಂದು ತಲುಪಿಸುವಲ್ಲಿ ಸೋತಿತು. 'ಜೇಡ ತಾನೇ ಹೆಣೆದುಕೊಂಡ ಬಲೆಯಲ್ಲಿ ಕೊನೆಗೆ ತಾನೇ ಸಾಯುವಂತೆ' ನವ್ಯ ಸಾಹತ್ಯ ಜನಪರವಾದ ಕ್ರಿಯೆಯತ್ತ ಸಾಗದೇ ಹೋದಾಗ ಕನ್ನಡ ಸಾಹಿತ್ಯ ಮತ್ತೊಮ್ಮೆ ತನ್ನ ಮಗ್ಗಲು ಹೊರಳಿಸುವ ಕ್ರಿಯೆಗೆ ಒಳಗಾಯಿತು. ಅದನ್ನೇ 'ದಲಿತ-ಬಂಡಾಯ'ವೆಂದು ಕರೆಯಲಾಯಿತು. ಶ್ರೇಣಿಕೃತ ಸಮಾಜದ ವಿರುದ್ಧ ಮೊದಲು ಧ್ವನಿ ಎತ್ತಿ ಹಾಡಿದ್ದು ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡಿ'ನ ಮೂಲಕವೇ. ಸಾಹಿತ್ಯದಲ್ಲಿ ಮಡಿವಂತಿಕೆಯ ಬೇಲಿಯನ್ನು ಮುರಿದು ಒಳಬಂದ ದಲಿತ ಸಾಹಿತ್ಯ ಬದುಕಿನ ಹಲವಾರು ವೈಚಿತ್ರ್ಯಗಳನ್ನು ತೆರೆದಿಟ್ಟಿತು. ಬಂಡಾಯದ ಮೂಲ ಗುಣ ಸ್ವಭಾವಗಳನ್ನು ಪ್ರತಿಭಟಿಸುವಲ್ಲಿ, ಪ್ರಶ್ನಿಸುವಲ್ಲಿ ಕಾಣುತ್ತೇವೆ. ಇಂತಹ ಗುಣ ಸ್ವಭಾವದ ಸಾಹಿತ್ಯ ಸಾಂಪ್ರದಾಯಿಕ ಸಾಹಿತ್ಯಿಕ ಚೌಕಟ್ಟನ್ನು ಮುರಿದು ಹೊಸ ದಿಕ್ಕಿನತ್ತ ಜನಪದ ಬದುಕಿನತ್ತ ಸಾಗಿ ಅನೇಕ ಸಾಹಿತಿಗಳನ್ನೂ ತನ್ನತ್ತ ಸೆಳೆದುಕೊಂಡು ಸಾಹಿತ್ಯ ಸೃಷ್ಟಿಗೆ ಅಣಿಗೊಳಿಸಿತು. ಬರಗೂರು ರಾಮಚಂದ್ರಪ್ಪ, ಕುಂ.ವೀರಭದ್ರಪ್ಪ, ಬೆಸಗರಹಳ್ಳಿ ರಾಮಣ್ಣ, ದೇವನೂರು ಮಹಾದೇವ, ಗೀತಾ ನಾಗಭೂಷಣ, ಬಿ.ಟಿ.ಲಲಿತನಾಯಕ್, ಚನ್ನಣ್ಣ ವಾಲಿಕಾರ ಮುಂತಾದವರು ಈ ಧೋರಣೆಯ ಕಥೆಗಳನ್ನು ನೀಡಿದ ಪ್ರಮುಖ ಲೇಖಕರು. ಒಟ್ಟಿನಲ್ಲಿ ಆಧುನಿಕ ಬದುಕಿನ ವೇಗ, ದುಬಾರಿಯಾದ ಜನರ ಜೀವನಮಟ್ಟ, ನಾಗರಿಕತೆಯ ಬೆಳವಣಿಗೆ, ಸಂಕೀರ್ಣ ಜೀವನದ ಸಮಸ್ಯೆಗಳಂಥ ಮುಂತಾದ ವಿಷಯಗಳು ಕಥಾ ಸಾಹಿತ್ಯ ಪ್ರಕಾರಕ್ಕೆ ಆಹಾರವಾಗಿ ಪೋಷಣೆ ನೀಡಿದವು ಎಂದುಕೊಳ್ಳಬಹುದು. ಹೀಗೆ ಕನ್ನಡದಲ್ಲಿ ಕಥಾ ಸಾಹಿತ್ಯ ಪ್ರಾಚೀನ ಕಾಲದಿಂದಲೂ ನಡೆದುಬಂದು ಆಧುನಿಕ ಯುಗದಲ್ಲಿ ತನ್ನ ರೂಪ-ಸೃಷ್ಟಿ, ದೃಷ್ಟಿ-ಧೋರಣೆಗಳನ್ನು ಸಂಪೂರ್ಣವಾಗಿ ಬದಲಿಸಿಕೊಂಡು ಕಾಲದಿಂದ ಕಾಲಕ್ಕೆ ಮೈದೂರಿ ಹೊಸ ಹೊಸ ಒಲವುಗಳನ್ನು ಸ್ವೀಕರಿಸುತ್ತ ಸಮೃದ್ಧವಾಗಿ ಬೆಳೆದುಬಂದಿದೆ.

ಇದಿಷ್ಟು ಒಟ್ಟಾರೆ ಸಾಹಿತ್ಯಕ್ಕೆ ಸಂಬಂಧಿಸಿದಂತಹದು. ಒಂದು ರೀತಿಯ ಪುನರ್‌ಮನನ. ಈ ಪುನರ್‌ಮನನದ ಕಾರಣವೂ ಸ್ಪಷ್ಟವಿದೆ. ಸಾಹಿತ್ಯ ಮತ್ತು ಪತ್ರಿಕೋದ್ಯಮಗಳೆರಡು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಟ್ಟು ಸಾಹಿತ್ಯದ ಒಂದು ಭಾಗವಾಗಿ ಪತ್ರಿಕೋದ್ಯಮ ನಿಲ್ಲುತ್ತದೆ. ಕನ್ನಡದಲ್ಲಿ ಗದ್ಯ ಸಾಹಿತ್ಯ ಎಂಬ ಪ್ರಕಾರ ಸಾಕಷ್ಟು ಹಳೆಯದಾದರೂ ಅದನ್ನೊಂದು ಸಮೂಹ ಮಾಧ್ಯಮದ ಸಮರ್ಥ ಸಾಧನವನ್ನಾಗಿ ಬಳಸಿ ಬೆಳಸಿದ ಕೀರ್ತಿ ಮಾತ್ರ ಪತ್ರಿಕ ಪ್ರಪಂಚಕ್ಕೆ ಸಲ್ಲುತ್ತದೆ. ಪತ್ರಿಕೆಗಳು ತಲೆಯೆತ್ತುವವರೆಗೆ ಸಾಹಿತ್ಯ ರಚನೆಯಲ್ಲಿ ಗದ್ಯಕ್ಕೆ ಅಷ್ಟೊಂದು ಪ್ರಾಶಸ್ತ್ಯವಿರಲಿಲ್ಲವೆಂಬುದು ನಿರ್ವಿವಾದ. ಪದ್ಯ ರಚನೆಯಾದರೇ ಸಾಹಿತ್ಯ ಎಂಬ ನಂಬಿಕೆ ಪರಂಪರೆಯಲ್ಲಿ ಬೇರುಬಿಟ್ಟಿತ್ತು ಎಂಬುದು ತಿಳಿದ ವಿಷಯವೇ. ಆದರೆ ವಾರಪತ್ರಿಕೆಗಳು ಮತ್ತು ದಿನಪತ್ರಿಕೆಗಳು ಪ್ರಾರಂಭವಾಗಿ ರಾಜಕೀಯ ಸುದ್ಧಿಸಮಾಚಾರಗಳಿಗೆ ಮಹತ್ವ ಕೊಡತೊಡಗಿದರೂ ಇತರ ನಿಯತಕಾಲಿಕೆಗಳ ಮಹತ್ವವೇನು ಕುಸಿಯಲಿಲ್ಲ, ಸದ್ಬೋಧ ಚಂದ್ರಿಕೆಯ ಗಳಗನಾಥರು, ಜಯ ಕರ್ನಾಟಕದ ಆಲೂರು ವೆಂಕಟರಾಯರು, ಜಯಂತಿಯ ಬೇಟಗೇರಿ ಕೃಷ್ಣಶರ್ಮರು, ಕರ್ನಾಟಕದ ಡಿ.ವಿ.ಗುಂಡಪ್ಪನವರು, ವೀರ ಕೇಸರಿಯ ಸೀತರಾಮ ಶಾಸ್ತ್ರಿಗಳು, ಸುವಾಸಿನಿಯ ಬೆನಗಲ್ ರಾಮರಾಯರು, ರಾಷ್ಟ್ರ ಬಂಧುವಿನ ಕಡ್ಲೆಂಗೋಡ್ಲು ಶಂಕರಭಟ್ಟರು, ವಸಂತದ ಶಿವರಾಮ ಕಾಂರಂತರು, ಚಿತ್ರಗುಪ್ತದ ನಿರಂಜನರು, ಕಸ್ತೂರಿಯ ಪಾ.ವೆಂ.ಆಚಾರ್ಯರು, ಜೀವನದ ಮಾಸ್ತಿ ವೆಂಕಟೇಶ ಅಯ್ಯಂಗಾರರು ಮೊದಲಾದವರು ಪತ್ರಿಕ ಮಾಧ್ಯಮದ ಮೂಲಕ ಕನ್ನಡ ಸಾಹಿತ್ಯ ಸೇವೆಯನ್ನು ಮಾಡಿದ್ದು ಅತ್ಯಂತ ಮಹತ್ವದ ಅಂಶವಾಗಿದೆ.

ಪತ್ರಿಕಾ ಜಗತ್ತು ಅಸ್ತಿತ್ವಕ್ಕೆ ಬಂದ ಮೇಲೆ ಸಾಹಿತ್ಯಕ್ಕೆ ಒಂದು ಹೊಸ ಅಂಗವೇ ಸೇರಿದಂತಾಗಿದೆ. ತಮ್ಮ ತಮ್ಮ ಬರಹದ ಶೈಲಿ ಮೂಲಕ ಸಂಪಾದಕರ ಹುದ್ದೆಯನ್ನು ಅಲಂಕರಿಸಿ ಸಾಹಿತ್ಯ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದ ಅನೇಕ ಮಹನೀಯರನ್ನು ಹೆಸರಿಸಬಹುದು. ಕಸ್ತೂರಿ ಮಾಸಪತ್ರಿಕೆಯ ಹೊಣೆಯನ್ನು ಪ್ರಾರಂಭದಿಂದಲೂ ವಹಿಸಿಕೊಂಡು ಅದಕ್ಕೆ ಪತ್ರಿಕಾ ಜಗತ್ತಿನಲ್ಲಿ ಮಾತ್ರವಲ್ಲದೆ ಸಾಹಿತ್ಯ ಕ್ಷೇತ್ರದಲ್ಲೂ ಒಂದು ಮಹತ್ವವನ್ನು ತುಂದುಕೊಟ್ಟ ಪಾ.ವೆಂ.ಆಚಾರ್ಯರದು ಒಂದು ದೊಡ್ಡ ಹೆಸರು. ಅವರು ಅಲ್ಲಿಯವರೆಗೆ ನಡೆದುಬಂದ ಮಾಸಪತ್ರಿಕೆಗಳ ಜಾಡನ್ನು ಬಿಟ್ಟು ಹೊಸ ಮಾರ್ಗವನ್ನೇ ತುಳಿದರು. ನಂತರ ಭಾರತೀಯ ಇಂಗ್ಲೀಶ್‌ನಲ್ಲಿ ಕೇಳಿಬರುವ ಹೆಸರು ಖುಷವಂತ್ ಸಿಂಗ್ ಅವರದು. ಕನ್ನಡದಲ್ಲಿ ಅಂತಹ ಹೊಸತನವನ್ನು ರೂಪಿಸಿದವರೆಂದರೆ ಕನ್ನಡದಲ್ಲಿ ಮೊದಲಿಗೆ 'ಟ್ಯಾಬ್ಲ್ಯಾಡ್' ಪತ್ರಿಕೆಯನ್ನು ಹುಟ್ಟುಹಾಕಿದ ಪಿ.ಲಂಕೇಶ್‌ರವರದು. ಇವರು ತಮ್ಮ 'ಲಂಕೇಶ್ ಪತ್ರಿಕೆ'ಯ ಮೂಲಕ ಹೊಸ ಕ್ರಾಂತಿಯನ್ನೇ ಆರಂಭಿಸಿದರು. ನಂತರದಲ್ಲಿ ಪ್ರಮುಖವಾಗಿ ಕೇಳಿಬರುವ ಮತ್ತೊಂದು ಹೆಸರೆಂದರೆ ರವಿ ಬೆಳಗೆರೆಯವರದು. 'ಹಾಯ್ ಬೆಂಗಳೂರ್'! ವಾರ ಪತ್ರಿಕೆಯನ್ನು ಹುಟ್ಟುಹಾಕಿ ಲಂಕೇಶರ ನಂತರದಲ್ಲಿ ಸಾಹಿತ್ಯಿಕ ಬರಹ ಮತ್ತು ಪತ್ರಿಕೋದ್ಯಮದಲ್ಲಿ ಹೆಸರುಮಾಡಿದವರು. ಈ ಹಿನ್ನೆಲೆಯಲ್ಲಿ ಸಾಹಿತ್ಯ ಮತ್ತು ಪತ್ರಿಕೋದ್ಯಮದಲ್ಲಿ ಹೆಸರು ಮಾಡಿದ ರವಿಬೆಳಗೆರೆಯವರ

ಸಾಹಿತ್ಯ ಬರಹಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿ ಸಾಧ್ಯವಾದಷ್ಟು ವಿಶ್ಲೇಷಿಸಿ, ಅವರ ಸಾಹಿತ್ಯಕ್ಕೆ ಪ್ರವೇಶಿಕೆಯನ್ನು ನೀಡುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಅಂದ ಹಾಗೆ ಇದು ಸಾಹಿತ್ಯ ಮತ್ತು ಪತ್ರಿಕೋದ್ಯಮದಲ್ಲಿ ಹೆಸರು ಮಾಡಿದವರ ಬಗೆಗಿನ ತೌಲನಿಕ ಅಧ್ಯಯನವಲ್ಲ ಎಂಬುದನ್ನು ಮೊದಲೇ ಸ್ಪಷ್ಟಪಡಿಸುತ್ತೇನೆ. ಹಾಗೆ ಇನ್ನೊಂದು ವಿಷಯವನ್ನು ಹೇಳುವುದು ಸೂಕ್ತ. ಈಗಾಗಲೇ ರವಿಯವರ ಬರಹಗಳ ಬಗ್ಗೆ ಮೂರು ಲೇಖನಗಳು ಮತ್ತು ಎರಡು ಎಂ.ಫಿಲ್ ಅಧ್ಯಯನಗಳು ನಡೆದಿವೆ. ಅದರಲ್ಲಿ ಕಥೆಗಳ ಬಗ್ಗೆ ಒಂದು ಸಂಪ್ರಬಂಧ ಇರುವಕಾರಣ ಕಥೆಗಳ ಬಗೆಗೆ ಇಲ್ಲಿ ಅಷ್ಟೇನು ದೀರ್ಘವಾಗಿ ಚರ್ಚಿಸದಿರುವುದೇ ಸೂಕ್ತವೆನಿಸುತ್ತದೆ. ಕಾರಣವಿಷ್ಟೇ ಈ ಅಧ್ಯಯನದ ವ್ಯಾಪ್ತಿ ಮತ್ತು ಕ್ರಮಿಸಬೇಕಾದ ಹಾದಿ ದೀರ್ಘವಿರುವುದು, ಪುನಾರಾವರ್ತನೆಯನ್ನು ತಪ್ಪಿಸುವುದೇ ಆಗಿದೆ.

ಕನ್ನಡದ ಪಾ.ವೆಂ. ಆಚಾರ್ಯ, ಸತ್ಯಕಾಮ ಮತ್ತು ತೆಲುಗು ಲೇಖಕ ಗುಡಿಪಾಟು ವೆಂಕಟಾಚಲಂರಂತಹ ಲೇಖಕರ ಪ್ರಭಾವ ಮತ್ತು ಪ್ರೇರಣೆಗೊಳಗಾದ ರವಿ ಬೆಳಗೆರೆಯವರು ಬರೆದಿರುವ ಕಥೆಗಳು ಸಂಖ್ಯಾ ದೃಷ್ಟಿಯಿಂದ ಕಡಿಮೆ ಎನಿಸಿದರೂ, ಅಲ್ಲಿನ ವಿಭಿನ್ನ ಕಥಾವಸ್ತು ಮತ್ತು ಭಾಷೆ ಓದುಗರ ಗಮನ ಸೆಳೆಯುತ್ತದೆ. ಗಂಡು–ಹೆಣ್ಣಿನ ಸಂಬಂಧ, ಬಡತನದ ಕರಾಳತೆ, ಮಾನವೀಯ ಮೌಲ್ಯಗಳು, ಸಾಮಾಜಿಕ ಶೋಷಣೆ, ನಿರೀಂದ್ರಿಯತೆ, ಜೋಗಪ್ಪ ಜೋಗತಿಯರ ಬದುಕಿನ ಬವಣೆ, ಪ್ರೀತಿ ಪ್ರೇಮಗಳ ಹಾಗೂ ದಾಂಪತ್ಯ ಪರಿಕಲ್ಪನೆಯ ವಿಕ್ಷಿಪ್ತತೆ, ಮನುಷ್ಯ ಸಂಬಂಧಗಳು, ಕೌಟುಂಬಿಕ ಸಂಬಂಧಗಳು, ಭಾವುಕತೆ ಇತ್ಯಾದಿಗಳೇ ಅವರ ಕಥೆಗಳ ಕಥಾವಸ್ತುವಾಗಿದೆ.

ಆಧುನಿಕತೆಯ ನಾಗಲೋಟದಲ್ಲಿ ವಿಹರಿಸುತ್ತಿರುವ ಮಾರುಕಟ್ಟೆಯಲ್ಲಿ ಪತ್ರಿಕೆಗೆ ಸಿಕ್ಕಿರುವ ಯಶಸ್ಸಿನ ಮಾನದಂಡವೊಂದನ್ನೇ ಆಶ್ರಯಿಸದೇ ತಮ್ಮ ಸೃಜನಶೀಲತೆಯ ನೆಲೆಗಳನ್ನು ಸಾಬೀತುಗೊಳಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು ಸಹಜವೇ ಅನಿಸುತ್ತದೆ. ಹಾಗೆ ನೋಡಿದರೆ ತಮ್ಮ ಕಥೆಗಳ ಮುಖಾಂತರ ಒಬ್ಬ ಪತ್ರಕರ್ತನಿಗಿಂತ ಹೆಚ್ಚಿನ ಸಾಹಿತ್ಯಿಕ ಮೌಲ್ಯವನ್ನು ರವಿಯವರು ಕಥೆಗಳಲ್ಲಿ ಸಾಬೀತುಪಡಿಸುವಲ್ಲಿ ಯಶಸ್ವಿಯೂ ಆಗಿದ್ದಾರೆ.

೧೯೮೦ರಲ್ಲಿ ತಂದ 'ದಾರಿ' ಮತ್ತು ೧೯೯೫ರಲ್ಲಿ 'ಪಾ.ವೆಂ. ಹೇಳಿದ ಕಥೆ' ಈ ಎರಡೂ ಕಥಾಸಂಕಲನಗಳನ್ನು ಒಟ್ಟುಗೂಡಿಸಿ ೧೯೯೮ರಲ್ಲಿ ಭಾವನಾ ಪ್ರಕಾಶನದಿಂದ ಬಿಡುಗಡೆಯಾದ 'ಒಟ್ಟಾರೆ ಕಥೆಗಳು' ಒಂದು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಈ ಎರಡರಲ್ಲೂ ಇಲ್ಲದ ಒಂದೆರಡು ಕಥೆಗಳು ಇದರಲ್ಲಿ ಸೇರಿಕೊಂಡಿವೆ ಎಂಬುದನ್ನು ಹೇಳುವಾಗಲೇ ರವಿಯವರ ಕಥೆಗಳ ಬಗ್ಗೆ ಜಿ. ರಾಜಶೇಖರ ಅವರು ತಮ್ಮ ವಿಮರ್ಶೆಯೊಂದರಲ್ಲಿ ಹೇಳಿರುವ ಮಾತುಗಳು ನೆನಪಾಗುತ್ತವೆ. 'ನನ್ನ ಆಕ್ಷೇಪವಿರುವುದು ರವಿಯ ಈ ಕಥೆಗಳ ಹಿಂದೆ ಇರುವ ಆತ್ಮವಿಶ್ವಾಸದ ಬಗ್ಗೆ ಎಲ್ಲಿಬೇಕಾದರೂ ಸಲ್ಲುವ ಕಥೆಗಳನ್ನು ಹೇಳುವ ಲೇಖಕನಿಗೆ ಬದುಕನ್ನು ತಾನು ಇಡಿಯಾಗಿ

ಗ್ರಹಿಸಿದ್ದೇನೆ ಎಂಬ ಆತ್ಮವಿಶ್ವಾಸವಿರುತ್ತದೆ. ರವಿಯ ಈ ಕಥೆಗಳು ಪ್ರಗತಿಶೀಲ ಬರವಣಿಗೆಯನ್ನು ಹೋಲುವುದು ಆಕಸ್ಮಿಕವಲ್ಲ. ಆ ಬರವಣಿಗೆಯ ಎಲ್ಲ ದೌರ್ಬಲ್ಯಗಳೂ ಇಲ್ಲಿ ಎದ್ದು ಕಾಣಿಸುತ್ತವೆ. ಎಲ್ಲರ ಒಳಿತಿಗಾಗಿ ಕೂಗು ಹಾಕುವವನ ಹುಸಿಗತ್ತು ಭಾಷೆಯ ದುಂದು, ಭೀಭತ್ಸವನ್ನು ಪರಿಣಾಮಕ್ಕೋಸ್ಕರವೇ ಬೆಳಸಿಕೊಂಡು ಹೋಗುವುದು ಇವೇ ಆ ದೌರ್ಬಲ್ಯಗಳು, ಸಾಹಿತ್ಯದಲ್ಲಿ ಪ್ರಗತಿಶೀಲತೆಯ ಹಿಂದೆ ಒಂದು ರಾಜಕೀಯ ಸಿದ್ಧಾಂತದ ಅಹಮಿಕೆ ಕೆಲಸ ಮಾಡಿರುವುದನ್ನು ನಾವು ನೆನಪು ಮಾಡಿಕೊಳ್ಳಬೇಕು. ಸಮಸ್ತ ಬದುಕನ್ನೂ ಒಂದು ಸೂತ್ರದಲ್ಲಿ ವಿವರಿಸಬಲ್ಲೆ ಎಂಬ ಸಿದ್ಧಾಂತ, ಸಾಹಿತಿಗಳನ್ನು ತಲುಪುವ ಹೊತ್ತಿಗೆ ಭಾಷೆಯ ಆತಂಕವೇ ಇಲ್ಲದೆ ಆತ್ಮವಿಶ್ವಾಸದ ರೂಪ ಪಡೆದುಕೊಂಡಿತ್ತು. ಈಗ ಈ ಸಿದ್ಧಾಂತ ಕಟ್ಟಿದ ರಾಜಕೀಯ ವ್ಯವಸ್ಥೆ ಕುಸಿದು ಬಿದ್ದ ಮೇಲೆ ಇಂತಹ ಕಥೆಗಳನ್ನು ಓದುವುದು ಎಂದರೆ ಮಣ್ಣು ತಿಂದ ಹಾಗೆ. ಪ್ರಗತಿಶೀಲರಿಗೆ ಇದು ಆತ್ಮವಿಶ್ವಾಸದ ಕಾಲವಲ್ಲ[೧] ಎಂದು ಹೇಳುತ್ತಾರೆ.

ತೆಲುಗಿನ ಶ್ರೀ ಶ್ರೀ ಹಾಗೂ ಚಲಂರ ಹಾಗೆ ಬೇಕಾಬಿಟ್ಟಿ ಬರವಣಿಗೆಯನ್ನು ರವಿಯವರು ಕೆಲವು ಸಲ ಮಾಡಿದ್ದಾರೆ. ರಾಜಶೇಖರರವರು ಹೇಳುವಂತೆ ಬದುಕನ್ನೂ ಇಡಿಯಾಗಿ ಗ್ರಹಿಸಿ ಒಂದೇ ಸೂತ್ರದಲ್ಲಿ ಹೇಳಬಲ್ಲೆ ಎಂಬ ಲಕ್ಷಣ ಕಂಡರೂ ಅವರ ಕಥೆಗಳಲ್ಲಿ ಆತ್ಮವಿಶ್ವಾಸದ ರೂಪ ಪಡೆದುಕೊಂಡಿರುವುದು ಸ್ವಲ್ಪ ಹೆಚ್ಚಿನದಾಗಿ ಕಂಡುಬರುತ್ತದೆ. ಇದು ಅವರ ಇತರ ಬರಹಗಳಲ್ಲಿ ಇರುವುದಾದರೂ ಬದುಕನ್ನು ಇಡಿಯಾಗಿ ಗ್ರಹಿಸಿದೆನೆಂಬ ಅತೀ ಆತ್ಮವಿಶ್ವಾಸ ಅವರ 'ಖಾಸ್ ಬಾತ್' ಮತ್ತು 'ಬಾಟಮ್ ಐಟಮ್'ಗಳಲ್ಲಿ ಇನ್ನಷ್ಟು ಸ್ಪಷ್ಟಗೊಳ್ಳುತ್ತದೆ. 'ಬದುಕನ್ನು ಸೂಕ್ಷ್ಮವಾಗಿ ಗ್ರಹಿಸುವ ಕೆಲಸ ಎಷ್ಟು ಕಷ್ಟಕರದಾದರೂ ಎಷ್ಟು ಅಗತ್ಯವಾದದ್ದು ಮನುಷ್ಯನ ಮನಸ್ಸು ಸ್ವಭಾವ, ಭಾವನೆಗಳೆಲ್ಲ ಕಾಲಾಂತರದಲ್ಲಿ ಬದಲಾಗುವ ಪರಿಪಕ್ವವಾಗುವ ಪರಿಯ ಸ್ವರೂಪವನ್ನು ಇಲ್ಲಿಯ ಕಥೆಗಳಿಗೆ ತಮ್ಮ ವಸ್ತುವಿನಲ್ಲಿ, ನಿಧಾನದಲ್ಲಿ, ವ್ಯಾಮೋಹದಲ್ಲಿ, ವ್ಯಂಗ್ಯದಲ್ಲಿ ಹೇಳುತ್ತವೆ. ಈ ವಿಷಯದ ಬಗೆಗೆ ಕೆ.ಸತ್ಯನಾರಾಯಣ ಅವರು 'ಕಥೆ ಓದಿದ ಮೇಲೆ ಬದುಕಿನ ಬಗ್ಗೆ, ಮನುಷ್ಯರ ಬಗ್ಗೆ ನನ್ನಲ್ಲಿ ಒಂದಷ್ಟುವಿನಯವೂ ಬೆರಗೂ ಮೂಡಿದರೆ ಅಷ್ಟೇ ಸಾಕು. ಇದು ಯಾವ ಪಂಥದ ಕಥೆಗಳಾದರೂ ಆಗಬಹುದು. ನವ್ಯ, ನವ್ಯೇತರ ದಲಿತ-ಬಂಡಾಯ, ರೊಮ್ಯಾಂಟಿಕ್, ಯಾವ ಜಾತಿಯ ಕಥೆಗಳಾದರೂ ಸರಿಯೇ ಮ್ಯಾಗೆಝಿನ್ ಕಥೆಯಾದರೂ ಅಡ್ಡಿಯಿಲ್ಲ. ಈ ಮಾತು ಇಲ್ಲಿ ಏಕೆಂದರೆ, ರವಿ ಬರೆಯುವ ಕಥೆಗಳು ಎಲ್ಲ ಜಾತಿಗಳಿಗೂ ಸೇರಿದ್ದವಾದ್ದರಿಂದ ಹೀಗೆ ಬೇರೆ ಬೇರೆ ಜಾತಿಗೆ ಸೇರಿಯೂ(ಉದಾ: ವಿತಥ, 'ಪಾ.ವೆಂ. ಹೆಳಿದ ಕಥೆ, ಭ್ರೂಣ ಸಂಭಾಷಣೆ) ಒಳ್ಳೆಯ ಕಥೆಗಳು ನಮ್ಮ ಮನಸ್ಸಿನ ಮೇಲೆ ಮಾಡಬೇಕಾದ ಪರಿಣಾಮವನ್ನೇ ಮಾಡುವುದರಿಂದ'[೨] ದೃಷ್ಟಿಕೋನದ ಬದಲಾವಣೆ, ಮಾಗುವಿಕೆ ಎನ್ನುತ್ತೇವೆ. ಅದನ್ನು ಸ್ವಾಗತಿಸುತ್ತೇವೆ. ಮನುಷ್ಯರಾಗಿ ಮಾಗಲು, ಪಕ್ವಗೊಳ್ಳಲು ಇದೆಲ್ಲ ಅಗತ್ಯ ಅವಶ್ಯವೂ ಹೌದು. ಆದರೆ ಮಾಸ್ತಿಯವರಿಗೆ ಆದ ಹಾಗೆ ಮೊದಲ ಕಥೆಯಲ್ಲೇ ಪ್ರಬುದ್ಧವಾದ ದೃಷ್ಟಿಕೋನ ಮೈಗೂಡಿಬಿಟ್ಟರೆ? ಆ ದೃಷ್ಟಿಕೋನದಿಂದ ನೋಡುವುದು ಕೂಡ ಜೀವನದ ಕಗ್ಗಂಟುಗಳನ್ನು, ಸಹ ಕಷ್ಟಗಳನ್ನು, ಮಾಸ್ತಿಯವರ ಕೊನೆಯ ಕಥೆ 'ಮಾಯಣ್ಣನ ಕನ್ನಡಿ' ವ್ಯಾಖ್ಯಾನಿಸುವುದು ಸಹ ಜೀವನದ ಕಗ್ಗಂಟುಗಳನ್ನು, ಕಷ್ಟ-ಕೋಟಲೆಗಳನ್ನು. ಹೀಗೆಂದಾಗ ಇವರು

ತಮ್ಮ ಎಲ್ಲ ಕಥೆಗಳಲ್ಲೂ ಮಾಗಿದ ದೃಷ್ಟಿಕೋನದಿಂದಲೇ ಜೀವನವನ್ನು ನೋಡಿದ್ದಾರೆಂದು ಅರ್ಥವಲ್ಲ. ಪಾ.ವೆಂ. ಹೇಳಿದ ಕಥೆ, ಮಸೀದಿ ಬಿದ್ದ ಮೂರನೆಯ ದಿನ, ಭ್ರೂಣ ಸಂಭಾಷಣೆ, ವಿತಥ, ಸ್ವಲ್ಪಮಟ್ಟಿಗೆ ಕೊನೆ ಮುಂತಾದವು ಲೇಖಕರ ಈಚಿನ ದೃಷ್ಟಿಕೋನವನ್ನು ಸೂಚಿಸಿದರೆ ಉಳಿದವು ಈ ದೃಷ್ಟಿಕೋನವನ್ನು ತಲುಪಲು ಕಥೆಗಾರರು ನಡೆದುಬಂದ ದಾರಿಯನ್ನು ಆ ಹಾದಿಯಲ್ಲಿರುವ ಕಷ್ಟವನ್ನು ಸೂಚಿಸುತ್ತವೆ.

ಹದಿನೈದು ವರ್ಷಗಳ ಹಿಂದೆ ಬರೆದ ಶಾಲಿನಿ ಕಥೆಯನ್ನು ಪಾ.ವೆಂ. ಹೆಳಿದ ಕಥೆಯಲ್ಲಿನ ಮಿನಾರುಗಳ ಊರಿನಲ್ಲಿ ಅವರ ಕಥೆಂಯೊಡನೆ ನೋಡಿದರೆ, ಲೇಖಕ/ಕಥೆಗಾರನ ಮನೋಧರ್ಮದಲ್ಲಾಗಿರುವ ಬದಲಾವಣೆಯ ಸ್ವರೂಪ ತಿಳಿಯುತ್ತದೆ. ಎರಡು ಕಥೆಗಳ ವಸ್ತುವೂ ದಾಂಪತ್ಯ ತರಿಸುವ ಸುಸ್ತೇ, ಜೀವನ ಕಣ್ಣೆದುರಿಗೆ ಕಳೆದು ಹೋಗುವುದರ ಭಯವೇ. ಬದಲಾಗಿರುವುದು ನೋಡುತ್ತಿರುವ ದೃಷ್ಟಿಕೋನದಲ್ಲಷ್ಟೇ. ಮೊದಲ ಕಥೆಯ ಎಲ್ಲಾ ಬೆಳವಣಿಗೆಯನ್ನು ಗಂಡಸಿನ ದೃಷ್ಟಿಕೋನದಿಂದ ನೋಡಲಾಗಿದೆ. ನಾಯಕ-ನಾಯಕಿ ಇಬ್ಬರ ಈ ಸುಸ್ತಿಗೆ ಇಲ್ಲಿ ಪರಿಹಾರವಿಲ್ಲ. ಹೊಸ ದೈಹಿಕ ಆಕರ್ಷಣೆ ಸಂಬಂಧ ಕೂಡ ಈ ಸುಸ್ತಿಗೆ ಪರಿಹಾರವಲ್ಲ ಎಂಬ ವಿಷಾದ ಪೂರ್ಣ ಅರಿವೂ ಇದರಲ್ಲಿದೆ. ಕಥೆಯಲ್ಲಿನ ಪರಿಸರದ ಹಿನ್ನೆಲೆಯಿಂದಾಗಿ ಸಾರ್ವತ್ರಿಕ ಆಯಾಮ ದೊರಕುತ್ತದೆ. ಮತ್ತೆ ಗಂಡು-ಹೆಣ್ಣು ಇಬ್ಬರು ತಮ್ಮ ಹಳೆಯ ಸಂಸಾರಗಳಿಗೆ ಮರಳುತ್ತಾರೆ. ರವಿಯವರ ದೃಷ್ಟಿಯಲ್ಲಾಗಿರುವ ಈ ಬದಲಾವಣೆ ಅಥವಾ ಬೆಳವಣಿಗೆ ಓದುಗರಿಗೆ ಇಷ್ಟವಾಗುವುದಾದರೂ, ಕಥೆಯನ್ನು ಓದುವಾಗ ಕಥೆಗಾರ ಕಷ್ಟವನ್ನು ಎಷ್ಟು ಆಕರ್ಷಕವಾಗಿ ನೋಡಬಲ್ಲ ಎಂದು ಅನಿಸುತ್ತದೆ. ಆ ಕಾರಣದಿಂದಲೇ ಕಥೆಗೆ ಬೇಡವಾದ ಆತ್ಮಾನುಕಂಪದ ಹೊದಿಕೆ ಬಂದುಬಿಟ್ಟಿದೆ. ಬಹುಶಃ ಇದೇ ಕಾರಣಕ್ಕೆ ಏನೋ ಕಷ್ಟ ನಿಜವಾದರೂ ಅದು ಪಡೆದುಕೊಂಡಿರುವ ಆಕರ್ಷಕ ಅನುಕಂಪದಿಂದಾಗಿ ವಾಸ್ತವತೆಯನ್ನು ಮೀರಿದೆ ಎನಿಸುತ್ತದೆ. ರವಿಯವರು ಏಕೆ ಹೀಗೆ ಬರೆಯುತ್ತಾರೆ? ಆಕರ್ಷಕವಾಗಿದ್ದು ಓದುಗರನ್ನು ಸೆಳೆಯಲಿ ಎಂಬ ಕಾರಣಕ್ಕೊ ಅಥವಾ ಅದು ಪತ್ರಿಕೋದ್ಯಮದ ಜಾಯಮಾನವಾ? ಗಂಡು-ಹೆಣ್ಣಿನ ವಿಷಯಕ್ಕೆ ಬಂದಾಗಲಂತೂ ಅವರ ಆಕರ್ಷಕ ಬರವಣಿಗೆಗೆ ನಿಧಾನವೆಂಬುದೆ ಇರುವುದಿಲ್ಲ. ಗಂಡು-ಹೆಣ್ಣಿನ ಬಗ್ಗೆ ಅಷ್ಟೊಂದು ಆಸಕ್ತಿ ಇರುವ ಅವರು ಬದುಕಿನ ನಿರೀಂದ್ರಿಯ ಸ್ಥಿತಿಯ ಬಗ್ಗೆಯೂ ಅಷ್ಟೇ ಆಸಕ್ತಿಯನ್ನು ತೋರುವುದು ಆಶ್ಚರ್ಯಕರ ಸಂಗತಿ.

ಬದುಕಿನ ವಿಕೃತಿಯ ಬಗ್ಗೆ ಜೀವನದ ಬಗ್ಗೆ ಯಾವುದೇ ಕನಸು ಮಮಕಾರವಿರದ ಮನಸ್ಥಿತಿಯನ್ನು ವಿಪರೀತ ಆಸಕ್ತಿಯಿಂದ ನೋಡುತ್ತಾರೆ. 'ಆಕ್ರಮಣ' ಮತ್ತು 'ಪರಿಚಯ' ಕಥೆಗಳ ನಾಯಕರು 'ಕುಹುಕುಹರ'ದ ಕಲಾವಿದ ಇವರೆಲ್ಲರ ಮನಸ್ಥಿತಿಯ ವರ್ಣನೆ, ವಿವರಗಳನ್ನು ಓದುತ್ತಿದ್ದರೆ ಅವರ ಅನೇಕ ಕಥೆಗಳಲ್ಲಿ ಬದುಕಿನ ಬಡತನ, ಬವಣೆಗಳೇ ಸರ್ವಸ್ವವಾದಂತೆ ಈ ಕಥೆಯಲ್ಲಿ ನಿರೀಂದ್ರಿಯ ಸ್ಥಿತಿಯೇ ಸರ್ವಸ್ವ. ಇಲ್ಲಿಯ ಕಥೆಗಳ ಸ್ವರೂಪವನ್ನು ಅರಿಯಲು ಕುಸುಮಾಕರರ 'ನಿರೀಂದ್ರಿಯ' ಕಾದಂಬರಿಯೊಡನೆ ಸಮೀಕರಿಸಿ ನೋಡಬೇಕು. ಕುಸುಮಾಕರರು ನಿರೀಂದ್ರಿಯ ಸ್ಥಿತಿಯನ್ನು ಹೇಳುವಾಗ ಭಾಷೆಯದೇ ಒಂದು ಮೋಡಿ, ಅದರಲ್ಲಿನ ಭಾಷೆಗೆ ನಿರೀಂದ್ರಿಯ ಸ್ಥಿತಿಯನ್ನು ಪ್ರಶ್ನಿಸುವ ಧೈರ್ಯವಿದೆ. ಆದರೆ, ರವಿಯವರ ಕಥೆಗಳಿಗೆ ಅದಿಲ್ಲ. ಕುಸುಮಾಕರರ ಬರವಣಿಗೆ, ನಿರೀಂದ್ರಿಯ ಸ್ಥಿತಿಯ ಬಗೆಗೆ ರವಿಯವರ ಕಥೆಗಳು ನೀಡುವಷ್ಟು ವಿವರಗಳನ್ನು ನೀಡುವುದಿಲ್ಲ. ಆಳಕ್ಕೆ ಕೊಂಡೊಯ್ಯುವ ಬರಹ ಅವರದಾದರೆ, ವ್ಯಾಪ್ತಿಯನ್ನು ತೆರೆದಿಡುವ ಬರಹ ಇವರದು.

ಕಾದಂಬರಿಯನ್ನು ಓದುವಾಗ ಅದರಲ್ಲಿನ ನಿರೀಂದ್ರಿಯ ಸ್ಥಿತಿ ನಮ್ಮದು ಅನಿಸಿದರೆ ಕಥೆಗಳ ವಿಷಯದಲ್ಲಿ ನಿರೀಂದ್ರಿಯ ಸ್ಥಿತಿ ಕೇವಲ ಕೆಲವು ವಿಶಿಷ್ಟ ವ್ಯಕ್ತಿಗಳಿದು ಮಾತ್ರ ಎನ್ನುವ ಭಾವವನ್ನು ಮೂಡಿಸುತ್ತದೆ.

'ವಿತಥ' ಕಥೆ ಹೀಗಲ್ಲ. ಇಲ್ಲಿ ನಿರೀಂದ್ರಿಯ ಸ್ಥಿತಿಯ ವಕ್ತಾರರಿದ್ದಾರೆ. ಆ ಸ್ಥಿತಿಯನ್ನು ಆತಂಕದಲ್ಲಿ ಭಯದಲ್ಲಿ, ಬಹಿರಂಗವಾಗಿ ಹೇಳಿಕೊಳ್ಳಲಾಗದ ಆಸೆಯಲ್ಲಿ, ಕನಸಿನಲ್ಲಿ ಪ್ರಶ್ನಿಸುವ ಧೈರ್ಯವುಳ್ಳ ಹೆಂಗಸಿದ್ದಾಳೆ. ನಿರೀಂದ್ರಿಯ ಸ್ಥಿತಿಯ ಜೊತೆಗೆ ಬರುವ ವಾತ್ಸಲ್ಯ, ಜೀವನ ಕಾಂಕ್ಷೆಗಳು ಅವುಗಳನ್ನು ತೋರ್ಪಡಿಸುವ ಬಯಕೆ ಎಲ್ಲವನ್ನೂ ಒಳಗೊಂಡ ಅನುಭವವನ್ನು ನೀಡುತ್ತದೆ. 'ಆಕ್ರಮಣ' ಕಥೆಯ ನಿರೀಂದ್ರಿಯ ಸ್ಥಿತಿಯ ನಾಯಕ ನಿರ್ವೀರ್ಯನಾಗಿರುವುದು, 'ಹೆಣದ ಮನೆಯಲ್ಲಿ' ಕಥೆಯ ಲಂಚಪಡೆಯುವ ಡಾಕ್ಟರ್ ಅಪಘಾತದಲ್ಲಿ ಸಾಯುವುದು, 'ಕುಹಕುಹರ' ಕಲಾವಿದನ ವಿಷಾದ ಅನಿಸದಿದ್ದರೂ 'ವಿತಥ' ಕಥೆಯ ಅಜ್ಜಿಯ ನಿರೀಂದ್ರಿಯ ಸ್ಥಿತಿ ಭಯ ತರುವಂತೆ ಅನುಸೂಯಳ ಬಯಕೆಗಳು ಉತ್ಸಾಹವನ್ನು ತರುತ್ತದೆ. ಎರಡೂ ಮನಸ್ಥಿತಿಗಳು ಓದುಗರ ಬುದ್ಧಿಯನ್ನು ಮತ್ತಷ್ಟು ಚುರುಕಾಗಿಸುತ್ತದೆ.

'ಕೊನೆ' ಕಥೆ ನಿಗೂಢತೆಯ ವಿವರವನ್ನು ನೀಡುತ್ತದೆ. ಕಥೆಯನ್ನು ಓದುವಾಗ ಮೂಡಿದ ವಿಷಾದ ನಂತರದಲ್ಲಿ ಉಳಿಯುವುದಿಲ್ಲ. ಎಲ್ಲವನ್ನು ಹೇಳಿಬಿಡುವ ಲೋಕಾಭಿರಾಮದ ರೀತಿಯಲ್ಲಿ ಮೂಡಿರುವ 'ಭ್ರೂಣ ಸಂಭಾಷಣೆ' ಕಥೆಯ ಅಂತರಾಗಳದಲ್ಲಿ ಹಾಗಲ್ಲ. ಇದೊಂದು ವಿಶಿಷ್ಟ ಮತ್ತು ದಿಟ್ಟ ಕಥೆ. ವಿಮರ್ಶಕರು ಏನು ಹೇಳಬಹುದೆಂದು ತಲೆ ಕೆಡಿಸಿಕೊಳ್ಳದೆ ಬರೆಯುವವರು ಮಾತ್ರ ಬರೆಯಬಹುದಾದ ಕಥೆ. ತಾಯ್ತತನ, ಹೆಣ್ಣಿನ ಪ್ರೀತಿಯ ಸ್ವರೂಪದ ಬಗ್ಗೆ ಈ ಕಥೆ ಅಸಂಪ್ರದಾಯಕ ನಿಲುವನ್ನು ತೋರುತ್ತದೆ. ಭ್ರೂಣದ ಒಳಮಾತು, ಫಕೀರನ ಪ್ರಸ್ತಾಪ ಈ ಕಥೆಗೆ ಅಲೌಕಿಕತೆಯನ್ನು ತಂದುಕೊಟ್ಟಿವೆ. ಇದು ಯಾರು ಯಾರಿಗೆ ಹೇಳಿದ ಕಥೆ? ಒಟ್ಟು ಕಥೆಯನ್ನು ಅಮೀನಾ ಹೇಳಿದಳೆ ಅಥವಾ ವಸಂತ ಸೇರಿಸಿದಳೇ? ಎಂಬುದೇ ತಿಳಿಯದಾಗುತ್ತದೆ.

'ಮಸೀದಿ ಬಿದ್ದ ಮೂರನೆಯ ದಿನ' ಕಥೆಯ ಗುರುಶಾಂತನಂಥವರ ಅಮಾಯಕ ಜೀವನವೂ ಚರಿತ್ರೆಯ ನಿರ್ಮಾಣದ ಪ್ರಯತ್ನದಲ್ಲಿ ದುರಂತ ಕಥೆಗಳಾಗಿಯೇ ಪ್ರವೇಶ ಪಡೆಯುತ್ತವೆ. ಅತ್ತಾರನ ಮೇಲೆ ಗುರುಶಾಂತನಿಗೆ ಅನುಮಾನ ಮೂಡಲು ಅಯೋಧ್ಯೆಯೇನೂ ಬೇಕಾಗಿರಲಿಲ್ಲ. ಇಂತಹವರ ಈ ರೀತಿಯ ಕಥೆಗಳ ಮೂಲಕ ಚರಿತ್ರೆಯನ್ನು ನೋಡಬೇಕಲ್ಲದೇ, ಕಟ್ಟಬೇಕಲ್ಲದೇ, ಮಂದಿರದ ಮೂಲಕವೋ, ಮಸೀದಿಯ ಮೂಲಕವೋ ಚರಿತ್ರೆ ನಿರ್ಮಿಸಲು ಹೊರಟರೆ ಸಿಗುವುದು ಕಲ್ಲು ಕಟ್ಟಡಗಳಷ್ಟೇ ಹೊರತು ಮನುಷ್ಯರಲ್ಲ. ಈ ಕಥೆಯ ವಸ್ತು ಕಥೆ ಮತ್ತು ಚರಿತ್ರೆಗೆ ಇರಬೇಕಾದ ಸಂಬಂಧದ ಸ್ವರೂಪದ ಬಗ್ಗೆ ಗಂಭೀರವಾಗಿ ಚಿಂತಿಸಲು ಉತ್ತೇಜಿಸುವಂತೆ ಮಾಡುವಲ್ಲಿ ಯಶಸ್ವಿಯಾಗಿದೆ.

ಓದಿದ ತಕ್ಷಣವೇ ಎಂತವರಿಗಾದರೂ ಇಷ್ಟವಾಗುವ 'ಪಾ.ವೆಂ.ಹೇಳಿದ ಕಥೆ' ಮತ್ತೊಂದು ರೀತಿಯದು. ಈ ಕಥೆ ಮಾಸ್ತಿಯವರ ಕಥೆಗಳ ನಿರೂಪಣಾ ಶೈಲಿಯನ್ನು ಹೋಲುವ ಕಾರಣಕ್ಕಾಗಿ ತನ್ನ ವಿಶಿಷ್ಟ ಕಥನ ಕ್ರಮದಿಂದ ಓದುಗರ ಗಮನವನ್ನು ಸೆಳೆಯುತ್ತದೆ. ಹಾಗೆ ಜೀವಂತ ವ್ಯಕ್ತಿಗಳೇ ಈ ಕಥೆಯಲ್ಲಿ ಪಾತ್ರವಾಗಿ ಚಿತ್ರಿತವಾಗಿರುವುದು ಮತ್ತೊಂದು ವಿಶೇಷ. ಇಲ್ಲಿ 'ಪಾ.ವೆಂ. ಹೇಳಿದ ಕಥೆ' ಮುಗಿಯಿತೆ, ನಡೆಯುತ್ತಿದೆಯೇ? ಅಲ್ಲಿನ ವಿವರಗಳಿಗೆ ಪಾ.ವೆಂ. ಅವರನ್ನ ಕಾಡಿಸುತ್ತಿರುವವಳು ಯಾರು? ಕಥೆಯ ಪಾತ್ರವೆ? ಯಾರೋ ಹೇಳಿದ ಕಥೆ ಮತ್ಯಾರದೋ ಬದುಕಿನಲ್ಲಿ ಘಟಿಸುತ್ತಿರಬಹುದೆ?

ಅಂಬುಜ ಪರಿಚಿತ ಹೆಂಗಸಿನಂತೆ ಅಕ್ಕ–ಪಕ್ಕದ ಮನೆಯಲ್ಲೇ ಇರುವ ಹೆಂಗಸೇ ಆಗಿರಬಾರದ್ಯಾಕೆ? ಎಂಬಂತಹ ಹಲವಾರು ಪ್ರಶ್ನೆಗಳನ್ನು ಮೂಡಿಸುತ್ತದೆ. ಇಂತಹ ಕಥೆಗಳನ್ನು ಓದಿದಾಗಲೇ ಮನಸ್ಸು ಜೀವನದ ಹೊಸ ಭಾವನೆಗಳನ್ನು ಅನುಭವಿಸುವುದು. ಮಾಸ್ತಿಯವರ ಬರವಣಿಗೆಯನ್ನು ನೆನಪಿಸುವ ಈ ಕಥೆ ಬರೀ ಅಂಬುಜಳ ಕಥೆಯಷ್ಟೆ ಅಲ್ಲ ಜೀವನಕ್ಕೂ ಮತ್ತು ಕಥೆಗಿರುವ ವಿನಿಮಯದ ಸಂಬಂಧವನ್ನು ತಿಳಿಸುವ ಕಥೆಯೂ ಆಗಿದೆ. ಈ ಕಥೆಗೆ ಸಂಬಂಧಿಸಿದಂತೆ ಸಂಕಲನದ ಮುನ್ನುಡಿಯಲ್ಲಿನ ಕೆ.ಸತ್ಯನಾರಾಯಣರ ಮಾತನ್ನು ಜಿ. ರಾಜಶೇಖರ ಅವರು ಈ ರೀತಿ ಗುರುತಿಸುತ್ತಾರೆ. 'ಕಥೆಯ ಚೆಲವು ಮತ್ತು ಅರ್ಥವಂತಿಕೆ ಇರುವುದು ಅದರ ಕಥಾನಕದ ವಿನ್ಯಾಸದಲ್ಲಿ ಅಂಬುಜ ಹೇಳುವ ಕಥೆಯಲ್ಲಿ ಅವಳನ್ನು ವಂಚಿಸಿದ ಗಂಡಸಾಗಲೀ, ಆಕೆಯ ಹೆತ್ತವರಾಗಲೀ ದುಷ್ಟರಂತೆ ಕಾಣಿಸುವುದಿಲ್ಲ. ಅವರು ಜಡರೇ ಹೊರತು ನೀಚರಲ್ಲ. ಅದೂ ಅಲ್ಲದೆ, ಕಥೆಯ ಗಂಡಸರು ವಿಶೇಷ ಬಲ ಅಥವಾ ಅಧಿಕಾರ ಉಳ್ಳವರೂ ಅಲ್ಲ ರವಿಯ ಕಥೆಗೂ, ಇದೇ ವಸ್ತುವಿನ ಇತರರ ಕಥೆಗಳಿಗೂ ವ್ಯತ್ಯಾಸ ಇರುವುದೇ ಈ ಅಂಶದಲ್ಲಿ. ಗಂಡು ಎಂದರೆ ಅಧಿಕಾರ, ಹೆಣ್ಣು ಎಂದರೆ ದೌರ್ಬಲ್ಯ ಎಂಬ ಸರಳ ಸಮೀಕರಣ ಇಲ್ಲಿ ಕಾಣುವುದಿಲ್ಲ. ವಾಸ್ತವವಾಗಿ ಅಂಬುಜಳ ಬದುಕನ್ನು ಮೂರಾಬಟ್ಟೆ ಮಾಡಿದ ಆಕೆಯ ಗಂಡ, ಅವಳಿಗಿಂತ ದುರ್ಬಲ, ಅಂಬುಜಳಿಗೆ ಸ್ವಂತದ ವ್ಯಕ್ತಿತ್ವವಿದೆ. ಪ್ರಬಲ ಇಚ್ಛಾಶಕ್ತಿ ಇದೆ. ಆದರೆ, ಗಂಡ ಎಂಬುವವನು ಗುರುತು ಚಹರೆಗಳೇ ಇಲ್ಲದ ಮುಖಹೀನ. ಅವನು ಕಾರಣನಾಗುವ ಹಿಂಸೆಗೂ ಆ ಗುಣವಿದೆ.[೬] ಈ ಸಂಕಲನದ ಮತ್ತೊಂದು ಮುಖ್ಯಕಥೆ 'ವಿತಥ'ದ ಮುಖ್ಯಪಾತ್ರ ಒಬ್ಬ ನೊಂದ ಹೆಣ್ಣಿನದು. ಅದು ಅಂಬುಜಳನ್ನು ನೆನಪಿಸಿದರೂ ನೋವಿನ ಬಗೆ ಬೇರೆಯಷ್ಟೇ. ಇಲ್ಲಿಯೂ ಯಜಮಾನಿಕೆ ಮಾಡುವರು ಯಾರೂ ಇಲ್ಲ. ಅಜ್ಜಿ, ಅವನ ಅಪ್ಪ, ಅನಸೂಯ ಮತ್ತು ಕೇರಿಯವರು ಎಲ್ಲರೂ ನರಳುವವರೇ.

ನರಳಾಟ ಶಾಶ್ವತ ದುಃಖವಲ್ಲ, ಅನಿರೀಕ್ಷಿತವಾಗಿ ಘಟಿಸುವ ದುರಂತವೂ ಅಲ್ಲ. ರವಿಯವರ ಕಥೆಗಳಲ್ಲಿ ನಿರಂತರ ನರಳಾಟ ಪಾತ್ರಗಳ ಇರುವಿಕೆಯ ಸ್ಥಿತಿಯಷ್ಟೇ. ಪಾ.ವೆಂ. ಹೇಳಿದ ಕಥೆ, ವೇಷಗಳು, ಮಸೀದಿ ಬಿದ್ದ ಮೂರನೆಯ ದಿನ ಮುಂತಾದ ಕಥೆಗಳಲ್ಲಿ ಅವರು ಈ ಸ್ಥಿತಿಯನ್ನು ಭಾವನೆಗಳ ಆರ್ತನಾದದಲ್ಲಿ ಚಿತ್ರಿಸುತ್ತಾರೆ. ಹಾಗೆ ಹೇಳಬೇಕೆಂದರೆ ಓದಿನ ದೃಷ್ಟಿಯಿಂದ ರವಿಯವರ ಯಾವ ಕಥೆಗಳೂ ನಿರಾಸೆ ಮೂಡಿಸುವುದಿಲ್ಲ. ಪಾ.ವೆಂ. ಹೇಳಿದ ಕಥೆ, ಹೆಣದ ಮನೆಯಲ್ಲಿ, ಮೈಕು, ಹಂತ, ಕತ್ತಲೆ ನೋವು ಮತ್ತು ಹೆಣ, ವಿತಥ, ಪರಿಚಯ, ವೇಷಗಳು, ಮಸೀದಿ ಬಿದ್ದ ಮೂರನೆಯ ದಿನ, ನೆರಳು ಮುಂತಾದ ಕಥೆಗಳಲ್ಲಿ ಚಿತ್ರಿತವಾಗುವ ಜೀವನ ಮತ್ತು ಅವುಗಳನ್ನು ಚಿತ್ರಿಸುವ ಬರಹಗಾರ/ಕಥೆಗಾರನ ಜೀವನಾನುಭವ ಸಾರ್ಥಕ ಕಥೆಗಳ ಮಾದರಿಯನ್ನು ತೋರಿಸಿಕೊಡುತ್ತವೆ. ಆದರೆ, ಸಾಹಿತ್ಯ ಕೃತಿಯೊಂದರ ಆಳವಾದ ಅನುಭವವನ್ನು ಓದಿನ ನಂತರ ಹುಟ್ಟಿನ ಚಕಿತತೆಯನ್ನು, ಗಾಢವಾದ ವಿಷಾದವನ್ನು ಮೂಡಿಸುವ ಸಾಮರ್ಥ್ಯದ ಮೂಲಕ ಕೆಲಕಾಲ ಜೀವಂತವಿರುವ ಸಾಹಿತ್ಯಿಕ ಮೌಲ್ಯ ಮೇಲೆ ಹೇಳಿದ ಕೆಲವು ಕಥೆಗಳಲ್ಲಿ ಕಾಣಬಹುದು.

ಬಂಜಗೆರೆ ಜಯಪ್ರಕಾಶ ಅವರು ರವಿಯವರ ಕಥೆಗಳ ವಸ್ತು ಸ್ಥಿತಿಯ ಬಗೆಗೆ ವಸ್ತುವಿನ ಮೂಲಕ ಅವರ ಕಥೆಗಳು ಹುಟ್ಟಿಸುವ ಅಶಾವಾದದ ಬಗೆಗೆ ಹೇಳುವಾಗ 'ರವಿಯವರು ತಮ್ಮ ವ್ಯವಹಾರಗಳ ನಡುವೆ ವ್ಯಕ್ತಿತ್ವದ ಅಂಗವಾಗಿರುವ 'ಸೋ ವಾಟ್' ಧೋರಣೆಗಳ ನಡುವೆ ರವಿ ಬೆಳಗೆರೆ ಸ್ವಲ್ಪ ಬಿಡುವು ಮಾಡಿಕೊಂಡರೆ, ತಮ್ಮ ಬದುಕಿನ ಅಪಾರ ಪರಿಶ್ರಮಗಳ ನಡುವೆ ಮತ್ತಷ್ಟು

ಸಾಹಿತ್ಯಿಕ ಮುಲಾಜುಗಳನ್ನು ಹಚ್ಚಿಕೊಂಡರೆ ಕನ್ನಡಕ್ಕೆ ಮತ್ತೊಬ್ಬ ಮಾಸ್ತಿಯಂತಹ ಕಥೆಗಾರ ದೊರೆಯಬಹುದೆಂಬ ಬಗ್ಗೆ ದಟ್ಟವಾದ ಎಲ್ಲಾ ನಿದರ್ಶನಗಳನ್ನೂ 'ಒಟ್ಟಾರೆ ಕಥೆಗಳು' ನೀಡುತ್ತಿವೆ" ಎಂದು ಹೇಳುತ್ತಾರೆ. ರವಿಯವರ ಎಲ್ಲ ಕಥೆಗಳ ವಸ್ತು ಸಾಮಾನ್ಯ ಬದುಕಿನ ಚಿತ್ರಣ ಇರುವಂತಹವರ ಕಥೆಗಳೇ ಹೆಚ್ಚಾಗಿವೆ. ಅವರೆಲ್ಲ ಯಾವ್ಯಾವುದೋ ಕಾರಣಗಳಿಗಾಗಿಯೋ ಬಾಧಿತರು, ಪತಿತರು, ಸಾಮಾನ್ಯ ಮಧ್ಯಮ ವರ್ಗದ ಬದುಕಿನ ದೃಷ್ಟಿಯಿಂದ ಗಮನಿಸದರೆ ಅಘಾತಕಾರಿ ಮನಸ್ಥಿತಿಯವರು. ಒಂದು ದೃಷ್ಟಿಯಿಂದ ಸೂಕ್ಷ್ಮವಾಗಿ ನೋಡಿದರೆ ನಿಜವಾಗಿ ಅವರೆಲ್ಲ ಈ ಲೋಕದ ವಿದ್ಯುಮಾನಗಳು ಅಡಗಿಸಿಟ್ಟ ನಿಜದ ಬಿಂಬಗಳು.

**೩.೩. ಕಾದಂಬರಿಗಳು**

ಪ್ರತಿಯೊಂದು ಸಾಹಿತ್ಯಿಕ ರಚನೆಗೂ ಅಗತ್ಯವಾದ ಒಂದು ಪ್ರೇರಣೆ ಹಾಗೂ ತನ್ನದೇ ಆದ ಇತಿಹಾಸವೊಂದು ರೂಪುಗೊಂಡಿರುತ್ತದೆ. ಯಾವುದೇ ಒಂದು ಸಾಹಿತ್ಯದ ಚರಿತ್ರೆಯಲ್ಲಿ, ಒಂದು ಸಾಹಿತ್ಯಿಕ ಪ್ರಭೇದ ಯಾವ ಕಾಲಘಟ್ಟದಲ್ಲಿ ಜನ್ಮ ಪಡೆಯಿತು ಎಂದು ನಿರ್ಧರಿಸುವುದು ಅತ್ಯಂತ ಕಷ್ಟದ ಕೆಲಸ. ಸುಮಾರು ೧೯೨೫ರ ಹೊತ್ತಿಗೆ ಕನ್ನಡ ಕಾದಂಬರಿಗಳ ಪ್ರಾರಂಭದ ಅಸ್ಪಷ್ಟತೆಗಳೆಲ್ಲಾ ದೂರವಾಗಿ ಅವುಗಳಿಗೊಂದು ಸ್ಪಷ್ಟವಾದ ರೂಪು ದೊರೆಯತೊಡಗಿತು. ಗುಲ್ವಾಡಿ ವೆಂಕಟರಾಯರು, ಕೆರೂರು ವಾಸುದೇವಾಚಾರ್ಯ, ಎಂ.ಎಸ್. ಪುಟ್ಟಣ್ಣ ಮುಂತಾದವರು ತಮ್ಮ ಕಾಲದ ಅಗತ್ಯಗಳನ್ನು ಅರ್ಥಮಾಡಿಕೊಂಡು ಆರಂಭಿಕ ಕಾಲದ ಕಾದಂಬರಿಯ ವಕ್ತಾರರೆನಿಸಿದರು. ಅಂದು ಭಾರತದ ಆಧುನೀಕರಣ ಪ್ರಕ್ರಿಯೆ ಹುಟ್ಟು ಹಾಕಿದ ವೈಚಾರಿಕತೆಯು ಕಾದಂಬರಿಯ ಪ್ರಕಾರದ ವಿಕಾಸಕ್ಕೆ ಬೇಕಾದ ಗದ್ಯವನ್ನು ಸಾಧ್ಯವಾಗಿಸಿತು.

ಒಬ್ಬ ಲೇಖಕನ ಕೃತಿಯನ್ನು ಬೆಲೆ ಕಟ್ಟುವಾಗ ಆ ಕೃತಿ ರಚನೆಯ ಹಿನ್ನೆಲೆ ಲೇಖಕನ ಸಮಕಾಲೀನ ಸಾಹಿತ್ಯಿಕ ಸ್ಥಿತಿಯ ಪರಿಜ್ಞಾನ ಅವಶ್ಯಕ. ಸಾಮಾನ್ಯವಾಗಿ ಎಲ್ಲ ಸೃಜನಶೀಲ ಕೃತಿಯ ಮೂಲದಲ್ಲಿ ಲೇಖಕನ ವೈಯಕ್ತಿಕ ಅನುಭವ ಮೂಲ ಬಂಡವಾಳವಾಗಿರುತ್ತದೆ. ಅಂತೆಯೇ ಕನ್ನಡ ಕಾದಂಬರಿ ಮಟ್ಟಿಗೆ ವಾಸ್ತವ ಮಾರ್ಗದ ಉತ್ತಮ ಕೃತಿಗಳನ್ನು ನೀಡಿ ಭಾವನಾತ್ಮಕ ಸೆಳವಿಗೂ, ಸಂಸ್ಕೃತಿಯ ಪ್ರಚಾರಕ್ಕೂ ತೊಡಗಿದಾಗ ಹೊಸ ನೀರು ಅದಕ್ಕೆ ಸೇರ್ಪಡೆಯಾಯಿತು. ಪ್ರಾಯ್ಡ್, ಮಾರ್ಕ್ಸ್, ಕಾಮು, ಕಾಫ್ಕರರ ಬರಹಗಳು ಒಂದು ನಿಟ್ಟಿನಲ್ಲಿ ಅದಕ್ಕೆ ಚಾಲನೆ ನೀಡಿದರೆ ಸ್ವಾತಂತ್ರ್ಯೋತ್ತರ ಪರಿಸ್ಥಿತಿಯಿಂದಾಗಿ ಮೂಡಿದ ಸಾರ್ವತ್ರಿಕ ನಿರಾಶೆ, ಹತಾಸೆ, ಹಿಂಸೆ, ಸ್ವಾರ್ಥ, ಅಧಿಕಾರಗಳು ಮತ್ತೊಂದು ರೀತಿಯಿಂದ ಕಾರಣವಾದವು. ಇದರ ಪರಿಣಾಮದಿಂದಾಗಿ ಕಾದಂಬರಿಯ ರೂಪ, ವಸ್ತು, ತಂತ್ರ, ನಿರೂಪಣೆಗಳಲ್ಲಿ ಬದಲಾವಣೆ ಅನಿವಾರ್ಯ ಎನಿಸಿತು.

ಇದರ ಪರಿಣಾಮವಾಗಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾದಂಬರಿ ಪ್ರಕಾರವು ಜನಪ್ರಿಯವಾದ ರೂಪವಾಯಿತು. ಕಾದಂಬರಿಗಳು ಕೇವಲ ಮನೋರಂಜನೆಯ ಸಾಧನವಾಗದೆ, ಬದುಕಿನ ಮಹಾಕಾವ್ಯಗಳಾಗಿವೆ. ಮನುಷ್ಯ ಬದುಕಿನ ರಹಸ್ಯವನ್ನು ಬಿಡಿಸಿ ತೋರಿಸುವ ಪ್ರಕಾರ ಇದಾಗಿದೆ. ಕಾದಂಬರಿ ಎಲ್ಲ ಅನ್ವಯಿಕ ಸಾಹಿತ್ಯಗಳಲ್ಲಿಯಂತೆ ಕನ್ನಡದಲ್ಲಿಯೂ ಅತ್ಯಂತ ಲೋಕ ಪ್ರಿಯವಾದ ಸಾಹಿತ್ಯ ಪ್ರಕಾರವಾಗಿ ಬೆಳೆದುಬಂದಿದೆ. ಈ ಸಾಹಿತ್ಯ ಪ್ರಕಾರ ಒಂದು ರೀತಿಯಿಂದ ಜಾನಪದ ಸಾಹಿತ್ಯದಂತೆ ಸಾಮಾನ್ಯ ಜನರ ಆಶೋತ್ತರ, ಅಭಿರುಚಿ, ಸಂಸ್ಕೃತಿಯ ಮಟ್ಟವನ್ನು ವಿವರವಾಗಿ ಪ್ರತಿಬಿಂಬಿಸುವ ಮಾಧ್ಯಮವಾಗಿದೆ. ಕಾದಂಬರಿ ಸಮಕಾಲೀನ ವಿವರವಾಗಿ ತನ್ಮೂಲಕ ಪ್ರಕಟಪಡಿಸುವ

ಮಾಧ್ಯಮವಾಗಿದೆ. ಇಂತಹ ಒಂದು ಪ್ರಕಾರ ಕನ್ನಡ ಸಾಹಿತ್ಯದ ಸಮಕಾಲೀನ ಜೀವನಕ್ಕೆ ತೀರ ಹತ್ತಿರವಾದ ರೂಪವಾಗಿ ಕನ್ನಡ ಭಾಷೆಗೆ ದೊರೆತಿರುವುದು ಹೆಮ್ಮೆಯ ಸಂಗತಿ.

ಪೆನ್ನು ಮತ್ತು ಕಾಗದ, ಸಾಕಷ್ಟು ವಿರಾಮ, ತಾಳ್ಮೆಗಳಿದ್ದರೆ ಯಾರೂ ಬೇಕಾದರೂ ಕಾದಂಬರಿ ಬರೆಯಬಹುದು ಎಂಬ ಮಾತು ಕಾದಂಬರಿಯ ಸರಳ, ಸ್ವತಂತ್ರ ಸ್ವಚ್ಛಂದತೆಯನ್ನು ಕುರಿತು ಹೇಳುತ್ತದೆ. ಕಾದಂಬರಿ ಎಂದರೆ ಘಟನೆಗಳು, ಕ್ರಿಯೆಗಳೊಡನೆ ಅನುಭವಿಸಿದ ಮತ್ತು ಮಾಡಿದ ಸಂಗತಿ. ಇವು ಜನಜೀವನದಲ್ಲಿ ಉಂಟಾಗಿ ಕಾದಂಬರಿಯ ವಿಷಯ, ಪಾತ್ರಗಳಾಗುತ್ತವೆ. ಇನ್ನೂ ಕಾದಂಬರಿಯಲ್ಲಿ ಪಾತ್ರಗಳ ಸಂಭಾಷಣೆ, ಶೈಲಿ ಜೀವನದ ಬಗೆಗಿನ ಒಂದು ನಿಶ್ಚಿತ ದೃಷ್ಟಿ, ಬದುಕಿನ ಕೆಲವು ಸಮಸ್ಯೆಗಳು ಅವಶ್ಯವಾಗಿ ನಿರೂಪಿಸಲ್ಪಟ್ಟಿರುತ್ತವೆ. ಕಾದಂಬರಿ ಪ್ರಮುಖವಾಗಿ ಶ್ರವ್ಯ ಮಾಧ್ಯಮವಾಗಿರುವುದರಿಂದ ನಾಟಕಕ್ಕೆ ಬೇಕಿರುವ ರಂಗ ಪರಿಕರ, ಪ್ರೇಕ್ಷಕನ ಅಭಿನಯದ ಅಗತ್ಯ ಇದಕ್ಕಿರುವುದಿಲ್ಲ. ನಿರಂತರ ಓಟ, ನವಿರಾದ ನಿರೂಪಣೆ, ವಸ್ತುವನ್ನು ಸಂಬದ್ಧವಾಗಿ, ಪರಿಣಾಮಕಾರಿಯಾಗಿ ನಿರೂಪಿಸುವ ಮನಸ್ಥಿತಿ ಕಾದಂಬರಿಕಾರನಿಗಿದ್ದರೆ ಸಾಕು. ಅದು ಉತ್ತಮ  ಕಾದಂಬರಿ ಎಂದು ಗುರುತಿಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತದೆ.

ಆರಂಭದಲ್ಲಿ ಬಂದ ಕಾದಂಬರಿಗಳಲ್ಲಿ ಸಮಕಾಲೀನ ಪ್ರಜ್ಞೆ ಮತ್ತು ಸಾಮಾಜಿಕ ಕಳಕಳಿ, ವಾಸ್ತವ ಬದುಕಿನ ಚಿತ್ರಣ, ಸಮಾಜದ ಜ್ವಲಂತ ಸಮಸ್ಯೆಗಳಾದ ಬಾಲ್ಯವಿವಾಹ, ವಿಧವಾ ವಿವಾಹ, ಅಧಿಕಾರಿ ವರ್ಗದ ದರ್ಪ, ಸ್ವಾರ್ಥ, ಮಾನವ ಸಂಬಂಧ, ಐತಿಹಾಸಿಕ, ಸಾಂಸ್ಕೃತಿಕ, ನಿಸರ್ಗದ ಕಲ್ಪನೆ, ಧರ್ಮ, ಆಚರಣೆ, ಮೂಢನಂಬಿಕೆ, ರಾಷ್ಟ್ರೀಯ ಪ್ರಜ್ಞೆ ಸಾವು-ನೋವು, ಪ್ರೀತಿ-ಪ್ರೇಮ ಮುಂತಾದ ವಸ್ತು ವಿಷಯವನ್ನು ತಮ್ಮ ಕಾದಂಬರಿಗಳಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಆದರೆ, ಯಾವಾಗ ಕಾದಂಬರಿಗಳು ಚಿತ್ರೋದ್ಯಮವನ್ನು ಪ್ರವೇಶಿಸಿದವೋ ಅಲ್ಲಿಂದ ಬೇರೆಯದೇ  ಆದ ಒಂದು ಪರಂಪರೆಯೇ ನಿರ್ಮಾಣವಾದಂತೆ ಕಂಡುಬರುತ್ತದೆ. ಉದಾಹರಣೆಗೆ ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ', 'ಅವಸ್ಥೆ', ಪ್ರಸಿದ್ಧ ಚಲನಚಿತ್ರಗಳಾಗಿವೆ. ಆದ್ದರಿಂದ ಕನ್ನಡ ಕಾದಂಬರಿಯಲ್ಲಿ ವಸ್ತು ವಿಷಯದ ದೃಷ್ಟಿಯಿಂದ ಕಾದಂಬರಿಗಳನ್ನು ಎರಡು ತೆರನಾಗಿ ವಿಂಗಡಿಸಿರುವುದನ್ನು ಗಮನಿಸಬಹುದು. ಒಂದು;  ಗಾಂಭಿರ್ಯತೆಯ ಕಾದಂಬರಿಗಳು ಇನ್ನೊಂದು, ಜನಪ್ರಿಯ ಕಾದಂಬರಿಗಳು. ಗಾಂಭೀರ್ಯತೆಯ ಕಾದಂಬರಿಗಳು ಸಂಸ್ಕೃತಿಯ ಚಿಂತನೆ, ದಲಿತರ ನೋವು-ನಲಿವು ಮತ್ತು ಐತಿಹಾಸಿಕ ಘಟನೆಗಳನ್ನು ಒಳಗೊಂಡಿದ್ದರೆ, ಜನಪ್ರಿಯ ಕಾದಂಬರಿಗಳು ವಾಸ್ತವ ಬದುಕಿನ ಚಿತ್ರಣ, ಪ್ರಸ್ತುತ ಘಟನೆ ದಾಖಲೆಗಳನ್ನು ಒಳಗೊಂಡಿವೆ. ಈ ಎರಡೂ ಭಾಗಗಳು ತಮ್ಮವೇ ಆದ ಅಸ್ತಿತ್ವವನ್ನು, ಓದುಗರನ್ನು ಹೊಂದಿದ್ದಾಗ್ಯೂ ತಾರತಮ್ಯ ಮನೋಭಾವದಿಂದ ಮಾತ್ರ ಬಿಡುಗಡೆ ದೊರೆಯದಿರುವುದು ನೋವಿನ ಸಂಗತಿ.

ವಿಶ್ವ ಸಾಹಿತ್ಯದಲ್ಲಿ ಕಾದಂಬರಿಗೆ ದೊರೆತ ಅದರದೇ ಆದ ವಿಶಿಷ್ಟ ಸ್ಥಾನದ ಜೊತೆಗೆ ಜನಪ್ರಿಯ ಓದಿನ ಮಾಧ್ಯಮವಾಗಿಯೂ ಪ್ರಸಿದ್ಧಿಯನ್ನು ಪಡೆದಿದೆ. ಈ ಹಿಂದೆ ಹೇಳಿದಂತೆ ಎರಡು ತೆರನಾಗಿ ಬರೆದ ವಿಶ್ವದ ಕೆಲವು ಮಹಾನ್ ಕಾದಂಬರಿಕಾರರೆಂದರೆ, ಟಾಲ್‌ಸ್ಟಾಯ್, ಚಿನುವಾ ಅಚಿಬೆ, ಪ್ರೇಮ್ ಚಂದರ್, ಥಾಮಸ್ ಹಾರ್ಡಿ, ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್, ಖುಷ್ವಂತ್ ಸಿಂಗ್ ಮುಂತಾದವರು. ಕನ್ನಡದಲ್ಲಿ ರಾವ್ ಬಹದ್ದೂರ್, ಶಿವರಾಮ ಕಾರಂತ, ಅನಕೃ, ತ.ರಾ.ಸು, ಶಾಂತಿನಾಥ ದೇಸಾಯಿ, ನಿರಂಜನ, ತೇಜಸ್ವಿ, ಅನಂತಮೂರ್ತಿ, ಬರಗೂರ ರಾಮಚಂದ್ರಪ್ಪ,

ನಾಗತೀಹಳ್ಳಿ ಚಂದ್ರಶೇಖರ, ಜೋಗಿ, ಭೈರಪ್ಪ, ಲಂಕೇಶ್ ಮುಂತಾದವರು ಪ್ರಮುಖ ಕಾದಂಬರಿಕಾರರ ಸಾಲಿನಲ್ಲಿ ಬರುತ್ತಾರೆ. ಈ ಸಾಲಿನ ಜನಪ್ರಿಯ ಬರಹಗಾರರಾಗಿ ರವಿ ಬೆಳಗೆರೆಯವರು ನಿಲ್ಲುತ್ತಾರೆ.

ರವಿ ಬೆಳಗೆರೆಯವರ ಕಾದಂಬರಿಗಳನ್ನು ಜನಪ್ರಿಯತೆಯ ದೃಷ್ಟಿಯಿಂದ ನೋಡಲಾಗುತ್ತದೆಯಾದರೂ, ಹಾಗೆ ನೋಡಲು ಕಾರಣವೇನು ಎಂದು ಮೇಲು ನೋಟಕ್ಕೆ ಹಲವಾರು ಕಾರಣಗಳನ್ನು ಗುರುತಿಸಬಹುದು. ಆಕರ್ಷಕ ಶೀರ್ಷಿಕೆ, ಪ್ರತ್ರಿಕೆಯ ಪ್ರಭಾವ, ಮಾರುಕಟ್ಟೆಯ ವ್ಯವಸ್ಥೆ, ಜನರ ಅಭಿರುಚಿ ಅಥವಾ ಯುವಜನತೆಯ ಕುರಿತ ಬರವಣಿಗೆ, ಸಾಮಾನ್ಯ ಬದುಕಿನ ಸಾಧಾರಣ ನಿರೂಪಣೆ, ಪತ್ರಿಕಾ ಧಾರಾವಾಹಿಯಾಗಿ ಪ್ರಕಟಗೊಂಡಿರುವುದರಿಂದ ಜನಮನ್ನಣೆ, ಗದ್ಯಕ್ಕೆ ವಿಶಿಷ್ಟ ಶೈಲಿಯನ್ನು, ಆಕ್ರೋಶಕ್ಕೆ ವ್ಯಂಗ್ಯ ಮತ್ತು ವಿನೋದಗಳ ಹೊಸ ರೂಪವನ್ನು ಹಾಗೂ ವಸ್ತು, ಅಭಿವ್ಯಕ್ತಿಗೆ ಹೊಸಮಾರ್ಗ ನಿರ್ಮಾಣ ಮಾಡಿರುವುದು ಮುಂತಾದವು. ಈ ಎಲ್ಲಾ ಕಾರಣಗಳಿಂದ ರವಿಯವರ ಬರಹಗಳು ಓದುಗರ ಗಮನವನ್ನು ಸೆಳೆದಿವೆ. ಪ್ರಸ್ತುತ ಕಾದಂಬರಿಗಳಲ್ಲಿ ಚಿತ್ರತವಾಗಿರುವ ಜನಜೀವನ ಒಂದು ನಿರ್ದಿಷ್ಟ ಸನ್ನಿವೇಶದಿಂದ ಆಧುನಿಕ, ಜಾಗತೀಕರಣ ದಿನಗಳಲ್ಲಿ ಕಾಣಲಾಗದ ಅನೇಕ ಸಂಗತಿಗಳ ಮೂಲಕವೇ ಬದುಕಿನ ಅನೇಕ ಪಾತ್ರಗಳು ಕಾದಂಬರಿಗಳಲ್ಲಿ ದಾಖಲಾಗಿವೆ. ಅವುಗಳು ಸೃಷ್ಟಿಸುತ್ತಿರುವ ಸೃಜನಶೀಲತೆಗಳು, ಬದುಕನ್ನು ಎದುರಿಸುತ್ತಿರುವಾಗ ಸಮಸ್ಯೆಗಳಿಗೆ ಮುಖಾಮುಖಿಯಾದ ಸಂಗತಿಗಳು ಅವುಗಳಿಗೆ ಪರಿಹಾರ ಕಂಡುಕೊಳ್ಳುವ ಪರಿ ಇತ್ಯಾದಿಗಳೆಲ್ಲವೂ ಕುತೂಹಲಿಗಳನ್ನಾಗಿಸಿವೆ.

ಮೂಲತಃ ಕಥಾ ಪ್ರಕಾರದಲ್ಲಿ ಗುರುತಿಸಿಕೊಂಡ ರವಿ ಬೆಳಗೆರೆಯವರು ಬರೆದ ಕಥೆಗಳು ಸಂಖ್ಯೆಯ ದೃಷ್ಟಿಯಿಂದ ಕಡಿಮೆಯಾದರೂ ಉತ್ತಮ ಕಥೆಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ಕನ್ನಡ ಕಥೆಗಾರರ ಸಾಲಿನಲ್ಲಿ ಒಬ್ಬರಾಗಿ ತಮ್ಮದೇ ಆದ ಒಂದು ಸ್ಥಾನವನ್ನು ಕಾಯ್ದಿರಿಸಿಕೊಂಡಿದ್ದಾರೆ. ಆದರೆ, ಕಥೆಗಾರರಾಗಿ ಅವರು ತುಂಬ ದಿನ ಮುಂದುವರೆಯಲಾಗಲಿಲ್ಲ. ಮುಂದುವರೆಯಲಿಲ್ಲ ಎಂದರೆ ಅವರ ಬರವಣಿಗೆ ಸ್ಥಗಿತಗೊಂಡಿತೆಂದೇನೂ ಅಲ್ಲ. ಕಥೆಗಾರರಾಗಿ ಕಳೆದುಹೋದ ಅವರು ಸಾಹಿತ್ಯದ ಬೇರೆ ಬೇರೆ ಪ್ರಕಾರಗಳೆಡೆಗೆ ಆಸಕ್ತಿಯನ್ನು ತೋರಿದ್ದಾರೆ. ಅದರ ಫಲವೇ ಕಾದಂಬರಿ, ಅನುವಾದ, ಅಂಕಣ, ಪ್ರವಾಸ, ಪತ್ರಸಾಹಿತ್ಯ ಮತ್ತು ಕ್ರೈಮ್ ಮುಂತಾದವುಗಳು. ಕನ್ನಡದಲ್ಲಿ ಕ್ರೈಮ್ ಅನ್ನು ಸಾಹಿತ್ಯದ ಒಂದು ಭಾಗವೇನೋ ಎಂಬಂತೆ ಬರೆದರು, ಅದನ್ನು ಸಾಹಿತ್ಯದ ಪ್ರಕಾರವಾಗಿಸ ಹೊರಟವರಲ್ಲಿ ಇವರೇ ಮೊದಲಿಗರು. ಅದರಲ್ಲೂ ಕ್ರೈಮ್ ಅನ್ನು ವಿಜೃಂಭಿಸಿ ಬರೆದರು. ಬಹುಶಃ ಇದೇ ಬಹುಮುಖ್ಯ ಕಾರಣವಿರಬೇಕು ವಿಮರ್ಶಕರು ಅವರ ಬರಹಗಳೆಡೆಗೆ ಅಸಡ್ಡೆ ತೋರುವಂತಾಗಲು. ಆ ಕಾರಣಕ್ಕಾಗಿಯೇ ಇಲ್ಲಿಯವರೆಗೂ ಅವರ ಬರಹಗಳ ಬಗ್ಗೆ ಒಂದೂ ಅಧ್ಯಯನ ನಡೆದಿಲ್ಲ, ವಿಮರ್ಶಕರು ಅವರನ್ನು ಒಬ್ಬ ಸಾಹಿತ್ಯಕ ಬರಹಗಾರನೆಂಬುದನ್ನು ಗುರುತಿಸುವ ಪ್ರಯತ್ನವನ್ನೂ ಮಾಡಲಿಲ್ಲ. ಆ ಪ್ರಯತ್ನದ ಭಾಗವಾಗಿ ಇದು ಮೊದಲ ಹೆಜ್ಜೆ.

ಕಥೆಗಳಿಂದ ಕಳಚಿಕೊಂಡ ರವಿಯವರು ಅಷ್ಟೇ ಆಸಕ್ತಿಯಿಂದ ಕೈಗೊಂಡ ಸಾಹಿತ್ಯಿಕ ಕೃಷಿ ಎಂದರೆ ಕಾದಂಬರಿ ಪ್ರಕಾರ. ಅವರ ಕಾದಂಬರಿಗಳನ್ನು ಕನ್ನಡದ ಯಾವುದಾದರೂ ಒಂದು ಪಂಥಕ್ಕೆ ಸೇರಿಸುವುದು ಕಷ್ಟಸಾಧ್ಯವಾದರೂ ಅಧ್ಯಯನದ ದೃಷ್ಟಿಯಿಂದ ನಾಲ್ಕು ವಿಭಾಗಗಳಲ್ಲಿ ವಿಂಗಡಿಸಿಕೊಂಡು ಪರಿಚಯಿಸಿಕೊಂಡರೇ ಅಲ್ಪ ಮಟ್ಟಿಗೆ ಸುಲಭವಾದಿತು. ಆದರೆ ಗೆರೆ ಕೊರೆದಂತೆ ಇದು ಇದರ ವ್ಯಾಪ್ತಿಯಲ್ಲೇ ಬರುತ್ತದೆ ಮತ್ತು ಇರುತ್ತದೆ ಎಂದು ಹೇಳುವುದು ಕಷ್ಟ ಅವುಗಳೆಂದರೆ.

೩.೩.೧. ಪ್ರೀತಿ–ಪ್ರೇಮ ಸಂಬಂಧಿತ ಕಾದಂಬರಿಗಳು
೩.೩.೨. ವಾಮಚಾರ ಆಧಾರಿತ ಕಾದಂಬರಿಗಳು
೩.೩.೩. ಅಪರಾಧಿ(ಕ್ರೈಮ್) ಸಂಬಂಧಿತ ಕಾದಂಬರಿಗಳು
೩.೩.೪. ಇತರೆ ಕಾದಂಬರಿಗಳು

ಈ ನಾಲ್ಕು ಭಾಗಗಳಲ್ಲಿ ಅವರ ಕಾದಂಬರಿಗಳನ್ನು ಗಮನಿಸಿದರೆ ಅದು ಅಧ್ಯಯನ ದೃಷ್ಟಿಯಿಂದ ಸಹಾಯಕಾರಿಯಾದಿತು ಮತ್ತು ಅವರ ಕಾದಂಬರಿಗಳ ಪರಿಚಯಾತ್ಮಕ ವಿಶ್ಲೇಷಣೆಗೆ ಅನುಕೂಲವಾದಿತೆಂದು ಈ ರೀತಿಯಲ್ಲಿ ವಿಭಾಗಿಸಿಕೊಳ್ಳಲಾಗಿದೆ.

**೩.೩.೧. ಪ್ರೀತಿ–ಪ್ರೇಮ ಸಂಬಂಧಿತ ಕಾದಂಬರಿಗಳು**

ಒಂದು ಪ್ರೀತಿ ಉದ್ಭವವಾಗಲಿಕ್ಕೆ ನೂರು ಜರೂರತ್ತುಗಳು ಸೃಷ್ಟಿಯಾಗಬೇಕು, ಕನಸುಗಳ ಫಸಲು ಎದ್ದು ನಿಲ್ಲಬೇಕು. ಒಬ್ಬರನ್ನೊಬ್ಬರು ಜೀವನ ಪರ್ಯಂತ ಭರಿಸುತ್ತೇವೆಂಬ ನಂಬಿಕೆ ಹುಟ್ಟಿದರೆ ಸಾಲದು ಭರಿಸಲೇಬೇಕೆಂಬ ತೀರ್ಮಾನ ಮಾಡಿಕೊಂಡರೂ ಸಾಲದು. ಪ್ರೀತಿಯೆಂದರೆ ಒಬ್ಬರನ್ನೊಬ್ಬರು ಕೇವಲ ಭರಿಸುವಂತಹದ್ದಲ್ಲ. ಪ್ರೀತಿ ತಬ್ಬುಗೆಯಲ್ಲ ಪ್ರೀತಿ ಉನ್ಮಾದವೂ ಅಲ್ಲ. ಪ್ರೀತಿ ನಿಟ್ಟುಸಿರಂತೂ ಅಲ್ಲವೇ ಅಲ್ಲ. ಅದು ಸದ್ದಿಲ್ಲದೆ ಘಟಿಸುವ ಸಂಗತಿಯಾಗಿದೆ. ಪ್ರೀತಿ–ಪ್ರೇಮದ ವಿಷಯದಲ್ಲಿ ರವಿ ಬೆಳಗೆರೆಯವರ ಲೇಖನಿಗೆ ವೇಗಹೆಚ್ಚು. ಇಂದಿಗೂ ಅವರ ಲೇಖನಿಗೆ ಹದಿನಾರು ವಯಸ್ಸು. ಪ್ರೀತಿ–ಪ್ರೇಮದ ಬಗೆಗೆ ಕಾದಂಬರಿಗಳಷ್ಟೇ ಅಲ್ಲ 'ಹಾಯ್ ಬೆಂಗಳೂರ್!' ಪತ್ರಿಕೆಯಲ್ಲಿ ವಾರಕ್ಕೊಂದರಂತೆ 'ಲವ್‌ಲವಿಕೆ' ಎಂಬ ಅಂಕಣದ ಮೂಲಕ ಪ್ರೇಮಿಗಳಿಗಾಗಿಯೇ ಅನೇಕ ಪ್ರೇಮ ಪತ್ರಗಳನ್ನು ಬರಿದಿದ್ದಾರೆ. ಅವು ಅದೇ ಹೆಸರಿನಲ್ಲಿ ನಾಲ್ಕು ಭಾಗದಲ್ಲಿ ಪ್ರಕಟಣೆಯೂ ಕಂಡಿವೆ. ಅಂದ ಮೇಲೆ ಪ್ರೀತಿ–ಪ್ರೇಮ ಕುರಿತ ಅವರ ಬರವಣಿಗೆ ಹೇಗಿದ್ದಿತು ಎಂಬುದು ಅರಿಯಲು ಇನ್ನೂ ಸುಲಭವೆನಿಸುತ್ತದೆ. ಆದ್ದರಿಂದ ರವಿ ಬೆಳಗೆರೆಯವರ 'ಹೇಳಿ ಹೋಗು ಕಾರಣ' ಕಾದಂಬರಿಯ ಪ್ರಮುಖ ಪಾತ್ರ 'ಪ್ರಾರ್ಥನಾ' ತನ್ನ ತಂದೆ ಮತ್ತು ಅತ್ತಿಗೆಯ ಸಂಬಂಧ ತಿಳಿದು ದ್ವೇಷಿಸುತ್ತ ಮುಂದೆ ಏನು ಎಂಬುದನ್ನು ಯೋಚಿಸದೆ ಮನೆ ಬಿಟ್ಟು ಹೊರ ನಡೆಯುತ್ತಾಳೆ. ಆಗ ಪರಿಚಯವಾಗುವವನೆ ಹಿಮವಂತ. ಈತನ ಪರಿಚಯವಾದ ಮೇಲೆ ಮುಂದಿನ ಗೊತ್ತು ಗುರಿ ಇಲ್ಲದೇ ಚನ್ನರಾಯಪಟ್ಟಣದಿಂದ ಮಧ್ಯರಾತ್ರಿಯಲ್ಲೇ ಅವನ ಜೊತೆ ನಡೆದುಕೊಂಡು ಶಿವಮೊಗ್ಗೆಯನ್ನು ತಲುಪುತ್ತಾಳೆ. ಪ್ರಾರ್ಥನಾಳ ಕಾಲ ಹೆಬ್ಬೆರಳು ಒಡೆದು ರಕ್ತ ಸೋರುತ್ತಿರುವುದನ್ನು ಕಂಡ ಹಿಮವಂತ ಯಾವ ಜನ್ಮದ ಋಣಾನುಬಂಧವೋ ಗೊತ್ತಿಲ್ಲ, ಪ್ರಾರ್ಥನಾಳಿಗೆ ಧೈರ್ಯ ತುಂಬುತ್ತಾನೆ. ಮಿಠಾಯಿ ಮಾರುವವನೊಂದಿಗೆ ಇಲ್ಲಿ ಯಾವುದೇ ರೀತಿಯ ಪ್ರೀತಿ, ಪರಿಚಯಗಳಿರದಿದ್ದರು ಮಾನವೀಯ ಸಂಬಂಧವನ್ನು ಕಾಣಬಹುದು.

ಒಂದು ಹೆಣ್ಣು ಅಪರಿಚಿತರೊಂದಿಗೆ ಅದರಲ್ಲೂ ಗಂಡಸರೊಂದಿಗೆ ಹೊರಗಡೆ ಹೋಗಬೇಕಾಗಿ ಬಂದಾಗ ನೂರಾರು ಬಗೆಯಲ್ಲಿ ವಿಚಾರಿಸುವ ಮನೋಭಾವದವರಿರುವಾಗ, ಇದ್ಯಾವುದನ್ನೂ ಪರಿಗಣಿಸದೆ ಪ್ರಾರ್ಥನಾ ಶಿವಮೊಗ್ಗದಲ್ಲಿ ಬಾಡಿಗೆಗಿದ್ದ ಶಾಂತಯ್ಯನವರ ಮನೆಗೆ ಹಿಮವಂತನೊಂದಿಗೆ ಬಂದು ತಲುಪಿದಳು. ಇಬ್ಬರಲ್ಲಿಯೂ ಯಾವುದೇ ಸಂಕೋಚ, ಅಭದ್ರತೆಯ ಮನೋಭಾವವಿಲ್ಲದೆ ಒಬ್ಬರನ್ನೊಬ್ಬರು ತುಂಬಾ ಅರ್ಥ ಮಾಡಿಕೊಂಡವರಂತೆ ಇರುತ್ತಾರೆ. ಇಬ್ಬರೇ ಇರುವ ಆ ಮನೆಯಲ್ಲಿ ಬಟ್ಟೆ ಬದಲಿಸಿಕೊಳ್ಳಲು ಹೇಳಿದಾಗ ಅಭದ್ರತೆಯ ನೆರಳಿಲ್ಲದೆ ಹೀಗೆ ಹೇಳುತ್ತಾಳೆ. 'ಲುಂಗಿ ನೀನೇ

ಉಟ್ಟುಕೋ ನಾನು ಪೆಟ್ಟೆಕೊಟಿನ ಮೇಲೆ ಜುಬ್ಬಾ ಹಾಕಿಕೊಳತೀನಿ. ಹೆಂಗಸರು ಸಂಕೋಚ ಮಾಡಿಕೊಂಡು ಲೈಟು ಆರಿಸೋದಿಲ್ಲ ಹೆದರಿಕೊಂಡು ದೀಪ ತೆಗೀತಾರೆ. ನಂಗೆ ನಿನ್ನ ಬಗ್ಗೆ ಹೆದರಿಕೆಗಳಿಲ್ಲ. ನನ್ನ ಬಗ್ಗೆ ನಂಬಿಕೆಯಿದೆ" ಅಂದವಳೆ ದೀಪದ ಬೆಳಕಿನಲ್ಲೇ ಸಂಕೋಚವಿಲ್ಲದೆ, ಭಯವಿಲ್ಲದೆ ಬಟ್ಟೆ ಬದಲಿಸುತ್ತಾಳೆ. ಮಾನವ ಸಂಬಂಧಗಳ ಬೆಸುಗೆ ಯಾವ ರೀತಿಯಲ್ಲಿ ಬೆಸೆದುಕೊಳ್ಳುತ್ತದೆಯೋ ತಿಳಿಯದು. ಒಂದಿಲ್ಲೊಂದು ಘಟನೆಯಿಂದ ಅಪರಿಚಿತರು ಪರಿಚಿತವಾಗಿ ಇಷ್ಟೊಂದು ನಂಬಿಕೆ, ಅಭಿಮಾನ, ಗೌರವ, ಆತ್ಮವಿಶ್ವಾಸದಿಂದಿರಲು ಸಾಧ್ಯ ಮತ್ತು ಸಾಧ್ಯವಾಗಿಸಿಕೊಳ್ಳಬಹುದು ಎಂಬುದನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ಇದೆಲ್ಲವೂ ಸಾಧ್ಯವಿದ್ದಾಗ್ಯೂ ನಿರ್ದಯಿ ಮನಸುಗಳು ನಮ್ಮ ಮಧ್ಯೆ ಸೇರಿಬಿಟ್ಟಿರುತ್ತವೆ. ಈ ಮಾತಿಗೆ ಪುಷ್ಟಿಕೊಂಡುವಂತೆಯೇ ಈ ಕಾದಂಬರಿಯ ಮುಖ್ಯ ಪಾತ್ರವಾದ ಪ್ರಾರ್ಥನಾ ಹಿಮವಂತನೊಂದಿಗೆ ಅಂಟಿಕೊಂಡು ಸಾಗುವ ಪಾತ್ರ ಇದ್ದಕ್ಕಿದ್ದ ಹಾಗೆ ತಿರುವು ಪಡೆದು ನಿಜಕ್ಕೂ ಪ್ರಾರ್ಥನಾಳಷ್ಟು ನಿರ್ದಯಿ ಹುಡುಗೀರಿರ್‍ತಾರಾ? ಎನಿಸುತ್ತದೆ. 'ಒಮ್ಮೆ ಅವಳ ಕಣ್ಣುಗಳನ್ನೇ ದಿಟ್ಟಿಸಿ ನೋಡಿದ ಆಮೇಲೆ ಅವಳ ಎರಡು ಕೈಗಳನ್ನು ತನ್ನ ಕೈಗಳಿಗೆ ತೆಗೆದುಕೊಂಡ ಅದೇಕೆ ಹಾಗೆ ಕೇಳಿದನೋ ಬಹುಶಃ ಅವನಿಗೂ ಗೊತ್ತಿರಲಾರದು: "ಪ್ರಾರ್ಥನಾ ನೀನು ನಂಗೆ ಮೋಸ ಮಾಡೋದಿಲ್ಲ ಅಲ್ವಾ?" ಅಂದುಬಿಟ್ಟ "ದೇವರಿಗಾ...?" ಅಂದವಳ ಕಣ್ಣು ಧಾರಾಕಾರ' ತಾನೊಂದು ಘೋರ ವಂಚನೆಗೆ ಬುನಾದಿ ಹಾಕುತ್ತಿದ್ದಾಳೆಂಬುದರ ಅರಿವೂ ಇಲ್ಲದೆ ಭರವಸೆಯ ಮಾತನಾಡಿದ ಪ್ರಾರ್ಥನಾ ಮುಂದೆ ದೇಬಶಿಶುವಿನೊಂದಿಗೆ ನಡೆದುಬಿಡುತ್ತಾಳೆ. 'ಗಂಡಸಿನ ನಸೀಬು ಹೆಂಗಸಿನ ನಿಯತ್ತು ಯಾವತ್ತು ಬದಲಾಗುತ್ತದೋ ಬಲ್ಲವರ್‍ಯಾರು?' ಎಂಬ ಯುಕ್ತಿಯಂತೆ ಪ್ರಾರ್ಥನಾಳ ಪ್ರೀತಿ ದೇಬಶಿಶುನತ್ತ ವಾಲುತ್ತದೆ. ದೇಬಶಿಶುವನ್ನು ಮದುವೆಯಾದರೆ ಯಾವುದೋ ದೇಶದ  ಹೆಸರಾಂತ ವಿಶ್ವವಿದ್ಯಾಲಯದಲ್ಲಿ ಡಾ.ದೇಬಶಿಶು ಮತ್ತು ಡಾ.ಪ್ರಾರ್ಥನಾ ದಂಪತಿಗಳು ಎಂಬ ಎರಡು ದೊಡ್ಡ ಪದವಿ ತೆಗೆದುಕೊಂಡು ಭಾರತಕ್ಕೆ ಹಿಂತಿರುಗುತ್ತಿರುವ ದೃಶ್ಯವನ್ನು ಎಂದು ಕಲ್ಪಿಸಿಕೊಂಡು ತಬ್ಬಿಬ್ಬಾದಳೋ ಅಂದೇ ಅವಳು ಹಿಮವಂತನನ್ನು ಮರೆಯಲು ಪ್ರಯತ್ನಿಸುತ್ತಿದ್ದಳು. ಅಂದಿನಿಂದಲೇ ದೇಬಶಿಶುವನ್ನೇ ಮದುವೆಯಾಗಲು ನಿರ್ಧರಿಸಿ, ಮದುವೆಯಾಗುತ್ತಾಳೆ.

ರವಿಯವರ 'ನೀ ಹಿಂಗ ನೋಡಬ್ಯಾಡ ನನ್ನ' ಕಾದಂಬರಿಯ ಪ್ರಮುಖ ಪಾತ್ರ ಶಿಶಿರಚಂದ್ರ ಮತ್ತು ಶ್ರಾವಣಿಯದು. ಪವರ್ ಟವರ್ಸ್‌ನ ಮಾಲಿಕ ಜಗನ್ಮೋಹನರಾವ್‌ನ ಏಕಮಾತ್ರ ಪುತ್ರಿ, ಇದು ಸಮಾಜದ ಜನರಿಗೆ ಗೊತ್ತಿರುವ ವಿಚಾರ. ಆದರೆ ಶ್ರಾವಣಿ, ತಾಯಿಯ ಅಕ್ರಮ ಸಂಬಂಧದಿಂದ ಜನಿಸಿರುತ್ತಾಳೆ. ಅದು ತಾಯಿ ಮತ್ತು ಮನೆಯವರಿಗೆ ಮಾತ್ರ ಗೊತ್ತಿರುವ ವಿಚಾರ. ಆದರೆ, ಕಾದಂಬರಿ ಸಮಾಜದ ವಿಚಾರದಲ್ಲಿ ಅವಳು ಆಗರ್ಭ ಶ್ರೀಮಂತನ ಮಗಳು. ಅಂತೆಯೇ ಶಿರಚಂದ್ರನು ಸಹ ಒಬ್ಬ ಸೂಳೆಯ ಮಗ. ಪ್ರೀತಿ ಎಂಬುದು ಸದ್ದಿಲ್ಲದೆ ಸಂಭವಿಸುವ ಸಂಗತಿ ಎಂಬುದು ಈ ಕಾದಂಬರಿಯ ವಿಷಯದಲ್ಲಿ ನೂರಕ್ಕೆ ನೂರರಷ್ಟು ಒಪ್ಪುವ ಸಂಗತಿಯಾಗಿದೆ. ಶ್ರಾವಣಿ ಹಾರ್ಡಿ ಜೇಮ್ಸ್ ಕಾಲೇಜಿನ ವಿದ್ಯಾರ್ಥಿನಿ: ಶಿಶಿರಚಂದ್ರನೂ. ಇವಳ ಗೆಳತಿ ವಳ್ಳಿ, ಶಿಶರಚಂದ್ರನ ಬಗ್ಗೆ ಮಾತನಾಡುತ್ತಿರುತ್ತಾಳೆ. ಶ್ರಾವಣಿ ತುಂಬಾ ಸುಂದರ ಯುವತಿ, ಗೆಳತಿಯರೊಂದಿಗೆ ಬಂದು ಅವರ ಜೊತೆಯಲ್ಲೇ ಮರಳಿ ಹೋಗುತ್ತಿದ್ದಳು. ಒಂದು ದಿನ ಶ್ರಾವಣಿ ಶಿಶಿರಚಂದ್ರನ ಕಣ್ಣಿಗೆ ಬಿದ್ದಳು. ಶಿಶಿರಗೆ ಯಾವಾಗಲೂ ಬೆಟ್ ಕಟ್ಟುವ ಹಂಬಲ. ಮೂರು ವರ್ಷ ಡಿಗ್ರಿ ಮುಗಿಯುವುದರೊಳಗೆ

ಇವಳನ್ನು ಲವ್ ಮಾಡುತ್ತೇನೆ ಎಂದು ಗೆಳೆಯರೊಂದಿಗೆ ಬೆಟ್ ಕಟ್ಟಿದ. ಇದರ ಹಿಂದೆ ಶ್ರಾವಣಿ ಮನೆಯಲ್ಲಿದ್ದ ಗಿರಿ ಅಂಕಲ್ ಕೈವಾಡವು ಇತ್ತು. ಶಿಶಿರ ಒಬ್ಬ ವೇಶ್ಯೆಯ ಮಗನಾಗಿದ್ದನಲ್ಲದೆ, ಕಳ್ಳತನದಲ್ಲಿಯೂ ಚಾಣಾಕ್ಷನಾಗಿದ್ದ. ಈ ಎರಡು(ಹೇಳಿ ಹೋಗು ಕಾರಣ ಮತ್ತು ನೀ ಹಿಂಗ ನೋಡಬೇಡ ನನ್ನ) ಕಾದಂಬರಿಗಳಲ್ಲಿ ಸ್ತ್ರೀ ಪಾತ್ರದಲ್ಲಿ ಸಾಮಾನ್ಯವಾಗಿ ಕೆಲವೊಂದು ಭಿನ್ನತೆಗಳನ್ನು ಗುರುತಿಸಬಹುದು. ಹೇಳಿ ಹೋಗು ಕಾರಣ ಕಾದಂಬರಿಯ ಪ್ರಾರ್ಥನಾ ಬಡತನದಲ್ಲಿ ಹುಟ್ಟಿ ಗೆಳೆಯನೊಂದಿಗೆ ಕೂಡಿ ಪ್ರೀತಿಗೆ ಪಾತ್ರಳಾಗುತ್ತಾಳೆ. ಆದರೆ, ನೀ ಹಿಂಗ ನೋಡಬ್ಯಾಡ ನನ್ನ ಕಾದಂಬರಿಯ ಶ್ರಾವಣಿ ಶ್ರೀಮಂತ ವರ್ಗಕ್ಕೆ ಸೇರಿದವಳು. ಆದರೆ ಆಕೆಯಲ್ಲಿ ಶ್ರೀಮಂತಿಕೆಯ ಗರ್ವವಿಲ್ಲ. ಆದರೆ ತಾನು ಶಿಶಿರಚಂದ್ರನನ್ನು ಅದೂ ಸರಗಳ್ಳನನ್ನು ಪ್ರೀತಿಸಬಹುದಾ ಎಂಬುದನ್ನು ಯೋಚಿಸದೆ ತನಗರಿವಿಲ್ಲದಂತೆ ಪ್ರೀತಿಯಲ್ಲಿ ತನ್ಮಯಳಾಗಿರುವುದು ಕಂಡುಬರುತ್ತದೆ. ಶ್ರಾವಣಿ ಮನಸ್ಸಿನಲ್ಲೇ ಪ್ರೀತಿಯನ್ನು ಅದುಮಿಡುತ್ತಾಳೆ. ಪ್ರಾರ್ಥನಾ ಬಹಿರಂಗವಾಗಿ ವ್ಯಕ್ತಪಡಿಸುತ್ತಾಳೆ. ಪ್ರೀತಿ ಯಾವುದೇ ಒಂದು ಕ್ಷಣದಲ್ಲಿ ಬೇಕಾದರೂ ಹುಟ್ಟಿಕೊಳ್ಳಬಹುದು ಎಂಬ ಸಾಮಾನ್ಯ ಗ್ರಹಿಕೆಯನ್ನು ಎರಡು ಕಾದಂಬರಿಗಳ ಸ್ತ್ರೀ ಪಾತ್ರಗಳು ಪುಷ್ಟಿಕರಿಸುತ್ತವೆ. ಪ್ರೀತಿ ಉದ್ಭವವಾಗಲಿಕ್ಕೆ ಯಾವುದೇ ಜಾತಿ, ಆಸ್ತಿ, ಅಂತಸ್ತು, ಮೇಲು ಕೀಳು, ಸೌಂದರ್ಯ, ಪ್ರತಿಷ್ಠೆ ಇದ್ಯಾವುದು ಅಷ್ಟೊಂದು ಮಹತ್ವವನ್ನು ಪಡೆದುಕೊಳ್ಳುವುದಿಲ್ಲ ಎಂಬುದನ್ನು ರವಿಯವರು ತಮ್ಮ ಕಾದಂಬರಿಯಲ್ಲಿ ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ.

ಅಂತೆಯೇ ಅವರ ಸೃಷ್ಟಿಯ ಪಾತ್ರಗಳಲ್ಲಿ ವಿಲಕ್ಷಣ ಪ್ರವೃತ್ತಿಯ ಮನಸ್ಥಿತಿಯವರನ್ನು ಕಾಣಬಹುದಾಗಿದೆ. ಅದಕ್ಕೆ ಉತ್ತಮ ಉದಾಹರಣೆ ಎಂದರೆ ಹೇಳಿ ಹೋಗು ಕಾರಣ ಕಾದಂಬರಿಯ 'ಊರ್ಮಿಳಾ'. ರವಿಯವರು ಈ ಪಾತ್ರದ ಮೂಲಕ ಒಂದು ಹೆಣ್ಣು ಮಾನಸಿಕವಾಗಿ ಆಘಾತಕ್ಕೆ ಒಳಗಾದಾಗ ಆಕೆಯ ವರ್ತನೆಯಲ್ಲಾಗುವ ಬದಲಾವಣೆಗಳನ್ನು ಚಿತ್ರಿಸಿದ್ದಾರೆ. ಸುಜೋತ ಮಲ್ಹೋತ್ರನ ಪ್ರೀತಿಯಿಂದ ತಿರಸ್ಕೃತಳಾದ ಊರ್ಮಿಳೆಯ ವರ್ತನೆ, ಬಯಕೆ, ಆಸೆ-ಆಕಾಂಕ್ಷೆಗಳೆ ಬೇರೆಯಾಗಿ ಮಾರ್ಪಟ್ಟಿದ್ದನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಮುಂದೆ ಆಕೆ ಆ ಆಘಾತದಿಂದ ಹೊರಬರಲೆಂದು ಅವಳ ಕುಟುಂಬ ಸದಸ್ಯರು ಆಕೆಯ ಆಸೆಯಂತೆ ನಡೆಯಲು ಬಿಡುವುದು ಮತ್ತು ಅದರಿಂದ ಮುಂದಿನ ದಿನಗಳಲ್ಲಿ ಅವಳ ಮಾನಸಿಕ ಸ್ಥೀಮಿತಕ್ಕೆ ಬರುವುದನ್ನು ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ರವಿಯವರ ಮತ್ತೊಂದು ಕಾದಂಬರಿ 'ನೀ ಹಿಂಗ ನೋಡ ಬ್ಯಾಡ ನನ್ನ'ದಲ್ಲಿ ಈ ರೀತಿಯ ಪಾತ್ರ ತರದೆ ಇರುವುದನ್ನು ಗಮನಿಸಬಹುದಾಗಿದೆ. ಮಾನಸಿಕ ಅಸ್ಥಿಮಿತತೆ ಎನ್ನುವುದು ಹೆಣ್ಣು ಮತ್ತು ಗಂಡಿನ ಜೀವನದಲ್ಲಿ ಅಷ್ಟೇ ಮಹತ್ವದ್ದು. ಆದರೆ ರವಿಯವರು ಸ್ತ್ರೀ ಪಾತ್ರದಲ್ಲಿ ಮಾತ್ರ ಈ ಅಸ್ಥಿಮಿತತೆಯನ್ನು ತಂದಿರುವುದನ್ನು ಗಮನಿಸಿದರೆ ಸ್ತ್ರೀಯರು ಮಾನಸಿಕವಾಗಿ ಎಷ್ಟೊಂದು ಜರ್ಝರಿತರಾಗಿರುತ್ತಾರೆ ಎಂಬುದನ್ನು ಅರಿತುಕೊಳ್ಳಬಹುದು.

ಈ ಜರ್ಝರಿತ ಮನಸ್ಥಿತಿಯ ಕಾರಣದಿಂದಲೋ ಏನೋ ಊರ್ಮಿಳೆ ತನ್ನ ವಿಲಕ್ಷಣ ಮನಸ್ಥಿತಿಯ ಸ್ವರೂಪವನ್ನು ವ್ಯಕ್ತಪಡಿಸುವ ಬಗೆ ಹೀಗಿದೆ. 'ಆದರೆ ನಿಂಗೊತ್ತಾ ಪ್ರಾರ್ಥನಾ? I want to live like a prostitute. ಸೂಳೆ ಥರಾ ಬದುಕಬೇಕು ಅಂತ ನಂಗೆ ತುಂಬ ಸಲ ಆಸೆಯಾಗುತ್ತೆ. ಸೂಳೆಗೆ ಗಂಡ ಇರಲ್ಲ, ಅಡುಗೆ ಇರಲ್ಲ. ಯಾರಿಗೂ ಕಾಯಬೇಕಾಗಿಲ್ಲ. ಮಕ್ಕಳೇ ಹುಟ್ಟೋದಿಲ್ಲ. ಅತ್ತೆಯ ಕಾಟವಿರೋದಿಲ್ಲ, ಮಾವನ ಅಂಕೆಯಿರೋದಿಲ್ಲ. ಸೂಳೆ ಈಜ್

ಇಂಡಿಪೆಂಡೆಂಟ್. ಎಲ್ಲಕ್ಕಿಂತ ಮುಖ್ಯವಾಗಿ, ಸೂಳೆಗೆ ಡಾಕ್ಟರಾಗಲೇಬೇಕು ಅಂತ ಒತ್ತಾಯವಿರೋದಿಲ್ಲ. I hate to be a doctor!' ಅದೊಂದು ರಾತ್ರಿ ಊರ್ಮಿಳಾ ಹಾಗೆ ಮಾತನಾಡಿ, ಸಿಗರೇಟು ಅರ್ಧಕ್ಕೆ ಮುರಿದು ಹಾಕಿ ಮಲಗಿ ಬಿಟ್ಟದ್ದಳು'.[೭] ವ್ಯಕ್ತಿತ್ವದ ಅನುಸಂಧಾನ ಬಹಳ ಜಟಿಲವಾದುದು. ಪ್ರತಿಯೊಬ್ಬ ಮನುಷ್ಯನಿಗೂ ತನ್ನದೇ ಆದ ಸಹಜ ಪ್ರವೃತ್ತಿಗಳು, ಬುದ್ಧಿ ಸಾಮರ್ಥ್ಯಗಳು, ಆಲೋಚನಾ ವಿಧಾನಗಳು, ಆಸಕ್ತಿ ಹಾಗೂ ಅಭಿವ್ಯಕ್ತಿಗಳೂ ಇರುತ್ತವೆ. ಅದು ಬಹಳ ಮಟ್ಟಿಗೆ ಸ್ವಯಾರ್ಜಿತ. ತನ್ನತನದ, ವ್ಯಕ್ತಿತ್ವದ ಬಹುಮುಖ್ಯ ಲಕ್ಷಣ. ಆದರೆ, ಸಾಮಾಜಿಕ ಜೀವಿಗೆ ಊರ್ಮಿಳಾ ವಿರೋಧಿಸುವ ಎಲ್ಲವೂ ಅವಶ್ಯ. ಅದನ್ನು ಅವಳು ಒಪ್ಪಿ ಬದುಕಿದರು ಮನಸು ಆ ಕ್ರಿಯೆಗೆ ಸಿದ್ಧವಿಲ್ಲ. ಅದು ಅವಳ ಜರ್ಝರಿತ, ಬಲಹೀನ ಮನಸ್ಸಿನ ಸ್ಥಿತಿ. ಒಂದು ಹೆಣ್ಣಿನ ಭಾವನೆಗಳು ಮತ್ತೊಂದು ಹೆಣ್ಣಿಗೆ ಅರ್ಥವಾಗುತ್ತವೆ ಎಂಬುದನ್ನು ತಿರಸ್ಕರಿಸಿದ ರವಿಯವರು, ತಮ್ಮ ಒಡನಾಡಿಗಳ ಭಾವನೆಗಳೇ ಅರ್ಥವಾಗದಂತೆ ಚಿತ್ರಿಸಿದ್ದಾರೆ. ಅವರು ಯಾಕೆ ಈ ಪಾತ್ರಕ್ಕೆ ಇಷ್ಟೊಂದು ಜೀವ ತುಂಬಿ ವಿಲಕ್ಷಣ ವರ್ತನೆಗೆ ಒಳಗಾಗುವಂತೆ ಮಾಡಿದ್ದಾರೆ ಎಂಬುದು ಅರ್ಥವಾಗದ ಸಂಗತಿ.

ಕೌಟುಂಬಿಕ ವ್ಯವಸ್ಥೆಯಲ್ಲಿ ಪುರುಷರಿಗೆ ಪ್ರಾಧಾನ್ಯತೆ ಇರುವುದು. ಇಡೀ ಕುಟುಂಬದ ಜವಾಬ್ದಾರಿ ಆತನ ಹಿಡಿತದಲ್ಲಿರುತ್ತದೆ. ಪುರುಷರಿಗೆ ಯಾವುದೇ ಸಾಮಾಜಿಕ ಕಟ್ಟಳೆಗಳು ಅಥವಾ ನಿರ್ಬಂಧಗಳಿರುವುದಿಲ್ಲ. ಆತ ಎಲ್ಲದರಿಂದಲೂ ಸ್ವತಂತ್ರನಾಗಿರುತ್ತಾನೆ. ಆದರೆ, ಸ್ತ್ರೀ ಮಾತ್ರ ಆತನ ಅಧೀನಳಾಗಿರುತ್ತಾಳೆ. ಇದು ಸಾಮಾನ್ಯವಾಗಿ ಕಂಡುಬರುವ ಸಾಮಾಜಿಕ ವ್ಯವಸ್ಥೆ. ಅಲ್ಲಿ ಸ್ತ್ರೀ ಕೇವಲ ಮೂಖ ಪ್ರೇಕ್ಷಕಳು. ಆದರೆ, ರವಿಯವರ 'ಹೇಳಿ ಹೋಗು ಕಾರಣ' ಕಾದಂಬರಿಯಲ್ಲಿ ಪುರುಷನ ಪ್ರತಿಯೊಂದು ಕಾರ್ಯಗಳನ್ನು ಊರ್ಮಿಳೆಯ ಪಾತ್ರದ ಮೂಲಕ ಅನಾವರಣಗೊಳಿಸಿರುವುದು ಕಂಡುಬರುತ್ತದೆ. ಪುರುಷ ಸಮಾಜದ ಮೇಲೆ ಆಕೆಯ ಒಳಮನಸ್ಸಿನಲ್ಲಿರುವ ಅಭಿಪ್ರಾಯಗಳನ್ನು ಬಹಿರಂಗಗೊಳಿಸಿದ್ದಾರೆ. ಒಂದು ದಿನ ಪ್ರಾರ್ಥನಾಳ ಬಟ್ಟೆಗಳನ್ನೆಲ್ಲ ಬಗೆದು ಇಸ್ತ್ರೀ ಮಾಡಿ ಇಟ್ಟುಬಿಟ್ಟಿದ್ದಳು. ಅದಕ್ಕೆ ಅವಳು ತಕರಾರು ಮಾಡಿದಾಗ 'ನೋಡೂ, ನನ್ನನ್ನು ಯಾವನು ಮದ್ವೆ ಆಗ್ತಾನೋ? ಅಸಲಿಗೆ ನಂಗೆ ಮದುವೆ ಅಂತ ಒಂದು ಆಗಾತ್ತೋ ಇಲ್ಲೋ ಗೊತ್ತಿಲ್ಲ. ಆದರೆ ಯಾವ ಕಾರಣಕ್ಕೂ ಗಂಡನದೊಂದು ಬನೀನು ಕೂಡ ಒಗೀಬಾರ್ದು ಅಂತ ಏಳನೇ ಕ್ಲಾಸಲ್ಲಿದ್ದಾಗಲೇ ಆಣೆ ಮಾಡ್ಕೊಂಡುಬಿಟ್ಟಿದ್ದೀನಿ. ಗಂಡಸಿಗೆ ಸೇವೆ ಮಾಡೊಕೆ ಹೋದರೆ, ಅದನ್ನು ಅವನು ಪ್ರೀತಿ ಅಂದ್ಕೊಳಲ್ಲ, ಸೇವೆ ಮಾಡಿಸ್ಕೊಳ್ಳೋದು ತನ್ನ ಗಂಡಸ್ತನ ಅಂದುಕೊತಾನೆ. ಹೆಂಗಸು ಕೂಡ ಸೇವೆ ಮಾಡೋದೇ ತನ್ನ ಕರ್ತವ್ಯಾನೇನೋ ಅಂತ ಗಂಡನ ಅಂಡರ್‌ವೇರ್‌ನ ಭಗವಂತನ ಬಟ್ಟೆ ಅನ್ನೋಷ್ಟು ಶ್ರದ್ಧೆಯಿಂದ ಒಗೆದು, ಒಣಗಿಸಿ ಮಡಚಿಡ್ತಾಳೆ. ಅದನ್ನೇ ಹಾಕ್ಕೊಂಡು ಹೋಗಿ ಹಾದರ ಮಾಡಿ ಬರ್ತಾನೆ ಗಂಡಸು. ಹೆಂಗಸು ಹಳೇ ಸೀರೆಯ ಸೆರಗಿನಲ್ಲಿ ಕಣ್ಣೀರು ಇಂಗಿಸ್ತಾಳೆ. Nasty! ಗಂಡ–ಹೆಂಡತಿ ಅನ್ನೋ ಸಂಬಂಧವೇ ಅಸಹ್ಯಕರವಾದ್ದು, ಅವರಿಬ್ಬರೂ ಕೇವಲ ಗಂಡು–ಹೆಣ್ಣು ಅದ್ಕೊಂಡು ಜೊತೇಲಿರ್ತಾರಲ್ಲ? ಅಲ್ಲೀವರೆಗೂ ಮಾತ್ರ ಉಳಿದಿರುತ್ತೆ ಪ್ರೀತಿ, ನಮ್ದು ಹಾಗಲ್ಲ ಪ್ರಾರ್ಥನಾ. I Sincerely love you. ನೋಡಿದ ತಕ್ಷಣ ತಂಗಿ ಅನ್ನಿಸಿಬಿಟ್ಟೆ ನೀನು. ನಿಂಗೋಸ್ಕರ ಏನೇ ಮಾಡಿದರೂ ಪ್ರೀತಿಯಿಂದ ಮಾಡ್ತೀನಿ'[೮] ಎಂದು ಹೇಳುವುದನ್ನು ಗಮನಿಸಿದಾಗ. ಪುರುಷನ ಪ್ರತಿಯೊಂದು ವಿಚಾರದಲ್ಲಿಯು ಬಹಳ ಆಳವಾಗಿ ತಿಳಿದುಕೊಂಡಂತೆ ಭಾಸವಾಗುತ್ತದೆ. ಜೊತೆಗೆ ಇಡೀ ಪುರುಷ ವ್ಯವಸ್ಥೆಯ ವಿರುದ್ಧ ಇರುವ ಅವಳ ಆಕ್ರೋಶದ ಪ್ರತೀಕವೆಂಬಂತಿದೆ. ರವಿಯವರು

ಊರ್ಮಿಳಾ ಪಾತ್ರದ ಮೂಲಕ ಇಷ್ಟೊಂದು ಆಳವಾಗಿ, ವಿವರವಾಗಿ ಚರ್ಚಿಸುತ್ತಿರುವುದು ಅವರ ಸ್ತ್ರೀ ಕಾಳಜಿಯೋ ಅಥವಾ ಇದು 'ಸ್ತ್ರೀ' ಪ್ರತಿಭಟನೆಯ ಪ್ರತೀಕ ಎಂದು ಹೇಳಲು ಚಿತ್ರಿಸಿದ್ದಾರೆಯೋ ಎಂಬುದು ಮಾತ್ರ ಗೊಂದಲ ಸ್ಥಿತಿ.

ಈ ಒಂದು ಪಾತ್ರದಿಂದ ಇಡೀ ಕಾದಂಬರಿಯ ವಸ್ತುವೇ ನಿಗೂಢ ರೀತಿಯಲ್ಲಿ ಬಿಚ್ಚಿಕೊಳ್ಳುತ್ತ ಸಾಗುತ್ತದೆ. ರವಿಯವರು ಈ ಪಾತ್ರದಲ್ಲಿ ಅಷ್ಟೊಂದು ಆಸಕ್ತಿಯಿಂದ ಓದಿಸಿಕೊಳ್ಳುತ್ತಾ ಸಾಗುವಂತಿರುವ ಪಾತ್ರ ನಿಜಕ್ಕೂ ಕುತೂಹಲಕಾರಿಯಾಗಿದೆ. ಪಿಯುಸಿ ದಾಟುವ ಮೊದಲೇ ಪ್ರೀತಿ-ಪ್ರೇಮಗಳೆಲ್ಲಾ ಶುದ್ಧ ಸುಳ್ಳು ಎಂಬುದನ್ನು ಮನವರಿಕೆ ಮಾಡಿಕೊಂಡ ಹುಡುಗಿ. ಆ ಕಾರಣದಿಂದಲೇ ಬದುಕಿನ ಯಾವುದಾದರೊಂದು ಹಂತದಲ್ಲಿ ಸೂಳೆಯಾಗಬೇಕು ಎಂದು ಚಡಪಡಿಸುವುದು. ಅವಳ ದೃಷ್ಟಿಯಲ್ಲಿ ಎಲ್ಲಾ ಪ್ರೀತಿಯ ತಾಯಬೇರು ವಾಂಛೆ. ಪ್ರತಿ ಮನುಷ್ಯನು ಪ್ರೀತಿಯ ಮುಖವಾಡ ಧರಿಸಿ ವಾಂಛೆಗಳನ್ನು ಕದ್ದಿಟ್ಟುಕೊಳ್ಳುತ್ತಾನೆ. ವೇಶ್ಯೆ ಮನೆಯ ಒಳಕೋಣೆಯಲ್ಲಿ ಮಾತ್ರ ಅವನಿಗೆ ಮುಖವಾಡವಿರುವುದಿಲ್ಲ. ಅಲ್ಲೇನಿದ್ದರೂ ವಾಂಛೆಯದೇ ಅಧಿಪತ್ಯ. ವೇಶ್ಯೆಯ ಮುಂದೆ ಮತ್ತು ತಾಯಿಯ ಮುಂದೆ ಮಾತ್ರ ಗಂಡಸು ಸಂಕೋಚವಿಲ್ಲದೆ ಬೆತ್ತಲಾಗಲು ಸಾಧ್ಯ. ಈ ಜಗತ್ತಿನ ಪ್ರತಿಯೊಬ್ಬ ಗಂಡಸನ್ನೂ ವೇಶ್ಯೆ ಮನೆಯ ಒಳಕೋಣೆಯಲ್ಲಿ ಹಾಗೆ ಕೇವಲ ಮನುಷ್ಯ ಸಹಜ ವಾಂಛೆಯೊಂದಿಗೆ ನೋಡಲು ಸಾಧ್ಯ. ಪ್ರತಿಸಲವು ಪ್ರೀತಿಯೆಂಬುದು ಅರ್ಥಹೀನ ಸಿದ್ಧಾಂತ ಎಂಬುದನ್ನು ಮನವರಿಕೆ ಮಾಡಿಕೊಳ್ಳಬೇಕು. ತೇಕುತ್ತ, ರೊಪುತ್ತ, ನಿಶ್ಚಲನಾಗಿ ಬಿದ್ದುಕೊಂಡ ಪ್ರತಿ ಗಂಡಸಿಗೂ ಗುಟ್ಟಾಗಿ ಹೇಳಬೇಕು ನಿನ್ನ ಪ್ರೀತಿ ಸುಳ್ಳು ನಿನ್ನ ಮೂಲ ಬೇರು ವಾಂಛೆಯೆಂಬ ಹುತ್ತದಲ್ಲಿದೆ. ಯಾವ ಗಂಡಸು ಯಾವ ಕೈಯಿಂದ ಹೇಗೆ ಮುಟ್ಟುತ್ತಾನೆ ಎಂಬುದನ್ನು ಒಂದು ಸ್ಪರ್ಶದಿಂದಲೆ ಅರ್ಥ ಮಾಡಿಕೊಂಡು ಬಿಡುವ ವಿದ್ಯೆ ಹೆಣ್ಣು ಜೀವಕ್ಕೆ ಹುಟ್ಟಿನಿಂದಲೇ ಬಂದಿರುತ್ತದೆ. ಅದು ಜಗತ್ತಿನ ಎಲ್ಲಾ ಹೆಂಗಸರಿಗೂ ಗೊತ್ತಿರುತ್ತದೆ. ಪ್ರತಿ ಸ್ಪರ್ಶದ ಹಿಂದೆಯೂ ಒಂದು ಭಾವವಿರುತ್ತದೆ. ಆದರೆ, ಅವಶ್ಯಕತೆಗಳಲ್ಲಿ ಹುಟ್ಟಿಕೊಳ್ಳುವುದು ಪ್ರೀತಿಯಲ್ಲ ಅದು ಕೇವಲ ಹೊಂದಾಣಿಕೆ ಎಂಬುದನ್ನು ಊರ್ಮಿಳಾ ಪಾತ್ರದ ಮೂಲಕ ಲೇಖಕರು ಹೇಳಲು ಪ್ರಯತ್ನಿಸಿದ್ದಾರೆ.

ರವಿಯವರ ಕಾದಂಬರಿಗಳಲ್ಲಿ ಲೈಂಗಿಕ ಶೋಷಣೆಯ ಸ್ವರೂಪವನ್ನು ಗುರುತಿಸಿ ಹೊರಟರೆ ಅರ್ಥವಾಗೋದಿಷ್ಟು. ಮಾನವ ಸಮಾಜ ಜೀವಿ. ಅವನು ಒಂಟಿಯಾಗಿರಲು ಬಯಸಲಾರ. ಯಾವಾಗಲೂ ಇತರರೊಂದಿಗೆ ಸಂಪರ್ಕದಿಂದ ಇರಲು ಬಯಸುತ್ತಾನೆ. ಅಂತೆಯೇ ಅವನ ಮೂಲಭೂತ ಅವಶ್ಯಕತೆಗಳಾದ ಗಾಳಿ, ನೀರು, ಆಹಾರ ಎಷ್ಟು ಪ್ರಾಮುಖ್ಯವೋ ಅವುಗಳೊಂದಿಗೆ ಪ್ರಕೃತಿ ಸಹಜವಾದ 'ಕಾಮ'ವು ಅಷ್ಟೇ ಪ್ರಮುಖವಾದದ್ದು. ಅನಾದಿಕಾಲದಿಂದಲೂ ಲೈಂಗಿಕತೆ ಮನುಷ್ಯನ ಜೀವನದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಹಾಸುಹೊಕ್ಕಾಗಿರುತ್ತದೆ. ಕಾಮದಿಂದ ಮನುಷ್ಯ ಎಂದು ಮುಕ್ತನಾಗಿರಲಾರ.

ಲೈಂಗಿಕತೆಯ ದೆಸೆಯಿಂದಾಗಿ ಪುರುಷ ಪ್ರಧಾನ ಸಮಾಜವು ಶೋಷಣೆ ಮಾಡುತ್ತಾ ಹಿಂಸೆಗೆ ಗುರಿಮಾಡಿದ್ದನ್ನು ರವಿಯವರ ನೀ ಹಿಂಗ ನೋಡಬ್ಯಾಡ ನನ್ನ ಕಾದಂಬರಿಯ ಗಿರಿ ಅಂಕಲ್ ಹಾಗೂ ಮೃಣಾಲಿನಿ ಪಾತ್ರದ ಮೂಲಕ ಚಿತ್ರಿಸಿರುವುದನ್ನು ಕಾಣಬಹುದು. ಅದೇ ರೀತಿ ಹೇಳಿ ಹೋಗು ಕಾರಣ ಕಾದಂಬರಿಯ ಯಮುನಾ ಹಾಗೂ ಪ್ರಾರ್ಥನಾಳ ತಂದೆಯ ಸಂಬಂಧದಿಂದ ಗುರುತಿಸಬಹುದು. ಸ್ತ್ರೀಯರನ್ನು ಕೇವಲ ಭೋಗ ಜೀವನಕ್ಕೆ ಬಳಸಿಕೊಂಡಿರುವುದು ಈ ಪಾತ್ರಗಳಿಂದ

ತಿಳಿದುಬರುತ್ತದೆ. ಗಂಡಿಗೆ ಅನ್ವಯಿಸದ ಶೀಲದ ಪ್ರಾಮುಖ್ಯತೆ ಹೆಣ್ಣಿಗೆ ಮಾತ್ರ ಅನ್ವಯಿಸುತ್ತದೆಂಬ ಪಕ್ಷಪಾತ ನಿಯಮಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಚಲಿತದಲ್ಲಿವೆ. ಹೆಣ್ಣು ಎಂತಹ ಕಠಿಣ ಸಂದರ್ಭದಲ್ಲಿಯೂ ಶೀಲವನ್ನು ಹಾಳುಮಾಡಿಕೊಳ್ಳದೇ ರಕ್ಷಿಸಿಕೊಳ್ಳಬೇಕು. ಒಂದು ವೇಳೆ ಅಂತಹ ಸಂದರ್ಭವೇನಾದರೂ ಬಂದರೆ ಆತ್ಮ ಸಮರ್ಪಣೆ ಮಾಡಿಕೊಳ್ಳಬೇಕು ಎಂಬ ಒತ್ತಡ ಹೇರಿರುವುದು ಪುರುಷ ಪ್ರಧಾನ ಸಮಾಜದ ಶೋಷಣೆಯನ್ನು ಪ್ರತಿಬಿಂಬಿಸುತ್ತದೆ. ಲೈಂಗಿಕ ಶೋಷಣೆ ಎನ್ನುವುದು ವಿವಾಹಿತ ಮತ್ತು ಅವಿವಾಹಿತ ಸ್ತ್ರೀಯರನ್ನು ಅವಿರತ ಕಾಡುವ ಸಮಸ್ಯೆಯಾಗಿದೆ. ವಿವಾಹವಾದ ಪುರುಷರು ಅಧಿಕ ಪ್ರಮಾಣದಲ್ಲಿ ವ್ಯಭಿಚಾರಿಗಳಾಗಿರುತ್ತಾರೆ. ಅವರ ವೈವಾಹಿಕ ಜೀವನ ತೃಪ್ತಿಕರವಾಗಿರುವುದಿಲ್ಲ. ಪತಿ–ಪತ್ನಿಯ ಲೈಂಗಿಕ ಸಂಪರ್ಕದಲ್ಲಿ ಅವರಿಗೆ ಆಸೆ ಇರುವುದಿಲ್ಲ. ಅದನ್ನು ಬೇರೊಬ್ಬರಿಂದ ಪಡೆಯಲು ಬಯಸುತ್ತಾರೆ. ರವಿಯವರ ಹೇಳಿ ಹೋಗು ಕಾರಣ ಕಾದಂಬರಿಯಲ್ಲಿ ಪ್ರಾರ್ಥನಾಳ ತಂದೆ ತನ್ನ ಪತ್ನಿಯಲ್ಲಿ ಕಾಣದ ಪ್ರೇಮ ಭೋಗವನ್ನು ಸೊಸೆ ಯಮುನಾಳಲ್ಲಿ ಕಾಣುತ್ತಾರೆ. ಹೊಸ ಅನುಭವದ ಆಸೆ–ಲೈಂಗಿಕ ಸಂಪರ್ಕದಿಂದ ಹೆಚ್ಚಾಗುತ್ತದೆ. ಆದ್ದರಿಂದಲೇ ಯಮುನಾಳೊಂದಿಗಿನ ಅವರ ಸಂಬಂಧ ಪತಿ–ಪತ್ನಿಯರಿಗಿಂತ ಮಿಗಿಲಾಗಿರುತ್ತದೆ.

ಮೂಲಭೂತವಾಗಿ ಲೈಂಗಿಕ ಕ್ರಿಯೆ ಎಂಬುದು ಜೀವನದಲ್ಲಿ ಸಂತಾನ ಪ್ರಾಪ್ತಿಗಾಗಿಯೇ ಸಹಜವಾಗಿ ಜರುಗುವಂತಹದು. ಇದು ಜೈವಿಕ ವಿಜ್ಞಾನದ ದೃಷ್ಟಿಯಲ್ಲಿ ಎಲ್ಲಾ ಜೀವಿಗಳ ಪರಮ ಕರ್ತವ್ಯವಾಗಿದೆ. ಅಲ್ಲದೇ ಪ್ರಕೃತಿಯ ನಿಯಮವಾಗಿದೆ. ಹಾಗೆಯೇ ಪ್ರತಿಯೊಂದು ಹೆಣ್ಣು ತಾಯಿಯಾಗಲು ಬಯಸುತ್ತಾಳೆ. ಇದರಿಂದಾಗಿಯೇ ಪ್ರತಿಯೊಂದು ಹೆಣ್ಣಿಗೆ ತಾಯ್ತನ ಅನಿವಾರ್ಯ ಎಂಬ ಸಾಮಾಜಿಕ ಮೌಲ್ಯವನ್ನು ಸ್ತ್ರೀ–ಪುರುಷರಿಬ್ಬರೂ ಒಪ್ಪಿಕೊಂಡ ಸಾಮಾಜಿಕ ಒಡಂಬಡಿಕೆಯಾಗಿದೆ.

ಅಂತೆಯೇ ಮಹಿಳೆಯರು ಸಂತಾನಕ್ಕಾಗಿ ತವಕಿಸುವುದನ್ನು ಗುರುತಿಸಬಹುದು. ಈ ಒಡಂಬಡಿಕೆಯಿಂದಲೇ ಸಂತಾನವಿಲ್ಲದವರನ್ನು 'ಬಂಜೆ'ಯರೆಂದು ಹೀಯಾಳಿಸಲ್ಪಡುತ್ತಾರೆ. ಈ ಕಠೋರತೆಯಿಂದ ಪಾರಾಗಲು ತಮ್ಮ ಗಂಡಂದಿರಿಂದ ಮಕ್ಕಳಾಗದಿದ್ದರು ಪರ ಪುರುಷನನ್ನು ಆಶ್ರಯಿಸುವಂತಹ ಪಾತ್ರಗಳನ್ನು ರವಿ ಬೆಳಗೆರೆಯವರ ನೀ ಹಿಂಗ ನೋಡಬ್ಯಾಡ ನನ್ನ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಯಾವಾಗಲೋ ಊರು ಬಿಟ್ಟು ಹೋಗಿದ್ದ ಜಗನ್ಮೋಹನರಾವ್ ಬೆಂಗಳೂರಿನಲ್ಲಿ ನಾಲ್ಕು ಕಾಸು ಅಂತ ಕಂಡವನು, ವಾಪಸ್ಸು ಊರಿಗೆ ಬಂದು ಅದು ತನ್ನ ಹಕ್ಕೇನೋ ಎಂಬಂತೆ ಮೃಣಾಲಿನಿಯನ್ನು ಮದುವೆಯಾದ. ಈತ ಯಾವತ್ತು ಮೃಣಾಲಿನಿಯನ್ನು ಪ್ರೀತಿಯಿಂದ ನೋಡಿಕೊಳಲೇ ಇಲ್ಲ. ಮದುವೆಯಾದ ಹೊಸದರಲ್ಲಿ ಮನೆ ಬಿಟ್ಟು ಹೋದವನು ಮತ್ತೆ ಬಂದದ್ದು ನಡುರಾತ್ರಿಯ ಹೊತ್ತಲ್ಲಿ. ಇವಳಿಲ್ಲಿ ಹಸಿದು ಕಾಯುತ್ತ ಕುಳಿತಿದ್ದರೆ ಅವನಲ್ಲೆಲ್ಲೋ ಉಂಡು ಬಂದಿರುತ್ತಿದ್ದ. ಅದನ್ನು ಆತನ ಮೈ ನೋಡಿಯೇ ಅರ್ಥಮಾಡಿಕೊಂಡಿದ್ದಳು. ಅದು ಉಂಡು ಬಂದು ಚೆಲ್ಲಿಕೊಂಡಿರುವ ದೇಹವೆಂದು.

ಇತಿಹಾಸದ ಅವಲೋಕನ ಮಾಡಿದಾಗ ಸ್ತ್ರೀಯರನ್ನು ಲೈಂಗಿಕತೆಯ ಸರಕುಗಳನ್ನಾಗಿ ಉಪಯೋಗಿಸಿಕೊಂಡು ಬಂದಿರುವುದು ಅರಿವಾಗುತ್ತದೆ. ಲೈಂಗಿಕತೆಯುನ್ನು ವ್ಯಾಪಾರಿ ಮನೋಭಾವದಿಂದ ವಾಣಿಜ್ಯ ಅಭಿವೃದ್ಧಿಗಾಗಿ ಬಳಸುತ್ತಿರುವ ರೀತಿ ಜಗನ್ಮೋಹನ್‌ರಾವ್ ಪಾತ್ರದಲ್ಲಿಯೂ ಗುರುತಿಸಬಹುದು. ಆತನು ಶರ್ಮಿಳಾಳನ್ನು ಮಾತ್ರ ಹೆಂಗಸಿನಂತೆ, ಮನುಷ್ಯಳಂತೆ

ಒಂದು ವ್ಯಕ್ತಿತ್ವವೆಂಬಂತೆ ನೋಡುತ್ತಿದ್ದು, ಅವಳನ್ನು ಬಿಟ್ಟರೆ ಅವನ ಪಾಲಿಗೆ ಜಗತ್ತಿನ ಉಳಿದೆಲ್ಲವು ಸರಕು, ಹೆಂಡತಿ ಸಹ ಒಂದು ಸರಕು. ಹೀಗೆ ಗಂಡನಿಂದ ಪಡೆಯಲಾಗದ ಲೈಂಗಿಕ ಸುಖವನ್ನು ತನ್ನ ಗಂಡನಲ್ಲಿ ಕೆಲಸಕ್ಕಿದ್ದ ಚಂದ್ರುವಿನೊಂದಿಗೆ ಲೈಂಗಿಕ ತೃಷೆಯನ್ನು ಈಡೇರಿಸಿಕೊಳ್ಳುತ್ತಾಳೆ. ಅದರ ಫಲವಾಗಿ ಮೃಣಾಲಿನಿಯ ಗರ್ಭದಲ್ಲಿ ಬೀಜಾಂಕುರವಾಗುತ್ತದೆ. ಅದು ತಪ್ಪು ಅಂತ ಅವಳಿಗೆ ಯಾವತ್ತಿಗೂ ಅನ್ನಿಸುವುದಿಲ್ಲ. ಯಾಕೆಂದರೆ ಅವಳು ಗಂಡನಿಂದ ಸಿಗಲಾರದ ತಾಯ್ತನದ ಫಲ ಚಂದ್ರನಿಂದ ಪಡೆದುಕೊಂಡಳು. ಆದರೆ ಪರ ಪುರುಷನ ಸಂಪರ್ಕದಿಂದ ಗರ್ಭ ಧರಿಸಿದ ಅವಳಿಗೆ ಜಗನ್ಮೋಹನ್‌ರಾವ್(ಗಂಡ) ಯಾವುದೇ ತರಹದ ತೊಂದರೆ ಕೊಡಲಿಲ್ಲ ಮತ್ತು ಇಡೀ ಬಸಿರು ಚಂದ್ರುವಿನ ಆರೈಕೆಯಲ್ಲಿ ಕಳೆಯಿತು. ರಾತ್ರಿ ಕೊಂಚ ತಡವಾದರೆ 'ಚಂದ್ರೂ, ಅವಳು ಒಬ್ಬಳೇ ಇರ್ತಾಳೆ. ನೀನು ಮನೆಗೆ ಹೋಗಿರು' ಅಂತ ಜಗನ್ಮೋಹನ್ ಖುದ್ದಾಗಿ ಹೇಳಿ ಕಳುಹಿಸುತ್ತಿದ್ದ. ಆದರೆ ಒಮ್ಮೊಮ್ಮೆ ಅವನ ಈ ವರ್ತನೆಯೇ ಚಂದ್ರನನ್ನು ಭಯಪಡಿಸುತ್ತಿತ್ತು. ಕಡೆಗೆ ಒಂಬತ್ತು ತುಂಬಿ ಹೆರಿಗೆಗೆ ಚಡಪಡಿಸುವಾಗ ಆಸ್ಪತ್ರೆಗೆ ಜೊತೆಯಲ್ಲೆ ಬಂದಿದ್ದ. ಆದರೆ ಮೃಣಾಲಿನಿಗೆ ಹೆರಿಗೆಯಾದ ರಾತ್ರಿ ಚಂದ್ರನ ಕೊಲೆಯಾಗಿ ಹೋಗಿತ್ತು. ಗಂಡು ಹೆಣ್ಣಿನ ಸಂಬಂಧದ ಬಗ್ಗೆ ತುಂಬಾ ರೊಮ್ಯಾಂಟಿಕ್ ಆಗಿ ಬರೆಯಬಲ್ಲ, ರವಿಯವರು ಅಷ್ಟೇ ಮಾನವ ಸಂಬಂಧಗಳ ಬಗ್ಗೆಯೂ ಭಾವನಾತ್ಮಕವಾಗಿಯೂ ಬರೆಯಬಲ್ಲರು.

ಅಂತೆಯೇ ನಾವು ಬದುಕುತ್ತಿರುವ ಸಮಾಜದಲ್ಲಿ ಮೇಲ್ವರ್ಗ, ಕೆಳವರ್ಗ ಎಂಬ ವರ್ಗ ವ್ಯವಸ್ಥೆ ಪ್ರಚಲಿತವಿರುವುದು ಕಂಡುಬರುತ್ತದೆ. ಮೇಲ್ವರ್ಗದವರು ಕೆಳವರ್ಗದವರಿಗೆ ಶೋಷಣೆ ಮಾಡುತ್ತ ಬಂದಿರುವುದನ್ನು ಪ್ರಾಚೀನ ಕಾಲದಿಂದ ಇವತ್ತಿನವರೆಗೂ ಗಮನಿಸಬಹುದು. ಅಲ್ಲದೇ ಪ್ರಮುಖ ಸಾಹಿತ್ಯ ಕೃತಿಗಳಲ್ಲಿಯೂ ದಾಖಲೆಯಾಗಿವೆ. ಆದರೆ ಶೋಷಣೆ ಎನ್ನುವುದು ಏಕಮುಖವಾಗಿರುವುದಿಲ್ಲ. ಅದು ಭಿನ್ನ ವಿಭಿನ್ನ ಸ್ವರೂಪದಲ್ಲಿರುತ್ತದೆ. ಅಲ್ಲದೆ ಕಾದಂಬರಿಯಂತಹ ಸಾಹಿತ್ಯ ಪ್ರಕಾರದಲ್ಲಿ ಶೋಷಣೆಯ ವಿವಿಧ ಮುಖಗಳನ್ನು ಗುರುತಿಸಬಹುದಲ್ಲದೆ ಶೋಷಿತ ಸಮುದಾಯದಲ್ಲಿಯೆ ಪೋಷಿತ ಮನಸ್ಕರು ಇರುತ್ತಾರೆ ಎಂಬುದನ್ನೂ ರವಿಯವರ ನೀ ಹಿಂಗ ನೋಡಬ್ಯಾಡ ನನ್ನ ಕಾದಂಬರಿ ಪಾತ್ರಗಳಿಂದ ಗುರುತಿಸಬಹುದಾಗಿದೆ. ಬೆಂಗಳೂರಿನ ವೇಶ್ಯಾಗೃಹದಲ್ಲಿ 'ಲಕ್ಷ್ಮೀದೇವಿ' ಎಂಬ ವೇಶ್ಯೆ ಚಿಕ್ಕ ಚಿಕ್ಕ ಹೆಣ್ಣು ಮಕ್ಕಳನ್ನು ಇಟ್ಟುಕೊಂಡು ತನ್ನ ವೃತ್ತಿಯನ್ನು ನಡೆಸುತ್ತಿರುತ್ತಾಳೆ. ಒಂದು ಹೆಣ್ಣು ಮತ್ತೊಂದು ಹೆಣ್ಣನ್ನು ಲೈಂಗಿಕ ಕಾರ್ಯಕರ್ತೆಯನ್ನಾಗಿ ದೇಹ ಮಾರಿಕೊಂಡು ದುಡ್ಡು ಸಂಪಾದಿಸುವ ದಂಧೆಯಲ್ಲಿ ನಿರತಳಾಗಿರುತ್ತಾಳೆ. ಹೆಣ್ಣು ಅತೀ ಮುಖ್ಯವಾಗಿ ಕಾಪಾಡಿಕೊಳ್ಳಬೇಕಾದುದ್ದು ಶೀಲ. ಅದನ್ನೇ ಮಾರಿಕೊಂಡು ಪುರುಷರಿಂದ ದುಡ್ಡು ಸಂಪಾದಿಸುತ್ತಾಳೆ. ಶೋಷಣೆ ಎನ್ನುವುದು ಸ್ತ್ರೀಯರ ಲೈಂಗಿಕತೆಯ ಮೇಲೆ ಹೆಚ್ಚು ಕೇಂದ್ರಿಕೃತವಾಗಿರುವುದು ತಿಳಿದುಬರುತ್ತದೆ. ಆದ್ದರಿಂದ ಲಕ್ಷ್ಮೀದೇವಿಯಂತಹ ಪಾತ್ರ ಸೃಷ್ಟಿಸಿ ಶೋಷಣೆಯ ಸ್ವರೂಪವನ್ನು ಮನದಟ್ಟು ಮಾಡಿದ್ದಾರೆ. ಇದೇ ರೀತಿ ವೇಶ್ಯಾವಾಟಿಕೆಯನ್ನು ತಿಳಿಸುವ ಪಾತ್ರಗಳೆಂದರೆ 'ಹೇಳಿ ಹೋಗು ಕಾರಣ' ಕಾದಂಬರಿಯ ಕಾವೇರಮ್ಮ ಮತ್ತು 'ಮಾಂಡೋವಿ' ಕಾದಂಬರಿಯ ರಾಣಿ ರಂಗಮ್ಮನಂತಹ ಪಾತ್ರಗಳನ್ನು ನೋಡಬಹುದು. ಮಾಂಸ ನೆಮ್ಮದಿಯಲ್ಲ, ಉನ್ಮಾದ ಪ್ರೇಮವಲ್ಲ, ಬೆವರು ಸಂತೋಷವಲ್ಲ, ಉರಿಬಿಸಿಲಿನ ಮಧ್ಯಾಹ್ನದಂತಹ ಕಾಮವು ಮನುಷ್ಯ ಬದುಕನ್ನು ಉರಿಯುವ ಪರಿಯನ್ನು ಅವರು ಚಿತ್ರಿಸಿರುವ ರೀತಿ ಚಲಪತಿಯ ಮೂಲಕ ಹೇಳುತ್ತಾರೆ. 'ಇದೆ ಬಂಗಲೆಯಲ್ಲಿ ಕೂತು ಮಾಂಸ ಕರಗುವ ಪರಿಯನ್ನು

ನೋಡಿದ್ದಾನೆ. ಕನಸ್ಸು ಕಳಚಿಟ್ಟ ಹೆಂಗಸರು ಸುಮ್ಮನೆ ನರಳುವ, ರೊಪ್ಪುವ ಉಸ್ಸೆನ್ನುವ ದನಿಗಳನ್ನು ಕೇಳಿದ್ದಾನೆ. ಹಳಸು ತಲೆ ಹೊತ್ತು ಬರುವ ತೋಳಗಳಂಥ ಗಿರಾಕಿಗಳು ತಮ್ಮ ಉನ್ಮಾದವನ್ನೆಲ್ಲ ಚೆಲ್ಲಿ ಹೋದದ್ದನ್ನು ಕಂಡಿದ್ದಾನೆ. ಹೊಸ ಹುಡುಗಿಯರು ನಳನಳಿಸುತ್ತ ಬಂದು, ಬರಬರುತ್ತಿದಂತೆಯೇ ಸುಟ್ಟ ಗಾಳಿ ಪಟಗಳಾಗಿದ್ದುದನ್ನು ನೋಡಿದ್ದಾನೆ. ಅವರ ತೊಡೆಗಳ ನಡುವೆಯಿಂದ ಗರ್ಭಕೋಶಗಳು ಬಾವಲಿಗಳಂತೆ ಹೊರಬಿದ್ದು ಆ ನೋವು, ಉರಿ ರಸಿಗೆಗಳಿಗೆ ಅವರು ಸೂರು ಕಿತ್ತಿ ಹೋಗುವಂತೆ ಆಕ್ರಂದನ ಮಾಡುತ್ತಿದ್ದರೆ ಅವರದೇ ಮಕ್ಕಳು ಹೊಸದಾಗಿ ಸೀರೆಯ ನೆರಿಗೆ ಮುರಿಯುವ ವಿಚಿತ್ರ ಸಾಹಸವನ್ನು ಗಮನಿಸಿದ್ದಾನೆ’.[೯] ಆದರೆ ಈ ಶೋಷಣೆ ಕೊನೆಯಲ್ಲ. ಅದಕ್ಕೂ ಮಿಗಿಲಾದ ಉಜ್ವಲವಾದ ಭವಿಷ್ಯ ಮುಂದಿದೆ ಎಂಬುದನ್ನು ರವಿಯವರ ಕಾದಂಬರಿಯಲ್ಲಿ ಕಾಣಬಹುದು.

ಪ್ರೀತಿಯ ಕರಡು ದಾರಿದ್ರ್ಯ ಮಿತಿಯಿರದ ಪ್ರೀತಿಯ ಐಶ್ವರ್ಯ, ಇವೆರಡನ್ನು ಅನುಭವಿಸುವ ವ್ಯಕ್ತಿಗೆ ಪ್ರೀತಿ ಒಂದು ಸ್ಥಿತಿ ಮಾತ್ರವಲ್ಲ, ಅದೊಂದು ನಿರಂತರ ಹರಿಯುವ ನದಿಯ ಸೆಳೆತ. ಎಷ್ಟು ಮುಕ್ಕಿದರೂ ಇಂಗದ ಹಸಿವು. ಎಷ್ಟು ತುಂಬಿದರೂ ತುಂಬಿದ ಭಿಕ್ಷಾ ಪಾತ್ರೆ. ‘ಮಾಂಡೋವಿ’ ಬರಿಯ ಲೇಖನಿಯಿಂದ ಇಳಿದು ಬಂದ ಕತೆ ಮಾತ್ರವಲ್ಲ, ಇದು ಎಲ್ಲಾ ಅಸಾಯಕತೆ, ಅವಮಾನ, ಖಿನ್ನತೆಗಳನ್ನು ಹಿಮ್ಮಡಿಯ ಕೆಳಗೆ ಮೆಟ್ಟಿ ಎದ್ದು ನಿಲ್ಲುವ ಫಕೀರ ಛಲ. ಇದು ಹೆಮ್ಮರದ ಮೇಲಿನ ಹೆಜ್ಜೇನಿಗಾಗಿ ಕೆಳಗೆ ಶತಪಥ ಹಾಕುವ ಅತೃಪ್ತ ಕರಡಿಯ ಕನವರಿಕೆ. ಇದು ಮರಳಲ್ಲಿ ರೆಕ್ಕೆ ಹುದುಗಿಸಿ ಮೈಮರೆತು ತೀರಕ್ಕೆ ಬರುವ ಬಂಗಾರದ ಮೀನಿಗಾಗಿ ಕಾಯುತ್ತ ಕಾಯುತ್ತ ಶತಮಾನ ಕಳೆದುಬಿಡುವ ಹಕ್ಕಿಯ ಸಂಯಮ. ಕೊನೆಗೂ ಮಾಂಡೋವಿ ದಕ್ಕಿದಾಗ ತನ್ನ ಜೊತೆಗೆ ಇಡೀ ಜಗತ್ತೇ ಸಮಧಾನ, ನಿಟ್ಟುಸಿರುವ ಬಿಡುವಂತೆ ಮಾಡುವ ಚಲಪತಿಯ ನಿರಾಳ ಇದು. ಇಷ್ಟು ಸುಂದರವಾಗಿ ಪ್ರೀತಿಸಲು ಬರುತ್ತದೆ ಎಂಬುದಕ್ಕೆ ತೋರ್ಬೆರಳು ಮಾಂಡೋವಿ. ಮನುಷ್ಯನನ್ನು ದುಃಖ, ಅಸಹನೆ, ನಿರಾಸೆ, ವಿಕಾರ, ಆತ್ಮನಿಂದನೆ, ಲೌಕಿಕ ಸಂಕಟ ಇವೆಲ್ಲವುಗಳಿಂದಲೂ ಬಿಡುಗಡೆ ಮಾಡಬಲ್ಲಂತಹ ಅದ್ಭುತ ಚೈತನ್ಯವೇ ‘ಪ್ರೇಮ’. ಎಷ್ಟು ಬೊಗಸೆ ಕುಡಿದರೂ ಸಾಲದು ಇದೊಂದು ವಿಷಯದಲ್ಲಿ ಮನುಷ್ಯ ನಿರಂತರ ದಾಹಿ. ಒಂದೇ ಒಂದು ಹಿಡಿ ಪ್ರೀತಿ ದೊರೆತ ಮನುಷ್ಯ ಬದುಕಿನ ಯಾವ ಹೋರಾಟದಲ್ಲೂ ಕೈ ಸೋತು ಮಲಗಲಾರ. ಈ ತರಹದ ಮತ್ತೊಂದು ಕಾದಂಬರಿ ಬರೆಯಲು ಸಾಧ್ಯವಾದರೆ, ಅದಕ್ಕಿಂತ ಸಂತೋಷವಿರಲಾರದೇನೋ ಅಷ್ಟು ಪ್ರೀತಿ ಇದರಲ್ಲಿ ಅಡಕವಾಗಿದೆ. ಮಾಂಡೋವಿ ಬರಿ ಕಾದಂಬರಿಯಷ್ಟೆ ಆಗಿದ್ದಿದ್ದರೆ ಅದನ್ನು ಬರೆದ ಕೆಲವು ವರ್ಷಗಳು ನಂತರವೂ ಓದುಗರಿಗೆ ಅದರೆಡೆಗೊಂದು ಅದಮ್ಯ ಸೆಳೆತ ಉಳಿದಿರುತ್ತಿರಲಿಲ್ಲ. ಎಲ್ಲೋ ಒಂದು ಕಡೆ ಮಾಂಡೋವಿಯ ನಾಯಕ ಚಲಪತಿಯೊಂದಿಗೆ ಹೊಲಿಕೆ(Identify) ಮಾಡಿಕೊಂಡವರಿದ್ದಾರೆ. ಮೂಲತಃ ಸ್ಪಾನಿಶ್ ಬರಹಗಾರ, ನೊಬೆಲ್ ಪ್ರಶಸ್ತಿ ವಿಜೇತ ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್‌ನ ‘Love in the Time of cholera’ ಪ್ರೇರಣೆಯ ಅಡಿಪಾಯ ಮೇಲೆಯೇ ಮಾಂಡೋವಿ ಬೆಳೆದು ನಿಂತಿದೆಯಾದರೂ ಇದು ಯತಾವತ್ತು ಅನುವಾದವಲ್ಲ. ಇದು ಕನ್ನಡ ನೆಲದ ಕೂಸು ಎಂಬಂತೆ ಮೂಡಿಬಂದ ಕಥಾನಕ; ಮರುಸೃಷ್ಟಿ. ಅಷ್ಟೊಂದು ಸ್ವತಂತ್ರ ಸೃಜನಶೀಲ ಕೃತಿಯಾಗಿ ಬೆಳೆದುನಿಂತಿದೆ. ಆ ದೃಷ್ಟಿಯಿಂದಲೇ ಈ ಕಾದಂಬರಿಯ ಬಗ್ಗೆ ಪ್ರತಿಭಾ ನಂದಕುಮಾರ್ ಅವರು ಮಾರ್ಕ್ವೆಜ್ ಇಷ್ಟು ಅದ್ಭುತವಾಗಿ ಕನ್ನಡಕ್ಕೆ ಹಿಂದೆಂದೂ ಬಂದಿರಲಿಲ್ಲ ಎನ್ನುತ್ತಾರೆ.

### ೩.೩.೨. ವಾಮಾಚಾರ ಕಾದಂಬರಿಗಳು

ದೇವರು ಇದ್ದಾನಾ? ಗೊತ್ತಿಲ್ಲ, ಪ್ರೇತಾತ್ಮವಿದೆಯಾ? ಅದೂ ತಿಳಿದಿಲ್ಲ. ಹೇಗೆ ದೇವರ ಸುತ್ತ ಗುಡಿ ಗುಂಡಾರ ಗೋಪುರ–ಕಳಸ, ಮಂತ್ರ–ಪೂಜೆ, ಪುನಸ್ಕಾರದಂತಹ ಆಚರಣೆಗಳು ಬೆಳೆದುಕೊಂಡಿವೆಯೋ ಹಾಗೆಯೇ ಮತ್ತೊಂದೆಡೆಯಲ್ಲಿ ವಾಮವಿದ್ಯೆಯೂ ಬೆಳೆದಿದೆ. ಮಾಟ, ಕೈಮುಸುಗು, ಮದ್ದು, ವಶೀಕರಣ, ಶವ ಸಾಧನೆ, ಶವ ಭೋಜನ, ಶೈವ ಮೈಥುನ, ಕಪಾಲ ಭೋಜನ, ಸ್ಮಶಾನ ಜೀವನ ಹೀಗೆ ನೂರೆಂಟು ರೀತಿಯಲ್ಲಿ ಸನಾತನ ಕಾಲದಂದಿಲೂ ಮಾಟ, ಮಂತ್ರ, ಯಂತ್ರ, ತಂತ್ರ ಮತ್ತು ಅಘೋರಿಗಳ ಪ್ರಕ್ರಿಯೆಗಳು ಜನಪದರ (ಅಘೋರಿಗಳನ್ನು ಹೊರತು ಪಡಿಸಿ ಅದೊಂದು ಭಯಂಕರ ಸಾಧಕ ವಿದ್ಯೆಯಾದ್ದರಿಂದ ಸಾಮಾನ್ಯ ಜನರ ಜೀವನದಿಂದ ದೂರವಿರುವಂತಹದ್ದು) ಜೀವನದಲ್ಲಿ ಜೀವಂತವಾಗಿ ಉಳಿದುಕೊಂಡು ಬಂದಿವೆ. ಎಷ್ಟರ ಮಟ್ಟಿಗೆ ಎಂದರೆ ಇಂದಿನ ತಾಂತ್ರಿಕ (ಕಂಪ್ಯೂಟರ್) ಯುಗದಲ್ಲಿಯೂ ಇವು ಪಾಶಸ್ತ್ಯವನ್ನು ಪಡೆಯುತ್ತಿವೆ. ಇದಕ್ಕೆ ಕಾರಣಗಳೇನು ಎಂಬುದು ತುಂಬ ಕುತೂಹಲಕರವಾದ ವಿಷಯ. ಈ ಸಂದರ್ಭದಲ್ಲಿ ಬಳಸುವ ಸಾಹಿತ್ಯವೂ ಅಷ್ಟೇ ಗಂಭೀರ ಅಧ್ಯಯನವನ್ನು ಆಶಿಸುತ್ತದೆ. ಹಾಗೆಯೇ ಈ ವಿಷಯಕ್ಕೆ ಸಂಬಂಧಿಸಿದಂತೆ ಸಾಹಿತ್ಯ ಕುರಿತು ಮಾತನಾಡುವುದೆಂದರೆ ದೊಡ್ಡ ಸಾಹಸವೇ ಸರಿ. ಯಾಕೆಂದರೆ ನಾಗರಿಕತೆಯ ಕೆಲವು ಗುಣಲಕ್ಷಣಗಳು ಮಾಟಗಾರರ ಮತ್ತು ಮಂತ್ರವಾದಿಗಳನ್ನು ಕುರಿತು ಭಯಭೀತರನ್ನಾಗಿಸುವ ಸಾಧ್ಯತೆಗಳೇ ಹೆಚ್ಚು. ಹೀಗಾಗಿ ಅವರಲ್ಲಿ ಅಮೂರ್ತವಾಗಿರುವ ಈ ವಿದ್ಯೆಯನ್ನು ಅವರು ಅಷ್ಟು ಸುಲಭವಾಗಿ ಧಾರೆಯೆರೆಯಲಾರರು. ಕಾರಣ ಅವರ ಬದುಕು ಈ ರಹಸ್ಯ ವಿದ್ಯೆಯ ಮೇಲೆ ಆಧರಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಅವರ ಸಾಹಿತ್ಯವನ್ನು ಸಂಗ್ರಹಿಸುವುದು ಕಷ್ಟ ಸಾಧ್ಯವಾದುದು.

ಇಂದಿರಾತನಯ, ಸತ್ಯಕಾಮ, ಅಗ್ನಿ ಶ್ರೀಧರ್ ಮತ್ತು ಎಂ.ವಿ.ನಾಗರಾಜರಾವ್(ಮೂಲ: ಸುರೇಶ್ ಸೋಮಪುರ)ರಂತಹ ಕೆಲವರನ್ನು ಬಿಟ್ಟರೆ ಸಾಮಾನ್ಯವಾಗಿ ಕನ್ನಡದ ಕಾದಂಬರಿಕಾರರು ವಾಮಾಚಾರದಂತಹ ವಸ್ತುವನ್ನು ಕೈಗೆತ್ತಿಕೊಂಡಿದ್ದು ವಿರಳವೇ. ಏಕೆಂದರೆ ಅದೊಂದು ನಿಗೂಢ ಜಗತ್ತು. ಅಲ್ಲಿ ನಡೆಯುವ ಕ್ರಿಯೆಗಳು ಶಿಷ್ಟ ಜಗತ್ತಿನಲ್ಲಿ ಎಂದೂ ಸಲ್ಲದ, ಭಯಾನಕ ನಿಷಿದ್ಧ ಕರ್ಮಗಳು. ಕ್ಷುದ್ರಾರಾಧನೆಯ ಬಗೆಗಿನ ನಮ್ಮ ಅಪೂರ್ವ ಜ್ಞಾನ ಅಷ್ಟರ ಮಟ್ಟಿಗಿನದು. ಅದು ಮಾಟಗಾರರ, ವಾಮಚಾರಿಗಳ ಗುಪ್ತ ಜಗತ್ತು. ಯಾರೆಂದರವರು ಅಲ್ಲಿ ಪ್ರವೇಶಿಸಲಾಗದು. ಆದರೂ ರವಿ ಬೆಳಗೆರೆಯವರು ಈ ನಿಗೂಢ ತಂತ್ರ ಜಗತ್ತಿಗೆ ಸಂಬಂಧಿಸಿದಂತೆ ಸುಮಾರು ವರ್ಷಗಳಿಂದಲೂ ಕುತೂಹಲ ಬೆಳೆಸಿಕೊಂಡು ಮಾಹಿತಿ ಸಂಗ್ರಹಿಸಿದ್ದರ ಫಲವೇ 'ಮಾಟಗಾತಿ' ಮತ್ತು 'ಸರ್ಪ ಸಂಬಂಧ' ಎಂಬ ಕಾದಂಬರಿಗಳು. ಈ ಕಾದಂಬರಿಗಳು ಕನ್ನಡ ಸಾರಸ್ವತ ಲೋಕಕ್ಕೆ ಅಪರೂಪದ್ದು. ಹಾಗೆ ಮಾಟ, ಮಂತ್ರ, ಯಂತ್ರ ಮತ್ತು ತಂತ್ರಗಳ ಬಗ್ಗೆ ಅಘೋರಿಗಳ ಬಗೆಗೆ ಇಷ್ಟು ವಿಸ್ತಾರವಾಗಿ ಬರೆಯಲ್ಪಟ್ಟ ಕಾದಂಬರಿಗಳೂ ವಿರಳ.

ಕ್ಷುದ್ರ ಜಗತ್ತಿನ ಅಪಾಯಕಾರಿ ವಿಷಯವನ್ನು ತಿಳಿಸುವ ಈ ಕೃತಿಗಳು ದೇವರು ಮತ್ತು ದೆವ್ವಗಳ ಅಸ್ತಿತ್ವವನ್ನು ಪ್ರಶ್ನಿಸದೆ, ತಮ್ಮ ಸುತ್ತಲಿರುವ ನೂರಾರು ಬಗೆಯ ಆಚರಣೆ ನಂಬಿಕೆಯನ್ನು ಬೆಳೆಸಿಕೊಂಡಿವೆ. ತಮ್ಮದೇ ಆದ ಪ್ರತ್ಯೇಕ ದಾರಿಯನ್ನು ಹೊಂದಿವೆ. ಮಾಟಗಾತಿ ತೇಜಮ್ಮನಂತಹ ಕ್ಷುದ್ರ ಶಕ್ತಿ ಇರುವಲ್ಲಿ 'ಅಗ್ನಿನಾಥ'ನಂಥ ಅಘೋರಿ ಇರುತ್ತಾನೆ. ಇವೆರಡು ಅಗೋಚರ ಶಕ್ತಿಯ ಮಧ್ಯೆ 'ದೇವಯಾನಿ', 'ಅರ್ಚಕ', ಗುಣಶಾರಿ, ಇನಿ, ಸೀತರಾಮುರಂತಹ ಸಾಮಾನ್ಯ ಜನರು

ಇರುತ್ತಾರೆ. ವಾಮವಿದ್ಯೆಯ ಪರಿಚಯವಿದ್ದು ಪರಿಣಾಮ ತಿಳಿಯದ ಇವರ ಗತಿ ತುಂಬ ಕಷ್ಟಕರ ಎಂಬ ಹಿನ್ನೆಲೆಯಲ್ಲಿ, ಲೇಖಕರು ಎಚ್ಚರಿಕೆಯ ಸಂದೇಶವನ್ನು ಕಾದಂಬರಿಯ ರೂಪದಲ್ಲಿ ಹೇಳಲು ಪ್ರಯತ್ನಿಸಿದ್ದಾರೆ.

'ಹಿರಿಯ ಅಘೋರಿ ವಿದ್ಯಾಗುರುಗಳಾದ ಕಪಾಲನಾಥರಿಗೆ ಕುಳಿತಲ್ಲಿಂದ ಮೇಲೆದ್ದು ತೇಜಮ್ಮನೆಡೆಗೆ ಒಂದೇ ಒಂದು ಹೆಜ್ಜೆ ಇಡಲು ಸಾಧ್ಯವಾಗಲಿಲ್ಲ. ಕಾಲುಗಳು ಮರಗಟ್ಟಿ ಹೋಗಿವೆ. ಮಂತ್ರದಂಡ ಹಿಡಿಯುವುದಕ್ಕೂ ಕೈ ಏಳುತ್ತಿಲ್ಲ. ಮಂತ್ರ ಪಠನಕ್ಕೆ ತುಟಿ ಅಲುಗುತ್ತಿಲ್ಲ. ಜೀವನದುದ್ದಕ್ಕೂ ಕಲಿತ ಮಂತ್ರಗಳೆಲ್ಲ ಮರೆತು ಹೋದಂತಾಗುತ್ತಿವೆ. ಕಣ್ಣುಗಳು ಪ್ರಖರತೆ ಕಳೆದುಕೊಂಡು ಮಸುಕಾಗುತ್ತಿವೆ. ಶಂಭೋ ಶಂಕರಾ... ಏನಿದು ನಿನ್ನ ಪರೀಕ್ಷೆ? ಅಂದು ಕೊಳ್ಳುತ್ತಿದ್ದಂತೆಯೇ ಅವರಿಗೆ ಗೊತ್ತಾಗಿ ಹೋಯಿತು: ಮಾಟಗಾತಿ ಮಹಾ ಬಲಿಷ್ಠ ದಿಗ್ಬಂಧನದ ಮಧ್ಯೆ ಪದ್ಮಾಸನ ಹಾಕಿ ಕುಳಿತಿದ್ದಾಳೆ.

ಅಷ್ಟೇ ಅಲ್ಲ...

ಅವಳಿಗೆ ಇನ್ನೂ ಕೆಲವೇ ಗಂಟೆಗಳಲ್ಲಿ ಅವಳ ಜೀವನದ ಪರಮೋದ್ದೇಶವಾದ ಮಾರ್ಕಾಂಡಿ ವಿದ್ಯೆ ಒಲಿಯಲಿದೆ!'''

'ರಾತ್ರಿ ದೇವಯಾನಿಗೆ ಗಿಡದ ಬೇರೊಂದನ್ನು ತೇಯ್ದು ಕುಡಿಸಿ, ವಿನಾಕಾರಣ ನಗುತ್ತಿದ್ದ ವಿಕಾರಿ ವೃದ್ಧೆಗೆ ಎಚ್ಚರಿಕೆಯಿಂದಿರಲು ಹೇಳಿ ಬರಿಗಾಲಲ್ಲೇ ಹೊರಟು ನಿಂತಳು ತೇಜಮ್ಮ. ತುಸು ಹೊತ್ತಿನ ನಂತರ ಅವಳು ಅದೇ ಮೈಸೂರು ರಸ್ತೆಯಲ್ಲಿ ಬಿರಬಿರನೆ ಹೆಜ್ಜೆ ಹಾಕುತ್ತಿದ್ದಳು. ಆಕೃತಿ ನೋಡಿದವರಿಗೆ ಆ ಮಧ್ಯವಯಸ್ಕ ಸ್ಥೂಲಕಾಯ ಹೆಂಗಸು ಅಷ್ಟು ವೇಗವಾಗಿ ನಡೆಯಲು ಸಾಧ್ಯವೇ ಎಂದು ಆಶ್ಚರ್ಯವಾಗುತ್ತಿತ್ತು. ಆದರೆ ತೇಜಮ್ಮ ಮನೋವೇಗದಲ್ಲಿ ಚಲಿಸುವ ಹೆಂಗಸು. ಯಾರನ್ನಾದರೂ ದಾರಿ ಕೇಳುವ ಪ್ರಶ್ನೆಯೇ ಇಲ್ಲ. ಸ್ಮಶಾನಗಳ ಸುಳಿವು ಆ ಕ್ಷುದ್ರ ಮಾಟಗಾತಿಗೆ ವಾಸನೆಯಿಂದಲೇ ದೊರಕಿಬಿಡುತ್ತದೇನೋ ಎಂಬಂತಿತ್ತು. ಪಶ್ಚಿಮಕ್ಕೆ ತಲೆಮಾಡಿ ವರ್ಷಾಂತರಗಳಿಂದ ಮಲಗಿದ್ದ ಪುರಾತನ ಅಸ್ಥಿಪಂಜರಗಳು ಕೂಡ ಮಾಟಗಾತಿಯ ಆಗಮನದಿಂದಾಗಿ ಥರಥರನೆ ಕಂಪಿಸುತ್ತವೆ. ಗೋರಿಯಾಳದ ಮಕ್ಕಳ ಶವಗಳು ಆ ಚಿರ ನಿದ್ರೆಯಲ್ಲೂ ಚಿಟ್ಟನೆ ಚೀರಿ ಎದ್ದು ಕೂಡಲು ಹವಣಿಸುತ್ತವೆ. ಬದುಕಿನ ಎಲ್ಲ ಶಕ್ತಿ ಪತನವಾಗಿ ಹೋದ ಮೇಲೂ ಅಷ್ಟೊಂದು ಖಡಕ್ಕಾಗಿದ್ದಾಳೆ ಮಾಟಗಾತಿ'.''' ಮಾಟಗಾತಿ ಒರಿಜಿನಲ್ ಸಾಮಗ್ರಿಯೊಂದಿಗೆ ಇವತ್ತಿನ ಸಮಾಜವನ್ನು ಆವರಿಸಿಕೊಂಡಿರುವ ಭ್ರಷ್ಟತೆ, ಹೆಂಗಸರು ಸಹ ಆ ಭ್ರಷ್ಟತೆಯ ಪರಾಕಾಷ್ಠೆ ತಲುಪಿ ಬಿಟ್ಟಿರುವ ಸಂದರ್ಭ. ಮಾಡಿಕೊಂಡ ಭಯಾನಕ ಸಂಧಾನಗಳು, ತಲುಪಿದ ಪರಮ ಭ್ರಷ್ಟ ಸ್ಥಿತಿಗತಿಗಳು ಮುಂತಾದವುಗಳನ್ನೆಲ್ಲ 'ಮಾಟಗಾತಿ'ಯ ಪಾತ್ರಗಳಲ್ಲಿ 'ಇನ್‌ಕಾರ್ಪೊರೇಟ್' ಮಾಡುವ ದುಷ್ಟ ನಿರ್ಧಾರಗಳ ಹಿನ್ನೆಲೆಯನ್ನು ಪಡೆದಿವೆ ಎನಿಸುತ್ತದೆ. ಇದೆಲ್ಲದರ ಒಂದು ಭಾಗವಾಗಿ ತೇಜಮ್ಮ ಕಾಣಿಸಿಕೊಳ್ಳುತ್ತಾಳೆ.

ಒಬ್ಬ ವ್ಯಕ್ತಿಯ ಚಿಂತನೆಗೂ, ಅನುಭವಕ್ಕೂ, ಅನ್ವೇಷಣೆಗೂ ನಿಲುಕದ ಎಷ್ಟೊ ಸಂಗತಿಗಳು ಈ ಲೋಕದಲ್ಲಿ ಇವೆ. ಅಘೋರ ವಿದ್ಯಾಗುರುಗಳಾದ ಕಪಾಲನಾಥರಂತಹವರಿಗೂ ಅರ್ಥವಾಗದಂತಹ, ಗೆಲ್ಲಲಾಗದಂತಹ ದಿಗ್ಬಂಧನದ ಮಧ್ಯೆ ಪದ್ಮಾಸನ ಹಾಕಿ ಕುಳಿತಿದ್ದಾಳೆ. ಎಂದರೆ ಆ ನಿಗೂಢ ಜಗತ್ತಿನ ಆಳ ವಿಸ್ತಾರದ ಹರವುವನ್ನು ಅರಿಯಬಹುದಷ್ಟೆ. ಅನುಭವವೆಂಬುದು ವಿಜ್ಞಾನಿಯ ಸಂಶೋಧನೆಗೆ ಕೇವಲ ಭೌತಿಕ ಪ್ರಪಂಚದ, ದೃಶ್ಯ ಪ್ರಪಂಚದ ಸಂಗತಿಗಳು ಮಾತ್ರ ಸಿಗುತ್ತವೆ. ಆದರೆ ದೃಶ್ಯವಲ್ಲದ, ಭೌತಿಕವಲ್ಲದ ಒಂದು ಜಗತ್ತು ಇದೆ. ಅದರ ಗಾಥ, ನಿಗೂಢ ವಿವರಗಳು

ವಿಜ್ಞಾನಿಗೂ ನಿಲುಕುವುದಿಲ್ಲ. ಅಂತಹ ನಿಗೂಢ ಜಗತ್ತಿನ ಆಕರ್ಷಣೆಯ ಕುತೂಹಲಕ್ಕೆ ಜೀವಕೊಟ್ಟು ಅದರ ಒಳಹೊರಗಿನ ಕಥಾನಕವನ್ನು ರೋಚಕವಾಗಿ ಸೃಜಿಸಬಲ್ಲ ಅಪೂರ್ವ ಪ್ರತಿಭೆ ರವಿ ಬೆಳಗೆರೆಯಂಥ ಟಿಪಿಕಲ್ ವ್ಯಕ್ತಿಗೆ/ಬರಹಗಾರರಿಗೆ ಮಾತ್ರ ಇರಲು ಸಾಧ್ಯ. 'ಮಾಟಗಾತಿ', 'ಸರ್ಪ ಸಂಬಂಧ'ದ ಯಶಸ್ಸು ಅದಕ್ಕೆ ಜ್ವಲಂತ ಸಾಕ್ಷಿಯಾಗಿ ನಿಲ್ಲುತ್ತವೆ. ಅಷ್ಟೇಯಲ್ಲ ರವಿಯವರು ಕಥೆಯನ್ನು ಹೇಳಿಕೊಂಡು ಹೋಗುವ ರೀತಿಯೂ ಜೀವಂತಿಕೆಯಿಂದ ಕೂಡಿದೆ. ಕ್ಷಣ ಕ್ಷಣಕ್ಕೂ ಕುತೂಹಲವನ್ನು ಕೆರಳಿಸುವ ಮೂಲಕ ಮಾಹಿತಿಯನ್ನು ನೀಡುವ ತಂತ್ರಗಾರಿಕೆ ಇದೆಯಲ್ಲ, ಓದುಗರ ಮನಸ್ಸನ್ನು, ಅರಿತವರ ಸ್ವತ್ತೇನೋ! ಎಂಬಂತಿದೆ. ಕಾದಂಬರಿಯ ಕಥೆಯ ಜೊತೆಯಲ್ಲೇ ಲೇಖಕರು ತಮಗಾದ ಅನುಭವ ದೊರೆತ ಮಾಹಿತಿಯ ಆಕರಗಳನ್ನು ನೀಡುತ್ತ ಸಾಗುತ್ತಾರೆ. ವಿಷಯಕ್ಕೆ ಸಂಬಂಧಿಸಿದಂತೆ ಅವರು ನೀಡುವ ಮಾಹಿತಿಯಿಂದಲೇ ಇದರ ಮೇಲೆ ಲೇಖಕರಿಗಿರುವ ಹಿಡಿತದ ಅರಿವಾಗುತ್ತದೆ.

'ಪುರಾತನ ಅಸ್ಥಿಪಂಜರಗಳು ಕೂಡ ಮಾಟಗಾತಿಯ ಆಗಮನದಿಂದಾಗಿ ಥರಥರನೆ ಕಂಪಿಸುತ್ತವೆ'. 'ಗೋರಿಯಾಳದ ಮಕ್ಕಳ ಶವಗಳು ಆ ಚಿರ ನಿದ್ರೆಯಲ್ಲೂ ಚಿಟ್ಟನೆ ಜೀರಿ ಎದ್ದು ಕೂಡಲು ಹವಣಿಸುತ್ತವೆ' ಎಂಬಲ್ಲಿಯ ಅವರ ನಿರೂಪಣೆಯನ್ನು ಗಮನಿಸಿದರೆ ತಿಳಿಯುತ್ತದೆ. ತೇಜಮ್ಮನ ಭಯಂಕರ ಶಕ್ತಿಯನ್ನು ಶಬ್ದಗಳಲ್ಲಿ ಮೂರ್ತಗೊಳಿಸಿದ್ದಾರೆ. ಜೀವಕೋಶವೇ ನಶಿಸಿಹೋಗಿ ಬರಿ ಅಸ್ಥಿಪಂಜರ ಕಂಪಿಸುತ್ತವೆಂದರೆ ತೇಜಮ್ಮನ ಕ್ಷುದ್ರಶಕ್ತಿಗೆ ಅದಿನ್ನೇನು ಅನ್ನಬೇಕು.

'ಸರ್ಪ ಸಂಬಂಧ' ಈ ಹಿಂದೆ ಹೇಳಿದಂತೆ ನಿಗೂಢ ಆಚರಣೆಗಳನ್ನು ನಂಬಿ, ಆಚರಿಸುವ ಜನರ ನಡುವೆ ಹುಟ್ಟಿಕೊಳ್ಳುವ ಕಾದಂಬರಿ ಸರ್ಪ ಸಂಬಂಧ. ಮಾಟಾಗಾತಿಯ ಮುಂದುವರಿಕೆ ಎನ್ನುವುದನ್ನು ಮರೆತರೂ ಅಂತಹ ವ್ಯತ್ಯಾಸವೇನಾಗದು. ಇದು ಅದಕ್ಕಿಂತಲೂ ರೋಚಕವಾದ ಪ್ರಪಂಚವೇ! ಇದು ಸರ್ಪಾರಾಧಕರ ಕಥನವಲ್ಲ, ಶಿಷ್ಟ ಪರಿಶಿಷ್ಟ ಸಾಧಕರ ನಡುವಿನ ಕದನದ ಸರಳ ಸಂಗ್ರಹವೂ ಅಲ್ಲ. ಮನುಷ್ಯ ಸ್ವಭಾವ, ಸಂಬಂಧಗಳ ಸರಳ ಬಂಧದಂತೆ ಕಂಡರೂ ಒಳಗೇ ಅಚ್ಚರಿಗಳನ್ನು ಕಟ್ಟಿಕೊಡುವ 'ಪ್ಯಾಂಡೋರಾ ಬಾಕ್ಸ್!' ಮೊಗೆದಷ್ಟು ತಲ್ಲಣ, ತೆರೆದಷ್ಟು ಅಚ್ಚರಿ!

ಇಲ್ಲಿ ಸರ್ಪ ಕೇವಲ ಸರೀಸೃಪವಲ್ಲ; ಮತ್ತು ಅಗ್ನಿನಾಥ, ಇನಿ, ತೇಜಮ್ಮ ಮತ್ತಿತರ ಪಾತ್ರಗಳು ನಿಮಿತ್ತ ಮಾತ್ರವೂ ಅಲ್ಲ. ಸರ್ಪ ನಮ್ಮ ಕುತೂಹಲದ, ಮೌಢ್ಯದ ಪ್ರತೀಕವಾಗಿ ನಿಂತರೆ, ಅದರ ಸುತ್ತ ಬಿಚ್ಚಿಕೊಳ್ಳುತ್ತ ಹೋಗುವ ಅಗ್ನಿನಾಥನಾದಿಯಾದ ಪಾತ್ರಗಳು ಮನುಷ್ಯ ಸಂಬಂಧಗಳನ್ನು, ಸ್ವಭಾವಗಳನ್ನು ಒರೆಗಿಡುವ ಸನ್ನಿವೇಶಗಳಿಗೆ ಪೂರಕವಾಗಿ ಮತ್ತೆ ಮತ್ತೆ ಪರೀಕ್ಷಿಸುವ ಸಾಕ್ಷಿಗಲ್ಲುಗಳಾಗಿ ನಿಲ್ಲುತ್ತವೆ. ಸರ್ಪ ಸಂಬಂಧವಾದ ಗಾಬರಿಗಳು, ಕಳವಳು ನಿಗೂಢ ಆಚರಣೆಗಳ ಚೌಕಟ್ಟಿನೊಳಗೆ, ಮನುಷ್ಯ ಸಹಜ ವಿಹ್ವಲತೆಯ ಆವರಣದೊಳಗೇ ಪರಿಪಕ್ವವಾಗುತ್ತ ನಡೆಯುವ ಸನ್ನಿವೇಶಗಳು ಪ್ರೇಮ-ಕಾಮ-ಮಮಕಾರ- ಮಾತ್ಸರ್ಯದ ಹಲವು ಹಳವಂಡಗಳಾಗಿ ಪ್ರಕಟವಾಗುತ್ತವೆ.

'ಹದಿನಾರು ವರ್ಷದ ವ್ರತ ಮುಗಿಯಲಿ ಮಂಜ್ರಾ! ಪಂಚಮಿಯಂದು ಯಾವತ್ತು ಶಾವಿಗೆ ಮುರಿದವಳಲ್ಲ. ಹದಿನಾರು ಅಂಕಣದ ಮನೆಯ ಪರಶೀಕಲ್ಲಿನ ಮೇಲೆ ನಡುಮಧ್ಯಾಹ್ನದ ಹೊತ್ತು ಅಂಕೆ ಮೀರಿ ಗಂಡನೊಂದಿಗೆ ಹಾವಾಗಿ ಹರಿಯಲಿಲ್ಲ. ಅಂಗಳದ ಕೃಷ್ಣ ತುಳಸಿಗೆ ಮೈಲಿಗೆ ನೆರಳೂ ಕೆಡವಲಿಲ್ಲ. ಹುಣ್ಣಿಮೆಯ ರಾತ್ರಿ ಬಿಟ್ಟಗಣ್ಣು ಮುಚ್ಚಿ ಮನಸ್ಸಿಗೆ ದ್ರೋಹ ಮಾಡಲಿಲ್ಲ. ಹುಡುಕಾಡಿ ತಂದು ಮಂಚದ ಬದಿಯಲ್ಲೊಂದು ತೊಟ್ಟಿಲು ಕಟ್ಟಿಕೊಂಡಿದ್ದೇನೆ. ಖಾಲಿ ಉಳಿಸಬೇಡ ಮಂಜ್ರಾ. ನನ್ನ ಗರ್ಭಕ್ಕೊಂದು ಜೋಗುಳ ಕಲಿಸು!

ಪ್ರಾರ್ಥಿಸಿತು ಗುಣಶಾರಿಯ ಒಡಲು'.[೧೨]

ಗುಣಶಾರಿಗೆ ಮೂವತ್ಮೂರು ವರ್ಷ ಯಾರೂ ಪೂಜಿಸದ ಹಾಳು ದೇಗುಲದಲ್ಲಿ ಕಂಬಕ್ಕೆ ಆತುನಿಂತ ಗಂಧರ್ವ ಶಿಲ್ಪದಂತಿದ್ದಾಳೆ. ಹದಿನಾಲ್ಕಕ್ಕೆ ಮೈ ನೆರತವಳಿಗೆ ಹದಿನಾರಕ್ಕೆ ಮದುವೆಯಾಯಿತಾದರೂ ನಂತರದ ಹದಿನಾರು ವರ್ಷಗಳೂ ವೃಥಾ ಕಳೆದುಹೋದವು. ಅವಳ ಬಂಗಾರದ ಒಡಲಲ್ಲಿ ಬೆಳಕ ಬೀಜ ಮೊಳೆಯಲಿಲ್ಲ. ಅವಳ ತಾಯ್ತನದ ಬಯಕೆಯನ್ನು ರವಿಯವರು ಅಷ್ಟು ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ. ಇಡೀ ಕಾದಂಬರಿ ಗೆಲ್ಲುವುದು ಇಂತ ಸೂಕ್ಷ್ಮಾತಿಸೂಕ್ಷ್ಮ ವಿವರಗಳಿಂದ. ಕಾದಂಬರಿಯನ್ನು ಓದುತ್ತಾ ಹೋದಂತೆ ಪೂರಕ ಸಾಹಿತ್ಯದ ಅಧ್ಯಯನವನ್ನು ರವಿಯವರು ಯಾವ ಪರಿಯಲ್ಲಿ ಮಾಡಿದ್ದಾರೆನ್ನುವುದು ಒಂದು ತರಹದ ಗಾಬರಿಯನ್ನು, ಬೆರಗನ್ನೂ ಹುಟ್ಟಿಸುತ್ತದೆ. ಪ್ರಾಯಶಃ ಈ ಹಿಂದೆ ಹೇಳಿದಂತೆ ಇದನ್ನು ಟಿಪಿಕಲ್ ರವಿ ಬೆಳಗೆರೆಯವರ ಸ್ಟೈಲ್(Style) ಎಂದು ಕರೆಯಬಹುದು. ಇದು ಒಂದು ಜನಪ್ರಿಯ ಕಾದಂಬರಿ, ಸಾಹಿತ್ಯ ಪ್ರಕಾರವಾಗಿ ಕಂಡರೂ ಒಳಗೊಳಗೇ ಸೂಕ್ಷ್ಮವಾದ 'ಮಾನವ ಶಾಸ್ತ್ರೀ'ಯ, 'ಮನಃಶಾಸ್ತ್ರೀ'ಯ ವಿನ್ಯಾಸಗಳನ್ನು ಸಮರ್ಥವಾಗಿ ಬಳಸಿಕೊಳ್ಳುವ ನೂತನ ಮಾದರಿಯಾಗಿ ಸರ್ಪಸಂಬಂಧ ನಿಲ್ಲುತ್ತದೆ. ಅಲ್ಲದೆ ಅಂತರ್‌ಶಿಸ್ತೀಯ ಅನೇಕ ವಿಭಾಗಗಳನ್ನು ರವಿಯವರ ಬರಹಗಳು ಒಳಗೊಂಡಿರುವುದು ಅಚ್ಚರಿಯನ್ನುಂಟು ಮಾಡುತ್ತದೆ.

ಮಾಟಗಾತಿ, ಸರ್ಪ ಸಂಬಂಧ ಒದಕ್ಕೊಂದು ತಳುಕು ಹಾಕಿಕೊಂಡಂತಿವೆ. ಈಗಾಗಲೇ ತಿಳಿದಿರುವಂತೆ ಇವೆರಡನ್ನು ಪ್ರತ್ಯೇಕವಾಗಿ ಓದಿಕೊಂಡರೂ ವ್ಯತ್ಯಾಸವೇನು ಇಲ್ಲ. ನಕ್ಷತ್ರ, ಘಳಿಗೆ ಇತ್ಯಾದಿ ಲಕ್ಷಣದಲ್ಲಿ ಜನಿಸಿದವರನ್ನು ಅಗೋಚರ ಶಕ್ತಿಯಿಂದ ನೂರಾರು ಕಿಲೋಮೀಟರ್ ದೂರದಲ್ಲಿದ್ದು, ಸಾಮಾನ್ಯ ಜನರನ್ನು ಅಸ್ತ್ರವಾಗಿ, ಸಾಧನೆಯ ಮೆಟ್ಟಿಲಾಗಿ ಬಳಸಿಕೊಳ್ಳಲಾಗುತ್ತದೆ. ಪರಿಣಾಮ ಮಾತ್ರ ಘೋರ. ವಿಜ್ಞಾನವನ್ನು ಮೀರಿದ್ದೂ ತೇಜಮ್ಮನ ಕ್ಷುದ್ರ ಶಕ್ತಿಯ ಘೋರ, ಸಿದ್ಧಿ, ಸಾಧನೆ, ಪ್ರಯೋಗ, ಪರಿಣಾಮಗಳಿಗೆ ಹಿಡಾಗುವವರು, 'ಮಾಟಗಾತಿ'ಯ 'ದೇವಯಾನಿ', 'ಸರ್ಪ ಸಂಬಂಧ'ದ 'ಗುಣಶಾರಿ' ಮತ್ತು 'ಇನಿ'. ಮಾಟಗಾತಿ ಕಾದಂಬರಿಯಲ್ಲಿ ಬರುವ ತೇಜಮ್ಮನ ಕ್ಷುದ್ರ ಜಗತ್ತು ಸರ್ಪ ಸಂಬಂಧದವರೆಗೂ ವಿಸ್ತರಿಸಿ ಎಡೆಯೆತ್ತಿ ನಿಲ್ಲುತ್ತದೆ; ಪರಿಣಾಮಗಳಲ್ಲಿಯೂ ಸಹ. ಪ್ರಾರಂಭದಲ್ಲಿ ಸರ್ಪ ಸಂಬಂಧ ಕಾದಂಬರಿಯು ಗಿರೀಶ್ ಕಾರ್ನಾಡರ 'ನಾಗಮಂಡಲ' ಮತ್ತು ಚಂದ್ರಶೇಖರ ಕಂಬಾರರ 'ಸೀರಿ ಸಂಪಿಗೆ' ನಾಟಕಗಳನ್ನು ನೆನಪಿಸುತ್ತದೆಯಾದರೂ, ಅದರ ಮತ್ತೊಂದು ವಿಧಾನದಂತೆ ಸಾಗುತ್ತಾ ಇದ್ದಕ್ಕಿದ್ದಂತೆ ಮಾಟಗಾತಿಯ ಪತ್ರ ಪ್ರವೇಶದೊಂದಿಗೆ ಮತ್ತೊಂದು ಪ್ರಪಂಚ ತೆರೆದುಕೊಳ್ಳುತ್ತದೆ. ಇಲ್ಲಿ ವಾಮ ಜಗತ್ತನ್ನು ಅಘೋರ ಶಕ್ತಿಯನ್ನು ವಿಜ್ಞಾನ ಎದುರುಗೊಳ್ಳುತ್ತದೆ. ತೇಜಮ್ಮನಂತ ಮಾಟಗಾತಿಯ ಕ್ಷುದ್ರ ಶಕ್ತಿಯ ಪರಿಣಾಮದಿಂದಾಗಿ ಅಮಾಯಕ ದಂಪತಿಗಳಾದ ಸೀತಾರಾಮು, ಗುಣಶಾರಿ ಹೊಟ್ಟೆಯಲ್ಲಿ ತನ್ನ ಸಾಧನೆಗೆ ಅಸ್ತ್ರವಾಗಿ ಒಂದು ಸರ್ಪ ಶಿಶುವನ್ನು ಬೆಳೆಸಿದ್ದಾಳೆ ಮತ್ತು ಅದಕ್ಕಾಗಿ ಹದಿನಾರು ವರ್ಷಗಳನ್ನು ಕಳೆದಿದ್ದಾಳೆ ಎನ್ನುವುದನ್ನು ವಿಜ್ಞಾನ ಒಪ್ಪುವುದಿಲ್ಲ. ಅದರಾಚೆಗೂ ಇರುವ ಸತ್ಯವನ್ನು ಅದು ತಳ್ಳಿಹಾಕುತ್ತದೆ. ಬರಲಿರುವವಳು ಆಟ ಅರಿಯದ ಹೆಂಗಸಲ್ಲ ಅವಳು ಆರಿ ತೇರಿದ ಮಾಟಗಾತಿ ಎಂಬುದು ಮಾತ್ರ ವಾಮ ಜಗತ್ತಿನ ನಂಬಿಕೆ.

‘ಕ್ಷುದ್ರ ಉಪಾಸಕಿ ತೇಜಮ್ಮ ಹೇಗೆ ಸಾಯಬೇಕೆಂಬುದನ್ನು ಅಗ್ನಿನಾಥ ಆ ಹೊತ್ತಿಗಾಗಲೇ ನಿರ್ಧರಿಸಿಯಾಗಿತ್ತು. ಅವಳಾಗಿಯೇ ವಧಾ ಸ್ಥಾನಕ್ಕೆ ಹತ್ತಿ ಬಂದಿದ್ದಾಳೆ. ಸಾವು ಖಚಿತವೆಂಬುದು ಈಗ ಅವಳಿಗೂ ಮನವರಿಕೆಯಾಗಿದೆ. ತನ್ನ ಎಲ್ಲ ಪ್ರಯೋಗಗಳನ್ನು ಮೀರಿದಂತಹ, ಅವೆಲ್ಲವುಗಳ ನಿರ್ಧಯತೆಯನ್ನು ಮರೆಸುವಂತಹ ಒಂದು ಭಯಾನಕ ಸಾವು ಅವಳದಾಗಲಿದೆ. ಅವಳ ಕೈಲಿದ್ದ ಶ್ರೀಚಕ್ರ ರಕ್ಷೆಯೇ ಕಳಚಿಹೋಗಿರುವಾಗ ಅವಳು ತನ್ನ ದೃಷ್ಟಿಯಲ್ಲಿ ಈಗಗಾಲೇ ಸತ್ತುಹೋಗಿರುವ ಜಡ ವನಕೆಯ ಗೊಂಬೆ, ಅವಳನ್ನಿನ್ನು ಕೊಂದು ಪ್ರಯೋಜನವಿಲ್ಲ. ತಾನು ಕ್ಷಮಿಸಿ ಕೈ ಬಿಟ್ಟರೂ ತೇಜಮ್ಮ ಬದುಕಿರಲಾರಳು. ಆದರೆ ತಾನು ಕ್ಷಮಿಸುವುದಿಲ್ಲ. ಸಮಸ್ತ ವಾಮ ಪ್ರಪಂಚವೂ ಈ ಕ್ಷುದ್ರ ಹೆಂಗಸಿನ ದಾರುಣ ಮರಣವನ್ನು ಉದಾಹರಣೆಯೆಂಬಂತೆ ವೀಕ್ಷಿಸಬೇಕು. ನೆನಪಿಟ್ಟುಕೊಳ್ಳಬೇಕು. ಅಂಥದೊಂದು ಸಾವನ್ನೂ ಅವಳಿಗೆ ಕೊಡಮಾಡುತ್ತೇನೆ. ಹಾಗಂತ ನಿರ್ಧರಿಸಿದ್ದ ಅಗ್ನಿನಾಥ. ಕಾಲಮಂತ್ರ ಪಠಿಸುತ್ತಲೇ ವಧಾಬಯಲಿನ ಮಧ್ಯಕ್ಕೆ ಬಂದವನು, ಅಲ್ಲಿದ್ದ ಸಮಸ್ತರಿಗೂ ಕದಲದಂತೆ ಚಲಿಸದಂತೆ, ಯಾವ ಉನ್ಮತ್ತ ಕ್ರಿಯೆಗೂ ಕೈ ಹಾಕದಂತೆ ಸಂಜ್ಞೆಗಳಲ್ಲೇ ಆದೇಶ ನೀಡಿದ. ಜೋಗೇರಗುಡ್ಡ ಸ್ತಬ್ಧವಾಯಿತು. ಆ ತನಕ ಹೆಡೆಯೆತ್ತಿದ ಸರ್ಪ ಸಂಕುಲವೆಲ್ಲ ಬೆದರಿ ತಲೆತಗ್ಗಿಸಿತು.

“ಸ್ತಂಭನ!” ದೊಡ್ಡ ದನಿಯಲ್ಲಿ ಅಬ್ಬರಿಸಿದ ಅಗ್ನಿನಾಥ. ಕೈಗಳಲ್ಲಿ ಶ್ರೀಚಕ್ರ ಹಿಡಿದ ಅಘೋರಿಯ ದೇಹ ಆ ಹೊತ್ತಿಗೆ ಮುಕ್ಕಾಲು ಭಾಗ ಮರಗಟ್ಟಿ ಸತ್ತುಹೋಗಿತ್ತು’.[೧೩] ‘ಸರಿದು ಬಂದ ನಿಹಾರಿಕಾ, ಅಗ್ನಿನಾಥನ ಪಕ್ಕದಲ್ಲಿ ದೃಢವಾಗಿ ನಿಂತುಕೊಳ್ಳುವುದಕ್ಕೂ ಬಂಡೆಯೊಂದರ ಮರೆಯಲ್ಲಿ ಕುಳಿತಿದ್ದ ಸರ್ಪಶಾಸ್ತ್ರಜ್ಞ ವಿಶ್ವ, ಈ ಹೆಂಗಸು ಇನ್ನೂ ಕೆಲವೇ ಗಂಟೆಗಳೊಳಗಾಗಿ ಸಾಯುತ್ತಾಳೆ. ಅವಳಿಗೆ ರೇಬಿಸ್ ಆಗಿದೆ... ಅವಳನ್ನು ಜಗತ್ತಿನ ಯಾವ ದಿವ್ಯೌಷಧಿಯೂ ಬದುಕಿಸೋಕಾಗಲ್ಲ ಅಂದ. ಸರ್ಪಶಾಸ್ತ್ರಜ್ಞನಿಗೆ ಇಷ್ಟೆಲ್ಲ ನೋಡಿದ ನಂತರವೂ ತಾನು ನಂಬಿದ ವಿಜ್ಞಾನದ ಮೇಲೆ ವಿಶ್ವಾಸ ಅಳಿದಿಲ್ಲ. ತೇಜಮ್ಮನಿಗಾಗಿರುವುದು ಪ್ರಾಣಿ ದಂಷ್ಟ್ರದಿಂದಾದ ನಂಜು ಅಂದುಕೊಂಡಿದ್ದಾನೆ. ವಾರಧ್ಯ ನಗರಿಯ ಶಾಸ್ತ್ರಿಗಳ ಮನೆಯ ಮಹಡಿಯ ಮೇಲೆ ಮಾಟಗಾತಿಯ ಮುಖಕ್ಕೆ ಬಾವಲಿ ಬಡಿದಿತ್ತು ಎಂಬುದರ ವಿವರಣೆ ನೀಡಿಬಿಟ್ಟರೆ, ಇದು ಬಾವಲಿಯ ಉಗುರು ತಾಕಿರುವುದರಿಂದಲೇ ಉಂಟಾದ ನಂಜು ಮತ್ತು ಅದರ ವೈಪರಿತ್ಯ ಎಂದು ವಾದಿಸುತ್ತಾನೆ. ವಿಜ್ಞಾನಕ್ಕೆ ವಾದ ಗೊತ್ತು. ಅದರಾಚೆಗಿನ ಸತ್ಯಗಳು ಗೊತ್ತಿಲ್ಲ. ಬಾವಲಿಯ ಉಗುರು ತಾಕಿದರೆ, ನಾಯಿ ಕಡಿದಾಗಿನಂತಹುದೇ ನಂಜು ದೇಹಕ್ಕಾಗುತ್ತದೆ ಎಂದು ನಂಬುತ್ತದೆ ಸರ್ಪಶಾಸ್ತ್ರಜ್ಞನ ವಿಜ್ಞಾನ’.[೧೪] ಭೌತವಲ್ಲದ ಒಂದು ಜಗತ್ತಿನ ನಿಗೂಢ ವಿವರಗಳು ವಿಜ್ಞಾನಿಗೆ ನಿಲುಕುವುದಿಲ್ಲ. ಒಬ್ಬನ ಅನುಭವಕ್ಕೆ ಬಂದದ್ದು ಇನ್ನೊಬ್ಬನ ಅನುಭವಕ್ಕೆ ಬರದಿರಬಹುದು. ಹಾಗೆ ನೋಡಿದರೆ ದೇವರಿದ್ದಾನೋ ಇಲ್ಲವೋ ಎಂಬ ಚರ್ಚೆ ಯಾವತ್ತಿಗೂ ಅಪೂರ್ಣವೇ. ಅದರಂತೆಯೇ ಮಾಟ, ಮಂತ್ರ, ಯಂತ್ರ ಇತ್ಯಾದಿಗಳ ಬಗ್ಗೆ ಇದೆ ಅಂತಿಮ ಎಂಬ ಧಾಟಿಯಲ್ಲಿ ಮಾತನಾಡುವುದು ಕಷ್ಟ. ದೇವರೇ ಇಲ್ಲ ಎಂದು ವಾದಿಸುವವರು ಸಹ ದೇವಸ್ಥಾನ, ಪೂಜೆ, ಆರಾಧನೆ, ಮಂತ್ರ ಇತ್ಯಾದಿಗಳು ಅಸ್ತಿತ್ವದಲ್ಲಿರುವುದನ್ನು ಒಪ್ಪಿಕೊಳ್ಳುತ್ತಾರೆ. ಅಂತೆಯೇ ಮಾನವಾತೀತ ಶಕ್ತಿಗಳ ಸುತ್ತ ಹುಟ್ಟಿಕೊಂಡಿರುವ ಸಾಧನೆ, ಪ್ರಯೋಗ, ತಂತ್ರ ಇತ್ಯಾದಿಗಳೂ ನಮ್ಮ ಸಮಾಜದ ನಡುವೆ ತಲೆತಲಾಂತರದಿಂದ ಅಸ್ತಿತ್ವದಲ್ಲಿವೆ. ದೆವ್ವವನ್ನು ನಂಬದಿದ್ದರೂ ಅದರೆಡೆಗೆ ಮನುಷ್ಯನಿಗಿರುವ ಭಯ, ನಂಬಿಕೆ ಮತ್ತು ಅದರ ಸುತ್ತಲಿನ ಸಂಪ್ರದಾಯಗಳು ತಿರಸ್ಕರಿಸಲು ಸಾಧ್ಯವಿಲ್ಲ.

ವಾಮಾಚಾರಿಗಳು, ಮಾಟಗಾರರು, ಸೌಮ್ಯ ಶಕ್ತಿ ಉಪಾಸಕರು, ಅಘೋರಿಗಳು ಮುಂತಾದವರ ಸಂಪ್ರದಾಯಗಳನ್ನು ಆಧಾರವಾಗಿಟ್ಟುಕೊಂಡು ಬರೆದ ಈ ಕಾದಂಬರಿಗಳು ವಾಮಚಾರ ಜಗತ್ತಿನ ವಿಸ್ತಾರವಾದ ಮಾಹಿತಿಯನ್ನು ನೀಡುತ್ತವೆ. ರವಿಯವರ ಇನ್ನೊಂದು ಕಾದಂಬರಿ 'ಹೇಳಿ ಹೋಗು ಕಾರಣ' ಅರ್ಥಿಯಲ್ಲಿ ಈ ವಿಷಯ ಬರುತ್ತದಾದರೂ ಇಷ್ಟು ವಿಸ್ತಾರವನ್ನು ಪಡೆದುಕೊಂಡಿಲ್ಲ. ಈ ವಿಷಯಕ್ಕೆ ಸಂಬಂಧಿಸಿದಂತೆ ಅವರ ಆಶ್ಚರ್ಯ, ಜ್ಞಾನ, ಬರವಣಿಗೆ ಮತ್ತು ಕಟ್ಟಿಕೊಡುವ ರೀತಿ(Style) ಕಾದಂಬರಿಗಳ ಯಶಸ್ಸಿಗೆ ಕಾರಣವೆಂದೂ ಹೇಳಬಹುದು.

**೩.೩.೩. ಅಪರಾಧಿ(ಕ್ರೈಮ್) ಸಂಬಂಧಿತ ಕಾದಂಬರಿಗಳು**

ಎರಡು ಶತಮಾನಗಳನ್ನು ಪೂರೈಸಿದ ಪ್ರಪಂಚದ ಪತ್ತೆದಾರಿ ಸಾಹಿತ್ಯ ಅನೇಕ ಏಳು-ಬೀಳುಗಳನ್ನು ಕಂಡಿದೆ. ತನ್ನ ಅಸ್ತಿತ್ವಕ್ಕಾಗಿ ಇನ್ನೂ ಹೊರಾಡುತ್ತಲೇ ಇದೆ. ಸುಮಾರು ೧೮೦೦ರ ಅನಂತರ ಕ್ರೈಮ್-ಪತ್ತೇದಾರಿ ವಸ್ತುವಾಗುಳ್ಳ ಪ್ರತ್ಯೇಕ ಕಥೆ ಕಾದಂಬರಿಗಳ ರಚನೆಗೆ ಪ್ರಯತ್ನ ಪ್ರಾರಂಭವಾಯಿತು. ಜರ್ಮನ್, ಇಂಗ್ಲೀಶ್ ಭಾಷೆಗಳಲ್ಲಿ ಮೊದಮೊದಲು ಇಂಥ ಕಥೆ, ಕಾದಂಬರಿಗಳ ಪ್ರಕಟಣೆ ಪ್ರಾರಂಭವಾಗಿ, ಜನರನ್ನು ಸುಲಭವಾಗಿ ತಲುಪಬಲ್ಲ ಅತಿ ರಂಜನೀಯ, ಕುತೂಹಲ ಪೂರ್ಣ, ಜನಪ್ರಿಯ ಬರವಣಿಗೆ ಸಾಧ್ಯ ಎಂದು ಕಂಡುಕೊಂಡ ಕೂಡಲೇ ಪ್ರಪಂಚದಲ್ಲೆಲ್ಲ ಇಂಥ ಸಾಹಿತ್ಯದ ಮಹಾಪೂರ ಉಕ್ಕಿ ಹರಿಯಿತು. ಗಟ್ಟಿ-ಜೊಳ್ಳು, ಸರಸ-ವಿರಸ, ಅನುಭವಿ-ಅನನುಭವಿ ಎಲ್ಲವೂ ಚಲಾವಣೆಗೆ ಬಂದವು.

ಸರ್ ಅರ್ಥರ್ ಕಾನನ್ ಡಾಯ್ಲ್(ಷೆರ್ಲಾಕ್ ಹೋಮ್ಸ್ ಸೃಷ್ಟಿಕರ್ತ), ಜಿ.ಕೆ.ಚೆಸ್ಟರ್ ಟನ್, ಚಾರ್ಲ್ಸ್ ಡಿಕೆನ್ಸ್, ಎಡ್ಗರ್ ಅಲೆನ್ ಪೋ ಮುಂತಾದವರು, ಈ ಸಾಹಿತ್ಯ ಲೋಕದ ನಾಮಾಂಕಿತರು. ಪತ್ತೇದಾರಿ ಕಾದಂಬರಿಗಳನ್ನು ಬರೆದು ಇಂಗ್ಲೀಶ್‌ನಲ್ಲಿ ಗಟ್ಟಿ ತಳಹದಿಯ ಕೃತಿಗಳಿಗೆ ದಾರಿ ಮಾಡಿಕೊಟ್ಟರು. ೧೯೦೦ರ ನಂತರ ಇಂಗ್ಲೀಶ್ ಪತ್ತೇದಾರಿ ಸಾಹಿತ್ಯ ಪ್ರಕಾರದಲ್ಲಿ ಅತ್ಯುತ್ತಮ ಅತೀ ಜನಪ್ರಿಯ ಲೇಖಕರು ಹುಟ್ಟಿಕೊಂಡರು. ಅರ್ಲ್ ಸ್ಟಾನ್ಲಿ ಗಾರ್ಡ್‌ನರ್(ಪೆರ್ರಿ ಮ್ಯಾಸನ್ ಸೃಷ್ಟಿಕರ್ತ), ಅಗಾಥಾ ಕ್ರಿಸ್ಟಿ, ಸಿಡ್ನಿ ಷೆಲ್ಡನ್, ಜೇಮ್ಸ್ ಹ್ಯಾಡ್ಲಿ ಛೇಸ್, ಇಯಾನ್ ಫ್ಲೆಮಿಂಗ್(ಜೇಮ್ಸ್ ಬಾಂಡ್ ಸೃಷ್ಟಿಕರ್ತ) ಮೊದಲಾದವರು ಇಡೀ ಜಗತ್ತೇ ಮೆಚ್ಚಿಕೊಳ್ಳುವಂತಹ ಪತ್ತೇದಾರಿ ಕೃತಿಗಳನ್ನು ಸೃಷ್ಟಿಸಿದರು.

ಭಾರತೀಯ ಸಾಹಿತ್ಯದಲ್ಲೂ ಪತ್ತೇದಾರಿ ಸಾಹಿತ್ಯ ಹಿಂದೆ ಬೀಳಲಿಲ್ಲ. ಬಂಗಾಳಿ, ಹಿಂದಿ, ಮರಾಠಿ, ತಮಿಳು ಭಾಷೆಯಲ್ಲಿ ಪತ್ತೇದಾರಿ ಕೃತಿಗಳು ಸೃಷ್ಟಿಯಾಗತೊಡಗಿದವು. ಕನ್ನಡದಲ್ಲಿಯೂ ಸು ೧೯೦೦ರಕ್ಕೂ ಮೊದಲೇ ಕೆಲವು ಪ್ರಯತ್ನಗಳು ನಡೆದವು. ನಂಜನಗೂಡು ವೆಂಕಟಕೃಷ್ಣಯ್ಯಂಗಾರ್ಯರು(ನಂಜನಗೂಡು ತಿರುಮಲಾಂಬರ ತಂದೆ), ಎಂ.ವೆಂಕಟಕೃಷ್ಣಯ್ಯ, ಸಿ. ರಾಜಗೋಪಾಲ ಶೆಟ್ಟಿ(ಕಥಾ ಸರಿತ್ಸಾಗರ ದಂತ ರಾಜ, ಮಂತ್ರಿ, ಚೋರರ ಲೋಕದ ಕತೆಗಳನ್ನು ಬರೆದವರು), ನರಹರಿ ಶರ್ಮ ಮೊದಲಾದವರು ಕನ್ನಡದಲ್ಲಿ ಸ್ವತಂತ್ರ ಸಾಹಸ ಪತ್ತೇದಾರಿ ಕೃತಿಗಳನ್ನು ರಚಿಸಿ ಕನ್ನಡ ಪತ್ತೇದಾರಿ ಸಾಹಿತ್ಯಕ್ಕೊಂದು ಪ್ರತ್ಯೇಕ ಶೈಲಿಯನ್ನೇ ತೋರಿಸಿಕೊಟ್ಟರು. ನಂತರ ಕನ್ನಡ ಸಂಸ್ಕೃತ ಪಂಡಿತರು ಇದೇ ಜಾಡಿನಲ್ಲಿ ಪತ್ತೇದಾರಿ ಕಾದಂಬರಿಗಳನ್ನು ರಚಿಸಿದರು. ಈ ಪ್ರಯತ್ನಗಳಿಂದ ಕನ್ನಡ ಭಾಷೆಯಲ್ಲಿ ಪತ್ತೇದಾರಿ ಕಾದಂಬರಿಗಳ ಅವತಾರವಾದ ಲಾಭವಾದರೂ ಒಂದು ರೀತಿಯ ನೂರು ವರ್ಷದ ಹಿಂದಿನ ಬರವಣಿಗೆ ಶೈಲಿ ಮಾತ್ರ ಉಳಿದುಕೊಂಡಿತು. ಪತ್ತೇದಾರಿ ಕಾದಂಬರಿ ಎಂದರೆ ಇದೇ ಶೈಲಿ ಇರಬೇಕೇನೋ ಎನ್ನುವಂತೆ ಹಳೆಯ ಹೊಸ ಪತ್ತೇದಾರಿ

ಲೇಖಕರೆಲ್ಲರೂ ಈ ಶೈಲಿಯನ್ನೇ ಅನುಕರಿಸಿದರು. ಬಹುಶಃ ೧೯೫೦ರಲ್ಲಿ ಪತ್ತೇದಾರಿ ಕಾದಂಬರಿಗಳನ್ನು ಬರೆಯಲು ಪ್ರಾರಂಭಿಸಿದ ಮ. ರಾಮಮೂರ್ತಿ ಈ ಪ್ರಕಾರಕ್ಕೊಂದು ಅದ್ಭುತ ಸಹಜತೆ, ಸುಂದರ ಭಾಷೆಯ ಉಪಯೋಗ, ಲವಲವಿಕೆಯ ವೇಗ ತೋರಿಸಿಕೊಡದಿದ್ದಲ್ಲಿ ಕನ್ನಡ ಪತ್ತೇದಾರಿ ಸಾಹಿತ್ಯ ಆ ಕಾಲದ 'ಅದೇ ರಾಗ ಅದೇ ಹಾಡು' ಎನ್ನುವ ರೀತಿಯಲ್ಲೇ ಉಳಿದುಕೊಂಡಿರುತ್ತಿತ್ತೇನೋ!

ಪತ್ತೇದಾರಿ ಬರವಣಿಗೆ ಕನ್ನಡದ ನಂತರದ ಕೆಲವು ಹಿರಿಯ ಸಾಹಿತಿಗಳ ಮೊದಮೊದಲ ಬರವಣಿಗೆಯೂ ಆಯಿತು. ಡಾ. ಶಿವರಾಮ ಕಾರಂತ ಅವರು ೧೯೨೪ರಲ್ಲಿ 'ವಸಂತ' ಮಾಸ ಪತ್ರಿಕೆಯನ್ನು ಸಂಪಾದಿಸಿ ಪ್ರಕಟಿಸಿದಾಗ, ಜನಪ್ರಿಯ ಓದು ಪತ್ರಿಕಾ ಓದುಗರಿಗೆ ದೊರಕಬೇಕು ಎನ್ನುವ ಉದ್ದೇಶದಿಂದಲೋ ಏನೋ? ವಸಂತದಲ್ಲಿ ಪ್ರಕಟಿಸಲು 'ವಿಚಿತ್ರ ಕೂಟ' ಮತ್ತು 'ಭೂತ' ಎನ್ನುವ ಎರಡು ಪತ್ತೇದಾರಿ ಕಾದಂಬರಿಗಳನ್ನು ಬರೆದರು. ಕನ್ನಡ ರಂಗಭೂಮಿಗೆ ಒಂದು ಹೊಸ ತಿರುವುಕೊಟ್ಟ ಶ್ರೀರಂಗ ಅವರು ನಲವತ್ತರ ದಶಕದಲ್ಲಿ 'ಭರಮಪ್ಪನ ಭೂತ' ಎನ್ನುವುದೊಂದು ಪತ್ತೇದಾರಿ ಕಾದಂಬರಿ ಬರೆದರು. ಕನ್ನಡದ ಪ್ರಾರಂಭದ ಕಾದಂಬರಿಗಳಲ್ಲಿ ಒಂದನ್ನು ಬರೆದ ಕೆರೂರು ವಾಸುದೇವಾಚಾರ್ಯ ಅವರು ಮೂವತ್ತರ ದಶಕದಲ್ಲಿ 'ಸರಲಾಕ್ಷ ಹುಲಿಮೀಸೆ' ಎನ್ನುವ ಪತ್ತೇದಾರನನ್ನು(ಷೆರ್ಲಾಕ್ ಹೋಮ್ಸ್ ಹಾಗೆ) ಇಟ್ಟುಕೊಂಡು ಕೆಲವು ಪತ್ತೇದಾರಿ ಕಾದಂಬರಿಗಳನ್ನು ಬರೆದರು. ಅಂತೆಯೇ ಕನ್ನಡದ ಅತ್ಯುತ್ತಮ ಸಾಹಿತ್ಯ ಕೃತಿಗಳನ್ನೂ, ಅನೇಕ ರಂಗಭೂಮಿ, ಚಲನಚಿತ್ರ ಸಾಹಿತ್ಯ ರಚಿಸಿದ ದೇವುಡು ನರಸಿಂಹ ಶಾಸ್ತ್ರಿ ಅವರೂ ೧೯೨೦ರ ಪ್ರಾರಂಭದಲ್ಲಿ 'ಕಳ್ಳರ ಕೂಟ' ಎನ್ನುವುದೊಂದು ಸಾಮಾಜಿಕ ಅಪರಾಧ–ಪತ್ತೇದಾರಿ ಕಥೆಯ ಕೃತಿಯೊಂದನ್ನು ಬರೆದರು.

ಹೀಗೆ ನಲವತ್ತರ ದಶಕದ ಅನಂತರ ತುಂಬ ಲೇಖಕರು ಪತ್ತೇದಾರಿ ಕಥೆ, ಕಾದಂಬರಿಗಳನ್ನು ಬರೆದರು. ಹೆಚ್ಚು ಕಾಲ ಬರೆದು ಕೆಲವು ಉತ್ತಮ ಕೊಡುಗೆಗಳನ್ನು ಕೊಟ್ಟ ಕೆಲವರನ್ನೂ ಹೆಸರಿಸಬಹುದು. ಎಸ್.ಎನ್.ಗುರುರಾಜಾಚಾರ್ಯ, ಎನ್. ಗುಂಡುಶಾಸ್ತ್ರೀ, ಕುಂದಾನಿ ಸತ್ಯನ್, ನವಗಿರಿನಂದ, ಕಿದಿಯೂರ ಹರೀಶ್‌ರಾವ್ ಕನ್ನಡ ಸಾಹಿತ್ಯದಲ್ಲೂ ಕೃಷಿ ಮಾಡಿದ ಬಾಲಚಂದ್ರ ಫಾಣೇಕರ, ಮತಿಘಟ್ಟ ಕೃಷ್ಣಮೂರ್ತಿ, ಕುಲಕರ್ಣಿ ಬಂದು ಮಾಧವ ಅವರು ಕೆಲ ಪತ್ತೇದಾರಿ ಕಾದಂಬರಿಗಳನ್ನು ಬರೆದರು.

೧೯೫೦ರ ನಂತರದ್ದು ಈ ಪ್ರಕಾರದ ಸಾಹಿತ್ಯ ಸಂಖ್ಯೆಯನ್ನು ಮುಗಿಲಿಗೇರಿಸಿದ ಕಾಲ. ಆದರೆ, ಉತ್ತಮ, ಮಧ್ಯಮ, ಅಧಮ ಎನ್ನುವ ಹಾಗೆ ಬರೆಯಲು ತಿಳಿದವರು, ಏನೂ ತಿಳಿಯದವರು ಎಲ್ಲರೂ ಬರೆದರು. 'ಸೆಕ್ಸ್' ಮತ್ತು 'ಕ್ರೌರ್ಯ' ಧಾರಾಳವಾಗಿ ಪತ್ತೇದಾರಿ ಕಾದಂಬರಿಗಳಲ್ಲಿ ಬೆರೆತುಕೊಂಡವು. ಅಶ್ಲೀಲ ಎನ್ನುವ ಮಟ್ಟಕ್ಕೂ ಮುಟ್ಟಿ, ಪತ್ತೇದಾರಿ ಕಾದಂಬರಿಗಳೆಂದರೆ ಮುಚ್ಚಿಟ್ಟುಕೊಂಡು ಓದುವಂಥವು ಎನ್ನುವಂತಾಯಿತು. ಯುವ ಓದುಗರನ್ನು ಆಕರ್ಷಿಸಲು ಕಂತೆ ಕಂತೆಯಾಗಿ ಇಂಥ ಮಾರುಕಟ್ಟೆ ಸಾಹಿತ್ಯ ಪ್ರಕಟವಾಗಲು ಈ 'ಅಶ್ಲೀಲ ಪತ್ತೇದಾರಿ ಕಾದಂಬರಿಗಳು' ತುಂಬ ಕಾರಣವಾದವು. ಇಂದಿಗೂ ಇಂತಹ ಅಪವಾದದಿಂದ ಈ ಸಾಹಿತ್ಯ ತಪ್ಪಿಸಿಕೊಂಡಿಲ್ಲ. ಜೊತೆಗೆ ಪತ್ತೇದಾರಿ ಸಾಹಿತ್ಯ ಎನ್ನುವುದು ಇನ್ನೂ ಸಾಧಾರಣ ಮಟ್ಟದಲ್ಲೇ ಕಾಣುವುದಕ್ಕೆ ಇದೂ ಒಂದು ಕಾರಣವಾಗಿರಬಹುದು.

ಮುಂದೆ ಕನ್ನಡ ಪತ್ತೇದಾರಿ ಸಾಹಿತ್ಯಕ್ಕೆ ದೊಡ್ಡ ತಿರುವು ಕೊಟ್ಟ ಇಬ್ಬರು ಮಹತ್ವದ ಕಾದಂಬರಿಕಾರರೆಂದರೆ ಎಂ.ರಾಮಮೂರ್ತಿ ಮತ್ತು ಎನ್. ನರಸಿಂಹಯ್ಯ, ಎನ್.ನರಸಿಂಹಯ್ಯನವರ

ಜಾಡಿನಲ್ಲೇ ಬರೆಯಲು ಪ್ರಾರಂಭಿಸಿ ತಮ್ಮದೇ ಆದ ಪ್ರತ್ಯೇಕ ಶೈಲಿಯನ್ನು ರೂಢಿಸಿಕೊಂಡರೂ, ಎಂದಿನ ಪತ್ತೇದಾರಿ ಶೈಲಿಯಿಂದ ತಪ್ಪಿಸಿಕೊಳ್ಳದೆ ಜನಪ್ರಿಯರಾದವರು ಸುದರ್ಶನ್ ದೇಸಾಯಿ ಹಾಗೆ ಎಂ. ರಾಮಮೂರ್ತಿ ಅವರ ಹಾಗೆಯೇ ಕನ್ನಡ ಪತ್ತೇದಾರಿ ಸಾಹಿತ್ಯಕ್ಕೊಂದು ಗೌರವ ತಂದು ಕೊಟ್ಟವರು ಟಿ.ಕೆ.ರಾಮರಾವ್, ವಿಜಯ ಸಾಸನೂರ ಮತ್ತು ಮನು. ಬರೀ ಪತ್ತೇದಾರಿ ಲೇಖಕರಾಗಿ ಮಾತ್ರ ಉಳಿಯದೆ ಕನ್ನಡ ಸಾಹಿತ್ಯ ವಾಹಿನಿಯಲ್ಲಿ ಉತ್ತಮ ಕಥೆಗಾರರಾಗಿ, ಕಾದಂಬರಿಕಾರರಾಗಿ ಪ್ರಸಿದ್ಧರಾದ ಈ ಮೂವರು ಪತ್ತೇದಾರಿ ಬರವಣಿಗೆಗೊಂದು ಬಿಗಿ, ಶೈಲಿ, ಸಾಹಿತ್ಯ ಅಂಶ, ಅಧ್ಯಯನದ ನೋಟ, ಉತ್ತಮ ಭಾಷಾ ಪ್ರಯೋಗಗಳಿಂದ ಕನ್ನಡದ ಅತ್ಯಂತ ಜನಪ್ರಿಯ ಪತ್ರಿಕೆಗಳಲ್ಲಿ ಸ್ಥಾನ ಗಳಿಸಿಕೊಂಡವರು. ಇವರ ಸಾಲಿಗೆ ರವಿ ಬೆಳಗೆರೆಯವರು ಸೇರಿಸಬಹುದು.



ಕನ್ನಡ ಸಾಹಿತ್ಯದಲ್ಲಿ ಕೆಲವು ಸಣ್ಣ ಕಥೆಗಳನ್ನು ಬರೆದಿರುವ ರವಿಯವರು ಆರಂಭದಲ್ಲಿ ಕಥೆಗಾರರೆಂದೇ ಪರಿಚಯವಾದವರು. ಮೊದಲ ಕಾದಂಬರಿ ಬರೆಯುವಾಗಲೇ ಲೇಖಕರಾಗಿ ಸಾಕಷ್ಟು ಪರಿಚಯವಾಗಿದ್ದರು. ಪತ್ತೇದಾರಿ ಎನ್ನುವುದಕ್ಕಿಂತಲೂ ಭಿನ್ನವಾದ ಅಪರಾಧ ಕೊಲೆ, ಅಪಹರಣ ಇತ್ಯಾದಿ ಲೋಕಕಂಟಕ ಕೃತ್ಯಗಳ ಸುತ್ತಲೂ ಹರಡಿಕೊಳ್ಳುವ ಅವರ ಬರಹಗಳು ಸಾಮಾಜಿಕ ಬದುಕನ್ನು ಕಾಣಿಸುತ್ತಾ, ಸಮಕಾಲೀನ ಜೀವನದ ನೋಟವಾಗಿರುವುದೊಂದು ವಿಶೇಷ. ಸರಸ ಸುಂದರ ಶೈಲಿಯೊಂದಿಗೆ ಪ್ರತಿ ಅಧ್ಯಾಯದಲ್ಲೂ ಕುತೂಹಲ ಉಳಿಯುವಂತೆ ರಚಿಸುವುದೂ ಅವರ ವೈಶಿಷ್ಟ್ಯ.

ಇಷ್ಟೆಲ್ಲ ವಿವರಣೆಯನ್ನು ಹೇಳುವ ಉದ್ದೇಶವಿಷ್ಟೇ. ಈ ವಿಷಯದ ಬಗೆಗೆ ಯಾವುದೇ ಅಧ್ಯಯನಗಳಿಲ್ಲ. ಪತ್ತೇದಾರಿ ಸಾಹಿತ್ಯದ ಕುರಿತು ಅಲ್ಪಸ್ವಲ್ಪ ಮಾಹಿತಿ ದೊರೆತರು, ಕ್ರೈಮ್ ಆಧಾರಿತವಾಗಿ ಗಮನಿಸುವಾಗ ಇಂತಹ ಸಮಸ್ಯೆ ಎದುರಾದ ಕಾರಣ ಇದು ಅಲ್ಪಪ್ರಮಾಣದಲ್ಲಿ ಆಧಾರವಾಗಿ ನಿಲ್ಲಬಹುದು ಎಂಬ ಆಶಯದೊಂದಿಗೆ ಪ್ರಸ್ತಾಪಿಸಲಾಗಿದೆ. ಪತ್ತೇದಾರಿ ಸಾಹಿತ್ಯಕ್ಕೂ ಮತ್ತು ಕ್ರೈಮ್ ಆಧಾರಿತ ಬರಹಕ್ಕೂ ಅವಿನಾಭಾವ ಸಂಬಂಧವಿದೆಯೇನೋ ಎನ್ನುವಂತಿದೆ. ಕ್ರೈಮ್ ಎಂಬುದು ಪತ್ತೇದಾರಿ ಸಾಹಿತ್ಯದೊಳಗೊಂದು ವಿಧವಷ್ಟೇ. ಆದರೆ, ಅದೆ ಇಡೀ ಪತ್ತೇದಾರಿ ಸಾಹಿತ್ಯವಲ್ಲ. ಅಥವಾ ಈ ಪ್ರಕಾರವನ್ನು ಸಂಪೂರ್ಣವಾಗಿ ಕ್ರೈಮ್ ಆವರಿಸಿಕೊಂಡಿಲ್ಲ. ಆ ಕಾರಣಕ್ಕಾಗಿಯೇ ಮೇಲಿನ ವಿವರಣೆಯನ್ನು ನೀಡಬೇಕಾಯಿತು. ರವಿ ಬೆಳಗೆರೆಯವರು ಕ್ರೈಮ್ ಆಧಾರಿತ ವಿಷಯಕ್ಕೆ ಸಂಬಂಧಿಸಿಂದತೆ ಸುಮಾರು ಕಾದಂಬರಿಗಳನ್ನು, ಹಲವಾರು ತನಿಖಾ ವರದಿಗಳನ್ನು ಬರೆದಿದ್ದಾರೆ. ಅವರ ಬರಹಗಳು ನೇರವಾಗಿ ಭೂಗತ ಜಗತ್ತಿಗೆ ಸಂಬಂಧಿಸಿದ ವ್ಯಕ್ತಿಗಳ ಘಟನೆ, ವಿಷಯಗಳನ್ನು ಒಳಗೊಂಡಿವೆ. ಭೂಗತ ಜಗತ್ತಿನ ಚಟುವಟಿಕೆಗಳನ್ನೆಲ್ಲ ಕಾಲ್ಪನಿಕ ಕಥೆಯ ಹಂದರ ಹಾಕಿಕೊಂಡು ಸ್ವತಂತ್ರ ಕಾದಂಬರಿಗಳು ಬರೆದವು ಕೆಲವಾದರೆ, ಮತ್ತೆ ಕೆಲ ತನಿಖಾ ವರದಿಗಳಿಗೆ ಕಾದಂಬರಿ ರಚನೆಯ ಸ್ವರೂಪವನ್ನು ಕೊಡಲಾಗಿದೆ. ಒಟ್ಟಾರೆ ಭೂಗತ ಜಗತ್ತಿನಲ್ಲಿನ ವಿವರ, ಘಟನೆ ಮತ್ತು ವಿಷಯಗಳನ್ನು ಒಂದು ಕಾದಂಬರಿಯ ರೂಪದಲ್ಲಿ ಕಟ್ಟಿಕೊಡುವುದಿದೆಯಲ್ಲ ಅದು ಕಷ್ಟಸಾಧ್ಯವಾದ ಕೆಲಸ. ರವಿ ಬೆಳಗೆರೆಯವರು ಮಾತ್ರ ಈ ಅಪವಾದದಿಂದ ಮುಕ್ತರು. ಕ್ರೈಮ್ ಬರವಣಿಗೆಯಲ್ಲಿ ಅವರು ಸಿದ್ಧಹಸ್ತರು ಎಂದೇ ಹೇಳಬಹುದು. ಘಟನೆ, ವಿಷಯವನ್ನು ಕ್ರಮಬದ್ಧವಾಗಿ ಕಟ್ಟುವ ಶೈಲಿ ಮತ್ತು ಅದನ್ನು ನಿರೂಪಿಸುವ ಕಲೆ ಮೆಚ್ಚುವಂತಹದ್ದೆ. ಇಂತಹದೊಂದು ಪ್ರಯೋಗವಿದೆಯಲ್ಲ ಬಹುಶಃ ಭಾರತೀಯ ಭಾಷೆಗಳಲ್ಲಿ ನಿರವಾಗಿ ಹೇಳಲಾಗದಿದ್ದರೂ ಕನ್ನಡ ಭಾಷೆಯಲ್ಲಂತೂ ಮೊದಲನೆಯದು ಮತ್ತು ಹೊಸದು.

ರೌಡಿಗಳನ್ನು, ಭೂಗತ ಜಗತ್ತನ್ನು ವಿಜೃಂಭಿಸಿ ಬರೆಯುತ್ತಾರೆ ಎಂಬ ಅಪವಾದ ರವಿಯವರ ಮೇಲಿದೆ ನಿಜ. ಕ್ರೈಮ್ ವಿಷಯಗಳನ್ನೊಳಗೊಂಡ ಅವರ ಬರಹಗಳು ಕಾದಂಬರಿಯ ಸ್ವರೂಪವನ್ನು ಪಡೆದಿರುವುದರಿಂದ ಅದರಲ್ಲೂ ಪತ್ತೇದಾರಿ ಲಕ್ಷಣಗಳನ್ನು ಒಳಗೊಂಡಿರುವುದರಿಂದ ಸಹಜವಾಗಿಯೇ ಅವುಗಳಲ್ಲಿ ವರ್ಣನೆ ಪ್ರವೇಶಿಸಿದೆ. ಅಷ್ಟಾಗಿಯೂ ಈ ವಿಷಯಕ್ಕೆ ಅವರು 'ಬೆಂಗಳೂರು ಭೂಗತ ಜಗತ್ತನ್ನು ಅತ್ಯಂತ ಹತ್ತಿರದಿಂದ ನೋಡಿದವನು ನಾನು. ಮತ್ತು ಬೇರೆಯೇ ಆದ ದೃಷ್ಟಿಯಲ್ಲಿ ಅಲ್ಲಿನ ಆಗುಹೋಗುಗಳನ್ನು, ಭೂಗತ ದೊರೆಗಳ ಮನಸ್ಥಿತಿಯನ್ನು ನೋಡಲೆತ್ನಿಸಿದವನು. ಅವರೊಂದಿಗೆ ಮಾತಾಡಿದ್ದೇನೆ. ತಿರುಗಿದ್ದೇನೆ ದಿನಗಟ್ಟಲೆ ವಾಸಮಾಡಿದ್ದೇನೆ. ಆಗಷ್ಟೆ ಒಂದು ಹತ್ಯೆ ಮಾಡಿ ಬಂದು ನನ್ನ ಮನೆಯ ಕದ ತಟ್ಟಿದ ಭೂಗತ ದೊರೆಯೊಬ್ಬನ ಕೈಗಳಿಗೆ ನೆತ್ತರು ಮೆತ್ತಿಕೊಂಡಿದ್ದಾಗ್ಯೂ ಅವನ ಅಂತರಂಗದಲ್ಲೊಬ್ಬ ಮನುಷ್ಯ ಇದ್ದಾನೆಯೇ? ಇರಲು ಸಾಧ್ಯವೇ? ಎಂದು ಯತ್ನಿಸಿದ್ದು ನಾನೋ, ನನ್ನೊಳಗಿನ ಜರ್ನಲಿಷ್ಟೋ ಖಚಿತವಾಗಿ ಹೇಳಲಾರೆ'.[೧೫] 'ನಾನು ಸರಿ ಸುಮಾರು ಹತ್ತು ವರ್ಷ ಒಬ್ಬ ಪತ್ರಕರ್ತನಾಗಿ ಭೂಗತ ಲೋಕದಲ್ಲಿ ಕಂಡದ್ದನ್ನು, ಕೇಳಿದ್ದನ್ನು ಇಲ್ಲಿ ದಾಖಲಿಸಿದ್ದೇನೆ. ಯುದ್ಧದ ಸುದ್ದಿ ಯಾವತ್ತಿಗೂ ರಮ್ಯವೇ. ಬಡಿದಾಟದ ಕತೆಗಳು ಕೇಳಲು ಕುತೂಹಲಕಾರಿಯೇ. ಆದರೆ ಒಂದು ಮಾತು ಹೇಳಬಯಸುತ್ತೇನೆ: ಇವರು ಯಾರಿಗೂ ಆದರ್ಶಗಳಾಗಬಾರದು. ಈ ಭೂಗತದ ಬದುಕಿನಲ್ಲಿ ಯಾವ ಸಂತಸವೂ ಇಲ್ಲ. ಇಲ್ಲಿ ಸಾವೊಂದೇ ಖಾತರಿ. ಅವಮಾನವೊಂದೇ ನಿರಂತರ. ಇದು ಬದುಕಬೇಕಾದ ರೀತಿಯಲ್ಲ ಇದರಲ್ಲಿ ತುಂಬ ದಿನ ಬದುಕುವುದು ಸಾಧ್ಯವೂ ಇಲ್ಲ. ಒಂದು ಕುತೂಹಲಕಾರಿ ಕಾದಂಬರಿಯಂತೆ ಇದನ್ನು ಓದಿಕೊಂಡು ಪಕ್ಕಕ್ಕಿಡಿ ಅಷ್ಟು ಸಾಕು'[೧೬] ಎಂದು ಸ್ಪಷ್ಟನೆ ಕೊಡುತ್ತಾರೆ. ಈ ಬರಹಗಳ ಮೂಲಕ ಭೂಗತ ಜಗತ್ತಿನ ಬದುಕನ್ನು, ಭೀಕರತೆಯನ್ನು ಮತ್ತು ಪರಿಣಾವನ್ನು ವಿವರಿಸಿ ಅದು ಬದುಕಲೇ ಬಾರದ ರೀತಿ ಎಂದು ಸಮಾಜಕ್ಕೆ ಸಂದೇಶವನ್ನು ನೀಡಲು ಪ್ರಯತ್ನಿಸಿರುವುದನ್ನು ಅವರ ಈ ಬರಹಗಳಲ್ಲಿ ಕಂಡುಬರುತ್ತದೆ.

ಈ ಹಿಂದೆ ಹೇಳಿದಂತೆ ಕನ್ನಡ ಪತ್ರಿಕೋದ್ಯಮಕ್ಕೆ ಇದು ಹೊಸದು: ಅಧ್ಯಯನವೂ ಸಹ. ಇಂತಹ ಕೆಲಸವನ್ನು ಮಾಡಿದ ಪತ್ರಕರ್ತರ ಸಂಖ್ಯೆ ಬೆರಳೆಣಿಕೆಯಷ್ಟು, ಪುಸ್ತಕ ರೂಪದಲ್ಲಿ ತಂದಿರವುದಂತು ಇಲ್ಲವೆಂದೆ ಹೇಳಬಹುದು. ಅಗ್ನಿ ಶ್ರೀಧರ್ ಅವರ 'ದಾದಾಗಿರಿಯ ದಿನಗಳು' ಮತ್ತು ಇತ್ತೀಚಿನ ಬಿ. ಕೆ. ಶಿವರಾಮ್ ಅವರ 'ಪೊಲೀಸ್ ಕಂಡ ಕಥೆಗಳು' ಎಂಬುವವು ಮಾತ್ರ ಈ ಮಾತಿಗೆ ಅಪವಾದ. ಆದ್ದರಿಂದ ಇವುಗಳ ಅಧ್ಯಯನ ಹೇಗೆ ಮಾಡಬೇಕು? ತಾತ್ವಿಕವಾಗಿ ಕಟ್ಟಿಕೊಳ್ಳುವುದು ಹೇಗೆ ಎಂಬ ಪ್ರಶ್ನೆ ಸಹಜವೇ. ಈ ಕೃತಿಗಳ ಓದಿನ ಹಿನ್ನೆಲೆಯಲ್ಲಿ ದೊರೆತ ಅಲ್ಪಮತಿಯಿಂದ ಇವುಗಳನ್ನು ಎರಡು ವಿಧಗಳಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ. ಒಂದು; ಕ್ರೈಮ್ ಆಧಾರಿತ ಕಾದಂಬರಿಗಳು. ಎರಡು; ತನಿಖಾ ವರದಿಗಳು(ತನಿಖಾ ವರದಿಗಳು ಕಾದಂಬರಿಯ ಸ್ವರೂಪ ಪಡೆದಿರುವುದರಿಂದ ಇಲ್ಲಿ ಅವುಗಳನ್ನು ಕಾದಂಬರಿಗಳೆಂದೆ ಪರಿಗಣಿಸಿಕೊಳ್ಳಲಾಗಿದೆ). ಹಾಗೆ ಮತ್ತೊಂದು ವಿಷಯವನ್ನು ಸ್ಪಷ್ಟಪಡಿಸುವುದಾದರೆ ಈ ಬರಹಗಳು ನೂರಾರು ಪಾತ್ರಗಳಿಂದ ಕೂಡಿರುವುದರಿಂದ ನಮ್ಮ ಸಾಹಿತ್ಯಿಕ ಕಾದಂಬರಿಗಳಲ್ಲಿ ಇರುವಂತೆ ಪ್ರಧಾನ ಪಾತ್ರ, ವಸ್ತು ಇತ್ಯಾದಿ ಬೆರಳಿಟ್ಟು ತೋರಿಸುವುದು ಸ್ವಲ್ಪ ಕಷ್ಟವೆ. ಮೊದಲೇ ಇವು ಭೂಗತ ಜಗತ್ತಿನ ವಿಷಯವನ್ನಾಧರಿಸಿದವು ಎಲ್ಲವೂ ಮಹತ್ವದವೆ. ಆ ಕಾರಣ ಅಧ್ಯಯನದ ಮಿತಿಯನ್ನು ಗಮನದಲ್ಲಿರಿಸಿಕೊಂಡು ಕೃತಿ, ಅದರ ವೈಶಿಷ್ಟ್ಯ ಮತ್ತು ವಿವರಣೆಯನ್ನು ಮಾತ್ರ ನೀಡಲಾಗಿದೆ.

## ೧. ಕ್ರೈಮ್ ಆಧಾರಿತ ಕಾದಂಬರಿಗಳು

ಪಾಪಿಗಳ ಲೋಕಕ್ಕೆ ಮುನ್ನುಡಿ ಬೇಕಿಲ್ಲ. ಬೇಕಿರುವುದು ಚರಮ ಗೀತೆ, ಆದರೂ ಸುದೀರ್ಘ ಮುನ್ನುಡಿಯನ್ನು ನೀಡಲೇಬೇಕಾಯಿತು. ರವಿಯವರು ಭೂಗತ ಲೋಕದ ಬಗ್ಗೆ ೧೯೭೩ರಲ್ಲಿ 'ಕರ್ಮವೀರ' ಪತ್ರಿಕೆಯಲ್ಲಿ ಒಂದು ಚಿಕ್ಕ ವರದಿಯನ್ನು ಪ್ರಕಟಿಸಿದರು. ಅಲ್ಲಿಂದ ಅವರ ಬರಹದ ಸರಣಿ ಆರಂಭವಾಗುತ್ತದೆ. ನಂತರ 'ಹಾಯ್ ಬೆಂಗಳೂರ್!' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಸಾರವಾಗುತ್ತದೆ. ನಂತರ 'ಪಾಪಿಗಳ ಲೋಕದಲ್ಲಿ' ಎಂಬ ಶೀರ್ಷಿಕೆಯಲ್ಲಿ ಪುಸ್ತಕ ರೂಪದಲ್ಲಿ ಹೊರಬಂದಿದೆ. ಈ ಪುಸ್ತಕದ ವ್ಯಾಪ್ತಿ ದೊಡ್ಡದು. ಸರಿಸುಮಾರು ಹತ್ತು ವರ್ಷ ಒಬ್ಬ ಪತ್ರಕರ್ತನಾಗಿ ಭೂಗತ ಲೋಕದಲ್ಲಿ ಕಂಡದ್ದನ್ನು ಕೇಳಿದ್ದನ್ನು ಇಲ್ಲಿ ದಾಖಲಿಸಲಾಗಿದೆ. ಕೋಳಿ ಫಯಾಜ್‌ನನ್ನು ಶಿವಾಜಿನಗರದ ಕಸಾಯಿ ಅಡ್ಡೆಯಲ್ಲಿ ಮಾತನಾಡಿಸಿದುದರಿಂದ ಆರಂಭವಾಗಿ ಮುತ್ತಪ್ಪ ರೈಯನ್ನು ದುಬೈನಲ್ಲಿ ಬೇಟೆಯಾಗುವ ತನಕ ಪಾಪಿಗಳ ಲೋಕದ ಈ ಬರಹ ಸಾಗಿ ಬಂದಿದೆ. ಗ್ಯಾಂಗ್‌ವಾರ್‌ಗಳು, ಒಳಗೊಳಗೇ ನಡೆದ ಮಿತ್ರದ್ರೋಹಗಳು, ಪೊಲೀಸರ ಕಠೋರ ನಿರ್ಧಾರಗಳು, ಬದುಕು ಬದಲಿಸಿ ಮುಖವಾಡ ಧರಿಸಿಕೊಂಡೇ ಭೂಗತ ಜೀವನ ಮುಂದುವರೆಸಿದವರ ಕತೆಗಳು, ಅವರ ಭಯ, ಪುಕ್ಕಲು, ವೀರಾವೇಶ, ದುಃಖ–ಬಿಕ್ಕಳಿಕೆ, ಹತಾಶೆ–ನಿರಾಶೆಗಳು ಎಲ್ಲವೂ ಈ ಪುಸ್ತಕದಲ್ಲಿ ದಾಖಲಾಗಿವೆ.

ಮೊದಲ ಭೆಟ್ಟಿಯಾದ ರೌಡಿ ಕೋಳಿ ಫಯಾಜ್‌ನಿಂದ ಆರಂಭಿಸಿ ಮುಂದೆ ಶ್ರೀಧರ, ಜೇಡರಳ್ಳಿ ಕೃಷ್ಣಪ್ಪ, ಬಲರಾಮ, ಕಾಲಪತ್ಥರ್, ಮಲಬಾರಿ ಶ್ರೀಧರ್, ಶ್ರೀರಾಂಪುರ ಕಿಟ್ಟಿ, ಮುನಿರತ್ನಂ, ಶೇಖರ, ಬ್ಲಾಕ್‌ರಾಜ, ಬೆಕ್ಕಿನಕಣ್ಣು ರಾಜೇಂದ್ರ, ಸೋಮ, ನಾಯ್ಡು ಅಲಿಯಾಸ್ ಬಾಂಬ್‌ರಂಗ, ಆಯಿಲ್ ಕುಮಾರ ಹೀಗೆ ಪಾಪಿಗಳ ಲೋಕದ ಪಟ್ಟಿ ದೊಡ್ಡದಿದೆ. ಎಲ್ಲರ ಮಾಹಿತಿಯೂ ಈ ಪುಸ್ತಕದಲ್ಲಿದೆ: ಅವರು ನೀಡಿರುವ ಮಾಹಿತಿಯ ಜೊತೆಗೆ, ಒಬ್ಬೊಬ್ಬ ರೌಡಿಯದು ಒಂದೊಂದು ಅನುಭವ, ಒಂದೊಂದು ಭೇಟಿಯೂ ಒಂದೊಂದು ಘಟನೆ, ಪ್ರತಿಯೊಂದರಲ್ಲೂ ಒಂದು ವೈಶಿಷ್ಟ್ಯ. ತುಂಬ ಡಿಫರೆಂಟ್ ಅನ್ನಿಸುವಂತಹ ವ್ಯಕ್ತಿತ್ವಗಳ ಪರಿಚಯ. ಈ ಪಾತಕಿಗಳು ರೌಡಿಗಳಾಗದ್ದಿದ್ದರೆ ಸುಸಂಸ್ಕೃತ ಸಮಾಜದಲ್ಲಿ ಯಾವುದಾದರೊಂದು ಸ್ಥಾನವನ್ನು ಪಡೆದಿರುತ್ತಿದ್ದರಲ್ಲವೇ? ಹೀಗೆ ಅಲ್ಲಿನ ಪಾತ್ರಗಳನ್ನು ಅದಲು ಬದಲು ಮಾಡಿಕೊಂಡು ಅವರದೇ ಆದ ಕಲ್ಪನಾ ಲೋಕದೊಂದಿಗೆ ವಿಹರಿಸುತ್ತ ಭೂಗತ ಜಗತ್ತಿನ ವಿವರಗಳನ್ನು ನಿರೂಪಿಸುತ್ತಾ ಸಾಗುತ್ತಾರೆ.

ಮುಂಬೈಯೆಂಬುದು ದುಡ್ಡಿನ ಕಣಜ. ವ್ಯಾಪಾರದ ವಿಷಯಕ್ಕೆ ಬಂದರೆ ರಾಜಧಾನಿಗಳ ರಾಜಧಾನಿ. ಕೇವಲ ಸ್ಮಗ್ಲಿಂಗ್‌ನಂತಹ ವ್ಯವಹಾರ ನಡೆಯುತ್ತಿದ್ದ ಮುಂಬೈಯ ಕತ್ತಲ ಲೋಕದಲ್ಲಿ, ನೆತ್ತರ ದಾಹದ ಭೂಗತ ಜಗತ್ತು ಕಣ್ಣು ತೆರೆದದ್ದು ಅರುಣ್‌ಗೌಳಿ, ಅಮರ್ ನಾಯಕ್, ರಮಾನಾಯಕ್, ಅಶ್ವಿನ್ ನಾಯಕ್, ಬಾಬು ರೇಷಿಮ್ ಮುಂತಾದವರಿಂದ. ನಂತರ ೧೯೬೬ರ ಅಕ್ಟೋಬರ್ ೩೦ ಬಾಳಾ ಸೀತಾರಾಮ ಪ್ರಭೋದಂಕರ್ ಠಾಕರೆ ಎಂಬ ಮನುಷ್ಯ ದೊಡ್ಡ ದನಿಯಲ್ಲಿ ಕನ್ನಡಿಗರನ್ನು ಬಾಂಬೆಯಿಂದ ಓಡಿಸಿ ಎಂದು ಗುಡುಗಿದ. ಒಂದು ಕಡೆ ಲಕ್ಷಾಂತರ ನಿರುದ್ಯೋಗಿಗಳು ಎದ್ದು ನಿಂತರು. ಮತ್ತೊಂದು ಕಡೆ ಗಿರಣಿಗಳಿಂದ ಬರಿಗೈಲಿ ಹೊರಬಿದ್ದ ಹಸಿದ ಕಾರ್ಮಿಕರು ಇದ್ದರು. ತಮಿಳುನಾಡಿನಲ್ಲಿ ಹಿಂದಿ ವಿರೋಧಿ ಚಳುವಳಿ ಮಾಡುವುದಾದರೆ ಮುಂಬೈಯಲ್ಲಿ ನಾವು ದಕ್ಷಿಣ ಭಾರತ ವಿರೋಧಿ ಚಳುವಳಿ ಮಾಡುತ್ತೇವೆಂದರು. ನಮಗೆ ಟಾಟಾಗಳು ಬೇಕು ಬಿರ್ಲಾಗಳು ಬೇಕು.

ಅವರು ನೌಕರಿ ಕೊಡುತ್ತಾರೆ. ಈ ದೇಶಕ್ಕೆ ಹಿಟ್ಲರ್ ಬೇಕು. ಅವನು ನ್ಯಾಯ ಕೊಡುತ್ತಾನೆ. ಬಾಂಬೆಗೆ ಕೇವಲ ಮರಾಠ ಮನುಷ್ಯ ಬೇಕು. ಇಲ್ಲಿನ ಗೂಂಡಾಗಳು, ಸೂಳೆಯರು, ಕಡೆಗೆ ಕಳ್ಳಬಟ್ಟಿ ಶರಾಬು ಮಾರುವವರೂ ಮರಾಠಿಗರೇ ಆಗಿರಬೇಕು! ಅಂತ ಮಾತನಾಡಿದ್ದ ಠಾಕ್ರೆಯ ಹುಚ್ಚು ಮಾತುಗಳಿಗೆ ತಲೆದೂಗಿದ ಕೆಲವು ಉನ್ಮತ್ತ ಯುವಕರು ಕಮ್ಯುನಿಸ್ಟ್ ನಾಯಕರ ಕೊಲೆಮಾಡಿದರು. ಅವರ ಶವಗಳ ಮೇಲೆಯೇ ಠಾಕ್ರೆಯ ಶಿವಸೇನೆ ಬೆಳೆಯಿತು. ಗಲ್ಲಿಗೊಬ್ಬ ಗಣಪತಿ, ಶಿವಾಜಿ ಎದ್ದು ನಿಂತರು. ಅವರ ಜಯಂತ್ಯೋತ್ಸವಗಳು, ಅವುಗಳ ಹೆಸರಿನಲ್ಲಿ ವಸೂಲಿ ಶುರುವಾಯಿತು. ಅವರಿಂದ ತಪ್ಪಿಸಿಕೊಳ್ಳಲು ತಾನೇ ಗಣೇಶ ಮಂಡಲವನ್ನು ಆರಂಭಿಸಿದ ವರದರಾಜನ್ ಮೊದಲಿಯಾರ್ ಅಲಿಯಾಸ್ ವರಧಾಬಾಯಿ, ತಮಿಳರನ್ನು ರಕ್ಷಿಸಿಕೊಳ್ಳಲು ತಮಿಳರ್ ಸಂಘ ಆರಂಭಿಸಿದ. ಮುಸ್ಲಿಂರನ್ನು ರಕ್ಷಿಸಿಕೊಳ್ಳಲು ದಲಿತ್-ಮುಸ್ಲಿಂ ಸಂಘಟನೆ ಆರಂಭಿಸಿದವನು 'ಹಾಜಿ ಮಸ್ತಾನ್. ಅಫಘಾನಿ ಪಠಾಣರ ಸಂಘಟನೆ ಕಟ್ಟಿದ ಮುಂಬಯಿಯ ಮೊದಲ ಮಾಫಿಯಾ ದೊರೆ ಕರೀಮ್ ಅವನ ಅಣ್ಣ ತಮ್ಮಂದಿರ ಮಕ್ಕಳನ್ನು ಕೊಲ್ಲಲು ಉದ್ಭವಿಸಿದ. ಕೊಂಕಣ ದೇಶದ ಒಬ್ಬ ಮುಸಲ್ಮಾನ ಹೆಸರು: ದಾವೂದ್ ಇಬ್ರಾಹಿಂ ಕಸ್ಕರ್. ಇದೇ ಬಾಂಬೆಯ ಪಾಕ್ಮೋಡಿಯಾ ಬೀದಿಯ ಜಂಕ್ಷನ್‌ನಲ್ಲಿ ಸುಮಾರು ಮೂರು ದಶಕಗಳ ಹಿಂದೆ ಉದ್ಭವವಾದದ್ದೇ ಡಿ ಕಂಪನಿ.

ಡಿ ಕಂಪನಿ ಎಂಬುದು ಮುಂಬೈ ಭೂಗತ ಜಗತ್ತಿನ ಕತ್ತಲ ಲೋಕದ ಮಾಹಿತಿಯನ್ನು ನೀಡುವ ಪುಸ್ತಕದ ಹೆಸರು. ಹಾಗೆಯೇ ನಿಗೂಢವಾಗಿ ನಡೆಯುತ್ತಿರುವ ಭೂಗತ ಜಗತ್ತಿನ ಪರ್ಯಾಯ ಹೆಸರು. ಮುಂಬಯಿಯ ಕತ್ತಲ ಲೋಕ, ಅದರಲ್ಲೊಂದು ನಿಗೂಢ ಜಗತ್ತು ಈಗಿದ್ದು ಈಗಿಲ್ಲ ಎಂಬಂತೆ ಮರೆಯಾಗುವ ಷಾರ್ಪ್‌ಷೂಟರ್, ಲೇಡೀಸ್ ಬಾರ್‌ಗಳಲ್ಲಿ ಮೈಯನ್ನೆಲ್ಲ ಗಾಳಿಗೆ ಬಿಸಾಕಿ ಕುಣಿಯುವ ಹುಡುಗಿಯರು, ಪಿಸ್ಟಲ್‌ನ ಚಿಕ್ಕ ಸದ್ದು ದೊಡ್ಡ ಚಿತ್ಕಾರ. ಡಿ ಕಂಪನಿ ಅಂದರೆ ಇದಿಷ್ಟೇ ಅಲ್ಲ ವಂಚನೆ, ದಗಾ, ಚಿಕ್ಕ ತಪ್ಪು, ದೊಡ್ಡ ಕಂದಾಯ, ಗ್ಯಾಂಗ್‌ವಾರ್ ಹಿಂಡು ಹಿಂಡು ಜನರ ಮಾರಣಹೋಮ, ಪೊಲೀಸ್ ಎನ್‌ಕೌಂಟರ್, ಚಿಕ್ಕ ಸುದ್ದಿ ಹೀಗೆ ಇದು ಸಾವಿರ ಕೊವೆಗಳ ಹುತ್ತ. ಇಂಥ ಮುಂಬೈಯ ಭೂಗತ ಇತಿಹಾಸವನ್ನು ೧೯೭೦ರಿಂದ ದಾಖಲಿಸಿಕೊಂಡು ಬಂದದರ ಫಲವೇ ಈ ಕೃತಿ. ಟೇಮ್ಕರಂ ಮೊಹಲ್ಲಾದ ಪಾಕ್ಮೋಡಿಯಾ ಸ್ಟ್ರೀಟ್‌ನಿಂದ ಪಾಕಿಸ್ತಾನದ ಕರಾಚಿಯ ತನಕ ದಾವೂದ್ ಇಬ್ರಾಹಿಂನ ಹೆಜ್ಜೆ ಜಾಡು ಹುಡುಕುವ ಚಿತ್ರಣವನ್ನು ಡಿ ಕಂಪನಿ ಒದಗಿಸುತ್ತದೆ. ಜಗತ್ತಿನ ಪ್ರತಿ ಒಳ್ಳೆಯದು ಮುಗಿದು ಹೋಗುತ್ತದಂತೆ ಆದರೆ ಕೆಟ್ಟದ್ದು ಮಾತ್ರ ಯಾಕೆ ಮುಗಿಯುವುದಿಲ್ಲ ಎಂಬ ಪ್ರಶ್ನಾರ್ಥಕದಂತಿದೆ ಈ ಕೃತಿ.

ಇಂಡಿ ಸೀಮೆಯೆಂಬುದು ಒಂದು ಕಾಲಕ್ಕೆ ಸಂತರ, ಅನುಭಾವಿಗಳ, ಸೂಫಿಗಳ ನಾಡಾಗಿತ್ತು. ಹಲಸಂಗಿಯ ಸಾಹಿತ್ಯಿಕ ಗೆಳೆಯರು ಬದುಕಿದ್ದ ಸೀಮೆಯಿದು. ಈಗ(ಇಂದಿಗೂ) ಹೀಗಾಗಿದೆ. ಅಜ್ಞಾನ, ಜಾತಿ, ಅಧಿಕಾರ ಹೆಣ್ಣು-ಮಣ್ಣು ಭೀಮಾತೀರದ ಅಸಂಖ್ಯಾತ ಹತ್ಯೆಗಳಿಗೆ ಕಾರಣವಾಗಿವೆ. ಇದೆ ಕಥೆಯನ್ನಾಧರಿಸಿ ಇತ್ತೀಚಿಗೆ ಭೀಮಾತೀರದಲ್ಲಿ ಎಂಬ ಚಲನಚಿತ್ರವನ್ನು ತೆಗೆಯಲಾಯಿತು. ನಾಗರಿಕತೆ ಮುಂದುವರೆದ ಇಂದಿನ ಈ ಆಧುನಿಕ ದಿನಗಳಲ್ಲಿಯೂ ಅಲ್ಲಿ ಕ್ರೌರ್ಯ ಮುಂದುವರೆದಿದೆ ಎಂದರೆ ಅಂದಿನ ದಿನಗಳಲ್ಲಿ ಅದರ ಬರ್ಭರತೆ ಎಷ್ಟಿರಬೇಕು? ಭೀಮಾತೀರದ ಹಂತಕರು ಕೃತಿಯ ಮುಖ್ಯ ಮೂವರನ್ನು ಕೊನೆಯ ದಿನಗಳಲ್ಲಿ ಒಬ್ಬನನ್ನು ಪೊಲೀಸರು ವಿಜಯಪುರ- ಕಲಬುರ್ಗಿ-ಸೊಲ್ಲಾಪುರ ಧೋತ್ರ ಗ್ರಾಮದ ಸರಹದ್ದಿನಲ್ಲಿ ಕೊಂದು ಹಾಕಿದರು. ಆತನ ಹೆಸರು ಚಂದಪ್ಪ ಹರಿಜನ. ಆತನಿಗೆ

ಈ ವ್ಯವಸ್ಥೆಯ ರೀತಿ, ನೀತಿ, ನೆಲದ ಕಾನೂನು ಯಾವುದು ಅರ್ಥವಾಗುತ್ತಿಲ್ಲ. ಉತ್ತರ ಕರ್ನಾಟಕದ ಕುಗ್ರಾಮವೊಂದರಲ್ಲಿ ಹುಟ್ಟಿ ಬೆಳೆದ ಈತ ಹುಂಬ ಮೃಗದಂತಿದ್ದ.

ಎಲ್ಲರಿಗಿಂತ ಹಿರಿಯನಾದ, ಹುಂಬನಾದ, ಪಾತಕಿಯಾದ ಕೇಶಪ್ಪ ತಾವರಖೇಡ ಮತಿಭ್ರಮಣೆಯಿಂದ ಸತ್ತುಹೋದ. ಮೂರನೆಯವರು ಶಿವಾಜಿ ಬೋರಗಿ ಭೀಮಾ ತೀರದ ಅಷ್ಟೂ ರಕ್ತಪಾತಕ್ಕೆ ಕಾರಣವಾದ ಹುಂಬ. ಜೈಲಿನಿಂದ ಬಿಡುಗಡೆಯಾದ ತಕ್ಷಣ ಒಬ್ಬರನ್ನು ಕೊಲ್ಲಬೇಕೆಂದು ಚಡಪಡಿಸುತ್ತಿದ್ದವನು, ದುರಂತವೆಂದರೆ ಬಿಡುಗಡೆಯಾದ ದಿನ ಸಂಜೆ ಹೊತ್ತಿಗೆ ಅವನೇ ಸತ್ತುಹೋದ. ಏಡ್ಸ್ ಅವನನ್ನು ಬಲಿತೆಗೆದುಕೊಳ್ಳುತ್ತದೆ. ಹಾಗೆ ಭೀಮಾತೀರದ ಈ ಮೂವರು ಹಂತಕರ ಸಾವುಗಳೇ ಅಂಥವರ ಬದುಕುಗಳಿಗೆ ಬೆನ್ನುಡಿಗಳಾಗಿವೆ ಎಂದು ಹೇಳಬಹುದು. ಬಹುತೇಕ ಸಂಭಾಷಣೆ ರೂಪದಿಂದ ಕೂಡಿದ ಇದರ ನಿರೂಪಣೆ ಅಲ್ಲಿನ ಪ್ರಾದೇಶಿಕ ಸೊಗಡನ್ನು ತನ್ನ ಸಂಭಾಷಣೆಯಲ್ಲಿ ಅಡಗಿಸಿಕೊಂಡಿದೆ ಅದನ್ನ ಮುಂದಿನ ಅಧ್ಯಾಯದಲ್ಲಿ ಗಮನಿಸಲಾಗುವುದು.

ಮೈಸೂರಿನ ಸೀರಿಯಲ್ ಕಿಲ್ಲರ್ ರವೀಂದ್ರ ಪ್ರಸಾದ್ ಹಾಯ್ ಬೆಂಗಳೂರ್! ವಾರಪತ್ರಿಕೆಯಲ್ಲಿ ಪ್ರಕಟವಾದ ಒಂದು ರೋಚಕ ಧಾರಾವಾಹಿ. 'ಕಳೆದ ಹದಿನಾರು ವರ್ಷಗಳ ಪತ್ರಿಕೋದ್ಯಮದಲ್ಲಿ ನಾನು ಕಂಡು ಮಾತನಾಡಿಸಿದ ನೂರಾರು ಪಾತಕಿಗಳ ಪೈಕಿ ಅತ್ಯಂತ ಕಾಂಪ್ಲಿಕೇಟೆಡ್ ಮನಸ್ಸಿನ ನಿರ್ದಯಿ ಹಂತಕ ಈ ರವೀಂದ್ರ ಪ್ರಸಾದ್. ಇಂಥವನಲ್ಲೂ ಎಲ್ಲೋ ಒಂದು ಮನುಷ್ಯತ್ವದ ಸೆಳಕು ಹುಡುಕಿಕೊಂಡು ಅಲೆದದ್ದರ ಪರಿಣಾಮವೇ ಈ ಮೈಸೂರಿನ ಸೀರಿಯಲ್ ಕಿಲ್ಲರ್ ಎಂಬ ವಿಸ್ತೃತ ಕಥಾನಕ ಎನ್ನುತ್ತಾರೆ ಲೇಖಕ ರವಿ ಬೆಳಗೆರೆಯವರು.

ಆರು ಕೊಲೆಗಳನ್ನು ಮಾಡಿ ತನ್ನ ಬದುಕಿನ ದಿಕ್ಕನ್ನು ಬದಲಿಸಿಕೊಂಡು ಹನ್ನೆರಡೂವರೆ ವರ್ಷಗಳ ಭಯಾನಕ ಕಾರಾಗೃಹವಾಸದಿಂದ ಬಂದು ವಕೀಲನಾಗಬೇಕೆಂಬ ಕನಸಿನೊಂದಿಗೆ ಸಭ್ಯ ಬಾಳು ಬಾಳಲೆತ್ನಿಸಿದ ರವೀಂದ್ರ ಪ್ರಸಾದ್. ಎಲ್ಲೂ ಮುಚ್ಚು ಮರೆಯಿಲ್ಲದೆ ಸಾದ್ಯಂತವಾಗಿ ತನ್ನ ಕಥೆಯನ್ನು ಹೇಳಿಕೊಂಡಿದ್ದಾನೆ. ಸಾಧ್ಯವಾದಷ್ಟೂ ಆತನ ಮಾತುಗಳಲ್ಲೇ ಇಡೀ ಬರಹ ಇದೆ. ಒಂದು ರೀತಿಯಲ್ಲಿ ಇದು ರವೀಂದ್ರ ಪ್ರಸಾದ್‌ನ ಆತ್ಮಕಥನ. ಪಾತಕ ಬದುಕಿನ ಪ್ರತಿಯೊಂದು ಅತಿ ಚಿಕ್ಕ ವಿವರಗಳನ್ನು ಅಷ್ಟು ವರ್ಷಗಳ ನಂತರವೂ ಕರಾರುವಾಕ್ಕಾಗಿ ವಿವರಿಸುವ ಪಾತಕಿ ಬೇರೆ ಸಿಗಲಾರನೇನೋ? ರವೀಂದ್ರ ಪ್ರಸಾದ್ ತನ್ನ ಪಾತಕಗಳನ್ನು ಮಾಡಿದಷ್ಟೇ ಶ್ರದ್ಧೆಯಿಂದ ನಂತರದ ಘಟನೆಗಳನ್ನು ನೆನಪಿಟ್ಟುಕೊಂಡಿರುತ್ತಾನೆ. ಮಥಿಸಿಕೊಂಡಿರುತ್ತಾನೆ ಪ್ರತಿಯೊಂದು ಘಟನೆಗಳನ್ನು ವಿಮರ್ಶಿಸಿಕೊಂಡಿರುತ್ತಾನೆ. ಇದು ಒಬ್ಬಂಟಿ ಪ್ರಸಾದ್‌ಗೆ ಜೈಲು ಜೀವನ ಕಲಿಸಿದ ಕಸುಬು. ಆತ ಅಂಥ ಮಾತುಗಾರನಲ್ಲ. ಹೀಗಾಗಿ ಯೋಚಿಸುತ್ತಾ ಮಥಿಸುತ್ತಾನೆ. ಅದೇ ಆತನ ಬದುಕಿನ ಎಲ್ಲ ಪಾತಕಗಳಿಗೆ ಮತ್ತು ದುರಂತಗಳಿಗೆ ಕಾರಣವೂ ಆಯಿತೇನೋ ಅನಿಸುತ್ತದೆ. ಮನಬಿಚ್ಚಿ ಮಾತನಾಡದವನು, ಮುಕ್ತನಾಗಿ ಮನುಷ್ಯರೊಂದಿಗೆ ಬೆರೆಯದವನು ಇದ್ದಕ್ಕಿದ್ದಂತೆ ಹೀಗೆ ಪಾತಕಗಳಲ್ಲಿ ಸ್ಫೋಟಗೊಂಡು ಬಿಡುವ ಸಾಧ್ಯತೆಗಳಿರುತ್ತವೆ.

ಎಲ್ಲಕ್ಕಿಂತ ದುರಂತವೆಂದರೆ, ರವೀಂದ್ರ ಪ್ರಸಾದ್ ತನ್ನ ಕೊಲೆಗಳು ನಿರರ್ಥಕವೆಂದು ತಿಳಿದೂ ಅವುಗಳನ್ನು ಮಾಡುತ್ತ ಹೋದದ್ದು. ನಿಸ್ಸಹಾಯಕನಾದ ಟ್ಯಾಕ್ಸಿ ಡ್ರೈವರನನ್ನೂ ಕೊಲ್ಲುವುದು ಮಹಾನ್ ಧೈರ್ಯದ ಕೆಲಸವಲ್ಲವೆಂದು ಗೊತ್ತಿತ್ತು. ಆದರೂ ಕೊಂದರೆ ಒಬ್ಬನೇ ಕೊಲ್ಲಲಾಗದು ಅನಿಸಿದಾಗ ಗುಂಪು ಕಟ್ಟಿಕೊಂಡು ಕೊಂದ. ಕೊಂದ ಮೇಲೆ ಆ ಕಾರುಗಳನ್ನು ದಕ್ಕಿಸಿಕೊಳ್ಳಲು ಏನೇ ಬುದ್ಧಿ

ಖರ್ಚು ಮಾಡಿದರೂ, ಅವ್ಯಾವುದೂ ಆತನಿಗೆ ದಕ್ಕಿಲಿಲ್ಲ. ಅತ್ಯಂತ ಅಪಾಯಕಾರಿ ರೀತಿಯಲ್ಲಿ ಮೇಲಿಂದ ಮೇಲೆ ತನ್ನ ಹತ್ಯೆಗಳ ಪಾಲುದಾರರನ್ನೂ ಬದಲಿಸುತ್ತ ಬಂದ. ಆರನೆಯ ಕೊಲೆ ಮುಗಿಯುವ ವೇಳೆಗೆ, ಈ ಹಿಂದೆ ಸರಣಿ ಕೊಲೆಗಳನ್ನು ಮಾಡುತ್ತಾ ಬಂದಿದ್ದಾನೆ ಎಂಬ ವಿಷಯ ಬಲ್ಲವರದೊಂದು ಗುಂಪು ಮೈಸೂರಿನಲ್ಲಿತ್ತು. ಚಲ, ಉಷಾ, ಪ್ರೇಮ, ಸವಿತಾ, ಲೀಲಾ, ಕಾರು ಮಾರಿಸಿಕೊಟ್ಟ ಶಶಿ, ನಾಗರಾಜ ಅರಸು ತನ್ನ ತಾಯಿಯನ್ನೊಳಗೊಂಡು ಹತ್ತಾರುಜನ. ಏನೇ ಯೋಚನೆ ಮಾಡಿದರೂ ಎಷ್ಟೇ ಹುಶಾರಾಗಿ ಅದನ್ನು ಕಾರ್ಯರೂಪಕ್ಕೆ ತಂದರೂ ಕೊಲೆಗಡುಕನ ಮನಸ್ಸು ಮನುಷ್ಯನದೇ ಅಲ್ಲವೆ? ರವೀಂದ್ರ ಪ್ರಸಾದ್‌ನಲ್ಲಿ ರವಿ ಬೆಳಗೆರೆಯವರು ಹುಡುಕುತ್ತ ಹೋದದ್ದು ಸಹ ಇದೇ ಮನುಷ್ಯತ್ವದ ಸೆಳಕುಗಳನ್ನು; ಮನುಷ್ಯನ ಮನಸು ಹೆದರುತ್ತದೆ; ನಡುಗುತ್ತದೆ. ಮಾಡಿದ ಪಾಪಕ್ಕೆ ತತ್ತರಿಸುತ್ತದೆ. ಕೊಲೆ ಮಾಡಿದಂದೇ, ಅರ್ಧರಾತ್ರಿಯಲ್ಲಿ ತಾಯಿಯನ್ನು ಎಬ್ಬಿಸಿ ಆಕೆಯ ಮುಂದೆ ಹೇಳಿಕೊಂಡು ಬಿಡುತ್ತಿದ್ದ. ಈ ಕೆಲಸ ಧೈರ್ಯವಂತನದೂ ಆಗಿರಲಿಲ್ಲ. ಬುದ್ಧಿವಂತನದು ಮೊದಲೇ ಆಗಿರಲಿಲ್ಲ. ಆದರೆ ಒಬ್ಬ ಮನುಷ್ಯನ ಸಹಜ ವರ್ತನೆಯಾಗಿತ್ತು.

ಈ ಕೃತಿಯನ್ನು ಕುರಿತು ವಕೀಲರೊಬ್ಬರು (ಹೆಸರು ದಾಖಲಿಸಿರುವುದಿಲ್ಲ) ಹೇಳಿದ್ದನ್ನು ದಾಖಲಿಸುತ್ತದೆ. ಇಂತಹದೊಂದು ವ್ಯಾಪಕವಾದ crime story ಅದರ ಕಾನೂನು ಬದ್ಧ ಅಂತ್ಯ ಹಾಗೂ ವಿವರವನ್ನೊಳಗೊಂಡಿದೆ. case Paper ಸಮರ್ಥನೆಯ ಸಮೇತ ಪ್ರಕಟವಾದ ಮತ್ತೊಂದು ಬರಹ ಕನ್ನಡದಲ್ಲಿಲ್ಲ. ಇದಕ್ಕೆ ಹಲವಾರು ಮುಖಗಳಿವೆ. ರವೀಂದ್ರನ ಪಾತಕವನ್ನು ಕೇವಲ ರಂಜನೆಯ ದೃಷ್ಟಿಯಿಂದ ಓದಿಕೊಳ್ಳುವವರದು ಒಂದು ಗುಂಪಾದರೆ, ಅವನ ಮನಸ್ಥಿತಿಯನ್ನು ಶಾಸ್ತ್ರೋಕ್ತವಾಗಿ ಅಧ್ಯಯನ ಮಾಡುವವರದು ಇನ್ನೊಂದು ಗುಂಪು. ಅಂಥ ಆರು ಪಾತಕಗಳನ್ನು ಮಾಡಿಯೂ ಮರಣದಂಡನೆಗೆ ಈಡಾಗದೆ ಬಚಾವಾದನೆಂದರೆ, ನಮ್ಮ ಪೊಲೀಸ್ ವ್ಯವಸ್ಥೆ ಎಷ್ಟು ಬಲಹೀನವಾಗಿದೆ ಎಂಬುದನ್ನು ಊಹಿಸಿಕೊಳ್ಳಬಹುದು. ಕಾನೂನೆಂಬ ಕೋಟೆಗೆ ಎಷ್ಟು ದೊಗರುಗಳಿವೆ ಎಂಬುದರ ಕುರಿತು ತಲೆಕೆಡಿಸಿಕೊಳ್ಳುವವರದು ಮೂರನೆಯ ಗುಂಪು. ಸಾಹಿತ್ಯಿಕವಾಗಿ ಹೇಳುವುದಾದರೆ, ಆರು ನಿರ್ದಯಿ ಕೊಲೆಗಳ ಕಥೆಯನ್ನು ಇಷ್ಟೊಂದು ಸರಾಗವಾಗಿ ಎದುರಿಗೆ ಕೂಡಿಸಿಕೊಂಡು ಕತೆ ಹೇಳಿದಂತೆ ಹೇಳಿ ಮುಗಿಸಿದ ಇನ್ನೊಂದು ಕೃತಿ ಕನ್ನಡದಲ್ಲಿ ಬಂದಿಲ್ಲ. ಇದನ್ನು ಹೀಗೆ ಯಥಾವತ್ ವರದಿಯನ್ನಾಗಿ ಬರೆಯದೆ ಕಾದಂಬರಿಯ ರೂಪದಲ್ಲಿ ಬರೆಯಬಹುದಿತ್ತು ಅನ್ನುವವರಿರಬಹುದು. ಆದರೆ ಕ್ರೈಮ್ ಕಥಾನಕವೊಂದನ್ನು ಕೇವಲ ವರದಿಯನ್ನಾಗಿ ಉಳಿಸದೆ, ಅದನ್ನೊಂದು ಕಾದಂಬರಿಗಿಂತ ಆಸಕ್ತಿಕರವಾಗಿ ಬರೆದು ಮುಗಿಸಿದ ಇನ್ನೊಬ್ಬ ಲೇಖಕ ಕನ್ನಡದಲಿಲ್ಲ ಎನ್ನುವುದು. ಇತ್ತೀಚಿನ ಕನ್ನಡ ಪತ್ತೆದಾರಿ ಕಾದಂಬರಿಗಳು ಅತ್ತ ಸ್ವಂತದ್ದೂ ಅಲ್ಲ, ಇತ್ತ ಸರಿಯಾಗಿ ಕದ್ದದ್ದೂ ಅಲ್ಲ ಎಂಬಂತಹ ಸ್ಥಿತಿಯಲ್ಲಿರುವಾಗ ನಿಮ್ಮ ಈ ಪ್ರಯತ್ನ ಕನ್ನಡಕ್ಕೆ ತೀರ ಹೊಸದು ಮತ್ತು ಸಾಪೇಕ್ಷವಾದದ್ದು ನೀವು ಕ್ರೈಮ್‌ನಂತಹ ಹೀನಾಯ ಕ್ರಿಯೆಯಲ್ಲೂ ಎಲ್ಲೋ ಒಂದು ಎಳೆ ಮನುಷ್ಯತ್ವವನ್ನು ಹುಡುಕುತ್ತೀರಿ. ಹಂತಕನ ಹೆಗಲ ಮೇಲೆ ಕೈ ಹಾಕಿಯೂ ಅಲ್ಲೊಬ್ಬ ನಿಸ್ಸಹಾಯಕ ಮನುಷ್ಯನನ್ನು ಅರಸುತ್ತೀರಿ. ಪ್ರತಿಯೊಂದು ಪಾತಕವು ಕೂಡ ಮನುಷ್ಯತ್ವಕ್ಕೆ ಒದಗಿದೆ ಎಂಬುದನ್ನು ಗುರುತಿಸುತ್ತೀರಿ, ಹೀಗಾಗಿ ನಿಮ್ಮ ಕ್ರೈಮ್ ಕುರಿತಾದ ಬರವಣಿಗೆ ಕೇವಲ ಪಾತಕಿಗಳ ಕತೆಯಾಗದೆ, ಅದು ಮನುಷ್ಯರ ಕತೆಯಾಗುತ್ತದೆ.[೧೭] ರವಿಯವರ ಕ್ರೈಮ್ ಬರಗಳಿಗೆ ಸಂಬಂಧಿಸಿದಂತೆ ಈ ಮಾತುಗಳು ಸತ್ಯವೆಂದು ಹೇಳಬಹುದು. ಕ್ರೈಮ್ ಬರಹ ಸಮಾಜದ ಮೇಲೆ ಪ್ರಭಾವ ಬೀರಬಹುದು ಎಂದು ಹೇಳುವುದಾದರೆ, ಕ್ರೈಮ್‌ಗಳನ್ನು

ಆದರ್ಶವಾಗಿಟ್ಟುಕೊಂಡು ಯಾರಾದರೂ ಕೊಲೆ ಮಾಡಲು ಹೋಗುತ್ತಾರಾ? ರಾಮಾಯಣವನ್ನೋದಿ ನಮ್ಮ ದೇಶದಲ್ಲಿ ಇಲ್ಲಿಯವರೆಗೆ ಇನ್ನೊಬ್ಬ ರಾಮನೇನೂ ಸೃಷ್ಟಿಯಾಗಿಲ್ಲ ಎಂಬುದು ಎಷ್ಟು ಸತ್ಯವೋ ಬಹುಶಃ ಇದೂ ಸಹ ಹಾಗೆ ಎಂದು ಹೇಳಬಹುದೇನೋ!

'ಮಾರಿಯೋ ಪ್ಯೂಜೋನ ಕಾದಂಬರಿಯ ಪ್ರೇರಣೆ ಅನುವಾದವಲ್ಲ, ಭಾವಾನುವಾದವೂ ಅಲ್ಲ. ಅದೇ ರೂಪದಲ್ಲಿ ಸಾಗುವ ಸ್ವತಂತ್ರವೆನ್ನಬಹುದಾದ ಕೃತಿ. ದಿ ಗಾಡ್ ಫಾದರ್ ಕಾದಂಬರಿಯ ವಸ್ತುವೆ ಅಂತಹದು ದೂರದಿಂದ ನಿಂತು ನೋಡಿದರೆ ಇದು ಭೂಗತದ ಆಗುಹೋಗುಗಳ ಕುರಿತಾದ ಕಾದಂಬರಿ ಅನ್ನಿಸುತ್ತದೆ. ಒಮ್ಮೆ ಒಳಹೊಕ್ಕು ನೋಡಿದರೆ ಚಿನ್ನಮಾದಿರೆಡ್ಡಿಯ ಫ್ಯಾಮಿಲಿಯಲ್ಲಿ ಒಬ್ಬರಾಗಿಬಿಟ್ಟಿದ್ದೇವೆ ಅನ್ನಿಸುತ್ತದೆ. ಸಾವಿರಾರು ಕೊವೆಗಳಿರುವ ಭೂಗತದ ಹುತ್ತ ಈ ಕಾದಂಬರಿಯಲ್ಲಿ ಅನಾವರಣಗೊಳ್ಳುವ ವಿಧಾನವೇ ಅದ್ಭುತವಾಗಿದೆ. ಫ್ಯಾಕ್ಷನ್ ರಾಯಲಸೀಮೆ ಹಿನ್ನೆಲೆಯ ಹತ್ತಾರು ತೆಲುಗು ಸಿನೆಮಾ ನೋಡಿದ ಅನುಭವವಾಗುತ್ತದೆ. ಯಾವ ವಿಷಯ ಆಯ್ಕೆ ಮಾಡಿಕೊಂಡರೂ ರವಿ ಬೆಳಗೆರೆಯವರು ಚೆನ್ನಾಗಿ ಬರೆಯುತ್ತಾರೆ ಎಂಬುದು ತಿಳಿದ ಸಂಗತಿಯೆ. ಅದಕ್ಕೆ ಅವರ ಪ್ರತಿಬರಹವೂ ಸಾಕ್ಷಿ. ಆದರೆ ಭೂಗತ ಲೋಕದ ಬಗ್ಗೆ ಬರೆಯಲು ಕುಳಿತಾಗಲೆಲ್ಲ ಅವರು ಬೇರೆಯದೇ ಆದ ಶ್ರದ್ಧೆಯಿಟ್ಟುಕೊಂಡು ಕೆಲಸ ಮಾಡುತ್ತಾರೆ ಎನಿಸುತ್ತದೆ. ಆ ಕೌಶಲ್ಯ ದಿ ಗಾಡ್ ಫಾದರ್ ಕೃತಿಯ ಪ್ರತಿ ಸಾಲಿನಲ್ಲೂ ಪ್ರತಿಫಲಿಸುತ್ತದೆ. ಗಾಡ್ ಫಾದರ್ ಚಿನ್ನಮಾದಿರೆಡ್ಡಿ ಕಾರ್ತಿವೀರ್ಯಾರ್ಜುನ ರೆಡ್ಡಿನಂತಹ ಹಲವಾರು ಪಾತ್ರಗಳಲ್ಲಿ ಇದನ್ನು ಮತ್ತಷ್ಟು ಪುಷ್ಟೀಕರಿಸುತ್ತವೆ.

'ಒಮರ್ಟಾ' ಅಂದರೆ ಭೂಗತ ಭಾಷೆಯಲ್ಲಿ ಸುಮ್ಮನಿರು ಎಂದು ಅರ್ಥ. ಬೆಂಗಳೂರು ಎಂಬ ಮಹಾನಗರದ ನಿರಂತರ ಗೌಜು, ಗದ್ದಲಗಳ ಮಧ್ಯೆ ಇಲ್ಲಿನ ಭೂಗತ ಲೋಕವನ್ನು ಅವತ್ತಿನಿಂದ ಇವತ್ತಿಗೂ ಆಳುತ್ತಿರುವುದೇ ಈ ಒಮರ್ಟಾ. ಇದೊಂದು ಕಾಲ್ಪನಿಕ ಕಾದಂಬರಿ ಆದರೆ ಇದರಲ್ಲಿ ಕೆಲವು ಪಾತ್ರಗಳು ತಮ್ಮ ಸ್ವಭಾವಗಳಿಂದಾಗಿ ಕೆಲವೊಮ್ಮೆ ಪಾಪಿಗಳ ಲೋಕದಲ್ಲಿನ ಕೆಲವು ಭೂಗತ ಪಾತಕಿಗಳನ್ನು ಹೋಲುತ್ತವೆ. ಕೆಲವು ಪಾತ್ರಗಳ ಬಗ್ಗೆ ಓದುತ್ತಾ ಹೋದಂತೆ ಎಲ್ಲೋ ಒಂದೆಡೆ ಜಯರಾಜ್, ಕೊತ್ವಾಲ, ಎಂ.ಸಿ.ಪ್ರಕಾಶ ಮುಂತಾದವರು ನೆನಪಾಗುತ್ತಾರೆ. ಕೆಲವು ಘಟನೆಗಳು ಸಹ (ಪಾಪಿಗಳ ಲೋಕದಲ್ಲಿ ಓದಿದ್ದರೆ ಮಾತ್ರ). ಆದರೆ ಒಮರ್ಟಾ ಒಂದು ಕಾಲ್ಪನಿಕ ಕೃತಿ. ಸ್ವತಂತ್ರ ಕಥೆಯಾಗಿ ಕಾದಂಬರಿಯುದ್ದಕ್ಕೂ ಮುಂದುವರೆಯುತ್ತದೆ. ಇಲ್ಲಿ ರಹಸ್ಯ ನುಂಗಿ ಕುಳಿತ ನೀಲಕಂಠರಿದ್ದಾರೆ. ಒಮಟಾರ್‌ದ ನಿಯಮ ಮುರಿದವರು ಬದುಕಿ ಉಳಿಯಲಾರರು. ಜೀವಾ ಕಾದಂಬರಿಯ ಕೇಂದ್ರ ಪಾತ್ರವೆಂಬಂತೆ ಕೃತಿಯುದ್ದಕ್ಕೂ ಕಾಣಿಸಿಕೊಳ್ಳುತ್ತಾನೆ.

ಜೋ ಎಷ್ಟೆರಾಸ್‌ನ ಬೇಸಿಕ್ ಇನ್‌ಸ್ಟಿಂಕ್ಟ್ ಸಿನೆಮಾವೊಂದರ ಸ್ಕ್ರೀನ್ ಪ್ಲೇ ಆಧರಿಸಿ ಬರೆದ ಪುಟ್ಟ ಕಾದಂಬರಿ ಹಂತಕಿ ಐ ಲವ್ ಯೂ!, ಭಾರತದ ಪರಿಸರಕ್ಕೆ ಬಸಿದುಕೊಂಡು ಬರೆದರೆ ಚಿಕ್ಕದೊಂದು ಮರ್ಡರ್ ಮಿಸ್ಟರಿ ಧಾಟಿಯ ಕಾದಂಬರಿಯಾದೀತಲ್ಲ ಅನ್ನಿಸಿದ್ದರಿಂದ ಹಾಯ್ ಬೆಂಗಳೂರ್! ಪತ್ರಿಕೆಗೆ ಇದನ್ನು ಬರೆದೆ ಎನ್ನುತ್ತಾರೆ ಲೇಖಕರು. ಕಾದಂಬರಿಯ ಪುಟಗಳಲ್ಲಿ ಕಾಮವಿದೆ, ಒಂದು ಇಂಟೆಲಿಜೆಂಟ್ ತನಿಖೆಯಿದೆ, ಇನ್ಸ್‌ಪೆಕ್ಟರ್ ಪಾಲಿ ಇದ್ದಾನೆ. ಕಥೆ ಬರೆಯುತ್ತೇನೆಂದು ಅವನನ್ನೂ ಬೆನ್ನತ್ತಿದ ಶರದ್‌ಯಾಮಿನಿ ಎಂಬ ಕಾದಂಬರಿಗಾರ್ತಿಯಿದ್ದಾಳೆ. ಪಾಲಿಯನ್ನು ರಕ್ಷಿಸಲು ಹೆಣಗುವ ಹುಡುಗಿ, ಸೈಕಿಯಾಟ್ರಿಸ್ಟ್ ಜಿಯಾ ಇದ್ದಾಳೆ. ಹೀಗೆ ಗಂಡು–ಹೆಣ್ಣು, ಪ್ರೇಮ–ಕಾಮ, ಕ್ರೈಮ್ ಡಿಟೆಕ್ಷನ್ನುಗಳ ಸಂಗ್ರಹವೇ ಈ ಕಾದಂಬರಿ.

ಅಂಕಣಕಾರ್ತಿ ಎಚ್.ಡಿ.ಸುನೀತಾ ಅವರು ಹಂತಕಿ ಓದಿದೆ, ಇದು ಸಿನೆಮಾ ಆಧರಿಸಿದ ಕಾದಂಬರಿ ಎಂದು ಗೊತ್ತಾಯಿತು. ಸಿನೆಮಾ ಸಂತೋಷಕ್ಕಾಗಿ ನೋಡಿ ಮರೆಯುವ ಅಥವಾ ನೋಡಿ ಚೆನ್ನಾಗಿದೆ ಎಂದು ಹೇಳಿ ಸುಮ್ಮನಾಗುವ ಮಾಧ್ಯಮ. ನೀವು ಸಿನೆಮಾದ ಸ್ಕ್ರೀನ್‌ಪ್ಲೇ ಇಟ್ಟುಕೊಂಡು ಕಾದಂಬರಿಯಾಗಿಸಿರುವ ಬಗೆ ಹೊಸತು. ಈ ಪ್ರಕಾರವನ್ನು ವಿಮರ್ಶಕರು ಏನೆಂದು ಕರೆಯುತ್ತಾರೋ ಗೊತ್ತಿಲ್ಲ. ಕೊಲೆ, ಸೈಕಿಯಾಟ್ರಿ, ಪೊಲೀಸ್ ಇಲಾಖೆಯ ಕುರಿತಾದ ಅಥೆಂಟಿಕ್ ಮಾಹಿತಿಯುಳ್ಳ ರೊಮ್ಯಾಂಟಿಕ್ ಥ್ರಿಲ್ಲರ್‌ಗಳು ಕನ್ನಡದಲ್ಲಿ ಅಷ್ಟಾಗಿ ಇಲ್ಲ. ಉದಾಹರಣೆಗೆ ಕಾಂಬಳೆಯಂಥವರು ದುಡ್ಡಿಗಾಗಿ ಫೈಲುಗಳನ್ನು ಮಾಡುವುದು, ನೀನಾ ಎಮಿಲಿ ವಿನಾಕಾರಣ ಕುಟುಂಬವೊಂದನ್ನು ಸಾಯಿಸುವ ರಿಯಾಲಿಟಿ ಬೇಸ್ಡ್ ಮಾಹಿತಿಗಳು ಈ ಕಾದಂಬರಿಯನ್ನು ಆಪ್ತವಾಗಿಸುತ್ತವೆ. ಕ್ರೈಮ್‌ನೊಂದಿಗೆ ಸೆಕ್ಸ್ ಚೆನ್ನಾಗಿ ಬೆರೆತುಕೊಳ್ಳುತ್ತದೆ ನಿಜ. ಆದರೆ ಕಾಮ ನಗ್ನತೆಯ ವಿವರಗಳು ಕೊಂಚ ಹೆಚ್ಚು ಇದ್ದವು ಅಂತ ಬರೆದುಕೊಟ್ಟಿರುವ ಅಭಿಪ್ರಾಯವನ್ನು ದಾಖಲಿಸುತ್ತಾರೆ ಜನ. ಕಾದಂಬರಿಯಲ್ಲಿ ಸ್ವಲ್ಪ ಹೆಚ್ಚಿನ ಕಾಮವಿದೆ. ಸಲಿಂಗ ಕಾಮಿಗಳೆಂದರೆ ಗೇ ಮತ್ತು ಲೆಸ್ಬಿಯನ್ ಸಮೂಹ ಮಾತ್ರವಲ್ಲ ಗಂಡು ಹೆಣ್ಣುಗಳಿಬ್ಬರಿಗೂ ಸಲ್ಲುವ ಉಭಯ ಲಿಂಗಾಸಕ್ತರೂ ಇರುತ್ತಾರಲ್ಲ? ಅವರು ಅಂತಹವರ ಸುಪ್ತ ಮನಸ್ಸಿನ ಭಾವನೆಗಳನ್ನು, ಪ್ರೇರಣೆಗಳನ್ನು ಮತ್ತು ಅವುಗಳಿಂದಾಗಬಹುದಾದ ಪರಿಣಾಮಗಳನ್ನು ಅವುಗಳಿಂದಾಗುವ ದುರಂತಗಳನ್ನೂ ಪರಿಚಯಿಸುವ ಪ್ರಯತ್ನವಿದೆ ಈ ಕಾದಂಬರಿಯಲ್ಲಿ.

ಭೂಗತದ ಕಾಲದ ತೆಕ್ಕೆಯಲ್ಲಿ ಕರಗಿ ಹೋದವರ ಪಟ್ಟಿ ದೊಡ್ಡದಿದೆ. ಇಷ್ಟಾದರೂ ಇಷ್ಟೊಂದು ಜನ ನಿರ್ನಾಮವಾದ ಭೂಗತ ಜಗತ್ತೊಂದು ತನ್ನ ಪಾಡಿಗೆ ತಾನು ಅಸ್ತಿತ್ವದಲ್ಲಿ ಇದ್ದೇ ಇದೆ. ಯಾಕೆಂದರೆ ಅದೊಂದು ವ್ಯವಸ್ಥೆ, ರಾಜಕಾರಣಿಗಳು, ಪೊಲೀಸರು, ಪತ್ರಕರ್ತರು, ವಕೀಲರು, ನ್ಯಾಯಾಲಯಗಳು ವ್ಯಾಪಾರಸ್ಥರು, ನಟ–ನಟಿಯರು ಎಲ್ಲ ಸೇರಿಕೊಂಡು ಈ ಭೂಗತ ಜಗತ್ತನ್ನು ರಕ್ಷಿಸುತ್ತಾರೆ; ಪೋಷಿಸುತ್ತಾರೆ. ಬೇಡವಾದಾಗ ಕಿತ್ತು ಬಿಸಾಡಲು ಸನ್ನದ್ಧರಾಗುತ್ತಾರೆ. ಅವರಿಗೂ ಗೊತ್ತು, ಯಾರೇನೇ ಪರಾಕ್ರಮ ತೋರಿ ಭೂಗತ ಜಗತ್ತಿನ ಬುನಾದಿ ಸಮೇತ ಸರ್ವನಾಶ ಮಾಡಲು ಹೊರಟರೂ ಅದು ಹಠಕ್ಕೆ ಬಿದ್ದ ಪಾಪಸುಕಳ್ಳಿಯಂತೆ ಬೆಳೆಯುತ್ತಲೇ ಹೋಗುತ್ತದೆ. ಅದಕ್ಕಾಗಿಯೇ ಅದೊಂದು ವ್ಯವಸ್ಥೆ ಎಂಥದ್ದು.

ಒಬ್ಬ ಉಗ್ರಗಾಮಿ ತಾನು ಸತ್ತರೆ ನ್ಯಾಯಕ್ಕಾಗಿ, ಧರ್ಮಕ್ಕಾಗಿ, ತನ್ನ ದೇಶಕ್ಕಾಗಿ ಸಾಯುತ್ತಿದ್ದೇನೆ ಅಂದುಕೊಳ್ಳುತ್ತಾನೆ. ಅವನ ಪಾಲಿಗೆ ಅವನು ಸ್ವತಂತ್ರ ಹೋರಾಟಗಾರ, ಭಾರತ ಅವನ ಶತ್ರು. ಭಾರತಕ್ಕೆ ಸಂಬಂಧಿಸಿದಂತೆ ಏನನ್ನು ಬೇಕಾದರೂ ಅವನು ನಾಶಮಾಡಬಲ್ಲ. ಅಂತಹವರನ್ನು ಸಹಿಸಿಕೊಳ್ಳಬೇಕಾ? ಆ ಪ್ರಶ್ನೆಯನ್ನಿಟ್ಟುಕೊಂಡು ಬರೆದ ಸುದೀರ್ಘ ಕಾದಂಬರಿಯೇ ಹಿಮಾಗ್ನಿ Anti Terrorism ನ ಅಗ್ನಿಗೋಳವನ್ನು ಸೃಷ್ಟಿಸುವ ಸೋನಿಯಾಗಾಂಧಿ ಇಲ್ಲಿ ಮಾಯಿನೋ ಗಾಂಧಿ ಆಗಿ ಪರಿಚಿತರಾಗುತ್ತಾರೆ. ಆಕೆ ನಾಯಕಿಯಾ? ಒಳ್ಳೆಯವರಾ? ಕೆಟ್ಟವರಾ? ಇದರಲ್ಲಿ ಮಾಯಿನೋ ಗಾಂಧಿ ತುಂಬ ಪ್ರಮುಖ ಪಾತ್ರವಲ್ಲ. ಆದರೆ ಆಕೆ ಕೇಂದ್ರಮಧ್ಯದ ಪಾತ್ರ ವ್ಯಕ್ತಿ. ಇದರಲ್ಲಿ ಪ್ರಮುಖನಾದವನು ತುಂಬ ಪ್ರಾಮಾಣಿಕನಾದ, ದೇಶದಿಂದ ಏನನ್ನು ಬೇಡದ ಕೊಡಗಿನ ಕಾವೇರಮ್ಮನ ಮಗ ಕರ್ನಲ್ ಮಾಚಿ ಮಾಡ ರವೀಂದ್ರ ಪೂಣಚ್ಚ. ಅವನ ಮೂಲಕ ಟೆರರಿಸಂ ಜಗತ್ತನ್ನು ನೋಡುತ್ತಾ ಸಾಗುವ ಪ್ರಯತ್ನ ಈ ಕಾದಂಬರಿಯಲ್ಲಿದೆ.

ಜಗತ್ತಿನಲ್ಲಿ ಭಯೋತ್ಪಾದನೆ ಒಂದೇ ಇಲ್ಲ, Counter Terrorism ಅಂತಲೂ ಒಂದಿದೆ. ಈ ಕಾಂದಬರಿಯ ಪ್ರಮುಖ ಆಸರೆ ಸ್ತಂಭವಾಗಿ ಬಂದು ನಿಂತ ಸೋನಿಯಾ ಗಾಂಧಿ, ಉಗ್ರವಾದಕ್ಕೆ ಸ್ವತಃ ಅತ್ತೆಯನ್ನು, ಗಂಡನನ್ನು ಕಳೆದುಕೊಂಡವರು. ಇವತ್ತಿಗೂ ಅವರ ಕುಟುಂಬ ಮತ್ತು ಅವರು ಉಗ್ರವಾದದ ಭೀತಿಯ ನೆರಳಲ್ಲಿ ಬದುಕುತ್ತಿದ್ದಾರೆ. ಆ ಕಾರಣದಿಂದಾಗಿ ಸೋನಿಯ ಗಾಂಧಿ ಮಧ್ಯದ ಪಾತ್ರವಾಗಿಟ್ಟುಕೊಂಡು ಜಗತ್ತಿನ ಟೆರರಿಸಂ ನೋಡುವ ಈ ಕಾದಂಬರಿಯು ಭಾರತೀಯ ಭಾಷೆಯಲ್ಲಿ ಹೊಸ ಪ್ರಯೋಗವೆನಿಸುತ್ತದೆ.

ಬಿಜಾಪುರದ ಸೈನಿಕ ಶಾಲೆಯಲ್ಲಿ ಓದಿದ್ದ ಕರ್ನಲ್ ರವೀಂದ್ರನಾಥ್, ಕಾದಂಬರಿಯಲ್ಲಿ ಕರ್ನಲ್ ಮಾಚಿ ಮಾಡ ರವೀಂದ್ರ ಪೂಣಚ್ಚ. ನಿವೃತ್ತಿಯ ನಂತರ ಭಾರತದ ಬೇಹುಪಡೆಯ RAWಗೆ ಸೇರುವ ಅಧಿಕಾರಿ. ಸೈನ್ಯದ ವಿಷಯಕ್ಕೆ ಬಿಟ್ಟರೆ ಈ ಕಾದಂಬರಿಯಲ್ಲಿ ಉಳಿದ್ಯಾವ ಸಂಗತಿಗಳಿಗೂ, ಅವರಿಗೂ, ಅವರ ವ್ಯಕ್ತಿಗತ ಜೀವನಕ್ಕೂ ಸಂಬಂಧವಿಲ್ಲ. ಅವರು RAWದಲ್ಲಿ ಇರಲೂ ಇಲ್ಲ. ಅವೆಲ್ಲ ಕಾದಂಬರಿಕಾರರ ಕಲ್ಪನೆ. ಇದರಲ್ಲಿ ಕಾಲ್ಪನಿಕತೆಯ ಭಾಗ ಎಷ್ಟಿದೆಯೋ ಸಂಶೋಧನೆ ಮತ್ತು ಸತ್ಯದ ಭಾಗವೂ ಅಷ್ಟೇ ಇದೇ. ಕೆಲವಕ್ಕೆ ಡಾಕ್ಯುಮೆಂಟ್ ಹಾಗೂ ಫೋನ್ ನಂಬರ್‌ಗಳನ್ನು ಒದಗಿಸಲಾಗಿದೆ. ಬಹಳ ನಿಗೂಢವಾದ ಕಾರ್ಯಾಚರಣೆಯೊಂದಿಗೆ ಪ್ರಾರಂಭವಾಗುವ ಹಿಮಾಗ್ನಿ ಘಟಿಸಿದ್ದು ಮುಂಬಯಿ, ದಿಲ್ಲಿ, ಬೆಂಗಳೂರಿನಲ್ಲಿ ಅಲ್ಲ. ದಿಲ್ಲಿಯಿಂದ ಹೊರಟು ಇಡೀ ಯೂರೋಪಿನಾದ್ಯಂತ ಘಟಿಸುತ್ತದೆ. ರವೀಂದ್ರ ಪೂಣಚ್ಚನ ನೇತೃತ್ವದ ತಂಡ ಉಗ್ರವಾದಿಗಳನ್ನು ಯೂರೋಪ್‌ನ ವಿವಿಧ ದೇಶಗಳಲ್ಲಿ ಬೇಟೆಯಾಡುತ್ತಾ ಸಾಗುತ್ತದೆ. ಅಲ್ಲಿ ಅವರು ಪರಿಚಯಿಸುವ ವಿದೇಶಿ ನಗರಗಳು ಅನುಭವಗಳು, ಅವುಗಳ ಗ್ರಹಿಕೆ ಅನನ್ಯ. ಇಟಲಿಯ ಸಿಸಿಲಿ, ರೋಮ್, ವೆರೋನಾ, ಮಿಲಾನ್, ಪತಿ ಕೊರ್ಲಿಯಾನ್ ಸಿರ್ಮಿಯೋನೆ, ಮೇಪಲ್ಸ್ ಟುರಿನ್ ಫ್ಲಾರೆನ್ಸ್ ವೆನೀಸ್, ಒಬ್ಬಾಸನೋ, ಜರ್ಮನಿಯ ಮ್ಯೂಜಿಕ್, ಕಾಲ್ಯರರೊಡೆ ಹ್ಯಾಂಬಿಗನ್, ಪ್ರಾಂಕ್‌ಫರ್ಟ್ ಸ್ಟುಚ್‌ಗಾರ್ಡ್, ಗಾರ್ಮಿಷ ಜುಗ್ಸುಚ್ಚೇ, ಆ್ಯಮ್‌ಸ್ಟರ್ ಡ್ಯಾಂ, ಜೂರಿಚ್ ಹೀಗೆ ಒಂದಾ ಎರಡಾ? ಜೊತೆಗೆ ಕೆಲವು ಉರ್ದು, ಪರ್ಷಿಯನ್, ಜರ್ಮನ್ ಇಟಾಲಿಯನ್ ಭಾಷೆಯ ಪದಗಳ ಬಳಕೆ ಹಾಗೂ ರವೀಂದ್ರ ಪೂಣಚ್ಚ, ಕ್ಯಾಬ್ರಿಜಂಭೂಪಣ್, ಕ್ಯಾಚಮನ್ ಅದಾನಿ ಚೌದರಿ ಕಾಳಿಚರಣ್‌ಸಿಂಗ್, ಮೇ ಆಲಮ್ ಖಲಂದರ್, ಕಾರ್ಲೋಸೊ ಮಾಥುರ್, ಮೇ ರಾಮ್‌ನಾರಾಯಣ್ ಥಂಡಾ, ಲ್ಯೂವಿ ಕಾವೇರಮ್ಮ ಖನಾಸಾ ಕಿಮ್, ಮಧುಚಂದ್ರ ಪೂಣಚ್ಚ ಮುಂತಾದ ವಿಶಿಷ್ಟ ಪಾತ್ರಗಳು ಮನೋಹರವಾಗಿ ಮೂಡಿಬಂದಿವೆ.

ಒಂದೆಡೆ ಕುಳಿತು ಏನನ್ನಾದರೂ ಊಹಿಸಿಕೊಂಡು ಪಾತ್ರಗಳನ್ನು ಕಲ್ಪಿಸಿ, ಸೃಷ್ಟಿಸಿಕೊಂಡು ಅವುಗಳಿಗೊಂದು ಜವಾಬ್ದಾರಿ ಕೊಟ್ಟು ಕಥೆ ಹೇಳಿಸುತ್ತಾ ಸಾಗುವುದೂ ಕಾದಂಬರಿಯೇ. ಆದರೆ Researcing on a novel ಎಂಬುದು ಸುಲಭದ ಕೆಲಸವಲ್ಲ. ಕಾದಂಬರಿ ಎಂಬುದು ಒಂದು ಬೋಳು ಬೆಟ್ಟದಂತಹುದು ಅದನ್ನು ಹತ್ತಲು ಕಾದಂಬರಿಕಾರನಿಗೆ ಹಿಡಿತಬೇಕು. ಭಾರತದ ರಾಜಕಾರಣಿಗಳ, ದರೋಡೆಕೋರರ, ಲೂಟಿಕೋರರ, ಕಪ್ಪು ಹಣ ಇಟ್ಟುಕೊಳ್ಳುವ ಬ್ಯಾಂಕುಗಳನ್ನು ಮತ್ತು ಟೆರರಿಸ್ಟ್ ಪ್ರಪಂಚದ ಕೆಲವು ಸಂಗತಿಗಳನ್ನು ಓದುತ್ತಾ ಓದುತ್ತಾ ಸಾಗಿದಂತೆ ಹಿಮಾಗ್ನಿ ಎಲ್ಲ ಪ್ರಶ್ನೆಗಳಿಗೆ ಉತ್ತರ ನೀಡುತ್ತ ಹೋಗುತ್ತದೆ.

**೨ ತನಿಖಾ ವರದಿಗಳು**

ಸುಮಾರು ಮೂವತ್ತು ವರ್ಷಗಳಿಂದಲೂ ಕ್ರೈಮ್ ರಿಪೋರ್ಟಿಂಗ್ ಮಾಡಿದವರಿಗೆ ಹತ್ಯೆಗಳ

ವಿಧಾನ ಅರ್ಥವಾಗುವುದು ಕಷ್ಟವಲ್ಲ. ಹೀಗೆ ರವಿಯವರು ತಮ್ಮ ವೃತ್ತಿ ಜೀವನದ ಅನುಭವ ಆಧಾರದ ಮೇಲೆ ಕೆಲವು ತನಿಖಾ ವರದಿಗಳನ್ನು ನೀಡಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಸಂಕ್ಷಿಪ್ತ ವಿವರಣೆಯೊಂದಿಗೆ ನೋಡಬಹುದು. ರಂಗವಿಲಾಸ ಬಂಗಲೆಯ ಕೊಲೆಗಳು ಇದು ಕೇವಲ ಕೊಲೆಗಳ ಕಥೆಯಲ್ಲ. ಅದರ ಹಿಂದಿನ ಮತ್ತು ನಂತರದ ರೋಮಾಂಚಕ, ಆಶ್ಚರ್ಯಕರ ಘಟನೆಗಳ ವಿವರಗಳೂ ಇದರಲ್ಲಿವೆ. ಕಾನೂನು ತೊಡಕು ಟ್ರಿಕ್ಕುಗಳೂ ಇವೆ.

ಬೇಲೂರು ಶ್ರೀನಿವಾಸ ಅಯ್ಯಂಗಾರರು ಖ್ಯಾತ ವಕೀಲರಷ್ಟೆ ಆಗಿರಲಿಲ್ಲ. ಅವರು ಅಂದಿನ ಮೈಸೂರು ಪ್ರಜಾ ಪರಿಷತ್‌ನ ಸದಸ್ಯರೂ ಆಗಿದ್ದರು. ಆದರೆ ಅಪಾರ ಸಂಪತ್ತು ಎರಡನೆಯ ಪತ್ನಿ, ಆಕೆಯ ಮತ್ತು ಮಕ್ಕಳ ಒಡವೆಗಳು, ಅಪಾರ ಆಸ್ತಿ ಇಷ್ಟೆಲ್ಲ ಇದ್ದೂ ಸರಿಸುಮಾರು ನಲವತ್ತೇಳು ವರ್ಷ ಪ್ರಖ್ಯಾತ ಕ್ರಿಮಿನಲ್ ಲಾಯರ್ ಆಗಿ ಕೆಲಸ ಮಾಡಿದವರ ಮನೆತನದಲ್ಲಿ ಇಂದು ಒಬ್ಬ ಹೆಣ್ಣುಮಗಳ ಹೊರತಾಗಿ ಮತ್ಯಾರು ಉಳಿದಿಲ್ಲ. ಬೆಂಗಳೂರಿನಲ್ಲಿ ೧೯೫೭ರಲ್ಲಿ ಒಂದು ಘೋರ ಹತ್ಯಾಕಾಂಡ ನಡೆಯಿತು. ಅದು ಬೇಲೂರು ಶ್ರೀನಿವಾಸ ಅಯ್ಯಂಗಾರ್ ಅವರ ಇಡೀ ಮನೆತನದ ಎಲ್ಲ ಸದಸ್ಯರ ಕೊಲೆ, ಒಂದೇ ರಾತ್ರಿಯಲ್ಲಿ ಆ ಬಂಗಲೆಯ ಸೊಂಟದೆತ್ತರದ ನಾಯಿಯಿಂದ ಹಿಡಿದು, ಅಯ್ಯಂಗಾರರ ಮನೆಯ ಹಸುಗೂಸಿನ ತನಕ ಎಲ್ಲರ ಕೊಲೆ ನಡೆದು ಹೋಗಿತ್ತು. ಕೇಜಿಗಟ್ಟಲೆ ಬಂಗಾರ ಬೆಳ್ಳಿ, ಒಡವೆ ಲೂಟಿಮಾಡಲಾಗಿತ್ತು. ಅಂದು ಇಡೀ ರಾಜ್ಯದಲ್ಲೆ ಸಂಚಲನ ಉಂಟುಮಾಡಿದ ಹತ್ಯಾ ಪ್ರಕರಣವಿದು. ಏಕೆಂದರೆ ಬೇಲೂರು ಶ್ರೀನಿವಾಸ ಅಯ್ಯಂಗಾರರು ಖ್ಯಾತ ಕ್ರಿಮಿನಲ್ ವಕೀಲರು. ಸಮಾಜದಲ್ಲಿ ಗಣ್ಯರೂ, ಕಾನೂನಿನಲ್ಲಿ ಪ್ರಕಾಂಡ ಪಂಡಿತರೂ ಶ್ರದ್ಧಾವಂತ ಬ್ರಾಹ್ಮಣರೂ ಆಗಿದ್ದರು. ಅವರ ಮನೆಯ ತುಂಬ ಮಕ್ಕಳು ಎಲ್ಲ ಕೊಲೆಯಾಗಿ ಹೋದರೂ ಒಬ್ಬ ಹುಡುಗಿ ಉಳಿದುಕೊಂಡಿರುತ್ತಾಳೆ. ಕೊಲೆಯ ಬೀಭತ್ಸ ಕಂಡ ಹುಡುಗಿ ಮಾನಸಿಕವಾಗಿ ಘಾಸಿಗೊಂಡಿದ್ದಳಾ? ಆಕೆ ಕೆಲಕಾಲ ಗಂಡಸಿನ ವೇಷತೊಟ್ಟು ಓಡಾಡುತ್ತಿದ್ದಳಂತೆ.

ಹಳೆಯ ದಾಖಲೆಗಳನ್ನೆಲ್ಲ ತಡಕಿ ಶ್ರೀನಿವಾಸ ಅಯ್ಯಂಗಾರರ ಪೂರ್ವೇತಿಹಾಸ ತೆಗೆದು, ಹಂತಕರ ಊರಿಗೂ ಹೋಗಿ, ಅಲ್ಲಿ ಇನ್ನೂ ಬದುಕಿದ್ದವರ ಸಂಬಂಧಿಕರನ್ನು ಮಾತನಾಡಿಸಿ, ಎಲ್ಲಕ್ಕಿಂತ ಮುಖ್ಯವಾಗಿ ಹಂತಕರನ್ನು ಬಂಧಿಸಿ ನೇಣುಗಂಬವೇರುವಂತೆ ಮಾಡಿದ ಪೊಲೀಸ್ ಅಧಿಕಾರಿಯನ್ನು ಮಾತನಾಡಿಸಿ ಅಪಾರ ಆಸಕ್ತಿಕರ ಹಾಗೂ ಕುತೂಹಲವಾದ ವಿವರಗಳನ್ನು ಸಂಗ್ರಹಿಸಿ, ಕ್ರೋಢೀಕರಿಸಿ ಪ್ರಕಟಿಸಿದ ಪುಸ್ತಕವಿದು. ೧೯೫೭ರಲ್ಲಿ ಕೊಲೆ ನಡೆದಾಗ ಬೆಳಕಿಗೆ ಬಾರದ ಅದೆಷ್ಟೋ ಅಂಶಗಳು ನಂತರ ಹೊರಬಂದಿವೆ. ಅದು ಕೊಲೆಗಳ ಹತ್ಯಾಕಾಂಡ ವೆಂದುಕೊಂಡು ಆರಂಭವಾದ ರಂಗವಿಲಾಸ ಬಂಗಲೆಯ ಕೊಲೆಗಳು ಕಥಾನಕವು ಹದಿನಾಲ್ಕು ಸಾವುಗಳ ಸರಣಿಯಾಗಿ ಹಾಯ್ ಬೆಂಗಳೂರು ಪತ್ರಿಕೆಯಲ್ಲಿ ಪ್ರಕಟವಾಗಿದೆ. ಈ ಘಟನೆ ನಡೆದ ಮೇಲೆ ರಂಗವಿಲಾಸ ಬಂಗಲೆಯನ್ನು ಕೆಡವಿ ಹಾಕಲಾಯಿತು. ಮುಂದೆ ಆ ಜಾಗದಲ್ಲಿ ಎದ್ದು ನಿಂತದ್ದು ಸಿಂಡಕೇಟ್ ಬ್ಯಾಂಕು. ಇವತ್ತು ನೋಡಿದರೂ ಅಂದಿನ ಕಾಲದಲ್ಲೇ ಇಪ್ಪತ್ತು ಕೋಟಿ ರೂಪಾಯಿಗಳಿಗಿಂತ ಅಧಿಕ ಮೊತ್ತದ ಹಣವಿರುವ ಜಾಗ, ಇದನ್ನೇ ಮೈಸೂರಿನ ಸೀರಿಯಲ್ ಕಿಲ್ಲರ್ ರವೀಂದ್ರ ಪ್ರಸಾದ್ ದರೋಡೆ ಮಾಡುವ ಕನಸು ಕಂಡದ್ದು.

ಒಂದು ಸುಶಿಕ್ಷಿತ ಕುಟುಂಬ ಹೇಗೆ ಬಾಬಾನಂತಹ ಕೈಗೆ ಸಿಕ್ಕು ಬಿಡುತ್ತಾರೆ ಎಂಬುದಕ್ಕೆ ಅನೇಕ ಕುಟುಂಬಗಳನ್ನು ಇಂದಿನ ಸಮಾಜದಲ್ಲಿ ಕಾಣಬಹುದು. ಅವು ಕ್ರಮೇಣ ವಂಚಕರ ಮೇಲೆ ವಿಶ್ವಾಸ ಕಳೆದುಕೊಂಡಿದ್ದನ್ನು ಕಾಣಬಹುದು. ಆದರೆ ಹಾಗೆ ವಿಶ್ವಾಸ ಕಳೆದುಕೊಳ್ಳುವುದರೊಳಗಾಗಿ

ಒಂದು ಕುಟುಂಬ ಎಷ್ಟೆಲ್ಲ ನಷ್ಟಗಳಿಗೆ, ಭ್ರಮನಿರಸ ಆಘಾತಗಳಿಗೆ ಒಳಗಾಗಬೇಕಾಗುತ್ತದೆ. ವಂಚಕ ಮತ್ತು ವಂಚನೆಗೊಳಗಾದವರ ವಿವರಗಳನ್ನೊಳಗೊಂಡ ಪುಸ್ತಕ ಬಾಬಾ ಬೆಡ್‌ರೂಂ ಹತ್ಯಕಾಂಡ ಈ ಕೃತಿಯಲ್ಲಿ ಪುಟ್ಟಪರ್ತಿಯ ಆರು ಹತ್ಯೆಗಳೂ ಸೇರಿದಂತೆ ಒಟ್ಟಾರೆ ಸಾಯಿಬಾಬಾನ ವ್ಯಕ್ತಿ ಚಿತ್ರಣ ನೀಡುವ ಪ್ರಯತ್ನ ಮಾಡಲಾಗಿದೆ. 'ಹಾಯ್ ಬೆಂಗಳೂರ್!'ನಲ್ಲಿ ಇಪ್ಪತ್ತೆರಡು ವಾರ ಪ್ರಕಟವಾದ ಲೇಖನ ಮಾಲಿಕೆಯಿದು. ಓದುತ್ತಾ ಹೋದಂತೆ ಸಾಯಿಯ ನಿಜ ಸ್ವರೂಪ ಸ್ಪಷ್ಟವಾಗುತ್ತದೆ.

ಸಾಯಿಬಾಬ ಕೇವಲ ಕೈಚಳಕ ತೋರುವ ಯಕ್ಷಿಣಿಗಾರನಾಗಿದಿದ್ದರೆ ಜನಮೆಚ್ಚುಗೆ ಗಳಿಸುತ್ತಿದ್ದ. ಒಬ್ಬ ಸಂತನಾಗಿದ್ದರೆ, ಆಧ್ಯಾತ್ಮಕ್ಕೆ, ಗೊಡ್ಡು ಹರಟೆಗೆ ಕೊರತೆಯಿಲ್ಲದ ಈ ನಾಡಿನಲ್ಲೂ ಗೌರವಕ್ಕೆ ಪಾತ್ರನಾಗುತ್ತಿದ್ದ. ಆತ ಗ್ರಾಮಗಳಿಗೆ ತಲುಪಿಸಿದ ನೀರು, ಕಟ್ಟಿಸಿದ ಆಸ್ಪತ್ರೆಗಳು, ಶಾಲೆಗಳು, ಸ್ಥಾಪಿಸಿದ ವಿಶ್ವವಿದ್ಯಾಲಯ ನಿಜಕ್ಕೂ ಮೆಚ್ಚಬಹುದಾದಂಥ ಸಂಗತಿಗಳೇ. ಆದರೆ ಸಾಯಿಬಾಬಾ ಮೂಲತಃ ಒಬ್ಬ ವಂಚಕನೆಂಬುದು, ಶಿಶುಕಾಮಿ, ದಡ್ಡನೆಂಬುದಾಗಿ ತಿಳಿದುಬರುತ್ತದೆ. ಅಂತಹ ಬಾಬನ ಬೆಡ್‌ರೂಮಿನಲ್ಲಿ ಘೋರಾತಿಘೋರ ಹತ್ಯೆಗಳು ನಡೆದರೆ ಭಾರತದ ಪ್ರಧಾನಿಯಿಂದ ಹಿಡಿದು ಪುಟ್ಟಪರ್ತಿಯ ಸಬ್‌ಇನ್ಸ್‌ಪೆಕ್ಟರನ ತನಕ ಆತನನ್ನು ರಕ್ಷಿಸಲು ಚಡಪಡಿಸಿದ್ದರು. ಇಂತ ನಂಬಿಕೆ, ಮೂಢನಂಬಿಕೆಗಳ ಆಗರ ನಮ್ಮ ದೇಶ. ಒಮ್ಮೆ ನಂಬಿಬಿಟ್ಟ ಕಾರಣಕ್ಕೆ ಜೀವನ ಪರ್ಯಂತ ನಿಷ್ಠೆಯೊಂದಿಗೆ ಬದುಕಲೇಬೇಕಾದ ಅನಿವಾರ್ಯತೆಗೆ ಒಳಗಾದ ಅನೇಕ ವ್ಯಕ್ತಿಗಳು, ಕುಟುಂಬಗಳು ನಮ್ಮ ಸಮಾಜದಲ್ಲಿದ್ದಾರೆ. ಆದ್ದರಿಂದಲೇ ರಾಷ್ಟ್ರೀಯ ಮಟ್ಟದ ಸಾಯಿಬಾಬಾನಿಂದ ಹಿಡಿದು ಗಲ್ಲಿಯ ಫುಟ್‌ಪಾತಿನ ಮೇಲೆ ಮಂತ್ರ ಜಪಿಸುವವರ ತನಕವೂ ವಂಚಕರ ಸಾಲು ಕಾಣುತ್ತೇವೆ. 'ವಂಚಿಸುವುದು ಅವರ ವೃತ್ತಿ ಧರ್ಮ, ವಂಚನೆಗೊಳಗಾಗುವುದು ಇವರ ವಂಶ ಪಾರಂಪರ್ಯ ಧರ್ಮ, ಎಂಬಂತೆ ಇರುವವರನ್ನು ಇಂದಿನ ಸಮಾಜದಲ್ಲಿ ಕಾಣಬಹುದು. ಅಂತಹ ವಂಚಕರ ಬಗೆಗೆ ಒಬ್ಬ ಪತ್ರಕರ್ತನಾಗಿ, ಲೇಖಕನಾಗಿ ಸಮಾಜಕ್ಕೆ ತಿಳಿಸುವ ಪ್ರಯತ್ನ ರವಿ ಬೆಳಗೆರೆಯವರು ಈ ಕೃತಿಯಲ್ಲಿ ಮಾಡಿದ್ದಾರೆ.

ತುಂಬ ಬುದ್ಧಿವಂತನಲ್ಲದ ವಂಚಕ ಬಾಬಾ. ನೆತ್ತಿಯ ಮೇಲೆ ಕರಡಿ ಕೂದಲು, ಸ್ವಲ್ಪ ಮಟ್ಟಿಗಿನ ಕೈಚಳಕ ಮತ್ತು ವ್ಯಕ್ತಿಗತ ಭೇಟಿಗಳಲ್ಲಿ ತೋರಿಸುವ ಸಜ್ಜನಿಕೆ ಬಿಟ್ಟರೆ ಆತನಲ್ಲಿ ಮತ್ತೊಂದು ಧನಾತ್ಮಕವಾದ ಗುಣವಿರಲಿಲ್ಲ. ಇಳಿಗಾಲದಲ್ಲಿ ಆಸ್ಪತ್ರೆ, ಶಾಲೆ, ಕಾಲೇಜು, ನೀರು ಸರಬರಾಜು ಮುಂತಾದ ಜನಪದ ಯೋಜನೆಗಳನ್ನು ಕೈಗೆತ್ತಿಕೊಂಡು ತನ್ನ ಹಳೇ ಯಕ್ಷಿಣಿ ಚಮತ್ಕಾರಗಳನ್ನು ಕಡಿಮೆ ಮಾಡಿ, ವೃದ್ಧಾಪ್ಯ ಅಡರಿಕೊಂಡ ನಂತರ ಶಿಶು ಪೀಡನೆ ಮತ್ತು ಸಲಿಂಗ ಸಾಗಂತ್ಯಗಳಿಂದ ದೂರ ಉಳಿದಿದ್ದರಿಂದ ಆತನಿಗೊಂದಿಷ್ಟು ಗೌರವ ದೊರಕುತ್ತಿತ್ತು. ಇಲ್ಲದೇ ಹೋಗಿದ್ದರೆ ಬಾಬಾ ಉಳಿದ ಅನೇಕ ವಂಚಕರಂತೆ ಇತಿಹಾಸದ ಕಸದ ಬುಟ್ಟಿ ಸೇರಿರುತ್ತಿದ್ದನೆಂಬುದಾಗಿ ಈ ಪುಸ್ತಕದ ವಿವರಗಳಿಂದ ತಿಳಿಯುತ್ತದೆ. ಒಟ್ಟಾರೆ ಸಮಾಜದಲ್ಲಿ ಹೆಚ್ಚುತ್ತಿರುವ ವಂಚನೆ, ವಂಚಕರಿಂದ ದೂರವಿರಲು ಅಂಥವರ ಬಗೆಗಿನ ಎಚ್ಚರಿಕೆಯ ಸಂದೇಶದಂತಿದೆ 'ಬಾಬಾ ಬೆಡ್‌ರೂಂ ಹತ್ಯಾಕಾಂಡ'.

'ಮಧುಮಿತಾ ಶುಕ್ಲಾ ಹತ್ಯೇ! ದಿ ಮರ್ಡರ್ ಮಿಸ್ಟ್ರಿ' ಎಂಬ ಪುಸ್ತಕ, ಕವಯಿತ್ರಿ ಮಧುಮಿತಾ ಶುಕ್ಲಾ ಮರ್ಡರ್ ಕೇಸ್‌ಗೆ ಸಂಬಂಧಿಸಿದ್ದು. ಸಿಬಿಐ ತನಿಕಾ ಡ್ಯಾಕ್ಯುಮೆಟ್‌ಗಳನ್ನು ಆಧರಿಸಿದ ಕೃತಿ. ಒಮ್ಮೆ ಪೋಸ್ಟ್‌ಮಾರ್ಟಂ ಮಾಡಿ ಮನೆಯವರಿಗೆ ಶವ ಒಪ್ಪಿಸಿ, ಅದನ್ನವರು ಮಧುಮಿತಾಳ ಹುಟ್ಟೂರಾದ ಲಖೀಮ್‌ಪುರ್ ಖೀರಿ ಎಂಬಲ್ಲಿಗೆ ಕೊಂಡೊಯ್ಯುತ್ತಿರುವಾಗ ಅರ್ಧ ದಾರಿಯಲ್ಲಿ ಶವವಿದ್ದ ವ್ಯಾನನ್ನು ವಾಪಸು ಲಖನೌಗೆ ಕರೆಯಿಸಿ, ಎರಡನೆಯ ಸಲ ಪೋಸ್ಟ್‌ಮಾರ್ಟಂ

ಮಾಡಲಾಯಿತು. ಆಗ ಅವಳ ಗರ್ಭದಿಂದ ತೆಗೆದದ್ದು ಏಳು ತಿಂಗಳ ಬಲಿತ ಭ್ರೂಣ. ಅದು ಉತ್ತರ ಪ್ರದೇಶದ ಮಹಿಳಾ ಮುಖ್ಯಮಂತ್ರಿ ಮಾಯಾವತಿಯ ಸಂಪುಟದಲ್ಲಿ ಮಂತ್ರಿಯಾಗಿದ್ದ ಅಮರ್‌ಮಣಿ ತ್ರಿಪಾಠಿಯ ಅನೈತಿಕ ಸೃಷ್ಟಿ. ಅಮರ್ ಮಣಿ ತ್ರಿಪಾಠಿಯೇ, ತನ್ನ ಹೆಂಡತಿಯ ಜೊತೆ ಸೇರಿ ಕೊಲೆ ಮಾಡಿಸಿದ್ದ. ಆತನ ಹತ್ತಿರದ ಬಂಧುವೇ ಕೊಲೆ ಮಾಡಿದ್ದ. ಈ ಪುಸ್ತಕವನ್ನು ಬರೆಯಲು ರವಿ ಬೆಳಗೆರೆಯವರು ಕಾರಣವನ್ನು ಹೀಗೆ ನೀಡುತ್ತಾರೆ. 'ನನ್ನ ಆಸಕ್ತಿ ಕುದುರಿದ್ದೇ ಅಲ್ಲಿಂದ ಈ ತನಕ ನೂರಾರು ವರದಿ ಬರೆದಿದ್ದೇನೆ. ಕೇಸುಗಳ ಜಡ್ಜಮೆಂಟುಗಳನ್ನು ಓದಿದ್ದೇನೆ. ನಿಮ್ಮ ತನಕ ತಂದು ತಲುಪಿಸಿದ್ದೇನೆ. ಆದರೆ ಸಿಬಿಐನ ಅಧಿಕಾರಿಗಳು ಕೈ ಹಾಕಿದ ಕೇಸು ಹೇಗಿರುತ್ತದೆ? ಅವರ ಕಾರ್ಯವೈಖರಿ ಎಂತಹುದು? ಸಿಬಿಐ ಸಲ್ಲಿಸುವ ಛಾರ್ಜ್‌ಶೀಟ್ ಹೇಗಿರುತ್ತದೆ? ಅವರು ನಮ್ಮ ಮಾಮೂಲಿ ಪೊಲೀಸರಿಗಿಂತ ಹೇಗೆ ವಿಭಿನ್ನ? ಅದನ್ನು ತಿಳಿದುಕೊಳ್ಳಬೇಕೆಂಬ ನನ್ನ ಅಕೆಡೆಮಿಕ್ ಆಸಕ್ತಿಯ ಪರಿಣಾಮವೇ ಈ ಲೇಖನ ಮಾಲಿಕೆ' ಎಂದು 'ಓದುವ ಮುನ್ನ...' ಭಾಗದಲ್ಲಿ ಹೇಳುತ್ತಾರೆ. ಇಪ್ಪತ್ನಾಲ್ಕು ವರ್ಷ ವಯಸ್ಸಿನ ಕವಯಿತ್ರಿ ಮಧುಮಿತಾ ಶುಕ್ಲಾ ಮತ್ತು ಅಮರ್ ಮಣಿತ್ರಿಪಾಠಿಯ ಅನೈತಿಕ ಸಂಬಂಧ ಸಿಬಿಐನ ತನಿಖೆಯನ್ನೊಳಗೊಂಡ ಹಾಗೂ ಅವಳ ಘೋರ ಹತ್ಯೆಯ ಕಥಾನಕ ಈ ಕೃತಿ.

ಬಡತನ ಮತ್ತು ಅಮಾಯಕತೆ ಆವರಿಸಿಕೊಂಡ ಈ ನೆಲದಲ್ಲಿ ಇದ್ದಕ್ಕಿದ್ದಂತೆ ಆರಂಭವಾದ ಮೈನಿಂಗ್, ಅನಂತರದಲ್ಲಿ ಜನರ ನೆತ್ತಿಯ ಮೇಲೆ ಕಾಗೆ ಹಾರಿದಂತೆ ಹೆಲಿಕಾಪ್ಟರು ಹಾರಿದವು. ಆಟೋ ಓಡಿಸುತ್ತಿದ್ದವರು ಬೆಂಝ್ ಕಾರುಗಳಲ್ಲಿ ಓಡಾಡತೊಡಗಿದರು. ಕೇವಲ ಜಿಲ್ಲೆಯ ಅರ್ಥ ವ್ಯವಸ್ಥೆಯನ್ನೇ ಅಲ್ಲ ಕರ್ನಾಟಕದ ರಾಜಕಾರಣ ನಕಾಶೆಯನ್ನೇ ಬದಲಿಸಿದ ಗಣಿಗಾರಿಕೆ ಮತ್ತು ಅಕ್ರಮಗಳ ಬಗೆಗೆ ವಿವರಿಸುವ ತನಿಖಾ ವರದಿಯೇ 'ಅನಿಲ್‌ಲಾಡ್ ಮತ್ತು ನಲವತ್ತು ಕಳ್ಳರು'.

'ಇದು ನನ್ನ ಆತ್ಮ ಚರಿತ್ರೆಯಲ್ಲ. ನನ್ನ ಮೇಲಿನ ಆರೋಪದ ವಿರುದ್ಧ ನಾನು ನೀಡುತ್ತಿರುವ ವಿವರಣೆಯೂ ಅಲ್ಲ. ಇದು ಯಾವುದೇ ಘಟನೆಯ ವಿವರಣೆಯೂ ಅಲ್ಲ. ಅಥವಾ ನನ್ನೆಡೆಗೆ ಓದುಗರ ದಯೆ, ಅನುಕಂಪ ದಕ್ಕಿಸಿಕೊಳ್ಳುವ ಪ್ರಯತ್ನವೂ ಅಲ್ಲ. ಹಾಗಾದರೆ ಇಂಥದೊಂದು ಪುಟ್ಟ ಪುಸ್ತಕ ಬರೆಯುವ ಅಗತ್ಯವಾದರೂ ಏನು? ಯಾಕಾದರೂ ಇದನ್ನು ಬರೆಯುತ್ತಿದ್ದೇನೆ.?'[೧೮] ಪ್ರವೀಣ್ ಮಹಾಜನ್ ಮರಾಠಿಯಲ್ಲಿ ಬರೆದ 'ಮಾಝಾ ಆಲ್ಬಮ್' ಕೃತಿಯನ್ನು ರವಿಯವರು ಕನ್ನಡದಲ್ಲಿ ತಂದಿದ್ದಾರೆ. ಅದರ ಆರಂಭವೇ ಮೇಲಿನ ಉಲ್ಲೇಖ. ಭಾರತೀಯ ಜನತಾ ಪಕ್ಷದ ಹಿರಿಯ ನಾಯಕರಿಗೆ ಕಣ್ಮಣಿಯಂತಿದ್ದ ಪ್ರಮೋದ್ ಮಹಾಜನ್ ಎಂಬ ಹೆಸರೇ ಒಂದು ರೀತಿಯ ಮಿಂಚಿನ ಸಂಚಾರ ಅಂದಿನ ರಾಜಕಾರಣದಲ್ಲಿ. ಒಂದಲ್ಲ ಒಂದು ದಿನ ಆತ ದೇಶದ ಪ್ರಧಾನಿಯಾಗುತ್ತಾರೆ ಎಂದು ನಿರೀಕ್ಷಿಸಿದವರೇ ಹೆಚ್ಚು. ಆದರೆ ಕೆಲ ವರ್ಷಗಳ ಹಿಂದೆ ಆತನ ಸ್ವಂತ ತಮ್ಮ ಪ್ರವೀಣ್ ಮಹಾಜನ್, ಅಣ್ಣನನ್ನು ಏಕಾಏಕಿ ಗುಂಡಿಕ್ಕಿ ಕೊಂದುಬಿಟ್ಟ. ಕೊಲೆಯ ನಂತರ ಜೈಲಿನಲ್ಲಿ ಕುಳಿತೇ ಪ್ರವೀಣ ಮಹಾಜನ್ ಈ ಒಂದು ಕೃತಿಯನ್ನು ಬರೆದ. ಅದು ಅನೇಕ ವಿಷಯಗಳನ್ನು ಬಹಿರಂಗ ಪಡಿಸುವಂತದ್ದಾಗಿತ್ತು.

ಪ್ರಮೋದ್ ಮಹಾಜನ್ ಸಾಯುವ ತನಕ ಎಲ್ಲವೂ ಚೆನ್ನಾಗಿಯೇ ಇತ್ತು. ಆನಂತರ ಬಯಲಾದದ್ದೇ ಪ್ರಮೋದ್ ಮಹಾಜನ್‌ನ ಕಾಮತೃಷೆ, ಕಪ್ಪುಹಣ, ರಾಜಕೀಯ, ಅನೈತಿಕ ಸಂಧಾನಗಳು, ಅಸಂಖ್ಯಾತ ಪ್ರೇಮ ಪ್ರಕರಣಗಳು, ಮಗನ ಮಾದಕ ದ್ರವ್ಯ ವ್ಯಸನ, ಅವನ ಅನೈತಿಕ

ಸಂಬಂಧ ಮುಂತಾದವುಗಳೆಲ್ಲದರ ಸ್ಥೂಲ ಚಿತ್ರಣವೇ ಕನ್ನಡದಲ್ಲಿ ರವಿ ಬೆಳಗೆರೆಯವರು ತಂದ 'ಪ್ರಮೋದ್ ಮಹಾಜನ್ ಹತ್ಯೆ'.

ಕ್ರೈಮ್ ಬರಹಗಳ ಬಗೆಗೆ ಏನನ್ನು ವಿವರಿಸ ಹೊರಟರು ಅದು ಕೊಲೆ, ಅನೈತಿಕತೆ, ಭ್ರಷ್ಟಾಚಾರ, ದರೋಡೆ ಮುಂತಾದ ಅವೇ ವಿಷಯಗಳ ಸುತ್ತಲು ಗಿರಕಿ ಹೊಡೆಯುತ್ತದೆ. ಆದರೆ ವಸ್ತು ಮಾತ್ರ ಬೇರೆ ಬೇರೆ ತೆರನಾದಿದ್ದು ಇವೆಲ್ಲವೂ ಓದುವುದಕ್ಕೆ ಬೇಸರದ ವಿಷಯಗಳೇ. ರವಿಯವರು ಅದನ್ನು ಕಟ್ಟಿಕೊಡುವಲ್ಲಿ ಮನದಟ್ಟು ಮಾಡುವಲ್ಲಿ ಮಾತ್ರ, ಅಪರಾಧದ ಬಗ್ಗೆ ಎಚ್ಚರಿಸುವ ಸಾಮಾಜಿಕ ಜವಾಬ್ದಾರಿ, ನಿರ್ವಹಿಸಿದ ರೀತಿ ಸುಂದರವಾದದ್ದು. ಆದ್ದರಿಂದ ಇವುಗಳು ಓದಿಸಿಕೊಳ್ಳಲು ಸಾಧ್ಯವಾಗಿಸಿವೆ.

ಇಂಥ ಅನೇಕ ಏಳು-ಬೀಳುಗಳನ್ನು ಕಂಡು ಇಷ್ಟುದೂರ ಕ್ರಮಿಸಿದ ಕನ್ನಡ(ಕ್ರೈಮ್) ಪತ್ತೇದಾರಿ ಸಾಹಿತ್ಯ, ಇಷ್ಟು ವರ್ಷಗಳ ಅನಂತರವೂ ಕನ್ನಡ ಸಾಹಿತ್ಯ ವಾಹಿನಿಯಲ್ಲಿ ಮತ್ತು ಸಾರ್ವಜನಿಕವಾಗಿ ಗೌರವ ಸ್ಥಾನವೊಂದನ್ನು ಗಳಿಸಿಕೊಳ್ಳಲು ವಿಫಲವಾಗಿದೆ. ಇಂಗ್ಲೀಶ್ ಪತ್ತೇದಾರಿ ಕಾದಂಬರಿಗಳು ಕ್ಲಾಸಿಕ್ ಮಟ್ಟಕ್ಕೆ ತಲುಪಿದ್ದು, ಅವಕ್ಕೆ ಅವನ್ನು ಬರೆದವರಿಗೆ ವಿಶ್ವಮಾನ್ಯತೆ ದೊರಕಿತು. ಭಾರತೀಯ ಭಾಷೆಗಳಲ್ಲಿ ಹೇಗಾದರೂ ಇರಲಿ, ಕನ್ನಡದಲ್ಲಿ ಅಂಥದೊಂದು ಕ್ಲಾಸಿಕ್ ಎನಿಸಿಕೊಳ್ಳಬಲ್ಲ, ವಿಮರ್ಶಕರ, ಸಾಹಿತ್ಯ ಪ್ರಿಯರ, ಬುದ್ಧಿ ಜೀವಿಗಳ ಮೆಚ್ಚುಗೆ, ಗೌರವ ಗಳಿಸುವಂಥ ಕೃತಿ ಪತ್ತೆದಾರಿ ಕ್ರೈಮ್ ಪ್ರಕಾರದಲ್ಲಿ ಇದೆಯೇನೋ? ಓದುಗರನ್ನು ಮೆಚ್ಚಿಸುವುದು, ಅತ್ಯಂತ ಜನಪ್ರಿಯವಾಗುವುದು ಕನ್ನಡ ಪತ್ತೆದಾರಿ ಸಾಹಿತ್ಯಕ್ಕೆ ಸಾಧ್ಯವಾಗಿದೆ ಎಂದೆನಿಸುತ್ತದೆ. ಆ ಕಾರಣಕ್ಕಾದರೂ ಕನ್ನಡಸಾಹಿತ್ಯ ವಾಹಿನಿಯಲ್ಲಿ ತನ್ನ ಸ್ಥಾನವನ್ನು ಅದು ಗಳಿಸಿಕೊಳ್ಳಬೇಕಾಗಿದೆ. ಬಹುಶಃ ಇನ್ನೂ ಇದು ಮನರಂಜನೆಯ ಸಾಹಿತ್ಯವಾಗಿಯೇ ಉಳಿದುಕೊಂಡಿರುವುದರಿಂದ ವಿಮರ್ಶಕರ ತಾತ್ಸಾರಕ್ಕೆ ಗುರಿಯಾಗಿದೆ ಎಂದೆನಿಸುತ್ತದೆ.

**೩.೩.೪. ಇತರೆ ಕಾದಂಬರಿಗಳು**

ರವಿಯವರ ಕಾದಂಬರಿ ಪ್ರಕಾರವನ್ನು ಮೇಲಿನ ನಾಲ್ಕು ಭಾಗಗಳಲ್ಲಿ ಗಮನಿಸಲಾಗಿ, ಕೊನೆಯಲ್ಲಿ ಉಳಿಯುವ ಭಾಗವೇ ಇತರೆ. ಅಂದರೆ ಅದು ಪ್ರಕಾರದ ದೃಷ್ಟಿಯಿಂದಲ್ಲ. ವಸ್ತು ವಿಷಯದ ಹಿನ್ನೆಲೆಯಿಂದ. ಆ ಕಾರಣದಿಂದಲೇ ಇತರೆ ಕಾಂದಬರಿಗಳು ಎಂದು ವಿಭಾಗಿಸಿಕೊಳ್ಳಲಾಗಿದೆ. ರಾಜಕೀಯ, ತಾಯಿ ಸಂಬಂಧ ಮುಂತಾದ ಅಂಶಗಳನ್ನು ಒಳಗೊಂಡವುಗಳು ಈ ಭಾಗದಲ್ಲಿ ಸೇರ್ಪಡೆಗೊಳ್ಳುತ್ತವೆ. ಅವುಗಳು ಹಿಂದಿನ ವಿಭಾಗದಲ್ಲಿ ಗಮನಿಸಿದ ವಿಷಯಗಳಿಗಿಂತ ವಿಭಿನ್ನವಾದವುಗಳು. ಅಂದರೆ ಆ ಭಾಗವನ್ನು ಹೊರತು ಪಡಿಸಿದಂತಹವು. ಅವುಗಳನ್ನು ಈ ಮುಂದಿನಂತೆ ಗಮನಿಸಬಹುದು.

ತೆಲುಗಿನ ಯಂಡಮೂರಿ ವಿರೇಂದ್ರನಾಥ್ ಅವರ 'ಯುಗಾಂತಂ' ಕಾದಂಬರಿಯ ಕನ್ನಡಾನುವಾದವೇ 'ನಕ್ಷತ್ರ ಜಾರಿದಾಗ'. ಇದರ ವಸ್ತು ಜಗತ್ತು ವಿನಾಶವಾಗುವುದು ಎಂಬ ಭಯ ಮನುಷ್ಯನಲ್ಲಿ ಹುಟ್ಟಿದಂತಹ ಸಮಯದಲ್ಲಿ ಮನುಷ್ಯನ ನಿಸ್ಸಹಾಯಕತೆ, ವಿಜ್ಞಾನ, ಬಡತನ, ನಿರುದ್ಯೋಗ, ಪ್ರೀತಿ-ಪ್ರೇಮ ಮುಂತಾದವುಗಳು ಅವನಲ್ಲಿ ವ್ಯಕ್ತವಾಗುವ ಬಗೆಯನ್ನು ಒಳಗೊಂಡಿದೆ. ಅನಂತಾನಂತವಾದ ವಿಶ್ವದಲ್ಲಿ ಹಲವು ಸಾವಿರ ವರ್ಷಗಳಿಂದ ಒಂದೇ ಕಕ್ಷೆಯಲ್ಲಿ ವಿಶ್ರಾಂತಿಯಿಲ್ಲದೆ ಪರಿಭ್ರಮಿಸುತ್ತಿರುವ ಕೋಟ್ಯಾನುಕೋಟಿ ಗೋಳಗಳ ಮಧ್ಯೆ ಒಂದು ಸಣ್ಣ ಕದಲಿಕೆ. ಕ್ಷಣದ ಸಾವಿರದಲ್ಲಿ ಒಂದು ಭಾಗದಷ್ಟು ಕಾಲ ಮಾಮೂಲಾಗಿ ಸೇರಿಹೋಯಿತು. ಸೂಕ್ಷ್ಮಾತಿಸೂಕ್ಷ್ಮವಾದ ಕದಲಿಕೆಯನ್ನು

ಜಗತ್ತಿನ ಯಾವುದೇ ವೈಜ್ಞಾನಿಕ ಉಪಕರಣವೂ ಕಂಡು ಹಿಡಿಯದಾಯಿತು. ಭೂಮಿ ಮಾತ್ರ ಮಾಮೂಲಿನಂತೆಯೇ ಸುತ್ತುತ್ತಿದೆ. ಸೂರ್ಯನ ಉದಯಾಸ್ತಗಳು ಮಾಮೂಲಿನಂತೆ ನಡೆಯುತ್ತಿವೆ. ಆದರೆ ಭೂಮಿಗೆ ಕೋಟ್ಯಾನುಕೋಟಿ ಮೈಲುಗಳ ದೂರದಲ್ಲಿ ಒಂದು ನಕ್ಷತ್ರ 'ಪ್ರಾಕ್ಸಿಮಾಸಾಂಕ್ಟವರಿ' ಎಂದು ಕರೆಯಲ್ಪಡುವಂತಹುದು ಕೂದಲೆಳೆಯಷ್ಟರಲ್ಲಿ ತನ್ನ ಕಕ್ಷೆಯಿಂದ ಹೊರಬಿದ್ದು ಅತ್ಯಂತ ವೇಗದಿಂದ ಜಾರಿಹೋಗಲಾರಂಭಿಸುತ್ತದೆ.

ಅಂದು ಏಪ್ರಿಲ್ ಹದಿಮೂರು. ಗ್ರೀನ್‌ವಿಚ್ ಕಾಲಮಾನದ ಪ್ರಕಾರ ೧೪-೩೦ ನಿಮಿಷಗಳು. ಆಗ ಜಗತ್ತಿನ ಅರ್ಧಭಾಗ ನಿದ್ದೆಯಲ್ಲಿರುತ್ತದೆ. ಕಾದಂಬರಿಯಲ್ಲಿನ ಶೈಲಜ, ರಮಣ, ಜಾನಕಿ, ರಾಜಯ್ಯ, ಮೆಕ್ ಡೊನಾಲ್ಡ್, ಜಗದೀಶ್‌ಚಂದ್ರ ಎಲ್ಲರೂ ಸೇರಿದರೆ ಜಗತ್ತು. ಸಮಾಜದಲ್ಲಿನ ಸಮಸ್ಯೆಗಳು, ಸಾಮಾಜಿಕ, ಮಾನಸಿಕ, ರಾಜಕೀಯ, ನೈತಿಕತೆ ಎಲ್ಲವೂ ಸೇರಿದರೆ ಜಗತ್ತು. ಒಟ್ಟಾರೆಯಾಗಿ ನಕ್ಷತ್ರ ಜಾರಿದಾಗ ಕಾದಂಬರಿಯ ಕುರಿತು ಹೇಳುವುದಾದರೆ, ಅಷ್ಟಗ್ರಹ ಒಂದೇ ರೇಖೆಗೆ ಬಂದು, ಜಗತ್ತು ವಿನಾಶವಾಗುವುದೆಂಬ ಭಯ, ಸ್ಕೈಲ್ಯಾಬ್ ಬಿದ್ದು, ಊರೂರಲ್ಲಿಯೂ ಜನರು ಹೆದರಿಕೆಯಿಂದ ಸೃಷ್ಟಿಸಿದ ಭಯಭೀತ ವಾತಾವರಣ. ರಾಜಕೀಯ ಧುರೀಣರ, ಬಣ್ಣದ ವ್ಯಾಪಾರಿಗಳ ಲಾಭದೃಷ್ಟಿ, ವಿಜ್ಞಾನಿಗಳ ಕ್ಷಿತಿಕ್ಷಾಂಕೆ, ನಿರುದ್ಯೋಗಿಗಳ ನಿಸ್ಸಹಾಯಕತೆ, ಭೇಟಿಯಾಗಲಾರದ ಪ್ರೇಮಿಗಳ ಪ್ರೇಮಾಯಣ, ಸಂಸಾರಸ್ಥರ ನೈತಿಕಕ್ಷೋಭೆ, ಬಿಕ್ಷುಕರ ಅತೀ ಸಾಹಸ ವೈಖರಿ ಇವೆಲ್ಲವನ್ನೂ ಚಿತ್ರಿಸುತ್ತಾ, ಓದುಗರನ್ನೂ ತನ್ನೊಳಗೊಂದು ಪಾತ್ರವನ್ನಾಗಿ ಮಾಡಿಕೊಳ್ಳುತ್ತಾ, ಟೆನ್ಷನ್ ಹೆಚ್ಚಿಸಿ, ಪೋಷಿಸಿ, ತಬ್ಬಿಬ್ಬು ಮಾಡುವ ಫ್ಯಾಂಟಸಿ! ಈ ನಕ್ಷತ್ರ ಜಾರಿದಾಗ ಕಾದಂಬರಿ ಎಂದು ಹೇಳಬಹುದು.

ದಿನನಿತ್ಯದ ಕೆಲಸ, ಒತ್ತಡ, ಸುಸ್ತು, ಹೈರಾಣಗಳ ಮಧ್ಯೆಯೇ ಬಿಟ್ಟು ಬಿಡದೆ ನೆನಪಾಗುವ ಮನುಷ್ಯನ ಸುಪ್ತ ಕಾಮನೆಗಳಿಗೆ ಮತ್ತು ಅದರ ಸುತ್ತ ಹರಡಿ ಕುಳಿತು ಇಡೀ ಜೀವನವನ್ನು ಸಹನೀಯಗೊಳಿಸುವ ಮನುಷ್ಯ ಜೀವಿಯ ಸಂಭಾವಿತ ಪೋಲಿತನವೇ ಖುಷ್‌ವಂತ್ ಸಿಂಗ್ ಅವರ 'ದಿ ಕಂಪೆನಿ ಆಫ್ ವಿಮೆನ್'. ಖುಷ್‌ವಂತ್ ಆದರ್ಶಪ್ರಾಯರು, ಅವರು ಯಾವತ್ತು ಗುಮ್ಮನ ಗುಸವನಂತೆ ಬದುಕಿದವರಲ್ಲ. ತಮ್ಮನ್ನು ತಾವು ಸದಾ ಗೇಲಿ ಮಾಡಿಕೊಂಡ ಆರೋಗ್ಯವಂತ. 'ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ'ದಂಥ ಪತ್ರಿಕೆಗೆ ಜೀವ ತುಂಬಿದ ಪತ್ರಕರ್ತ. ಎಂದಿಗೂ, ಯಾವ ಕಾಲಕ್ಕೂ Out dated ಆದವರಲ್ಲ. ಈ ದೇಶ ಕಂಡ ಕೆಲವೇ ಒರಿಜಿನಲ್ ಚಿಂತಕರಲ್ಲಿ ಒಬ್ಬರು. ಅವರ ನೇರವಂತಿಕೆಗೆ ನೂರಾರು ಉದಾಹರಣೆಗಳಿವೆ. ಅವರ ರಾಜಕೀಯ, ಧಾರ್ಮಿಕ ಮತ್ತು ನೈತಿಕ ನಿಲುವುಗಳು ತುಂಬ ಸ್ಪಷ್ಟ ತುಂಬ ವಯಸ್ಸಾದ ನಂತರವೂ ಒಬ್ಬ ಮನುಷ್ಯ ಸಮಚಿತ್ತ ಕಾಯ್ದುಕೊಂಡು ಬದುಕಬಲ್ಲ ಎಂಬುದಕ್ಕೆ ಖುಷವಂತ್ ಜೀವಂತ ಉದಾಹರಣೆ. ಅವರು ವಿವಾದಗಳಿಗೆ ಹೆದರಿದವರಲ್ಲ. ವಿವಾದಾತೀತ ಮನುಷ್ಯನೆಂದರೆ, ಅವನೀಗಾಗಲೇ ಮುಗಿದು ಹೋಗದ್ದಾನೆ ಎಂದರ್ಥ ಎಂಬುದು ಖುಷ್‌ವಂತ್ ಸಿಂಗ್ ಅವರ ನಿಲುವು.

ತುಂಬ ಮಡಿವಂತ ತಂದೆಯ ಮಗನಾಗಿ ಹುಟ್ಟಿ, ಓದಿನಲ್ಲಿ ಜಾಣ್ಮೆ ಪ್ರದರ್ಶಿಸಿ, ಅಮೇರಿಕಾಕ್ಕೆ ಹೋಗುವ ಕಥಾ ನಾಯಕ ಮೋಹನ್ ಕುಮಾರ್, ಮದುವೆಗೆ ಮುಂಚೆಯೇ ದೇಶ ವಿದೇಶದ ಹುಡುಗಿಯರೊಂದಿಗೆ, ಹೆಂಗಸರೊಂದಿಗೆ ದೇಹ ಸಂಬಂಧಗಳನ್ನಿಟ್ಟುಕೊಳ್ಳುತ್ತಾನೆ. ಭಾರತಕ್ಕೆ ಹಿಂದಿರುಗಿದ ಮೇಲೆ ಮದುವೆಯಾಗುತ್ತಾನಾದರೂ ಅದು ಮುರಿದು ಬೀಳುತ್ತದೆ. ಆಮೇಲೆ ಆರಂಭವಾಗುವುದೇ ಮೋಹನನ ಮಿಲನ ಮಹೋತ್ಸವಗಳ ಸರಮಾಲೆ. ಕಾದಂಬರಿಯಲ್ಲಿ ಅದೊಂದು ರೀತಿಯ ಮದನ

ಬೇಟೆ. ಅದರಲ್ಲಿ ಮೋಹನ ಸುಖಕ್ಕಾಗಿ ಚೈತ್ರಯಾತ್ರೆ ಹೊರಡುವ ಒಬ್ಬಂಟಿಗ. ಆದರೂ ಆತ ಕೊನೆಗೆ ಒಳ್ಳೆಯತನದ ಸಿಂಪತಿಯನ್ನು ಪಡೆದು ಬಿಡುತ್ತಾನೆ. ಒಟ್ಟಾರೆಯಾಗಿ ಕಾದಂಬರಿಯ ಪೋಲಿತನ ಏನೇ ಇರಲಿ, ಒಬ್ಬ ವಯಸ್ಕ ಓದುಗನಿಗೆ ಸಂತೋಷದ ಓದು ಕೊಡಬಲ್ಲ ಕೃತಿ ದಿ ಕಂಪೆನಿ ಆಫ್ ವಿಮೆನ್. ಈ ಪುಸ್ತಕವನ್ನು ಬರೆಯುವಾಗ ಖುಷ್‌ವಂತ್‌ರಿಗೆ ಎಂಬತ್ತೈದು ವರ್ಷ. ಎಂಬತ್ತೈದರ ಇಳಿವಯಸ್ಸಿನಲ್ಲಿ ಪ್ರಾಯಶಃ ಖುಷವಂತ್ ಸಿಂಗ್‌ರ ಹೊರತಾಗಿ ಮತ್ಯಾವ ಮಡಿವಂತ ಭಾರತೀಯ ಲೇಖಕನೂ ಇಂಥದೊಂದು ಪುಂಡ ಸಾಹಸಕ್ಕೆ ಕೈ ಹಾಕಲಾರರೇನೋ. ರವಿಯವರ ಯುದ್ಧದ ಬಗ್ಗೆ, ರಾಜಕಾರಣಿಗಳ ಬಗ್ಗೆ, ಭೂಗತ ಪಾತಕಿಗಳ ಬಗ್ಗೆ ಓದಿದವರಿಗೆ ಇದೊಂದು ಪೋಲಿ ಪುಸ್ತಕ ಓದಿ ಪಕ್ಕಕ್ಕಿಡಬಹುದು ಅಷ್ಟೇ.

ನಮ್ಮ ಸಮಾಜದಲ್ಲಿ ರಾಜಕಾರಣಿ ನಾನಾ ಕಾರಣಗಳಿಗಾಗಿ ಆಸಕ್ತಿಯನ್ನು ಕೆರಳಿಸುತ್ತಾನೆ. 'ಕವಿರಾಜಮಾರ್ಗವಲ್ಲ ಇದು ಕಾಮರಾಜಮಾರ್ಗ' ಕಾದಂಬರಿಯ ಕಥಾ ವಸ್ತುವೇ ರಾಜಕೀಯ. ಸಾಮಾನ್ಯವಾಗಿ ರಾಜಕೀಯ ಕಾದಂಬರಿಗಳು ತುಂಬ ರುಚಿಕರವಾಗಿರುವುದಿಲ್ಲ. ಆದರೆ ರವಿ ಬೆಳಗೆರೆಯವರ ಯಾವ ಬರಹವೂ ಕುತೂಹಲವನ್ನು ಕಳೆಯುವುದಿಲ್ಲ. ಯಾಕೆಂದರೆ ಅವರ ಆಯ್ಕೆಯ ವಸ್ತುಗಳೇ ಅಂತಹವು. ಅದರಲ್ಲೂ ಮನುಷ್ಯನ ಸಂಬಂಧಗಳ ಕುರಿತು ಬರೆಯುವಾಗ ರವಿಯವರು ಅತ್ಯಂತ ಸೂಕ್ಷ್ಮ, ಭಾವುಕ ಬರವಣಿಗೆಯ ತಂತ್ರವನ್ನು ಪಳಗಿಸಿಕೊಂಡಿರುವ ಲೇಖಕ. ಇದು ಒಂದು ಸುದೀರ್ಘ ಕಾದಂಬರಿ, ಒಂದು ರಾಜ್ಯದ ರಾಜಕಾರಣದ ವಿಷಯವನ್ನು ಒಳಗೊಂಡಿದೆ. ಜೊತೆಗೆ ಅನೇಕ ರೀತಿಯ ಕೊವೆಗಳನ್ನು ಹೊತ್ತ ಹುತ್ತವಿದು. ಎರಡು ಪಕ್ಷಗಳು ಸೇರಿ ತಲಾ ಇಪ್ಪತ್ತು ತಿಂಗಳು ಅಧಿಕಾರ ಅವಧಿಯನ್ನು ಹಂಚಿಕೊಂಡು ಆಡಳಿತ ಮಾಡುವ ಯೋಜನೆ ಕೈಗೊಳ್ಳುತ್ತಾರೆ. ಇಂತಹ ಯೋಜನೆಯ ವಿಚಿತ್ರ ತಿರುವುಗಳ ಹಂದರದ ಕಥಾವಸ್ತುವೇ ಈ ಕಾದಂಬರಿಯಲ್ಲಿದೆ.

ಆದರೆ ಅದಕ್ಕಿಂತ ಹೆಚ್ಚಿನ ಆಶ್ಚರ್ಯ, ಕುತೂಹಲ ಕೆಲವೊಮ್ಮೆ ಅಸಹ್ಯವನ್ನು ಮೂಡಿಸುವುದು ರಾಜಕೀಯ ನಾಯಕರ, ನಾಯಕಿಯರ ಖಾಸಗಿ ಬದುಕು. ಅದನ್ನು ಎಳೆ ಎಳೆಯಾಗಿ ಕೆಲವೆಡೆ ಹಸಿಬಿಸಿಯಾಗಿ ಓದುಗರ ಎದುರಿಗೆ ಹರವಿಡುವುದು ಕಾಮರಾಜ ಮಾರ್ಗ. ಒಮ್ಮೊಮ್ಮೆ ಇದು ನಮಗೆ ಪರಿಚಯವಿರುವವರ ಕಥೆಯೇ ಅಲ್ಲವೇ ಅನ್ನಿಸುತ್ತದೆ. ಆದರೆ ಕಾದಂಬರಿಕಾರನ ಕಣ್ಣು ಸರಳ ಪರಿಚಯದ ಆಚೆಗೂ ಹೊಕ್ಕು ಬರುತ್ತದೆ.

ಯಾರದೋ ಆಸೆಗಾಗಿ ಮಂಗಳೂರಿನಿಂದ ಬೆಂಗಳೂರಿಗೆ ಸಿನಿಮಾದಲ್ಲಿ ಅವಕಾಶ ಹುಡುಕಿಕೊಂಡು ಬರುವುದು, ಯಾರದೋ ಕೈಗಳಿಗೆ ಬೀಳುವುದು, ಇನ್ನೇನು ಆಕೆಯ ಬದುಕೇ ಹಾದಿ ಬಿಟ್ಟಿತು ಅಂದುಕೊಳ್ಳುವುದರೊಳಗಾಗಿ, ಆಕೆಯನ್ನು ಒಂದು ರಾಜ್ಯದ ಮುಖ್ಯಮಂತ್ರಿಯೇ ಶಾಶ್ವತವಾಗಿ ತನ್ನವಳನ್ನಾಗಿಸಿಕೊಳ್ಳುವುದು. ಇದೇ ರೀತಿಯಲ್ಲಿಯ ಮುಂತಾದ ಘಟನೆಗಳನ್ನು ಓದಿದಾಗ ರಾಜಕೀಯ ನಾಯಕನೊಬ್ಬನ ಆಸೆ, ತಲ್ಲಣ, ಸಂಸಾರ ಜೀವನದ ನೀರಸತ್ವ, ನಾನಾ ತರಹದ ಪ್ರಲೋಭನೆಗಳಿಗೆ ಸಿಲುಕುವಿಕೆ ಇತ್ಯಾದಿಗಳು ಕಣ್ಣೆದುರಿಗಿನ ಘಟನೆಗಳಾಗಿ ಕಾಣಸಿಬಿಡುತ್ತವೆ. ಆದರೆ ಚಿತ್ರನಟಿಯೊಬ್ಬಳ ಬಗ್ಗೆ ಬರೆಯುತ್ತ ಬರೆಯುತ್ತ ಲೇಖಕರು ಅದೆಷ್ಟು ಅಂತಃಕರಣ ಪೂರ್ವಕ ದಾಟಿಗೆ ಬದಲಾಗುತ್ತಾರೆಂದರೆ, ಆಕೆ ಖಳನಾಯಕಿ ಅಂತ ಅನ್ನಿಸುವುದೇ ಇಲ್ಲ. ಬದಲಿಗೆ ಪುರುಷ ಸಮಾಜದ ಕೈ ಸಿಕ್ಕು ನಲುಗಿದ ಅಮಾಯಕಳಂತೆ ಗೋಚರಿಸಿ ಸಹಾನುಭೂತಿಗೆ ಅರ್ಹಳಾಗಿಬಿಡುತ್ತಾಳೆ. ಆಕೆಯನ್ನು ಸಮೀಪಿಸುವ ಮುಖ್ಯಮಂತ್ರಿಯಾದರೂ ಅಷ್ಟೇ ಪರಿಸ್ಥಿತಿಯ ಹಾಗೂ ಸಾಂಸಾರಿಕ ಒತ್ತಡಗಳಿಗೆ

ಸಿಕ್ಕ ಮನುಷ್ಯನಾಗಿ ಕಾಣಿಸುತ್ತಾನೆ. ತೀರ ಲೋಲುಪನಾದ ಒಬ್ಬ ರಾಜಕಾರಣಿ ಮತ್ತು ಕೇವಲ ದುಡ್ಡಿಗೆ ಸಿಗುವಂತಹ ಚಿತ್ರನಟಿ ಸಹ ರವಿ ಬೆಳಗೆರೆಯವರ ಕಣ್ಣುಗಳಿಗೆ ಸಾಮಾನ್ಯ ಮನುಷ್ಯರಾಗಿ, ಸಜ್ಜನರಾಗಿ, ಭಾವುಕರಾಗಿ ಕಾಣಿಸುತ್ತಾರೆ. ಒಟ್ಟಾರೆಯಾಗಿ ರಾಜಕಾರಣಿ ಸಮೂಹ ಅಥವಾ ಚಿತ್ರನಟಿಯರ ಬಗ್ಗೆ ಕೀಳು ಭಾವನೆಯಿರಿಸಿಕೊಂಡು ಬರೆಯಲು ಕುಳಿತರೆ, ಇಂತಹ ಒಳಗಣ್ಣು ತೆರೆದುಕೊಳ್ಳುವುದಿಲ್ಲ. ನಿಜಕ್ಕೂ ರವಿ ಬೆಳಗೆರೆಯವರು ಈ ಪಾತ್ರಗಳನ್ನು ಯಾವುದೇ ನಂಜು ಇಟ್ಟುಕೊಳ್ಳದೆ ಚಿತ್ರಿಸುತ್ತ ಹೋಗಿದ್ದಾರೆ.

ಇದನ್ನೇ ಕಾದಂಬರಿಯ ಆರಂಭದಲ್ಲಿ(ಮುನ್ನುಡಿ ರೂಪದ ಬರಹದಲ್ಲಿ) ಪತ್ರಕರ್ತರಾದ ವಿಶ್ವೇಶ್ವರಭಟ್ಟರು 'ರಾಜಕೀಯ ಪಲ್ಲಟಗಳ ಬಗ್ಗೆ ಬರೆಯುವಾಗ ರವಿ ಬೆಳಗೆರೆ ವಹಿಸಿರುವ ಎಚ್ಚರ ಗಮನಾರ್ಹವಾದದ್ದು. ಎರಡು ಪಕ್ಷಗಳವರು ಸೇರಿಕೊಂಡು ಒಬ್ಬ ಮುಖ್ಯಮಂತ್ರಿಯನ್ನು ಕೆಡವುವುದು, ತಲಾ ಇಪ್ಪತ್ತು ತಿಂಗಳು ಹಂಚಿಕೊಂಡು ರಾಜ್ಯವಾಳಲು ಹೊರಡುವುದು. ಕಡೆಗೆ ಕುತಂತ್ರ ಮಾಡಿ ತಮ್ಮದೇ ಆದ ಮಿತ್ರ ಪಕ್ಷಕ್ಕೆ ಅಧಿಕಾರ ಸಿಕ್ಕದಂತೆ ಮಾಡುವುದು ಮುಂತಾದವೆಲ್ಲ ನಮ್ಮ ಕಣ್ಣ ಮುಂದೆ ನಡೆದ ಘಟನೆಗಳೇ. ಇವುಗಳನ್ನು ಬರೆಯುವಾಗ ಲೇಖಕ ಆಯ ತಪ್ಪಿದರೆ ಇಡೀ ಕಥನ ಒಂದು ರಾಜಕೀಯ ಪಲ್ಲಟದ ವರದಿಯಷ್ಟೆ ಆಗಿಬಿಡುವ ಅಪಾಯವಿರುತ್ತದೆ. ಆದರೆ ಬೆಳಗೆರೆ ಪತ್ರಿಕೋದ್ಯಮದಲ್ಲಿ ಇದ್ದು ತನ್ನ ಕ್ರಿಯಾಶೀಲತೆ ಉಳಿಸಿಕೊಂಡಿರುವ ಜಾಣ. ಹೀಗಾಗಿ ಕಾದಂಬರಿ ಯಶಸ್ವಿಯಾಗಿದೆ'.[೧೯] ನಿಜಕ್ಕೂ ರವಿ ಬೆಳಗೆರೆಯವರು ಕಾದಂಬರಿಯ ಪಾತ್ರಗಳನ್ನು ಯಾವುದೇ ನಂಜು ಇಟ್ಟುಕೊಳ್ಳದೆ ಚಿತ್ರಿಸುತ್ತ ಹೋಗಿದ್ದಾರೆ ಎಂದು ಬರೆಯುತ್ತಾರೆ. ಅ ಕಾರಣದಿಂದಲೇ ಅದು ಯಶಸ್ವಿ ಕಾದಂಬರಿ ಎಂದು ಹೇಳುತ್ತಾರೆ.

ಕಾದಂಬರಿಯಲ್ಲಿ ಚಿತ್ರನಟಿಯಂಥ ಇನ್ನೊಬ್ಬ ಸ್ತ್ರೀ ಪಾತ್ರದ ಕುರಿತು ವೈಶಿಷ್ಟ್ಯ ಕಂಡುಬರುವುದು, ಮತ್ತೊಬ್ಬ ಮುಖ್ಯಮಂತ್ರಿ ಚೌಡೂರಪ್ಪನವರ ಅಂತರಂಗದ ಹೆಂಗಸರಲ್ಲಿ ಒಬ್ಬಳಾದ ಶುಭಾ ಎಂಬಾಕೆಯ ಪಾತ್ರದಲ್ಲಿ. ಬಡತನದಲ್ಲಿ ಬೆಳೆದು, ಕಷ್ಟಪಟ್ಟು ಓದಿ, ಸಾಕು ತಂದೆಯ ಆರೈಕೆಯಲ್ಲಿ ಬೆಳೆದ ಆ ಹುಡುಗಿ ಕೊನೆಗೆ ಸಾಕು ತಂದೆಯ ಕಾಮ ವಿಕಾರಕ್ಕೆ ಗುರಿಯಾಗುತ್ತಾಳೆ. ಸಮಾಜಕ್ಕೆ ಏನನ್ನೋ ಮಾಡಲು ಹೊರಡುವ ಯುವತಿ ಕಡೆಗೆ ತನ್ನ ಬದುಕು ನೆಲೆಗೊಂಡರೆ ಸಾಕು ಎಂಬ ಹಂತಕ್ಕೆ ತಲುಪುತ್ತಾಳೆ. ಕಠೋರ ಬ್ರಹ್ಮಚರ್ಯ, ಸ್ತ್ರೀಯರ ಕುರಿತ ಗೌರವ ಮುಂತಾದ ಸಿದ್ಧಾಂತಗಳನ್ನು ದಿನಿತ್ಯದ ಜೀವನದಲ್ಲಿ ಅಳವಡಿಸಿಕೊಂಡಿರುವೇ ಎಂದು ಹೇಳುವ ಪಕ್ಷವೊಂದರ ನಾಯಕರೇ, ಆಕೆಯನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಾರೆ. ಚೌಡೂರಪ್ಪನವರಂತೂ ಈ ಕಾದಂಬರಿಯಲ್ಲಿ ಕಂಡುಬರುವ ಚಡಪಡಿಕೆಯ ಮುದಿ ಪ್ರೇಮಿ. ಅವರ ಪ್ರೇಮವೂ ರಾಜ್ಯ ರಾಜಕಾರಣದ ಒಂದು ಭಾಗವೇ. ರಾಜಕಾರಣದಲ್ಲಿರುವ ಮನುಷ್ಯ ತನ್ನ ಗೆಲುವನ್ನು ಸಂಭ್ರಮಿಸುವುದು, ಅಂದರೆ ಹೆಣ್ಣೊಬ್ಬಳನ್ನು ಲೈಂಗಿಕವಾಗಿ ಬಳಸಿಕೊಳ್ಳುವುದು ಅಂತಲೇ ಭಾವಿಸುತ್ತಾನೆ. ಈ ಅಂಶವನ್ನು ರವಿಯವರು ಚೌಡೂರಪ್ಪನವರ ಪಾತ್ರದ ಪ್ರತಿ ಬೆಳವಣಿಗೆಯಲ್ಲೂ ಗುರುತಿಸುತ್ತ, ದಾಖಲಿಸುತ್ತಾ ಹೋಗುತ್ತಾರೆ. ಹಾಗೆಯೇ ಬೇರೆ ಬೇರೆ ನಾಯಕರಿಂದ ಲೈಂಗಿಕವಾಗಿ ಒಳಗಾಗುವ ಆಕೆ, ಕಡೆಗೆ ತಾನೇ ದುಷ್ಟ ನಾಯಕಿಯಾಗಿ, ಕೃತಘ್ನಳಾಗಿ ಹೊರಹೊಮ್ಮುತ್ತಾಳೆ. ಇದು ಕಾದಂಬರಿಯ ಮತ್ತೊಂದು ರೀತಿಯ ವಿನ್ಯಾಸ. ರವಿ ಬೆಳಗೆರೆಯವರ ಲೇಖನಿ ಇಂಥ ಪಾತ್ರಗಳ ಪೋಷಣೆಯಲ್ಲಿ ವಿಫುಲವಾಗಿ ಕಾಣಬಹುದು. ಇವುಗಳ ಜೊತೆಗೆ ಚೌಡೂರಪ್ಪನವರ ಆಪ್ತ ಸಹಾಯಕ ಸ್ವಾಮಿಯ ಪಾತ್ರ, ಮುಖ್ಯಮಂತ್ರಿಯ

ತಂದೆಯಾದ ಮಾಯಿಗೌಡರ ಪಾತ್ರಗಳು ತಮ್ಮ ಗುಣಸ್ವಭಾವದೊಂದಿಗೆ ಬೆಳೆಯುತ್ತಾ ಹೋಗುತ್ತವೆ. ಈ ಮಧ್ಯೆ ಆಸ್ಪತ್ರೆಯ ನರ್ಸೊಬ್ಬಳನ್ನು ಮೋಹಿಸಿ, ಅದರಿಂದಾಗಿಯೇ ಹಣ, ಗೌರವ ಎಲ್ಲವನ್ನೂ ಕಳೆದುಕೊಳ್ಳುವ ದಾರುಕಾಚಾರ್ಯನೆಂಬ ರಾಜಕಾರಣಿಯ ಪಾತ್ರದ ಬಗ್ಗೆ ಅಸಹ್ಯಪಡಬೇಕೋ, ಅಯ್ಯೋ ಎನ್ನಬೇಕೋ ನಿರ್ಧರಿಸಲಾಗದ ಸಂಧಿಗ್ದ ಸ್ಥಿತಿ ಓದುಗರದು.

ಒಟ್ಟಾರೆಯಾಗಿ ಹೇಳುವುದಾದರೆ ಈ ಕಾದಂಬರಿಯ ಕುರಿತು ಬರಬಹುದಾದ ವಿಮರ್ಶೆಯ ಕುರಿತು ತಲೆಕೆಡಿಸಿಕೊಳ್ಳದೇ ಬರೆಯುವ ಲೇಖಕರು ಮಾತ್ರ ಬರೆಯುವಂತಹದ್ದು. ಏನನ್ನು ಬರೆದರೂ ತುಂಬ ಆಸಕ್ತಿಕರವಾಗಿ ಇರುವಂತೆ ಬರೆಯುವುದು ರವಿಯವರ ವೈಶಿಷ್ಟ್ಯ. ಆದರೆ ಈ ಕಾದಂಬರಿಯಲ್ಲಿ ಹೆಚ್ಚು ಎಂಬಷ್ಟು ಲೈಂಗಿಕತೆ(Sex)ಯನ್ನು ಎಳೆತಂದಿದ್ದಾರೆ. ಅದಕ್ಕೆ ಲೇಖಕರ ಸಮರ್ಥನೆ ಏನಿದೆಯೋ ತಿಳಿಯದು. ಇಷ್ಟಾಗಿಯೂ ಕಾದಂಬರಿಯಿಂದ ಉಳಿಯುವ ಪ್ರಶ್ನೆಗಳೆಂದರೆ, ರಾಜಕಾರಣಿಗಳಿಗೆ ಲೈಂಗಿಕ ಜೀವನ ಇರಬಾರದೇ? ಅದು ಅನೈತಿಕವಾದದ್ದೇ ಇರಬಹುದು. ಆದರೆ ಅದನ್ನು ಅಷ್ಟೊಂದು ಕುತೂಹಲ ಕೆರಳಿಸುವಂತೆ ವರ್ಣಿಸಬೇಕೆ? ಬಹುಶಃ ಇವು ಲೇಖಕರೇ ಉತ್ತರಿಸಬೇಕಾದ ಪ್ರಶ್ನೆಗಳಾಗಿ ಉಳಿಯುತ್ತವೆ. ಅದಕ್ಕಾಗಿ ಇವುಗಳಿಗೆ ಉತ್ತರವೆಂಬಂತೆ ಅವರು ಒಂದೆಡೆ(ಅದೇ ಕೃತಿಯಲ್ಲಿ) ಹೇಳುತ್ತಾರೆ.

'ಒಬ್ಬ ಧರ್ಮ ಪ್ರಚಾರಕರು ಚಿತ್ರನಟಿಯೊಬ್ಬಾಕೆಯೊಂದಿಗೆ ಇರಬಾರದ ರೀತಿಯಲ್ಲಿ ಇರುವ ದೃಶ್ಯಗಳು ಟಿವಿಯಲ್ಲಿ ಕಾಣಿಸಿಕೊಂಡಾಗ ಆತನ ಬಗ್ಗೆ ಅಸಹ್ಯ, ಅಸಹನೆ ವ್ಯಕ್ತಪಡಿಸಿದೆ. ನಿಜ ಅದು ಆತನ ಖಾಸಗಿ ಬದುಕು. ಆತನ ಲೈಂಗಿಕ ಆದ್ಯತೆ. ಆದರೆ ಆತ ಧರ್ಮ ಪ್ರಚಾರಕನ ಸ್ಥಾನದಲ್ಲಿ ಕುಳಿತು ಆ ಕೆಲಸ ಮಾಡಬಾರದಿತ್ತು; ಆಶ್ರಮದಲ್ಲಿ. ಪ್ರತಿ ಹಗರಣವನ್ನು ಸಾರ್ವಜನಿಕ ವ್ಯಕ್ತಿಗಳ ಸಂಬಂಧಗಳನ್ನು ಇದೇ ಬೆಳಕಿನಲ್ಲಿ ನೋಡುವವನು ನಾನು. ಅದು ಈ ಕಾದಂಬರಿಯ ಪ್ರಮುಖ ಕಥಾವಸ್ತುವೂ ಹೌದು. ಅಂಥ ಮನುಷ್ಯ ಅಕ್ರಮ ಮಾಡುವಾಗ ಲಂಚ ತಿನ್ನುವಾಗ ಬೆತ್ತಲೆಯಾದಾಗ ಸಿಕ್ಕು ಬಿದ್ದರೆ ಜನಸಾಮಾನ್ಯರಲ್ಲಿ ಅದೊಂದು ತೆರನಾದ ಗೆಲುವಿನ, ಸಮಾಧಾನದ ಸೇಡು ತೀರಿಸಿಕೊಂಡ ಭಾವನೆ ಮೂಡುತ್ತದೆ. ಈ ಸಮಾಧಾನವೇ ಇವತ್ತು ಎಲ್ಲಾ ಛಾನಲ್‌ಗಳ ರಹಸ್ಯ ಕ್ಯಾಮೆರಾ ಕಾರ್ಯಚರಣೆಗಳಿಗೆ ಕಾರಣ. ಅಂಥದೊಂದು ಸಂತೋಷ ಸಮಾಧಾನವನ್ನು ನಾನು ನೀಡುತ್ತಿದ್ದೇನಾ? ಆ ಗುಮಾನಿ ನನಗೂ ಇದೆ. ನಾನು ಸೇರಿದಂತೆ ಈ ಸಮಾಜದ ಯಾವ ಸಾರ್ವಜನಿಕ ಜೀವಿಯೂ ಟೀಕೆಗೆ ವಿಮರ್ಶೆಗೆ ಅತೀತನಲ್ಲ' ಎಂದೂ ಹೇಳುತ್ತಾರೆ. ರವಿಯವರ ಮಾತಿನಂತೆ ಯಾವ ಸಾರ್ವಜನಿಕ ವ್ಯಕ್ತಿಯು ವಿಮರ್ಶೆಗೆ ಅತೀತನಲ್ಲ. ಒಟ್ಟಿನಲ್ಲಿ ಈ ಕಾದಂಬರಿ ಇಂದಿನ ಕಾಲಮಾನದ ರಾಜಕೀಯ, ರಾಜಕಾರಣದ ವಾಸ್ತವ ಅಂಶಗಳ ನೈಜ ಚಿತ್ರಣದ ವಸ್ತುವನ್ನೂ ಒಳಗೊಂಡಿದೆ ಎಂದು ಹೇಳಬೇಕಾಗುತ್ತದೆ.

'ಅಮ್ಮ ಸಿಕ್ಕಿದ್ಲು' ಕಾದಂಬರಿ 'ಮಿಚ್ ಆಲ್ಬಮ್'ನ 'For One More Day' ಕೃತಿಯನ್ನು ಹೋಲುತ್ತದೆ. ಆದರೆ ಅದು ಯಥಾವತ್ತು ಅನುವಾದವಲ್ಲ, ಭಾವಾನುವಾದವೂ ಅಲ್ಲ, ದೇಶಿಯತೆಯೇನೂ ಅಲ್ಲ. ಆ ಕಾದಂಬರಿಯ ನೆರಳು ಹಿಡಿದು ಅದೇ ರೀತಿಯಲ್ಲಿ ಸಾಗುವ ಸ್ವತಂತ್ರವೆಂದು ಕರೆಯಬಹುದಾದ ಒಂದು ಕೃತಿ. ಮಿಚ್ ಅಲ್ಬಮ್‌ನಿಂದ ಪ್ರಭಾವಿತವಾಗಿರುವುದು ಹೌದು. ಆದರೆ ಕಾದಂಬರಿಯ ಉದ್ದಕ್ಕೂ ರವಿಯವರ ಅನುಭವಗಳು ಇವೆ. ಅವರ ಅಮ್ಮನವೂ ಇವೆ. ಯಾವುದೋ ಕಾರಣದಿಂದ ಕುಡಿತದ ದಾಸ್ಯಕ್ಕೆ ಒಳಗಾದವರಿರುತ್ತಾರೆ. ಅಂತಹ ದಾಸ್ಯ

ಎಷ್ಟೋ ವೇಳೆ ಜೀವನವನ್ನು ಸರ್ವನಾಶದ ಅಂಚಿಗೆ ತಂದು ನಿಲ್ಲಿಸಿ ಬಿಡಬಹುದಾದ ಸಾಧ್ಯತೆಯೂ ಇರುತ್ತದೆ. ಆದರೆ ತಾಯಿಯನ್ನು ತುಂಬ ಇಷ್ಟಪಡುತ್ತಿರುತ್ತಾರೆ. ಜಗತ್ತಿನಲ್ಲಿ ಕೇವಲ ಈ ಕುಡಿತದಿಂದಾಗಿ, ಅವರಿಗೆ ಯಾರೂ ಇಲ್ಲ ಎನಿಸುತ್ತದೆ. ಆಗ ತಾಯಿಯನ್ನು ನೆನಪಿಸಿಕೊಂಡರೆ ಜಗತ್ತಿನ ಯಾವ ತಾಯಿಯಾದರೂ ಬದುಕಲು ಪ್ರೇರೇಪಿಸುತ್ತಾಳೆ. ಇಂಥದೊಂದು ಯೋಚನೆ ಮೂಡಿಸುವುದಷ್ಟೆ ಈ ಕಾದಂಬರಿಯ ಉದ್ದೇಶ.

'ರವಿ... ಹುಚ್ಚಾ ಯಾವುದನ್ನು ಬದಲಿಸುವುದಕ್ಕಾಗುವುದಿಲ್ಲ. ಬದಲಿಸಬೇಕು. ಅಂತಿದ್ದದ್ದರೆ ನನ್ನ ಜೀವನದಲ್ಲಿ ತುಂಬ ಸಂಗತಿಗಳನ್ನು ಬದಲಿಸಬೇಕೆನಿಸುತ್ತದೆ. ಆದರೆ ಒಂದು, ಒಂದೇ ಒಂದನ್ನು ಬದಲಿಸಲಿಕ್ಕೆ ಇಷ್ಟಪಡ್ತೀನಿ ಕಣೋ. ಅದೂ ರಾಘೂ! ಎಂಥ ಮುದ್ದು ಕೂಸು, ಎಂಥ ಅಮಾಯಕ ಹುಡುಗ. Good night ಅಜ್ಜೀ ಅಂತ ಹೇಳಲು ಬಂದ ಹುಡುಗ ನನ್ನನ್ನು ಹಾಸಿಗೆಯ ಮೇಲೆ ನೋಡಿದವನೇ ಎದೆಯೊಡೆದು ಹೋದವನಂತಾದ. ಮೊದಲು ಎಬ್ಬಿಸಲು ನೋಡಿದ ನೀರು ಚಿಮುಕಿಸಿದ, ಕಿರುಚಿದ. ನನ್ನನ್ನು ಬಿಟ್ಟು ಹೋಗಲಾರ. ಬೇರೊಬ್ಬರನ್ನು ಕರೆತರಲಾರ. Poor boy, Just a kid ಆಮೇಲೆ ಏನಾಯಿತೋ ನಂಗೆ ಗೊತ್ತಿಲ್ಲ ಕಣೋ...'[೨೦] ಅಂದಳು ಅಮ್ಮ. ಕಳೆದು ಹೋದ ನೆನಪು, ಕನಸು ಮತ್ತೇ ಅಮ್ಮನಿಂದ ನಮ್ಮಲ್ಲಿ ಹೊಸತನವನ್ನು ಪ್ರೇರೇಪಿಸುತ್ತದೆ. ನಮ್ಮಲ್ಲಿ ದಾಸ್ಯವನ್ನು ಹೋಗಲಾಡಿಸುತ್ತವೆ. ಯಾರಿಗೂ ಬೇಡವಾದ ವ್ಯಕ್ತಿ ಕೊನೆಯಲ್ಲಿ ಎಲ್ಲರಿಗೂ ಬೇಕಾಗುವ ರೀತಿಯನ್ನು ಇದು ಹೇಳುತ್ತದೆ ಎಂದು ಹೇಳಬಹುದು.

ಮೇಲಿನ ಈ ನಾಲ್ಕು ವಿಭಾಗಗಳನ್ನು ಗಮನಿಸಿದಾಗ ರವಿಯವರು ಅನೇಕ ರೀತಿಯ ವಿಷಯ, ವಸ್ತುಗಳ ಕಾದಂಬರಿಗಳನ್ನು ಬರೆದಿದ್ದಾರೆ. ಅವುಗಳನ್ನು ಯಾವುದೋ ಒಂದು ಪಂಥಕ್ಕೆ ಸೇರಿಸುವುದಾಗಲಿ, ಮಾನದಂಡದಿಂದ ನೋಡುವುದಾಗಲೀ ಆಗುವುದಿಲ್ಲ. ಅವರ ಕಾದಂಬರಿಗಳಲ್ಲಿ ಗಮನಿಸಬೇಕಾದ ಅಂಶವೆಂದರೆ ಮನುಷ್ಯ ಬದುಕಿನ, ಅಳವಡಿಸಿಕೊಳ್ಳಲೇ ಬೇಕಾದ ಸಣ್ಣ ಸಣ್ಣ ವಿಷಯಗಳಿವೆ. ತಿರಸ್ಕರಿಸಲಾರದ ಅನೇಕ ಮಹತ್ವ ಅಂಶಗಳೂ ಇವೆ. ಸ್ತ್ರೀ ಶೋಷಣೆಯ ಚಿತ್ರಣಗಳಿವೆ. ಆ ದುರ್ಬಲ ಮನಸ್ಸಿನ ಅಪಾಯಗಳಿವೆ. ಪ್ರೇರೇಪಿಸುವ, ಜೀವನಕ್ಕೆ ಸ್ಫೂರ್ತಿ ತುಂಬುವ ಪಾತ್ರಗಳೂ ಇವೆ. ಗಣನೆಗೆ ತೆಗೆದುಕೊಳ್ಳಲೇಬೇಕಾದ ಮಹತ್ವದ ಅಂಶಗಳು ಅವರ ಕಾದಂಬರಿಯಲ್ಲಿ ಇವೆ ಎಂದಷ್ಟೇ ಹೇಳಬಹುದು.

**೩.೪. ಜೀವನ ಕಥನಗಳು**

ಆತ್ಮಚರಿತ್ರೆಯಂತೆ ಜೀವನ ಚರಿತ್ರೆಯೂ ಕನ್ನಡದಲ್ಲಿ ಅಪರೂಪದ ಸಾಹಿತ್ಯ ಪ್ರಕಾರ. ವ್ಯಕ್ತಿಯ ಬದುಕನ್ನು ಕುರಿತು ಸಮೀಕ್ಷೆ ನಡೆಸಿ ಗುಣ ಸ್ವಭಾವಗಳನ್ನು ಪ್ರಾಂಜಲ ಮನಸ್ಸಿನಿಂದ ಹೇಳುವುದು ಇದರ ಉದ್ದೇಶವಾಗಿರುತ್ತದೆ. ಜೀವನ ಚರಿತ್ರೆಯಲ್ಲೇ ಆಗಲಿ, ಆತ್ಮ ಚರಿತ್ರೆಯಲ್ಲೇ ಆಗಲಿ ಪ್ರಿಯ ಸಂಗತಿಗಳನ್ನು ವೈಭವೀಕರಿಸುವುದು, ಅಪ್ರಿಯ ಸಂಗತಿಗಳನ್ನು ಮುಚ್ಚಿಹಾಕುವುದು ದೌರ್ಬಲ್ಯ ದೋಷವಾಗುತ್ತದೆ. ನೇರವಾಗಿ, ಸರಳವಾಗಿ, ನಿರ್ಭಯವಾಗಿ ಹಾಗೂ ಉದಾರವಾಗಿ ಉಕ್ತಗೊಂಡ ಸತ್ಯವೇ ಜೀವನ ಚರಿತ್ರೆಯ ಸಂಮ್ಮೋಹನ ಗುಣ[೨೧]ವೆಂದು ಆಲ್‌ಫ್ರೆಡ್ ಆರ್ ಕಾಂಕ್ಲಿಂಗ್ ಹೇಳುತ್ತಾನೆ. ಸಾಹಿತ್ಯ ವಲಯದ ಸರಳ ಮತ್ತು ಸ್ಪಷ್ಟ ಪರಿಣಾಮಕಾರಿಯಾದ ಪ್ರಕಾರ ಜೀವನ ಚರಿತ್ರೆ. ಸಮಾಜ ಸಂಸ್ಕೃತಿಗಳ ಉನ್ನತಿಗೆ ಕೆಲವು ವ್ಯಕ್ತಿಗಳ ಕೊಡುಗೆ ವಿಶಿಷ್ಟವಾಗಿರುತ್ತದೆ. ಒಬ್ಬ ವ್ಯಕ್ತಿಯ ವಿಶಿಷ್ಟ ವ್ಯಕ್ತಿತ್ವದ ನೆಲೆಗಟ್ಟಿನಲ್ಲಿ ಜೀವನ ಚರಿತ್ರೆ ರಚನೆಗೊಂಡಿರುತ್ತದೆ.

ಅನೇಕ ಪ್ರಬುದ್ಧ ಸಾಹಿತಿಗಳ ದೃಷ್ಟಿಯಲ್ಲಿ ಜೀವನ ಚರಿತ್ರೆ ಸೃಜನಶೀಲ ಸಾಹಿತ್ಯವಲ್ಲ. ಅದರಲ್ಲಿ ಝುಗಮಗಿಸುವ ಅಲಂಕಾರಗಳಿಲ್ಲ, ಉಪಮಾ ರೂಪಕಗಳ ಹೊರೆಯಿಲ್ಲವೆಂಬುದು ಅವರ ತೀರ್ಮಾನಕ್ಕೆ ಕಾರಣವಿರಬಹುದು. ಜೀವನ ಒಂದು ಕಲೆಯೆನ್ನುವುದಾದರೆ, ಜೀವನ ಚರಿತ್ರೆ ಒಂದು ಕಲಾಕೃತಿಯಾಗಲಾರದೇನು? ಜೀವನಕ್ಕಾಗಿ, ಜೀವನದಿಂದ ಜೀವನವನ್ನೊಳಗೊಂಡು ತಾನೆ ಸಾಹಿತ್ಯದ ಹುಟ್ಟು. ರಾಜರು, ಪಂಡಿತರು, ಅವರಂತೆಯೇ ಯುಗಧರ್ಮ ಕಾರಣವಾಗಿ ಜೀವನ ಚರಿತ್ರೆಗಳು ಪದ್ಯರೂಪದಲ್ಲಿ ರಚನೆಗೊಳ್ಳುತ್ತಿದ್ದವು. 'ಪ್ರಭುಲಿಂಗಲೀಲೆ', 'ಭಾವ ಚಿಂತಾರತ್ನ' 'ರಾಘವಾಂಕ ಚರಿತ್ರೆ,' 'ಆರಾಧ್ಯ ಚರಿತ್ರೆ' ಮೊದಲಾದವು ಛಂದೋರೂಪದ ಜೀವನ ಚರಿತ್ರೆಗಳಾಗಿವೆ ಅಲ್ಲವೆ? ವೈಚಾರಿಕತೆ, ವೈಜ್ಞಾನಿಕತೆ ವಿಕಾಸಗೊಂಡಂತೆ ವ್ಯವಹಾರಗಳು ವಿಶ್ವದಷ್ಟೆ ವಿಶಾಲ ಹಾಗೂ ವ್ಯಾಪಕವಾಗಿ ಹರಡಿದಂತೆ ಪದ್ಯ ಗದ್ಯಕ್ಕೆ ಶರಣಾಗಿದೆ. ಜೀವನವೇ ಪ್ರಧಾನವಾದ ಸಾಹಿತ್ಯಕ್ಕೆ ನಿತ್ಯ ಜೀವನದ ಭಾಷೆಯೇ ಬೇಕಾಗುತ್ತದೆ. ಪದ್ಯದ ಹಲವು ಕಾರ್ಯಗಳನ್ನು ಇಂದು ಗದ್ಯವೇ ನೆರವೇರಿಸುತ್ತಿದೆ. ಆದರೂ ಆಕಾಡೆಮಿಗಳ ಪಂಡಿತರ ಮತ್ತು ವಿಮರ್ಶಕರ ಪೂರ್ವಗ್ರಹದಿಂದಾಗಿ ಜೀವನ ಚರಿತ್ರೆ ಸಾಹಿತ್ಯ ವಲಯದ ಸಿಂಡ್ರೆಲಾ ಆಗಿದೆ.

ಸಾಹಿತ್ಯ ಪ್ರಕಾರಗಳಲ್ಲೆಲ್ಲ ಜೀವನ ಚರಿತ್ರೆಯೇ ಅತ್ಯುತ್ತಮವಾದದ್ದು ಎಂದು ಕಾರ್ಲೈಲ್ ಹೇಳುತ್ತಾನೆ. ಮಾನವನ ಜೀವನ ಇತಿಹಾಸವೇ ಜೀವನ ಚರಿತ್ರೆ. ಅದು ವ್ಯಕ್ತಿಯೊಬ್ಬನ ಇತಿಹಾಸವಾದರೂ, ಪರಿಸರದಿಂದ ಬೇರ್ಪಡಿಸಲಾಗದು. ಸಮಾಜದಲ್ಲಿ ಭಿನ್ನ ಭಿನ್ನ ವ್ಯಕ್ತಿಗಳು ಕೂಡಿರುವಂತೆ ಒಬ್ಬರು ಮತ್ತೊಬ್ಬರನ್ನು ಅನುಸರಿಸುತ್ತಾರೆ. ಅನುಕರಿಸಿರುತ್ತಾರೆ. ಈ ಪ್ರೋತ್ಸಾಹ ಪ್ರಭಾವಗಳು ಪರಸ್ಪರವೂ ಹೌದು. ಅವು ಆ ಪರಿಸರದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಶಕ್ತಿಗಳಾಗಿ ವ್ಯಕ್ತಿತ್ವವನ್ನೂ ರೂಪಿಸುತ್ತವೆ. ಒಬ್ಬ ಬುದ್ಧನಂತೆ, ಒಬ್ಬ ಯೇಸುವಿನಂತೆ, ಒಬ್ಬ ವಿವೇಕಾನಂದರಂತೆ, ಒಬ್ಬ ಗಾಂಧಿಯಂತೆ, ಮತ್ತೊಬ್ಬ ಮಾರ್ಕ್ಸ್‌ನಂತೆ ಪ್ರಬಲವಾದ ವ್ಯಕ್ತಿಗಳು ಸಮಕಾಲೀನ ಮಾತ್ರವಲ್ಲ, ಭವಿಷ್ಯದ ಸಮಾಜವನ್ನೂ ಸಹ ರೂಪಿಸಬಲ್ಲರು. ಮಹಾರಾಜಕಾರಣಿಗಳು, ವಿಜ್ಞಾನಿಗಳು, ಮಹಾಕವಿಗಳು ಮಹಾನ್ ಕ್ರಿಡಾಪಟುಗಳು, ಜಗತ್ತಿನ ಜನಪ್ರಿಯ ವಿವಾದಾತ್ಮಕ ಮತ್ತು ವಿವಾದಾತೀತ(ಖ್ಯಾತ ಕುಖ್ಯಾತ) ವ್ಯಕ್ತಿಗಳೂ ಸಹ ಈ ವರ್ಗಕ್ಕೆ ಸೇರುತ್ತಾರೆ. ಹೀಗೆಂದ ಕೂಡಲೇ ನೆಪೋಲಿಯನ್‌ನಂಥ ಮಹಾ ಯೋಧ ಮಾತ್ರ ಗೌರವಾರ್ಹ ಉಳಿದವರು ತಿರಸ್ಕರಣೀಯರೆನ್ನಲಾಗದು. ನೆಪೋಲಿಯನ್ ಜಗತ್ತಿನ ಗೌರವಕ್ಕೆ ಭಾಜನನಾದರೆ ಇತರರು ತಮ್ಮ ಸುತ್ತಮುತ್ತಣ ಸಮಾಜದ ಗಮನವನ್ನು ಆಕರ್ಷಿಸುತ್ತಾರೆ. ಅದೇನೇ ಇರಲಿ, ವ್ಯಕ್ತಿ ಹಾಗೂ ಪರಿಸರದ ಜೀವನಗಳೆರಡೂ ಪರಸ್ಪರ ಹೊಂದಿಕೊಂಡಿರುತ್ತವೆ ಎಂಬುದಂತೂ ನಿಜ. ಒಳ್ಳೆಯ ವ್ಯಕ್ತಿತ್ವ ಪ್ರೇರಣೆ, ಸ್ಫೂರ್ತಿಯನ್ನು ನೀಡಿದರೆ, ಕೆಟ್ಟ ವ್ಯಕ್ತಿತ್ವ ದುರಂತದ ಪಾಠವನ್ನು ಕಲಿಸುತ್ತದೆ. ಇಂತಹ ಜೀವನ ಚರಿತ್ರೆಗಳು ವ್ಯಕ್ತಿ ಚೈತನ್ಯದ ಉದಯಕ್ಕೆ ಹಾಗೂ ಅದರ ವಿಕಾಸಕ್ಕೆ ಅನುವಾಗುತ್ತವೆಂಬುದರಲ್ಲಿ ಸಂದೇಹವಿಲ್ಲ.

ಜೀವನ ಚರಿತ್ರೆ ರಚನೆಗೆ ಅರ್ಹತೆ, ಅನರ್ಹತೆಯ ಪ್ರಶ್ನೆ ವಿಮರ್ಶಕರಿಗೆ ಸವಾಲಿನ ಪ್ರಶ್ನೆಯೇ ಆಗಿದೆ. ಸಮಾಜದಲ್ಲಿ ವಿಶಿಷ್ಟವಾದ ಸ್ಥಾನಮಾನಗಳನ್ನು ಪಡೆದವನೆ ನಾಯಕನಾಗಬೇಕೆ? ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಗೂ ಅವರದೇ ಆದ ಸ್ವತಂತ್ರ ವ್ಯಕ್ತಿತ್ವವಿಲ್ಲವೆ? ಒಬ್ಬ ರೈತ ಅಥವಾ ಬೆಸ್ತನ ಜೀವನ ಚರಿತ್ರೆಗೆ ವಸ್ತುವಾಗಲಾರದೆ? ನಾಯಿ ನರಿ ಮೊಲಗಳ ಜೀವನ ಕುರಿತು ಕತೆಗಳಿಲ್ಲವೆ? ಎಂಬಿತ್ಯಾದಿ ಪ್ರಶ್ನೆಗಳು ವಿಮರ್ಶಕನ ಕೌಶ್ಯಲ್ಯಕ್ಕೆ ಸವಾಲಾಗಿ ನಿಲ್ಲುತ್ತವೆ. ಚರಿತ್ರೆ ಎಂತಹ ನಿಕೃಷ್ಟನಿಗೂ

ತನ್ನ ಪುಟಗಳಲ್ಲಿ ಸ್ವಲ್ಪ ಜಾಗವನ್ನು ಕೊಡುತ್ತದಂತೆ, ಅದರಂತೆಯೇ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಸರಳವೂ ನೇರವೂ ಪರಿಣಾಮಕಾರಿಯೂ ಆದ ಪ್ರಕಾರವೆಂದರೆ ಜೀವನ ಚರಿತ್ರೆ. ಅದರ ಆಕರ್ಷಕತೆಗೆ ಮುಖ್ಯವಾದ ಕಾರಣ ಅಲ್ಲಿನ ವಾಸ್ತವತೆ ಮತ್ತು ಅಮೂರ್ತತ್ವದ ಅಭಾವ ಅವುಗಳಲ್ಲಿ ಬರುವ ವ್ಯಕ್ತಿಗತಗಳೆಲ್ಲ ಅಕ್ಕ ಪಕ್ಕ ವ್ಯಕ್ತಿಯ ಜೀವನದ ಘಟನೆಗಳನ್ನು ಕೇಳಿ ಕಂಡದ್ದರಿಂದ ಆಧುನಿಕ ಕನ್ನಡ ಗದ್ಯಸಾಹಿತ್ಯದಲ್ಲಿ ಜೀವನ ಚರಿತ್ರೆ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಜೀವನ ಚರಿತ್ರೆ ಬರೆಯುವಾಗ ಲೇಖಕ ವೀಕ್ಷಕನ ಸ್ಥಾನದಲ್ಲಿ ನಿಲ್ಲುತ್ತಾನೆ. ಲೇಖಕನಿಗೂ, ಚರಿತ್ರೆಯ ನಾಯಕನಿಗೂ ನಡುವೆ ಕಾಲದ ಅಂತರ ಇರುವುದರಿಂದ ಲೇಖಕ ಅವರ ನಡೆನುಡಿಗಳನ್ನು ವಿಶ್ಲೇಷಿಸಿ, ವಿಮರ್ಶಿಸಿ ಬರೆಯಲು ಸಾಧ್ಯ. ಇದರಿಂದ ಜೀವನ ಚರಿತ್ರೆಗೆ ಆಳ ಒಳನೋಟಗಳು ದೊರೆಯುತ್ತವೆ. ಸಾಹಿತ್ಯದ ಮೂಲ ಲಕ್ಷಣ ಮುನ್ನೋಟ. ಇದು ಇನ್ನೊಂದು ಪರಿಯ ಕನಸು, ಆದರೂ ಭೂತ, ಭವಿಷ್ಯ, ವರ್ತಮಾನಗಳ ಒಂದು ಚಿನ್ನದ ಸರಪಳಿ ಎಂದೇ ಹೇಳಬಹುದು. ಸಾಹಿತ್ಯ ಮನುಷ್ಯನ ಸ್ವಭಾವದ ಬಹುಮುಖ್ಯವಾದ ಸೌಂದರ್ಯ ಪ್ರಜ್ಞೆ, ಜಗತ್ತು ಹಾಗೂ ವ್ಯಕ್ತಿಯ ನಡುವೆ ನಡೆಯುವ ಘರ್ಷಣೆ, ತುಮುಲ, ಸರಸ, ವಿರಸ, ಸಮರಸ ಸಾಹಿತ್ಯ ಸೃಷ್ಟಿಗೆ ಕಾರಣವಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯು ಸಮಾಜದ ಅಂಗವಾಗಿರುವುದರಿಂದ ವ್ಯಕ್ತಿಯ ಪ್ರತಿಕ್ರಿಯೆಗಳು ಬಹುಮಟ್ಟಿಗೆ ಸಮಾಜದ ಕಟ್ಟಳೆಗಳಿಗೆ ಒಳಪಟ್ಟಿರುತ್ತವೆ ಎಂಬುದು ನಿಜವಾದರೂ, ಸಾಹಿತ್ಯ ತನ್ನ ಮೂಲ ರೂಪದಲ್ಲಿ ವೈಯಕ್ತಿಕವಾದದ್ದು. ಅಂತೆಯೇ ಜೀವನ ಚರಿತ್ರೆಗಳ ಪರಿಣಾಮ ಪ್ರಯೋಜನಗಳೆಂದರೆ ಬೇರೊಬ್ಬರ ಬದುಕಿಗೆ ಮಾರ್ಗದರ್ಶನ ನೀಡುವುದೇ ಆಗಿದೆ.

ಬರೀ ಕ್ರೈಮ್, ಪ್ರೀತಿ–ಪ್ರೇಮ, ಕಾಮದ ಬಗ್ಗೆಯೇ ಬರೆಯುತ್ತಾರೆ ಎಂದು ರವಿಯವರ ಬಗೆಗೆ ಆಪಾದನೆಗಳಿವೆ. ಆದರೆ ಅವರು ಅನೇಕರ ಅತ್ಯುತ್ತಮವಾದ ಜೀವನ ಕಥನಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಪ್ರಮುಖವಾದ ಕೆಲವನ್ನು ಇಲ್ಲಿ ಸಂಕ್ಷಿಪ್ತವಾಗಿ ಪರಿಚಯಾತ್ಮಕ ವಿಶ್ಲೇಷಣೆಯನ್ನು ಮಾಡಲು ಪ್ರಯತ್ನಿಸಲಾಗಿದೆ. ಆಕೆ ಕ್ರೌರ್ಯದ ಪರಮಾವಧಿ, ಆಕೆ ಕಣ್ಣೀರ ಕಡಲು, ಕುಖ್ಯಾತಿಯ ಶಿಖರ ತಲುಪಿದ್ದೂ ಹೌದು. ಅಪ್ರಿಯತೆಯ ಉತ್ತುಂಗ ಕಂಡಿದ್ದೂ ಹೌದು. ಭಾರತ ಕಂಡ ಅತ್ಯಂತ ವಿಲಕ್ಷಣ ವ್ಯಕ್ತಿತ್ವದ ಪೂಲನ್‌ದೇವಿಯನ್ನು ಬಂದೂಕು ಹೆದರಿಸಿತು. ಅದೇ ಬಂದೂಕು ಆಕರ್ಷಿಸಿತು. ಆದರೆ ಕೊನೆಗೆ ಅದೇ ಬಂದೂಕು ಬದುಕಲು ಕಲಿಸಿತು. ಎಲ್ಲಾ ಸರಿ ಹೋಯಿತು ಎಂದು ಕೊಳ್ಳುವಷ್ಟರಲ್ಲಿ ಕೊಂದೇ ಹಾಕಿತು. ದೇಶ ವಿದೇಶಗಳ ಪತ್ರಕರ್ತರು, ಲೇಖಕರು, ಚಿತ್ರ ನಿರ್ಮಾಪಕರು, ನಿರ್ದೇಶಕರು, ರಾಜಕಾರಣಿಗಳು, ಜನಸಾಮಾನ್ಯರು ಎಲ್ಲರಿಗೂ ಪೂಲನ್‌ದೇವಿ ಕುತೂಹಲವಾಗಿದ್ದಳು ಪ್ರಶ್ನೆಯಾಗಿದ್ದಳು. ಭಾರತದ ಜಾತಿ ವ್ಯವಸ್ಥೆಯ ವಿವರಣೆಗೊಂದು ಉದಾಹರಣೆಯಾಗಿದ್ದಳು. ನಂತರ ಆಕೆ ಕೇವಲ ಕತೆಯಾದಳು. ಇತಿಹಾಸವಾದಳು; ಆಕೆಯ ಬದುಕಿಗೆ ಮತ್ತು ಸತ್ತ ಸಾವಿಗೆ. ರವಿಯವರ ಪಾಪದ ಹೂವು ಪೂಲನ್ ಎಂಬ ಜೀವನ ಕಥನ ಒಂದು ಸಮಗ್ರ ಕನ್ನಡಿ.

ನೊಂದ ಜೀವ ಓದು ಬರಹ ಗೊತ್ತಿಲ್ಲದ ಅಮಾಯಕಿ ಪೂಲನ್. ಆಕೆ ಮಾಡಿದ ಹತ್ಯೆಗಳೆಲ್ಲ ಆಕೆಯ ಕಣ್ಣೀರಿನಿಂದ ಉದ್ಭವವಾದ ಕ್ರೌರ್ಯದ ಫಲಿತಗಳೇ. ಈ ನೆಲದ ಕಾನೂನಿನ ಪ್ರಕಾರ ಆಕೆ ಶಿಕ್ಷೆಗೆ ಅರ್ಹಳು. ಅದೇ ಪೂಲನ್ ಈ ನೆಲದ ಮಾನವೀಯ ಅನುಕಂಪಕ್ಕೂ ಅರ್ಹಳಾದವಳು. ಬದುಕು ಆಕೆಯನ್ನು ಎಷ್ಟೋ ನಿಕೃಷ್ಟವಾಗಿ ನಡೆಸಿಕೊಂಡಿದೆ ಎಂಬುದನ್ನು ಅವಳ ಜೀವನ ಕಥನ ಓದುತ್ತ ಸಾಗಿದಂತೆ ಅರಿವಾಗುತ್ತದೆ. ಇಷ್ಟು ನಿಕೃಷ್ಟವಾಗಿ ಮತ್ಯಾರನ್ನು ನಡೆಸಿಕೊಂಡಿರಲಾರದೇನೋ?

ವರ್ಷಗಟ್ಟಲೆ ಜೈಲಿನ ಸರಳುಗಳ ಹಿಂದೆ ಕೊಳೆತು, ಕ್ಯಾನ್ಸರ್ ಪೀಡಿತೆಯಾಗಿ, ಲೋಕನಿಂದಿತೆಯಾಗಿ ನರಳಿದ ಫೂಲನ್ ಬಿಡುಗಡೆಯಾಗಿ ಬಂದ ನಂತರ ರಾಜಕಾರಣಿಯಾದಳು. ಆಕೆಯನ್ನು ಒಬ್ಬ ಪಾಖಂಡಿ ಪಾತಕಿಯಾಗಿ ಕಲ್ಪಿಸಿಕೊಳ್ಳಲು ಓದುಗರಿಗೆ ಹೇಗೆ ಸಾಧ್ಯವಾಗುವುದಿಲ್ಲವೊ? ಅದೇ ರೀತಿ ಅವಳನ್ನು ಲೋಕಮಾತೆಯನ್ನಾಗಿ ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ಫೂಲನ್ ಒಂದು ಪಾತಕ ಲೋಕದಿಂದ ಮತ್ತೊಂದು ಪಾತಕ ಲೋಕಕ್ಕೆ ನಡೆದು ಹೋಗಿದ್ದಾಳೆ ಎನಿಸುತ್ತದೆ. ಓದುಗರಿಗೆ ಮತ್ತು ಆಕೆ ಬದುಕನ್ನು ಕಂಡು, ಕೇಳಿ ನೋಡಿದವರಿಗೆ ಆಕೆಯ ಬದುಕಿನ ಅನೇಕ ಸವಿಸ್ತಾರ ವಿವರಗಳನ್ನು ರವಿ ಬೆಳಗೆರೆಯವರು ಪಾಪದ ಹೂವು ಫೂಲನ್ ಎಂಬ ಜೀವನ ಕಥನದಲ್ಲಿ ಚಿತ್ರಿಸಿದ್ದಾರೆ.

ಇಂಥಹದ್ದೇ ಅವರ ಮತ್ತೊಂದು ಜೀವನ ಕಥನವೆಂದರೆ ಎಂಬತ್ತರ ದಶಕದಲ್ಲಿ ವಿಶ್ವದ ಗಮನ ಸೆಳೆದ ಸುಂದರಿ ಡಯಾನಾಳದು. ಈಗಲೂ ಅವಳ ಸಾವಿನ ಸುತ್ತ ಅನುಮಾನದ ಹುತ್ತ ಬೆಳೆಯುತ್ತವೆ. ಅದೇ ಬ್ರಿಟನ್ ಸೇನೆಯ ಕೈವಾಡದ ಶಂಕೆ ವ್ಯಕ್ತವಾಗಿದ್ದು, ಇದೀಗ ತನಿಖೆ ಆರಂಭವಾಗಿದೆ. ಇಂತಹ ವಿವಾದಗಳ ನಡುವೆಯೂ, ಆ ದೇಶದ ಮನೆಮನೆಗಳಲ್ಲಿ ಈಗಲೂ ಡಯಾನಳನ್ನು ನೆನಪಿಸಿಕೊಳ್ಳುವವರಿದ್ದಾರೆ.

ಡಯಾನಾ ಉತ್ತರ ಸಿಗದ ನಾಯಕಿ, ಅವಳು ಮಹಾರಾಣಿ, ಸೌಂದರ್ಯದ ಖನಿ, ಹಾಗೂ ಆಸ್ತಿ, ಐಶ್ವರ್ಯ, ಅಧಿಕಾರ, ಜನಮನ್ನಣೆ ಎಲ್ಲ ಇದ್ದರೂ ಅವಳೊಬ್ಬ ಹತಭಾಗ್ಯೆ. ಆದರೆ ಒಂದು ಸಣ್ಣ ಅವಘಡ ನಡೆದರೂ ಬದುಕೇ ಮುಗಿದುಹೋಯಿತು ಎಂದು ಕೊರಗುತ್ತಾ ಮನೆಯಲ್ಲಿ ಕೂಡುವ ಹೆಣ್ಣು ಮಕ್ಕಳಿಗೆ ಅವಳ ಬದುಕೇ ಒಂದು ಪಾಠ. ಏಕೆಂದರೆ ವೈಯಕ್ತಿಕ ಬದುಕಿನಲ್ಲಿ ಎದುರಾದ ಸೋಲುಗಳನ್ನು, ಸವಾಲುಗಳನ್ನು ಅವಳು ಸಾಮಾಜಿಕ ಬದುಕಿನ ಮನಸ್ಸಿಗೆ ಮೈಲುಗಲ್ಲುಗಳನ್ನಾಗಿ ಮಾಡಿಕೊಂಡವಳು, ನಿಜ. ಅವಳ ಆ ನೀಲಿ ಕಂಗಳಲ್ಲಿ ಕೋಟಿ ಕೋಟಿ ಕನಸುಗಳಿದ್ದವು. ಬದುಕಿನುದ್ದಕ್ಕೂ ಹಿಡಿ ಪ್ರೀತಿಗಾಗಿ ಹೋರಾಡಿದ ಅವಳ ಎದೆಯೊಳಗೆ ಪ್ರೀತಿಯ ಆಗರವೇ ಇತ್ತು. ಜಗತ್ತಿನ ಎಲ್ಲ ಬಡ, ಅನಾಥ, ರೋಗಪೀಡಿತ ಮಕ್ಕಳಿಗೂ ತಾಯಿಯಾದಳು. ಅಸಹಾಯಕ ಹೆಣ್ಣು ಮಕ್ಕಳಿಗೆ ಪ್ರೀತಿಯ ಧಾರೆ ಎರೆದಳು. ಏಡ್ಸ್ ಹಾಗೂ ಕುಷ್ಠ ರೋಗಗಳಿಗೆ ಗುರಿಯಾದವರತ್ತ ಸಹಾನುಭೂತಿಯ ಹೊಳೆಯನ್ನೇ ಹರಿಸುತ್ತಿದ್ದ ಡಯಾನಾ, ಕೆಲವೊಮ್ಮೆ ನೊಂದವರೊಂದಿಗೆ ಕುಳಿತು ತಾನೂ ಅತ್ತು ಬರುತ್ತಿದ್ದಳು. ನಮ್ಮನ್ನು ಯಾರು ಪ್ರೀತಿಸುವವರಿಲ್ಲ ಅಂತ ಕೊರಗುವವರ ಮಧ್ಯೆ ಅವಳು ಒಬ್ಬಳಾಗಿದ್ದಳು.

ಭಾವನೆಗೆ, ಮಾನವೀಯತೆಗೆ, ಸರಳತೆಗೆ ಹೆಚ್ಚು ಸ್ಥಾನ ನೀಡುತ್ತಿದ್ದ ಡಯಾನಳಿಗೆ ರಾಜಕುಮಾರ ಚಾರ್ಲ್ಸ್ ಸೂಕ್ತವಾದ ಜೋಡಿ ಆಗಿರಲಿಲ್ಲ. ಎಲ್ಲದರಲ್ಲೂ ಚಾರ್ಲ್ಸ್ ಅವಳಿಗಿಂತ ಬಹಳ ಎತ್ತರವಾದ 'ಅಂತರ'ದಲ್ಲಿದ್ದ. ಆಸೆ ಆಕಾಂಕ್ಷೆ, ಅಭಿರುಚಿ, ಆಸಕ್ತಿ ಹಿನ್ನೆಲೆ ಎಲ್ಲದರಲ್ಲೂ ಅವರಿಬ್ಬರ ನಡುವೆ ಬಹುದೊಡ್ಡ ಭಿನ್ನತೆ ಇತ್ತು. ಆರಂಭದಲ್ಲೇ ಅವರ ನಡುವೆ ಮಿಸುಕಾಡುತ್ತಿದ್ದ ವಿವಾದದ ಎಳೆಯೊಂದು ದಿನ ದಿನಕ್ಕೂ ಇಬ್ಬರ ನಡುವಿನ ಅಂತರವನ್ನು ಹೆಚ್ಚಿಸುತ್ತಲೇ ಹೋಯಿತು. ಮುರಿದು ಹೋದ ಕನಸಿನೊಂದಿಗೆ ದಿನ ತಳ್ಳುತ್ತಿದ್ದ ಅವಳಿಗೆ ಬಯಸಿದಾಗ ಚಾರ್ಲ್ಸ್ ಸಿಗುತ್ತಿರಲಿಲ್ಲ. ನಂತರದ ದಿನಗಳಲ್ಲಿ ಅವಳಿಗೆ ಚಾರ್ಲ್ಸ್ ಅಗತ್ಯವೇ ಬೀಳಲಿಲ್ಲ. ಏಕೆಂದರೆ ಅದಾಗಲೇ ಡಯಾನಾ ವಿವಾಹ ಬಂಧನದಾಚೆಯ ಪ್ರೀತಿ-ಸ್ನೇಹ-ಸಲುಗೆಯನ್ನು ಹುಡುಕಿಕೊಳ್ಳುವ ಗೀಳಿಗೆ ಬಿದ್ದಳು. ಅವಳ ಪ್ರೇಮದಾಹ

ಅಧಿಕಗೊಳ್ಳುತ್ತಲೇ ಹೋಯಿತು. ಅವಳಲ್ಲಿ ಹಣ, ಅಧಿಕಾರ, ಜನಮನ್ನಣೆ ಇತ್ತು. ಆದರೆ ಬದುಕಿನ ಕಟ್ಟಕಡೆಯ ಗಳಿಗೆಯವರೆಗೂ ಹುಡುಕುತ್ತಿದ್ದ ಇಷ್ಟೇ ಇಷ್ಟು ನಿಷ್ಕಾಮ ಪ್ರೇಮ ಮಾತ್ರ ತೆಕ್ಕೆಗೆ ಸಿಗಲೇ ಇಲ್ಲ. ವೈವಾಹಿಕ ಜೀವನಕ್ಕೆ ಕೊನೆ ಹಾಕಿದ ನಂತರ ಸಮಸ್ಯೆಗಳೆಲ್ಲ ಕೊನೆಗೊಳ್ಳುತ್ತವೆ ಎಂದುಕೊಂಡಳಾದರೂ ಮುರಿದು ಬಿದ್ದ ಮದುವೆ ನಂತರ ಅವಳ ಬದುಕು ವಕ್ರರೇಖೆಗಳೊಂದಿಗೆ ಮುಂದುವರಿಯಿತು. ಪ್ರೀತಿ ಅರಸಿ ಹೋದಲ್ಲೆಲ್ಲ ಸೋಲೇ ಸಿಕ್ಕಿತು. ಅವಳ ಪ್ರೇಮದ ಹುಡುಕಾಟದಲ್ಲಿ ಸಿಕ್ಕಿದ್ದು ಬರೀ ಮೋಜಷ್ಟೇ.

ಡಯಾನಾ ಪ್ರೀತಿ ಅರಸಿ ಬೆನ್ನುಹತ್ತಿದ ವ್ಯಕ್ತಿಗಳು ಹಲವರು. ಅವರಲ್ಲಿ ಭರವಸೆಯಿಟ್ಟು ಪ್ರೀತಿಸಿದ್ದು ಡಾ.ಹಸ್ನತ್ ಖಾನ್ ಎಂಬ ಹೃದಯ ತಜ್ಞನನ್ನು. ಅವನಿಗಾಗಿ ಅವಳು ಏನೆಲ್ಲ ಮಾಡಿದಳು. ಹೃದಯಕ್ಕೆ ಸಂಬಂಧಿಸಿದ ಪುಸ್ತಕಗಳನ್ನೆಲ್ಲ ಕಲೆಹಾಕಿಕೊಂಡು ಓದಲು ಕೂತಳು. ಆದರೆ ಅವರಿಬ್ಬರೂ ವಿರುದ್ಧ ಮನೋಭಾವದವರು. ಖಾನ್ ಬಹಳ ಬೇಗ ಅವಳಿಂದ ದೂರವಾದ. ಆದರೆ ದೋದಿಯೊಂದಿಗಿನ ಸ್ನೇಹ ತಾನಾಗಿಯೇ ಬಂದಿದ್ದು. ಆತನೊಂದಿಗೆ ಮದುವೆಯಾಗಿ ನೆಮ್ಮದಿಯಿಂದ ಬದುಕುವ ಕನಸೇ ಹುಟ್ಟಿತ್ತು. ಆದರೆ ಅದಕ್ಕೆ ಅವಕಾಶವ ಕೊಡದ ವಿಧಿ ಅದೊಂದು ದಿನ ಇಬ್ಬರನ್ನೂ ಸಾವಿನ ಮನೆಗೆ ಎಳೆದೊಯ್ದಿತ್ತು.

ನೈತಿಕತೆ ದೊಡ್ಡದು, ಆದರೆ ಮಾನವೀಯತೆ ಅದಕ್ಕಿಂತಲೂ ದೊಡ್ಡದು. ನೈತಿಕತೆಯ ವ್ಯಾಖ್ಯಾನ ದೇಶದಿಂದ ದೇಶಕ್ಕೆ, ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಸಾಗುತ್ತದೆ. ಆದರೆ ಮಾನವೀಯತೆ ಹಾಗಲ್ಲ. ಈ ವಿಚಾರದಲ್ಲಿ ಅವಳದು ಅಪ್ಪಟ ತಾಯಿ ಹೃದಯ. ಬಡ ನಿರ್ಗತಿಕ ಮಕ್ಕಳ, ನೋವನ್ನು ತನ್ನದು ಎಂದುಕೊಂಡು ಹಲುಬುತ್ತಿದ್ದಳು. ಅಂಥವರಿಗಾಗಿ ಅವಳು ಸುರಿದ ಹಣಕ್ಕೆ ಲೆಕ್ಕವೇ ಇಲ್ಲ. ದೀನ-ದುರ್ಬಲರ, ದಿಕ್ಕು-ದಿಸೆ ಇಲ್ಲದ ಲಕ್ಷಾಂತರ ಜನರಿಗೆ ತಾಯಿಯಂತೆ ಬದುಕಿದ್ದ ಡಯಾನ, ಭಾರತೀಯ ಮಹಿಳೆಯರಿಗೂ ಮಾದರಿ. ಹೀಗೆ ಸಂತ್ರಸ್ತರನ್ನು ಸಂತೈಸುತ್ತಿದ್ದ ಡಯಾನಾಳನ್ನು ಕೇವಲ ಅವಳ ವೈಯಕ್ತಿಕ ಕಾರಣಗಳಿಂದ ನಮ್ಮ ಮನದಿಂದ ದೂರ ಇಡಲು ಸಾಧ್ಯವೇ? ಒಂದೆಡೆ ಜೀವಂತ ಹೆಣವಾಗಿ ಬದುಕಿದ ಅವಳು ಮತ್ತೊಂದೆಡೆ ನಡೆದಾಡುವ ದೇವರಂತೆ ಜೀವಿಸಿದಳು. ನೀನು ಹೇಗೇ ಇದ್ದರೂ ನಮಗೆ ಅಮ್ಮನೇ; ನಿನ್ನನ್ನು ಅಪ್ಪ ತೊರೆದರೂ ಎಂದಿದರಂತೆ ಮಕ್ಕಳಾದ ವಿಲಿಯಮ್ ಮತ್ತು ಹ್ಯಾರಿ. ಇದೊಂದು ಭರವಸೆ ಬಿಟ್ಟರೆ ವೈಯಕ್ತಿಕವಾಗಿ ಎಲ್ಲರಿಗೂ ಬೇಡವಾದ ಬದುಕು ಅವಳದು. ಆದರೆ ಸಾರ್ವಜನಿಕವಾಗಿ ಎಲ್ಲರಿಗೂ ಬೇಕಾದವಳು. ಸಾಮಾನ್ಯರ ಮನದ ರಾಣಿಯಾಗಿ ಮೆರೆದಳು, ತನ್ನವರೆಲ್ಲ ತೊರೆದರೂ ಜಗತ್ತು ಮಾತ್ರ ಅವಳನ್ನು

ಇಂಗ್ಲೆಂಡ್‌ನ ಸ್ವಭಾವವೇ ಅಂತಹುದು. ಜಗತ್ತಿನ ಬಹುಭಾಗವನ್ನು ಆಳಲು ಹೊರಟ ಪುಟ್ಟ ಅಭದ್ರ ದೇಶವದು. ಅದರ ಅರಮನೆ ನಮ್ಮಲ್ಲಿನ ಪುರಾತನ, ಕರ್ಮಠ ಮಠಗಂತಹುದು. ಅದರ ವಿರುದ್ಧ ಬಂಡೆದ್ದ ಕಾರಣಕ್ಕಾಗಿಯೇ ಡಯಾನಾಳ ಬದುಕು ಕುತೂಹಲ ಅನಿಸುತ್ತದೆ. ಆ ಪ್ರತಿಭಟನೆಯಲ್ಲೇ ಅವಳ ಅತಿಕಾಮ, ಸ್ವಚ್ಛಂದ ಮಿಲನೋತ್ಸಾಹ, ಬೆತ್ತಲೆ, ತಿರುಗುವ ಬಯಕೆ, ದೀನರ ನಿರ್ಗತಿಕರ ಲೋಕಕ್ಕೆ ತೆರೆದುಕೊಳ್ಳುವ ತವಕ, ಮಕ್ಕಳನ್ನು ಪ್ರೀತಿಸುವ, ಅವಚಿಕೊಳ್ಳುವ ಹಪಾಹಪಿ ಎಲ್ಲವೂ ಅಡಗಿದ್ದವು. ಬದುಕಿದ್ದಿದ್ದರೆ ಇವತ್ತಿಗೂ ಇಂಗ್ಲೀಶ್‌ರ ಕಣ್ಮಣಿಯಾಗಿ, ಇತರೆ ದೇಶಗಳವರ ದೃಷ್ಟಿಯಲ್ಲಿ ಅಚ್ಚರಿಯಾಗಿ, ಆಕರ್ಷಣೆಯಾಗಿ ಉಳಿದಿರುತ್ತಿದ್ದ ಡಯಾನ ಸಾಯಬಾರದ ವಯಸ್ಸಿನಲ್ಲಿ, ಸಾಯಬಾರದ ರೀತಿಯಲ್ಲಿ ಸತ್ತುಹೋದಳು. ಹಾಗೆ ಲೋಕ ತಿರಸ್ಕೃತಳಾದ ಅವಳು.

ಸತ್ತದ್ದಾದರೂ ಎಂಥ ಭಯಾನಕ ಅಪಘಾತದಲ್ಲಿ! ಅಂತವಳ ಬದುಕಿನ ಕಥನವನ್ನು ರವಿ ಬೆಳಗೆರೆಯವರು ಸುಂದರವಾಗಿ, ಆತ್ಮೀಯವಾಗಿ ಕಟ್ಟಿಕೊಟ್ಟಿದ್ದಾರೆ.

ಚಿತ್ರನಟಿ ಕಲ್ಪನಾ, ಸದ ಅಭಿರುಚಿಯಿರುವ ಹೆಣ್ಣು ಮಗಳು. ಒಳ್ಳೆಯ ಗೃಹಣಿಯಾಗಬೇಕು ಎಂದು ಬಯಸಿದ ಭಾವುಕ ಜೀವಿ. ಆದರೆ ಆಕೆಯ ಬದುಕೆಲ್ಲ 'ಶರಪಂಜರ'ವೇ ಆಯಿತು. ಸಿಕ್ಕ ಗಂಡಸರ್ಯಾರೂ ಕೈ ಹಿಡಿಯಲಿಲ್ಲ, ಮೈತುಂಬ ಸಾಲ ಮಾಡಿ ಸುಂದರವಾದ ಮನೆ ಕಟ್ಟಿದಳು. ಕೊನೆಗೆ ಸಾಲದ ಭಾರ ಬರಿಸಲಾರದೆ, ಇತರೆ ಅನೇಕ ನಟಿಯರಂತೆ ಉತ್ತರ ಕರ್ನಾಟಕದ ನಾಟಕ ಕಂಪನಿಗಳಿಗೆ ದಿನಕ್ಕಿಷ್ಟು ಅಂತ ಸಂಭಾವನೆ ಮಾತನಾಡಿಕೊಂಡು ನಟಿಸಲು ಹೋಗತೊಡಗಿದಳು. ಅಲ್ಲಿಂದ ಆರಂಭವಾಗುತ್ತದೆ ಕಲ್ಪನಾಳ ದುರಂತ ಬದುಕು.

ಕನ್ನಡ ಚಿತ್ರರಂಗ ಕಂಡ ಅತ್ಯುತ್ತಮ ನಟಿಯರಲ್ಲೊಬ್ಬರಾದ ಕಲ್ಪನಾ, ಮರಣದ ನಂತರವೂ ಚರ್ಚೆಗೆ ಮತ್ತು ನೆನಪಿಗೆ, ನಿಟ್ಟುಸಿರಿಗೆ, ಅಭಿಮಾನ ಹಾಗೂ ಅನುಕಂಪಗಳಿಗೆ ಕಾರಣವಾಗುತ್ತಿರುವುದು ಎಂಥ ಆಶ್ಚರ್ಯದ ಸಂಗತಿಯಲ್ಲವೆ? 'ಕಲ್ಪನಾ ವಿಲಾಸ' ಎಂಬ ಹೆಸರಿನ ಈ ಕೃತಿ ಮುಂಚೆ ಹಾಯ್ ಬೆಂಗಳೂರ್ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಕಲ್ಪನಾರ ಗೆಳೆಯರು ಸಹಚರರು, ಸಹಕಲಾವಿದರು ಚಿತ್ರರಂಗದವರು ಮುಂತಾದವರೆನ್ನೆಲ್ಲ ಕಂಡು ಮಾಹಿತಿ ಸಂಗ್ರಹಿಸಿ ಇಂಥ ಜೀವನ ಕಥನವನ್ನು ಸಿದ್ಧಪಡಿಸಲು ನೆರವಾದದ್ದು ಕೆ.ಬಿ. ಪಂಕಜ. ಇದರ ನಿರೂಪಣೆ ಮಾತ್ರ ರವಿ ಬೆಳಗೆರೆಯವರದು. ವಿಚಿತ್ರ ನೋಡಿ ಆಕೆ ಮಿನುಗುತಾರೆ ಕಲ್ಪನಾಳ ಜೀವನದಲ್ಲಿ ಆರಂಭವಾದ ದುರಂತ ದಿನಗಳಿಂದ ಶುರುವಾಗಿ, ಕೊನೆಗೆ ಸಾಯಿಯುವರೆಗೆ ನಡೆದ ಘಟನೆಗಳನ್ನು ಕೃತಿ ದಾಖಲಿಸುತ್ತ ಹೋಗುತ್ತದೆ. ಆಕೆ ಭಾವುಕಳಾ? ಹುಚ್ಚು ಮನಸ್ಸಿನವಳಾ? ಜೀವನ್ಮೋಹಿಯಾ? ಕಾಮುಕಳಾ? ವಂಚಕಿಯಾ? ವಂಚನಗೆ ಒಳಗಾದವಳಾ? ಆಕೆಯದು ಕೊಲೆಯಾ? ಆತ್ಮಹತ್ಯೆಯಾ? ಎಂಬುದನ್ನು ಹೇಳಲು ಸಿಕ್ಕ ಅಷ್ಟೆಲ್ಲ ದಾಖಲೆಗಳ ಮಧ್ಯೆಯೂ ಕೆಲವು ಪ್ರಶ್ನೆಗಳು ಉಳಿದುಬಿಡುತ್ತವೆ. ಪರೋಕ್ಷವಾಗಿ ಈ ಕೃತಿಯಲ್ಲಿ ಉತ್ತರ ಸಿಗುತ್ತದೆಯಾದರೂ ಸಾವೂ ನಿಗೂಢವಾಗಿಯೇ ಉಳಿಯುತ್ತದೆ. 'ನಾನೇ ಮೀಸಲು ಮುರಿದ ಹುಡುಗಿಗೆ ನಾನೇ ಸೀಮೆ ಎಣ್ಣೆ ತರಿಸಿಕೊಡುವಂತಾಯಿತು' ಎಂದು ಹಾಸ್ಯ ನಟ ನರಸಿಂಹರಾಜು ಕಲ್ಪನಾಳ ಶರೀರರ ಮುಂದೆ ನಿಂತು ಹೇಳಿದ್ದನ್ನು ಕೇಳಿದರೆ, ಚಿತ್ರರಂಗವೆಂಬ ಮಾಯಾನಗರಿಯ ವೈಚಿತ್ರ್ಯ ಅರ್ಥವಾಗುತ್ತದೆ.

ಸಾಹಿರ್‌ನೆಡೆಗೆ ನನ್ನ ಪ್ರೀತಿ ಗೌರವಗಳನ್ನು ವ್ಯಕ್ತಪಡಿಸುವ ಪ್ರಯತ್ನವೇ ಹೊರತು ಮತ್ತೇನೂ ಅಲ್ಲ. ಆತ ಹೇಳಿದ್ದನ್ನು ನಿಮಗೆ ಹೇಳುವ ನೆಪದಲ್ಲಿ ನನಗನಿಸಿದ್ದನ್ನೂ ತುರುಕಿದ್ದೇನೆ. ಗೀತೆಗಳ ಅನುವಾದಕ್ಕೆ ಕುಳಿತಾಗ ಸಾಲು ಸಾಲುಗಳು ತಿರುವು ಮುರುವಾಗಿವೆ. ಭಾವನೆಗಳಲ್ಲಿ ರಷ್ಯನ್ ಸಾಹಿತ್ಯವನ್ನು ಕನ್ನಡಿಗರು ರೀತಿ ನೋಡಿ, ಕ್ಲೀಷೆ ಎನ್ನಿಸಿ ಆಯ ಅನುವಾದದ ರಗಳೆ ಬೇಡವೆನಿಸಿದ್ದರಿಂದ ಭಾವಾನುವಾದಕ್ಕೆ ಹತ್ತಿರ ಹೋಗಿ ನಿಂತಿದ್ದೇನೆ. ಕೆಲವೆಡೆ ಎಡವಿರಬಹುದು, ದಯವಿಟ್ಟು ಸರಿಪಡಿಸಿಕೊಳ್ಳಿ. ಈ ಕೃತಿಯ ಆರಂಭದಲ್ಲಿ ರವಿ ಬೆಳಗೆರೆಯವರು ಅಂದ್ಹಾಗೆ, ಈ ಜೀವನ ಕಥನ ಕೃತಿಯ ಹೆಸರು 'ಪ್ಯಾಸಾ' ಅಂದರೆ 'ದಾಹಿ' ಎಂದು ಅರ್ಥ. ಗುರುದತ್ ನಿರ್ದೇಶನದಲ್ಲಿ 'ಪ್ಯಾಸಾ' ಎಂಬ ಸಿನೆಮಾವನ್ನು ಮಾಡಲಾಗಿದೆ. ಸಾಹಿರ್‌ನ ಬದುಕನ್ನು ಬಹಳಷ್ಟು ಪ್ರತಿಬಿಂಬಿಸಿದ ಚಿತ್ರವದು. ಆ ಚಿತ್ರಕ್ಕೆ ಗೀತೆಯನ್ನು ಬರೆದವರು ಸಹ ಸಾಹಿರ್.

ಸಾಹಿರ್‌ನನ್ನು ಈ ದೇಶ ನಡೆಸಿಕೊಂಡಿರಬಹುದಾದ ರೀತಿಯು ಓದುಗರ ಕಲ್ಪನೆಗೆ ಸಿಗುತ್ತದೆ. ಬದುಕಿನ ಮಜಲುಗಳ ಪರೋಕ್ಷ ಪರಿಚಯವೂ ಆಗುತ್ತದೆ. ಸಾಹಿರ್‌ನಿಗಿದ್ದಂತಹ ಶಕ್ತಿಯುತ ಎಕ್ಸ್‌ಪ್ರೆಶನ್ ಇಲ್ಲವೆಂಬುದನ್ನು ಬಿಟ್ಟರೆ ಸಾಮಾನ್ಯ ಜೀವಿಗಳನೇಕರು ಆತನಂತೆಯೇ ಅಲ್ಲವೇ ಬದುಕಿದ್ದು, ಬದುಕುತ್ತಿರುವುದು. ಅದೇ ನೋವು ಖಿನ್ನತೆ, ಅವಮಾನ, ಲೋಕನಿಂದನೆ, ಹತಾಶೆ, ಸಿಟ್ಟುಗಳು ಅವರನ್ನು ಆವರಿಸಿಕೊಂಡಿಲ್ಲವೆ? ಇವೆಲ್ಲವನ್ನು ಕಾವ್ಯವಾಗಿಸಿದ್ದ ಸಾಹಿರ್ ಶಕ್ತಿ ಅದ್ಭುತವಾದದ್ದು. ಒಂದರ್ಥದಲ್ಲಿ ಇದು ಹತಾಶೆ ಅವಮಾನಕ್ಕೊಳಗಾದವರ ಸಾಂತ್ವನ ಈ ಜೀವನ ಕಥನ. ಕೊನೆಯಲ್ಲಿ ಸಾಹಿರ್‌ನ 'ಗಝಲ್'ಳನ್ನು ಅನುವಾದಿಸಿ ನೀಡಿದ್ದಾರೆ. ರವಿಯವರು ಹೇಳಿಕೊಳ್ಳಲಾಗದ ಅನೇಕ ನೆನಪುಗಳೆಲ್ಲವೂ ಭಾವನೆಗಳೆಲ್ಲವೂ ಸಾಹಿರ್‌ನ ಬದುಕಿನ ಮೂಲಕ ಹೇಳಿಕೊಳ್ಳಲು ಇಲ್ಲಿ ಅವಕಾಶವಿದೆ ಎಂದು ಹೇಳಬಹುದು.

'ಸಂಜಯ' ಶಾಮರಾಯರನ್ನು ಕುರಿತಂತೆ ಬರೆದ ಒಂದು ವ್ಯಕ್ತಿ ಚಿತ್ರ ಕೃತಿ. 'ಪ್ರಜಾಪ್ರಭುತ್ವದ ನಾಲ್ಕನೆಯ ಸ್ತಂಭ ಎಂದೇ ಪರಿಗಣಿಸಲ್ಪಡುವ ಪತ್ರಿಕೋದ್ಯಮ ಅತ್ಯಂತ ಪ್ರಭಾವಶಾಲಿ ಮಾಧ್ಯಮ. ಪತ್ರಿಕೆ ಜನಾಭಿಪ್ರಾಯದ ಕೈಗನ್ನಡಿ. ಹಾಗೆಯೇ ಜನತೆ ಹಾಗೂ ಸರ್ಕಾರಗಳ ನಡುವಿನ ಸಂವಹನ ಸೇತುವೆ ಇಂತಹ ಒಂದು ಪರಿಣಾಮಕಾರಿ ಕ್ಷೇತ್ರದಲ್ಲಿ ಪತ್ರಕರ್ತನೊಬ್ಬನ ಸಾಮಾಜಿಕ ಹೊಣೆಗಾರಿಕೆ, ವೃತ್ತಿಗಾಗಿ ಸಮರ್ಪಣಾ ಮನೋಭಾವ ಹಾಗೂ ಜವಾಬ್ದಾರಿ ಬಹುದೊಡ್ಡದು. ಶಾಮರಾಯರು ಹೊರನೋಟಕ್ಕೆ ಅತ್ಯಂತ ನಿಷ್ಠುರ. ಆದರೆ ಅಂತರಂಗದಲ್ಲಿ ಮೃದುಹೃದಯಿ. ವೃತ್ತಿಪರಿಚಯ ಪ್ರಶ್ನೆ ಬಂದಾಗ ಅತ್ಯಂತ ಸ್ಪಷ್ಟ ಹಾಗೂ ದಿಟ್ಟ ನಿಲುವು ಹೊಂದಿದ್ದಂತವರು. ೧೯೩೨ರಲ್ಲಿ ಸಂಯುಕ್ತ ಕರ್ನಾಟಕವನ್ನು ಪ್ರವೇಶಿಸಿದ ಶಾಮರಾಯರು ಅನಂತರ ಕಷ್ಟದ ಹಾದಿಯನ್ನು ಹಾದು ಅದನ್ನು ಕಟ್ಟಿ ಬೆಳೆಸಿದವರು.

ಶಾಮರಾಯರಿಗೆ ಸಂಜಯ ಎಂಬ ಹೆಸರು ಬಂದದ್ದರ ವಿವರವನ್ನು ರವಿಯವರು ದಾಖಲಿಸಿದ್ದರು. ಆರ್.ಆರ್.ದಿವಾಕರರು ಶಾಮರಾಯರನ್ನು ಕರೆದು ಪ್ರಪಂಚದ ಎರಡನೇಯ ಮಹಾಯುದ್ದಕ್ಕೆ ಸಂಬಂಧಿಸಿದ ವಿವರಗಳನ್ನು ದಿನನಿತ್ಯ ಪತ್ರಿಕೆಗೆ ಬರೆಯಲು ಆರಂಭಿಸಿ, ಅದರಿಂದ ಪತ್ರಿಕೆಯ ಘನತೆ ಮತ್ತು ಪ್ರಸಾರಗಳೆರಡೂ ಹೆಚ್ಚುತ್ತವೆ. ಎಲ್ಲೋ ನಡೆಯುವ ಯುದ್ಧವನ್ನು ಅಲ್ಲಿಂದ ಬರುವ ಯುದ್ಧ ವರದಿಗಳ ಆಧಾರದ ಮೇಲೆಯೇ ವಿಶ್ಲೇಷಿಸುವುದನ್ನು ರೂಢಿ ಮಾಡಿಕೋ, ಕುರುಕ್ಷೇತ್ರದ ಯುದ್ಧವನ್ನು ದೂರದಿಂದಲೇ ನೋಡಿ ಕುರುಡನಾದ ದೃತರಾಷ್ಟ್ರನಿಗೆ ಅದರ ವಿವರಗಳನ್ನು ಹೇಳಿದವನು ಸಂಜಯ! ಯುದ್ಧದ ವಿಶ್ಲೇಷಣೆ ಬರೆಯುವಾಗ ನೀನು ಸಂಜಯ ಅಂತಲೇ ಹೆಸರಿಟ್ಟುಕೊಂಡು ಬರಿ. ಅದು ಯಶಸ್ವೀ ಬರಹವಾಗುತ್ತದೆ ಎಂದು ಸಲಹೆ ನೀಡಿದರು[೨೩] ಎಂದು ವಿವರಿಸುತ್ತಾರೆ. ಲೇಖಕರು ಇವತ್ತು ಕುಳಿತು ೧೯೪೪ರ ಸಂಯುಕ್ತ ಕರ್ನಾಟಕದ ಪತ್ರಿಕೆಯ ಹಳೆಯ ಫೈಲುಗಳನ್ನು ತೆಗೆದು ನೋಡಿದರೆ ಸಂಜಯನ ಹೆಸರಿನಲ್ಲಿ ಪ್ರಚಾರದ ಲೇಖನಗಳು ಮೈ ಜುಮ್ಮೆನ್ನಿಸುತ್ತವೆ. ನಾನು ಕಳೆದ ವಾರ ಬರೆದಂತೆಯೇ ಹಿಟ್ಲರನು ಆತ್ಮಹತ್ಯೆ ಮಾಡಿಕೊಂಡು ಬದುಕನ್ನು ಕೊನೆಗಾಣಿಸಿಕೊಂಡಿದ್ದಾನೆ ಎಂಬ ಧಾಟಿಯ ಲೇಖನಗಳು ಶಾಮರಾಯರು ಆ ತಾರುಮ್ಯದಲ್ಲೇ ಮೈಗೂಡಿಸಿಕೊಂಡ ಜಾಣ್ಮೆಯನ್ನು ವಿವರಿಸುತ್ತವೆ.

ಸಂಜಯ ಎಂಬ ಹೆಸರಿನಲ್ಲಿ ಅವರು ಮುನ್ನೂರಾ ಎಂಬತ್ತು ಲೇಖನಗಳನ್ನು ಬರೆದಿದ್ದಾರೆಂದು ಲೇಖಕರು ಹೇಳುತ್ತಾರೆ. ಬಹುಶಃ ಶಾಮರಾಯರಿಗೆ ಒಬ್ಬ ಪತ್ರಿಕೋದ್ಯಮಿಯಾಗಿ ತಮ್ಮದೇ ಆದ

ಒಂದು ಶೈಲಿಯನ್ನು ರೂಪಿಸಿಕೊಳ್ಳಲು ಸಾಧ್ಯವಾದದ್ದೇ ಎರಡನೇಯ ಮಹಾಯುದ್ಧದ ಕುರಿತಂತೆ ಬರೆಯುವಾಗ ಎನಿಸುತ್ತದೆ. ತಮ್ಮ ಅನುಪಮ ಬರಹದಿಂದ ಕನ್ನಡ ಪತ್ರಿಕೋದ್ಯಮಕ್ಕೆ ಶ್ರೀಮಂತ ಕೊಡುಗೆ ನೀಡಿದ ಶಾಮರಾಯರಿಗೆ ದಿ. ಟಿ.ಎಸ್.ರಾಮಚಂದ್ರರಾಯರ ಹೆಸರಿನಲ್ಲಿ ನೀಡುವ 'ಟೀಯೆಸ್ಸಾರ್' ಪ್ರಶಸ್ತಿಯನ್ನು ಸರ್ಕಾರ ೧೯೯೩ರಲ್ಲಿ ನೀಡಿ ಗೌರವಿಸಿದೆ. ಶಾಮರಾಯರಂತೆಯೇ ಈ ಪ್ರಶಸ್ತಿಯನ್ನು ಶ್ರೀ ಪಾಟೀಲ್ ಪುಟ್ಟಪ್ಪ ಹಾಗೂ ಶ್ರೀ ಎನ್.ಎಸ್.ಸೀತಾರಾಮಶಾಸ್ತ್ರಿ ಅವರು ಪಡೆದುಕೊಂಡಿದ್ದಾರೆ. ಇಂತಹ ಶಾಮರಾಯರನ್ನು ಕುರಿತಂತೆ ವ್ಯಕ್ತಿ ಚಿತ್ರವನ್ನು ಬರೆದ ರವಿ ಬೆಳಗೆರೆಯವರು, ಅವರನ್ನು ಸುಮಾರು ಒಂದು ದಶಕಕ್ಕೂ ಹೆಚ್ಚು ಕಾಲ ಅತ್ಯಂತ ಹತ್ತಿರದಿಂದ ಬಲ್ಲವರು ಮತ್ತು ಅವರಿಂದ ಕಲಿತವರು. ಹಾಗಾಗಿ ಅವರ ವ್ಯಕ್ತಿತ್ವವನ್ನು ಸಮರ್ಥವಾಗಿ 'ಸಂಜಯ'ದಲ್ಲಿ ಪ್ರತಿಬಿಂಬಿಸಿದ್ದಾರೆ.

ನೇರವಾಗಿ ರವಿಯವರ ಕುಟುಂಬಕ್ಕೆ ಸಂಬಂಧಿಸಿದವರ ಜೀವನ ಕಥನವೆಂದರೆ ಬೆಳಗೆರೆ ಕೃಷ್ಣಶಾಸ್ತ್ರಿಗಳ ಜೀವನಕಥನ. ಇದು ಜೀವ ಇದುವೇ ಜೀವನ. ಈ ಕೃತಿಯನ್ನು ಬರೆಯುತ್ತಾ ಲೇಖಕರು ತಮ್ಮನ್ನು ತಾವು ಇದು ನಿಜಕ್ಕೂ ನನ್ನಿಂದ ಸಾಧ್ಯವಾ? ಸಾವಿರ ಸಲ ಯೋಚಿಸಿದ್ದೇನೆ. ಏಕೆಂದರೆ ನನ್ನ ಮಾಮ ಬೆಳಗೆರೆ ಕೃಷ್ಣಶಾಸ್ತ್ರಿಗಳು ಯೇಸುವಿನಂತೆ ಬದುಕಿದವರು. ನಾನು ಅದಕ್ಕೆ ತದ್ವಿರುದ್ಧವಾಗಿ ಬದುಕುತ್ತಿರುವ ಜುದಾಸನಂಥವನು. ಯೇಸುವಿನ ಜೀವನ ಕಥನವನ್ನು ಜುದಾಸ ಬರೆಯುವುಂಟೆ ಎಂದು ಪ್ರಶ್ನಿಸಿಕೊಳ್ಳುತ್ತಾರೆ. 'ಇದು ಜೀವ ಇದುವೇ ಜೀವನ ಬರೀ ಬೆಳಗೆರೆ ಕೃಷ್ಣಶಾಸ್ತ್ರಿಗಳ ಜೀವನ ಕಥನವಲ್ಲ. ಅವರ ಮೂಲಕ ಇಡೀ ಬೆಳಗೆರೆ ಕುಟುಂಬ ತೆರೆದುಕೊಳ್ಳುತ್ತದೆ. ಜೊತೆಗೆ ಸಂಬಂಧಗಳ ಬೆಸುಗೆಯಿಂದ ವಿಶಾಲ ವೃಕ್ಷದಂತೆ ಹಬ್ಬಿಕೊಳ್ಳುತ್ತದೆ. ಈ ಕಥನ ಓದುತ್ತಾ ಹೋದಂತೆ ಬೆಳಗೆರೆಯವರು ಬೆಂಗಾಡಿಗೆ ಎಲ್ಲಿಂದಲೊ ಬಂದ 'ಮುಲಕನಾಡು ಬ್ರಾಹ್ಮಣ'ರು. ಒಂದರ್ಥದಲ್ಲಿ ದೊಡ್ಡೇರಿ ಸ್ವಾಮಿಯಾಗಿ ಬಂದ ನರಸಿಂಹ ಶಾಸ್ತ್ರಿಗಳೇ ಬೆಳಗೆರೆ ಕುಟುಂಬದ ಮೂಲ ಪುರುಷ. ದೊಡ್ಡೇರಿ ಸ್ವಾಮಿಯಿಂದ ಸಾಗಿ ಇವತ್ತಿನವರೆಗೆ ಬೆಳಗೆರೆ ಕುಟುಂಬದ ಎಲ್ಲರನ್ನು ಈ ಕಥನ ಒಳಗೊಳ್ಳುತ್ತದೆ. ಬಂಧು ಬಳಗವನ್ನು ಸೇರಿ ಇದರಲ್ಲಿ ಬರುವ ಕೆಲವು ದೈವಾಂಶ ವಿಷಯಗಳನ್ನು ಓದುತ್ತಿದಂತೆ ತ.ಸು.ಶಾಮರಾಯರು ಬರೆದ ಟಿ.ಎಸ್.ವೆಂಕಣ್ಣಯ್ಯನವರ ಜೀವನ ಚರಿತ್ರೆ ಮೂರು ತಲೆಮಾರು ಅದರಲ್ಲಿನ ಇಂತಹವೇ ದೈವಾಂಶ ವಿಷಯ ಘಟನೆಗಳು ನೆನಪಾಗುತ್ತವೆ. ಈ ಎರಡು ಮನೆತನಗಳ ಸಂಬಂಧಿಗಳು ಇದು ಅನೇಕ ಮನೆತನಗಳನ್ನು ಮದುವೆ ಆಚರಣೆ ಮಾಡಿ, ಕಷ್ಟ ಕಾರ್ಪಣ್ಯ ಹೀಗೆ ಒಂದು ಮಹಾವೃಕ್ಷದಂತಿರುವ ಈ ಕೃತಿ. ಪ್ರತ್ಯೇಕ ಒಂದು ಅಧ್ಯಯನವನ್ನೇ ಬಯಸುವಂತಹದ್ದು. ಉಳಿದಂತೆ ಸರಿ ಸುಮಾರು ತೊಂಬತ್ತೇಳು ವರ್ಷಗಳ ಶ್ರೇಷ್ಠ ಜೀವನವನ್ನು ಬದುಕಿದ ಕೃಷ್ಣಶಾಸ್ತ್ರಿಗಳದು ಆದರ್ಶ ಬದುಕು. ಈ ಸಮಾಜಕ್ಕೆ ನಾನು ಕೊಡುವ ಕೊನೆಯ ಕೊಡುಗೆ ಎಂದರೆ ನನ್ನ ಮಾತು ಸಾಧ್ಯವಾದಷ್ಟು ಒಳ್ಳೆಯದನ್ನು ಮಾಡಿ ಮಾಡಲಾಗದಿರುವ ಸ್ಥಿತಿಯಲ್ಲಿ ನೀವು ಇರುವುದೇ ಆದರೆ, ಒಳ್ಳೆಯ ಯೋಚನೆಯನ್ನಾದರೂ ಮಾಡಿ ಎನ್ನುತ್ತಾರೆ ಈ ಹಿರಿಯ ಜೀವಿ. ಕೃಷ್ಣಶಾಸ್ತ್ರಿಗಳು ಸ್ವತಃ ತಾವೇ ಹಲವಾರು ಕೃತಿಗಳನ್ನು ಬರೆದಿದ್ದಾರೆ. ಅದರಲ್ಲಿ ಅವರ ಪ್ರಸಿದ್ಧ ಕೃತಿಯೆಂದೆ 'ಏದ್ದಾಗಲೆಲ್ಲಾ ಏತಿ' ಅಂತ ಶ್ರೇಷ್ಠ ಜೀವಿಯ ಬದುಕನ್ನು ಅಕ್ಷರಗಳಲ್ಲಿ ಹಿಡಿದಿರುವುದು ಮನುಷ್ಯ ಮಾತ್ರರಿಗೆ ಕಷ್ಟಸಾಧ್ಯ. ಅಂತ ಕಷ್ಟಸಾಧ್ಯವಾದ ಕೆಲಸವನ್ನು ರವಿ ಬೆಳಗೆರೆಯವರು ಶ್ರದ್ಧೆಯಿಂದ ಅಪೂರ್ವ ಕೃತಿಯನ್ನಾಗಿಸಿದ್ದಾರೆ. ಆ ಮೂಲಕ ಶಾಸ್ತ್ರಿಗಳ ಜೀವನ ಕಥನ ಕನ್ನಡ ಸಾಹಿತ್ಯದ ಜೀವನ ಚರಿತ್ರೆಗಳ ಸಾಲಿನಲ್ಲಿ ಮಂಚೂಣಿಯಲ್ಲಿ ನಿಲ್ಲುವಂತಹದ್ದು ಎಂದು ಹೇಳಬಹುದು.

ಗಾಢ ಪರಿಚಯ ಇದ್ದವರು ಅಥವಾ ವ್ಯಕ್ತಿಯ ಸಮೀಪಕ್ಕೆ ರಕ್ತ ಸಂಬಂಧಿಯೊಬ್ಬರು ಕೃತಿ ರಚನೆ ಮಾಡಿದರೆ ಆ ಜೀವನ ಚರಿತ್ರೆಯು ವಾಸ್ತವಕ್ಕೆ ದೂರವಾಗಿರುತ್ತದೆ. ಅದು ಅರ್ಧಸತ್ಯದಿಂದ ಕೂಡಿರುತ್ತದೆ. ಲೇಖಕನೊಬ್ಬ ತನ್ನ ಅಭಿವ್ಯಕ್ತಿ ಮಾರ್ಗವಾಗಿ ವ್ಯಕ್ತಿಯ ಜೀವನ ಚಿತ್ರಿಸಿದಾಗ ಮಾತ್ರ ಸಮರ್ಥ ಜೀವನ ಚರಿತ್ರೆ ಬರಲು ಸಾಧ್ಯ. ಇಲ್ಲದಿದ್ದಲ್ಲಿ ಸಂಬಂಧಿಗಳಿಗೆ ಮಾತ್ರವಲ್ಲ ಪ್ರತಿಯೊಬ್ಬ ಕೃತಿಕಾರ ಈ ಸಮಸ್ಯೆಯನ್ನು ಎದುರಿಸುತ್ತಾನೆ.[೨೪] ಜೀವನ ಚರಿತ್ರೆಯ ಬಗೆಗೆ ಇದೇ ರೀತಿ ಎಂದು ಹೇಳಲು ಸಾಧ್ಯವಿಲ್ಲ. ವ್ಯಕ್ತಿಯಿಂದ ವ್ಯಕ್ತಿಗೆ ಕೃತಿಯ ಸ್ವರೂಪ ಬದಲಾಗುತ್ತದೆ. ಅದರ ನಿರೂಪಣೆ ಆಕರ್ಷಣೆಗಳು ಜೀವನ ಕಥನದ ಪ್ರಧಾನ ಧ್ಯೋತಕವಾಗಿರುತ್ತವೆ. ಜೀವನ ಕಥನವೊಂದರ ಉದಯಕ್ಕೆ ವ್ಯಕ್ತಿ ವಿಶಿಷ್ಟತೆಗೆ ಪುಷ್ಟಿಕೊಡುವ ಸಾಂಸ್ಕೃತಿಕ ಪರಿಸರವೊಂದು ಅಗತ್ಯವಿರುತ್ತದೆ. ಆದರೆ ಮೇಲಿನ ಉಲ್ಲೇಖದ ಆಪಾದನೆಯಿಂದ ಇದು ಜೀವ ಇದುವೇ ಜೀವನ ಮುಕ್ತವಾದುದು ಎಂಬುದಂತೂ ಸತ್ಯ.

**೩.೫. ಆತ್ಮ ಕಥನಗಳು**

ಕನ್ನಡದಲ್ಲಿ ನಾಟಕ, ಕಥೆ, ಕಾದಂಬರಿ, ಕಾವ್ಯ ಮುಂತಾದ ಸಾಹಿತ್ಯ ಪ್ರಕಾರಗಳಂತೆ ಆತ್ಮಕಥೆಗಳಿಗೂ ವಿಶಿಷ್ಟ ಸ್ಥಾನ ದೊರೆತಿದೆ. ಕವಿ, ಕಲಾವಿದ, ಪ್ರವಾಸಿಗ, ಕಾರ್ಮಿಕ, ಕ್ರೀಡಾಪಟು, ರಾಜಕಾರಣಿ, ಮಠಾಧಿಪತಿಗಳೆಲ್ಲರೂ ಆತ್ಮಕಥೆಗಳ ರಚನೆಗೆ ಭಾಜನರಾಗಿದ್ದಾರೆ. ಇವುಗಳ ಉದ್ದೇಶ ಕೀರ್ತಿ, ಪ್ರತಿಷ್ಠೆಗೆ, ಮಾನವೀಯ ಮೌಲ್ಯಗಳ ಪ್ರಸಾರದ ಆಪೇಕ್ಷಣೆ ಇಲ್ಲವೆ ತಮ್ಮ ಪರಿಸರದ ವಿದ್ಯಮಾನಗಳನ್ನು ದಾಖಲಿಸುವ ಇಚ್ಛೆಯಿಂದ ಬಹುತೇಕ ಆತ್ಮಕಥೆಗಳು ಹುಟ್ಟಿಕೊಂಡಿರುವ ಸಾಧ್ಯತೆಯಿದೆ. ಇನ್ನು ಆತ್ಮಕಥೆಗಳು ಘಟನಾ ಪ್ರಧಾನವಾಗಿರುತ್ತವೆ. ಜೊತೆಗೆ, ನೇರ, ನಿರಂತರ ನಿರೂಪಣಾ ಶೈಲಿಯಿಂದ ಉತ್ತಮ ಸಾಹಿತ್ಯ ಸ್ವರೂಪವನ್ನು ಪಡೆದುಕೊಂಡಿರುತ್ತವೆ. ಇವುಗಳು ಏಕ ವ್ಯಕ್ತಿ ಕರ್ತೃ ರಚನೆಗಳಾದರೂ, ಇವುಗಳ ವಿಷಯದ ವ್ಯಾಪ್ತಿ ಸಮಕಾಲೀನ ಮತ್ತು ಚಾರಿತ್ರಿಕ ಸಂಗತಿಗಳಾದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಹೀಗೆ ಹಲವು ಹತ್ತು ಪರಿಸರಗಳಿಂದ ಕೂಡಿದ್ದಾಗಿರುತ್ತದೆ. ಅಂದರೆ ವ್ಯಕ್ತಿಯೊಬ್ಬ ತಾನು ಬದುಕಿದ ರೀತಿಯನ್ನು ತಾನೇ ಬರೆದುಕೊಳ್ಳುವುದು ಆತ್ಮಕಥೆಯಾದರೆ, ಅದೇ ವ್ಯಕ್ತಿಯ ಬದುಕಿನ ರೀತಿಯನ್ನು ಬೇರೊಬ್ಬರು ಬರೆದರೆ ಅದು ಜೀವನ ಚರಿತ್ರೆಯೆನಿಸುತ್ತದೆ. ಈ ಎರಡೂ ಸಾಹಿತ್ಯ ಪ್ರಕಾರ ರಚನೆಗೆ ಆಕರ ಸಾಮಗ್ರಿಯೆಂದರೆ ದಿನಚರಿ, ದಿನಚರಿಯ ಮುಂದುವರಿಕೆ ಆತ್ಮಕಥೆಯಾಗಬಹುದಾದರೂ ಎಲ್ಲವೂ ಆತ್ಮ ಕತೆಗಳಲ್ಲ. ಇದರ ಜೊತೆಗೆ ಪತ್ರಗಳು, ಜರ್ನಲ್‌ಗಳಂಥ ಪ್ರಮುಖ ಆಕರಗಳ ಸಹಾಯದಿಂದ ಆತ್ಮಕಥೆ ಸಿದ್ಧವಾಗುತ್ತದೆ. ಬಹುತೇಕ ಆತ್ಮಕಥೆಗಳು ಜೀವನ ಚರಿತ್ರೆಯಲ್ಲಿ ಸೇರಿಹೋಗಿರುತ್ತವೆಯೇ ಹೊರತು ದಿನಚರಿಯಂತೆ ಸ್ವತಂತ್ರ್ಯ ಅಸ್ತಿತ್ವ ಪಡೆದುಕೊಂಡಿರುವುದಿಲ್ಲ.[೨೫] ಹೀಗಾಗಿ ಅನ್ಯರಿಂದ ರಚನೆಯಾದುದಾಗಿರದೆ ವ್ಯಕ್ತಿ ತನ್ನ ಬದುಕನ್ನು ಕುರಿತು ಸಿಂಹಾವಲೋಕನ ಮಾಡಿಕೊಂಡ ಜೀವನಗಾಥೆ ವಾಸ್ತವದ ಜೊತೆಗೆ ಕಲಾತ್ಮಕತೆ ಈ ಸಾಹಿತ್ಯ ರಚನೆಯ ಜೀವನಾಡಿ. ವ್ಯಕ್ತಿ ಚರಿತ್ರೆಯ ಜೊತೆಗೆ ವ್ಯಕ್ತಿತ್ವ ಚರಿತ್ರೆ ರೂಪುಗೊಳ್ಳುವುದು ಇದರ ವಿಶೇಷ. ನಿದರ್ಶನಕ್ಕೆ ಗಾಂಧೀಜಿಯವರ 'ನನ್ನ ಸತ್ಯಶೋಧನೆ'ಯಲ್ಲಿ ಅವರ ಬದುಕಿನ ಸಿದ್ಧಾಂತಗಳಾದ ಸತ್ಯ, ಅಹಿಂಸೆ, ತ್ಯಾಗಗಳು ಹೇಗೆ ಅವರ ವ್ಯಕ್ತಿತ್ವ ಅನಾವರಣಕ್ಕೆ ಕಾರಣಗಳಾಗಿದ್ದವು ಎಂಬುದನ್ನು ಗಮನಿಸಬಹುದು. ಹೀಗೆ ಒಬ್ಬ ವ್ಯಕ್ತಿ ಜೀವನದುದ್ದಕ್ಕೂ ಅನುಸರಿಸಿದ ಜೀವನ ಪದ್ಧತಿ, ಆಚರಣೆಗೆ ತಂದ ತತ್ವ ಸಿದ್ಧಾಂತ, ಕಂಡುಂಡ ಅನುಭವಗಳು ವಾಸ್ತವ ಸಂಗತಿಗಳ ಕಲಾತಕ್ಮ ಸಾಹಿತ್ಯ ಆತ್ಮಕಥೆಗಳು.

ಬಹುತೇಕ ಆತ್ಮಕಥೆಗಳನ್ನು ಗಮನಿಸಿದಾಗ ವಸ್ತುಸ್ಥಿತಿಯ ದೃಷ್ಟಿಯಿಂದ ಕೆಲವು ಸಂದೇಹಗಳು ಕಾಡುತ್ತವೆ. ಉದಾಹರಣೆಗೆ ಆತ್ಮಕಥೆಗಾರರಲ್ಲಿ ಕೆಲವರು ಉತ್ತಮ ಸ್ಥಿತಿಯಲ್ಲಿಯೇ ಬದುಕಿ ಬೆಳೆದಿರುತ್ತಾರೆ. ಆದರೆ ನಿರ್ಗತಿಕವಾಗಿ ಜನಿಸಿ ಸಾಧನೆಗಳಿಂದ ಉನ್ನತಸ್ಥಾನ ಪಡೆದವರಂತೆ ಚಿತ್ರಿಸಿಕೊಂಡಿರುತ್ತಾರೆ. ಬದುಕು ಅರ್ಥಪೂರ್ಣವಾಗಬೇಕಾದರೆ ವಾಸ್ತವದ ಅರಿವಿರಬೇಕು. ಜೀವನದಲ್ಲಿ ಬಂದ ಕಷ್ಟನಷ್ಟಗಳನ್ನು ಧೈರ್ಯವಾಗಿ ಎದುರಿಸುವ ಮನೋದಾಷ್ಟ್ಯ ನಮ್ಮಲ್ಲಿರಬೇಕು. ಕಲ್ಪನೆ ಮಾಡಿಕೊಂಡಂತೆಯೇ ಎಂದೂ ಅವರವರ ಜೀವನವಿರುವುದಿಲ್ಲ. ಅವುಗಳಿಗೆಲ್ಲ ಸ್ಥಿತ ಪ್ರಜ್ಞರಾಗಿದ್ದಾಗ ಮಾತ್ರ ಬಾಳಿನಲ್ಲಿ ಗುರಿ ತಲುಪಬಹುದು. ಹೀಗೆ ತಮ್ಮನ್ನು ತಾವು ಆತ್ಮಾವಲೋಕನ ಮಾಡಿಕೊಂಡು ಬದುಕಿದವರ ಚರಿತ್ರೆಯೇ ಆತ್ಮಕಥೆಗಳು. ಇಲ್ಲಿ ಕೇವಲ ಬದುಕಿನ ಪಯಣದ ವಿವರಗಳು ಇರುವುದಿಲ್ಲ. ಜೊತೆಗೆ ಜೀವನದ ಎಡರು-ತೊಡರುಗಳು, ಅಸ್ತಿತ್ವದ ಹೋರಾಟಗಳು, ಆತ್ಮಕಥೆಯಲ್ಲಿ ದಾಖಲೆಯಾಗಿರುತ್ತವೆ. ಆತ್ಮಕಥೆಗಳು ಓದುಗರ ಜೀವನಕ್ಕೆ ಹೊಸ ತಿರುವನ್ನು ನೀಡುತ್ತವೆ ಹಾಗೂ ಆತ್ಮಸ್ಥೈರ್ಯವನ್ನು ಮೂಡಿಸುತ್ತವೆ.

ಹೊಸಗನ್ನಡ ಸಾಹಿತ್ಯದಲ್ಲಿ ಆತ್ಮಕಥನ ಅಥವಾ ಆತ್ಮ ಚರಿತ್ರೆ ಒಂದು ಸಾಹಿತ್ಯ ಪ್ರಕಾರವಾಗಿ ದೊರೆಯುತ್ತಿದೆ. ಸಾಹಿತಿಗಳಾದವರೇ ಇವುಗಳನ್ನು ಹೆಚ್ಚಾಗಿ ಬರೆದಿರುವುದರಿಂದ ಸಹಜವಾಗಿಯೇ ವಿಶಿಷ್ಟ ಸಂವೇದನೆಯನ್ನು ಪಡೆದುಕೊಂಡಿವೆ. ಇದು ತನ್ನದೇ ಆದ ರಚನೆ ಸ್ವರೂಪ ಹೊಂದಿ ಪ್ರತ್ಯೇಕ ಅಸ್ತಿತ್ವ ಪಡೆದುಕೊಂಡಿದೆ. ಪ್ರತಿಯೊಬ್ಬನ ಬದುಕಿನ ಅನುಭವ, ಅದರ ಗಟ್ಟಿತನ, ಅವು ಉಂಟುಮಾಡಬಹುದಾದ ಪರಿಣಾಮ, ಕಲಾತ್ಮಕವಾದ ಅಭಿವ್ಯಕ್ತಿಯಿಂದ ಕೂಡಿದ ಆತ್ಮಕಥನ ಯಾವುದೇ ಸಾಹಿತಿಯ ಸಾಹಿತ್ಯ ಕೃತಿಗಿಂತ ಕಡಿಮೆಯೇನಲ್ಲ. ಆ ಕಾರಣಕ್ಕಾಗಿ ಆತ್ಮಕಥನ ಒಂದು ಸಾಹಿತ್ಯ ಪ್ರಕಾರವಾಗಿ ಗುರುತಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ. ಇಂತಹ ಆತ್ಮಚರಿತ್ರೆಯ ಸ್ವರೂಪವನ್ನು ಎರಡು ರೀತಿಯಾಗಿ ವಿಂಗಡಿಸಬಹುದು. ಒಂದು ಸಾಮಾನ್ಯ ಸ್ವರೂಪ, ಮತ್ತೊಂದು ವಿಶಿಷ್ಟ ಸ್ವರೂಪ, ಕಾಲಾನುಕ್ರಮದಲ್ಲಿ ವ್ಯಕ್ತಿಯ ಹುಟ್ಟು ಬೆಳವಣಿಗೆ, ಪ್ರವೃತ್ತಿ, ಪ್ರಭಾವ ವಿಕಾಸ ಇವು ಅದರ ಸಾಮಾನ್ಯ ಸ್ವರೂಪಗಳಾದರೆ ಆತ್ಮ ಚರಿತ್ರೆಕಾರನ ಕಾಲ, ದೇಶ, ಪರಿಸ್ಥಿತಿ, ರಾಜಕೀಯ, ಚರಿತ್ರೆ, ಧಾರ್ಮಿಕ, ಸಾಮಾಜಿಕ ಜೀವನ, ಪರಿಸರ, ಮುಖ್ಯವಾಗಿ ಚರಿತ್ರಾಕಾರನ ಮನಸ್ಸಿನ ತುಡಿತ ಮಿಡಿತ ಸಾಧನೆ ಈ ಮುಂತಾದ ಅಂಶಗಳು ಆತ್ಮಚರಿತ್ರೆಯ ವಿಶಿಷ್ಟ ಸ್ವರೂಪವನ್ನು ಸೂಚಿಸುತ್ತವೆ[೬] ವ್ಯಕ್ತಿಯ ಇಡೀ ಬದುಕಿನ ಕಥೆಯನ್ನು ಬರೆದಿಟ್ಟರೆ ಅದು ಆತ್ಮಕಥನ ಆಗುತ್ತದೆ ಎಂದಷ್ಟಕ್ಕೆ ಎಲ್ಲರ ಜೀವನಾನುಭವಗಳು ಆತ್ಮಕಥನಗಳಾಗಲಾರವು. ಅದನ್ನು ಕಲಾತ್ಮಕವಾಗಿ ಪ್ರಾಮಾಣಿಕವಾಗಿ ಅಭಿವ್ಯಕ್ತಿ ಪಡಿಸುವುದು ಮುಖ್ಯ.

ಆತ್ಮಕಥನಗಳು ವ್ಯಕ್ತಿಯೊಬ್ಬನ ಜೀವನ ಚರಿತ್ರೆಯಾದರೂ, ಅವನ ಜೀವನದ ಘಟನೆಗಳೊಂದಿಗೆ ಹಲವಾರು ವ್ಯಕ್ತಿಗಳ ಬದುಕಿನ ಘಟನೆಗಳು ಕೊಂಡಿಯಂತೆ ಸೇರಿಕೊಂಡಿರುತ್ತವೆ. ಆಧುನಿಕ ಗದ್ಯ ಸಾಹಿತ್ಯದಲ್ಲಿ ಆತ್ಮ ಕಥನ ಮತ್ತು ಜೀವನ ಕಥನಗಳು ವಿಶಿಷ್ಟ ಸ್ಥಾನವನ್ನು ಪಡೆದಿವೆ. ಜೀವನ ಕಥನದಲ್ಲಿಯೇ ಬೆರೆತು ಹೋದಂತಿದ್ದ ಆತ್ಮ ಕಥನ ಇತ್ತೀಚೆಗೆ ಸ್ವತಂತ್ರ ಅಸ್ತಿತ್ವವನ್ನು ಪಡೆದುಕೊಂಡಿದೆ. ಈ ಎರಡೂ ಪ್ರಕಾರಗಳಲ್ಲಿ ಸೂಕ್ಷ್ಮವಾದ ವ್ಯತ್ಯಾಸ ಹಾಗೂ ಹೋಲಿಕೆಗಳನ್ನು ಕಾಣಬಹುದು. ವ್ಯಕ್ತಿ ತನ್ನ ಬದುಕಿನ ಕಥೆಯನ್ನು ತಾನೇ ಬರೆದುಕೊಂಡಾಗ ಅದು ಆತ್ಮ ಕಥನವಾಗುತ್ತದೆ ಅಲ್ಲಿ ಆತ್ಮ ಕಥನಕಾರನಾಗಿರುತ್ತಾನೆ. ಆದರೆ, ಅದೇ ವ್ಯಕ್ತಿಯ ಜೀವನ ಕಥೆಯನ್ನು ಕುರಿತು ಬೇರೊಬ್ಬರು ಬರೆದಾಗ ಅದು ಜೀವನ ಕಥನವಾಗುತ್ತದೆ. ಅಂದರೆ ಲೇಖಕ ಇಲ್ಲಿ ಕೇವಲ ನಿರೂಪಕನಾಗಿರುತ್ತಾನೆ. ಜೀವನ ಕಥನ ಬರೆಯುವಾಗ ಲೇಖಕ ವೀಕ್ಷಕ ಸ್ಥಾನದಲ್ಲಿ ನಿಲ್ಲುತ್ತಾನೆ. ಆತ್ಮ ಕಥನದಲ್ಲಿ ಲೇಖಕನೇ ಕಥಾ

ನಾಯಕನಾಗಿರುವುದರಿಂದ ದುರಂತ ಅನುಭವಗಳನ್ನು ವರ್ಣಿಸುತ್ತಾನೆ. ಆದರೆ ಆತ್ಮಕಥನಕ್ಕೂ ಜೀವನ ಕಥನಕ್ಕೂ ಇರುವ ನಿಕಟ ಸಂಬಂಧ, ಬರೆಯುವವನು ತಾನು ಸಾಯುವುದರೊಳಗಾಗಿ ಬರೆದು ಮುಗಿಸಬೇಕಾದ ಆತ್ಮ ಕಥನ, ಜೀವನ ಕಥನದಂತೆ ಸಮಗ್ರವಾಗಲಾರದು. ಆದರೆ ಜೀವನ ಕಥನಗಳಿಗಿರದ ಆಳ, ಒಳನೋಟ, ಆತ್ಮ ಕಥನ ಬಲ್ಲದು ಹೀಗೆ ಜೀವನ ಕಥನದ ಒಂದು ಭಾಗವಾಗಿ ಕಾಣಿಸಿಕೊಂಡ ಆತ್ಮ ಕಥನ, ಸ್ವರೂಪ ಮತ್ತು ಅಭಿವ್ಯಕ್ತಿ ಕ್ರಮದಲ್ಲಿ ವ್ಯತ್ಯಾಸಗಳೂ ಹೊಂದಿದ್ದರಿಂದ ತನ್ನದೇ ಆದ ಪ್ರತ್ಯೇಕ ಸ್ಥಾನವನ್ನು ಗುರುತಿಸಿಕೊಂಡಿದೆ.

ಈ ರೀತಿಯ ವಿಶಿಷ್ಟತೆಯನ್ನು ಪಡೆದುಕೊಂಡಿರುವ ಆತ್ಮಕಥನವನ್ನು ರವಿ ಬೆಳಗೆರೆಯವರ ಬರಹಗಳಿಗೆ ಸಂಬಂಧಿದಂತೆ ಎರಡು ರೀತಿಯಲ್ಲಿ ನೋಡಲು ಇಲ್ಲಿ ಪ್ರಯತ್ನಿಸಲಾಗಿದೆ. ಒಂದು ಅನುವಾದಿತ ಆತ್ಮ ಕಥನಗಳು. ಇದು ರವಿಯವರು ಬೇರೆಯವರ ಆತ್ಮಕಥನಗಳನ್ನು ಕನ್ನಡಕ್ಕೆ ತಂದಿರುವ ಕೃತಿಗಳಿಗೆ ಸಂಂಬಧಿಸಿದ್ದು. ಎರಡು ಆತ್ಮ ಕಥನ. ಇದು ನೇರವಾಗಿ ಅವರೇ ಬರೆದುಕೊಂಡದ್ದು ಎಂಬುದಾಗಿ ಎರಡು ರೀತಿಯಲ್ಲಿ ಈ ಪ್ರಕಾರವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೪.೪.೧. ಅನುವಾದಿತ ಆತ್ಮ ಕಥನಗಳು**

ಸ್ವತಂತ್ರ ಆತ್ಮ ಕಥನಗಳಷ್ಟೇ ಪ್ರಫುಲ್ಲವಾಗಿ ಅನುವಾದಿತ ಆತ್ಮ ಕಥನಗಳು ದೊರೆಯುತ್ತವೆ. ಭಾರತೀಯ ವಿದೇಶಿಯ ರಾಷ್ಟ್ರನಾಯಕರ, ವಿಜ್ಞಾನಿಗಳ, ಸಾಹಿತಿಗಳ ಹೀಗೆ ಅನೇಕರ ಸಾಕಷ್ಟು ಅನುವಾದಿತ ಆತ್ಮ ಕಥನಗಳು ದೊರೆಯುತ್ತವೆ. ಅದರಲ್ಲಿ ಕೆಲವನ್ನು ಹೆಸರಿಸುವುದಾದರೆ ಗಾಂಧೀಜಿಯವರ ನನ್ನ ಸತ್ಯ ಶೋಧನೆಯ ಕಥೆ ತೇನಸಿಂಗ್ ಎವರೆಸ್ಟ್ ವೀರ, ಲಕ್ಷ್ಮಣ್‌ಗಾಯಕವಾಡರ ಉಚಲ್ಯಾ ಮುಂತಾದವುಗಳು. ಆತ್ಮ ಕಥನಗಳು ಆಧುನಿಕ ಕನ್ನಡ ಸಾಹಿತ್ಯದ ಕಣಜವನ್ನು ತುಂಬುತ್ತಿದ್ದರೂ, ಅನುವಾದಿತ ಆತ್ಮಕಥನಗಳು ಈ ಪ್ರಕಾರವನ್ನು ಮತ್ತಷ್ಟು ಶ್ರೀಮಂತಗೊಳಿಸುತ್ತಿವೆ. ಹೀಗಾಗಿ ಭಿನ್ನ ಭಿನ್ನ ಅಭಿವ್ಯಕ್ತಿಯ ವೈವಿಧ್ಯಮಯ ಆತ್ಮ ಕಥನಗಳನ್ನು ಅನುವಾದದಲ್ಲಿ ಕಾಣಬಹುದಾಗಿದೆ. ಕನ್ನಡದಲ್ಲಿ ೧೯೨೦ರ ಸುಮಾರಿನಿಂದಲೇ ಅನುವಾದಿತ ಆತ್ಮ ಕಥನಗಳು ಕಾಣಸಿಕೊಳ್ಳುತ್ತವೆ.(ಆರಂಭದಲ್ಲಿ ಗಾಂಧೀಜಿಯವರ ಆತ್ಮಕಥೆಯ ಅನುವಾದ). ಹೀಗೆ ಕನ್ನಡದಲ್ಲಿ ಸಾಕಷ್ಟು ಅನುವಾದಿತ ಆತ್ಮ ಕಥೆಗಳು ಬಂದಿವೆಯಾದರೂ ಇಲ್ಲಿ ಮಾತ್ರ ರವಿ ಬೆಳಗೆರೆಯವರು ಕನ್ನಡಕ್ಕೆ ತಂದಿರುವ ತೆಲುಗಿನ ಹೆಸರಾಂತ ಸಾಹಿತಿ ಗುಡಿ ಪಾಟು ವೆಂಕಟಾಚಲಂ ಅವರ ಚಲಂ ಮತ್ತು ಎಪ್ಪತ್ತರ ದಶಕದ ಮೊದಲಾರ್ಧದಲ್ಲಿ ಮುಂಬಯಿಯ ಮಾಡೆಲಿಂಗ್ ಜಗತ್ತಿನಲ್ಲಿ ಹೆಸರು ಮಾಡಿದಾಕೆ ಪ್ರೊತಿಮಾ ಬೇಡಿಯ 'ಟೈಮ್ ಪಾಸ್' ಆತ್ಮ ಕಥನಗಳನ್ನು ಮಾತ್ರ ಪರಿಚಯಿಸಲಾಗಿದೆ.

ಆತ್ಮ ಕಥೆಗಳು, ಜೀವನ ಚರಿತ್ರೆಗಳು, ಬದುಕಿನ ಕಥನಗಳು ನನ್ನ ಪಾಲಿಗೆ ಸದಾ ಕುತೂಹಲ ಕೆರಳಿಸುವಂಥವು. ನನಗೆ ಜಗತ್ತಿನ ಸರ್ವಶ್ರೇಷ್ಠ ಬಯಾಗ್ರಫಿಗಳನ್ನು ಕಲೆಹಾಕಿ ಅವುಗಳದೇ ಒಂದು ಲೈಬ್ರರಿ ಮಾಡುವ ಹುಚ್ಚಿದೆ. ಬದುಕು ಕಲಿಸಿದಷ್ಟು ಚಂದನೆಯ ಪಾಠಗಳನ್ನು ಯಾವ ವೇದಾಂತಿಯೂ ಕಲಿಸಲಾರ. ಮೇಷ್ಟ್ರು ಅಕ್ಕರೆಯಿಂದ ನೆತ್ತಿ ನೇವರಿಸಿ ಹೇಳಿಕೊಟ್ಟ ಪಾಠವನ್ನು ಕಲಿಯದೆ ಹೋದರೆ, ಬದುಕು ಕೈಯಲ್ಲಿ ಛಡಿ ಹಿಡಿದು ನಿಂತು ಪಾಠ ಕಲಿಸುತ್ತದೆ ಎಂದು ಹೇಳುತ್ತಾರೆ ರವಿಯವರು. ನಿಜ ಬದುಕು ಕಲಿಸಿದ ಚಂದನೆಯ ಪಾಠವನ್ನು ಬೇರೆ ಯಾರು ಕಲಿಸಲಾರರು. ಕಲಿಸಲಾಗದು ಕೂಡ. ಮತ್ತೊಂದೆಡೆ ಚಲಂ ಹೀಗಂತಾನೆ ಆತ್ಮ ಕಥೆಗಳೆಂದರೆ ನನಗೆ ಅಸಹ್ಯ. ತನ್ನ ಆತ್ಮ ಕಥೆ ಬರೆಯುವುದೆಂದರೆ ತಾನು ಲೋಕದ ಪಾಲಿಗೆ ಅತ್ಯಂತ ಮುಖ್ಯವಾದ ಮನುಷ್ಯ ತಾನು ಪ್ರಜೆಗಳಿಗೆ

ತೀರದ ಉಪಕಾರ ಮಾಡಿದಂಥವನು. ತನ್ನ ಬಗ್ಗೆ ಹೇಳಿಕೊಳ್ಳದಿದ್ದರೆ ಲೋಕಕ್ಕೆ ತನ್ನ ಹಿರಿಮೆ ತಿಳಿಯದಂತಾಗಿ, ಅದರಿಂದ ಲೋಕಕ್ಕೆ ತುಂಬಲಾರದ ನಷ್ಟವಾದಿತು ಅಂದುಕೊಳ್ಳುವವನು ಆತ್ಮಚರಿತ್ರೆ ಬರೆಯಬೇಕು. ಯಾಕಾದರೂ ಹುಟ್ಟಿದೆನೋ? ಹುಟ್ಟಿದವನೇ ತಕ್ಷಣಕ್ಕೆ ಸಾಯದೆ ಯಾಕಿಷ್ಟು ಕಾಲ ಬದುಕಿ ನಮ್ಮ Surroundings ಇನ್ನಷ್ಟು ಕಲ್ಮಶಗೊಳಿಸಿದೆನೋ ಅಂದುಕೊಳ್ಳುವ ನನ್ನಂಥವರು ತನ್ನ ಕಥೆಯನ್ನು ನಾಚಿಕೆಯಿಲ್ಲದೆ ಹೇಳಿಕೊಳ್ಳುತ್ತಿದ್ದಾನೆಂದರೆ, ಅದು ಯಾವ ಕಾರಣಕ್ಕೂ ಕ್ಷಮಿಸಬಹುದಾದುದಲ್ಲ[೨೨] ಎನ್ನುವ ಚಲಂ ತೆಲುಗಿನಲ್ಲಿ ವಿವಾದಾತ್ಮಕ ವ್ಯಕ್ತಿತ್ವದ ಬರಹಗಾರ.

ಚಲಂ ಅನುಕರಣೀಯನಲ್ಲ. ಆತನಂತೆ ಬದುಕಲು ಯಾರು ಪ್ರಯತ್ನಿಸಬಾರದು. ಆತನ ಪ್ರಭಾವಗಳಿಂದ ತಪ್ಪಿಸಿಕೊಳ್ಳುವುದು ಕಷ್ಟ. ಚಲಂನ ಜೀವನ ಕಥನ ಓದಲು ಚಂದವೇ ಹೊರತು ಪ್ರೇರಣೆ, ಮಾರ್ಗದರ್ಶನಕ್ಕಲ್ಲ. ಚಲಂನನ್ನು ಕನ್ನಡಕ್ಕೆ ತಂದ ರವಿಯವರು ಇದರ ಮುನ್ನುಡಿಯಲ್ಲಿ ಇದನ್ನು ಬರೆಯಲು ಕುಳಿತಿದ್ದೇನೆ. ಇದನ್ನೇ ಯಾಕೆ ಬರೆಯುತ್ತಿದ್ದೇನೆ? ಉತ್ತರವಿಲ್ಲ. ಚಲಂ ನನ್ನ ಗುರು. ಆತನಂತೆ ಬರೆಯಲು ಪ್ರಯತ್ನಿಸಿದೆ. ಆತನಂತೆ ಬದುಕಲು ಪ್ರಯತ್ನಿಸಿದೆ. ಎರಡೂ ದಕ್ಕಲಿಲ್ಲ. ಚಲಂನನ್ನು ಮರೆಯುವುದರ ಮೂಲಕ ಆತನನ್ನು ದಿಕ್ಕರಿಸಲು ಪ್ರಯತ್ನಿಸಿದೆ. ಅದೂ ಸಾಧ್ಯವಾಗಲಿಲ್ಲ. ಹೀಗಾಗಿ ಈ ಪುಸ್ತಕ ಎನ್ನುತ್ತಾರೆ. ಹಾಗಂತ ಚಿಕ್ಕದೊಂದು ಮುನ್ನೆಚ್ಚರಿಕೆ ಮೊದಲೇ ಕೊಡುವ ಲೇಖಕರು ಇದನ್ನು ಕನ್ನಡಕ್ಕೆ ತಂದದ್ದಾದರೂ ಯಾಕೆ? ಎಂಬ ಪ್ರಶ್ನೆ ಕಾಡುವಂತೆ ಮಾಡುತ್ತಾರೆ. ಆದರೆ ಚಲಂನನ್ನು ಓದುತ್ತಾ ಸಾಗಿದಂತೆ ಆತನ ಜೀವನ ಶೈಲಿ, ಬರವಣಿಗೆಯ ಕಲಾನೈಪುಣ್ಯ ಮತ್ತು ಆತ ಬದುಕಿದ ರೀತಿ ಸಂಪ್ರದಾಯ ಸಮಾಜದವರು ಎಂದು ಕೊಳ್ಳುವವರು ಒಪ್ಪುವಂತದಾಗಿರಲಿಲ್ಲ. ಆತನ ಪ್ರತಿ ಕನಸು, ಆಶಯ, ತನ್ನ ಕಥೆ, ನಾಟಕಗಳಲ್ಲಿ ಪ್ರತಿಫಲನಗೊಳ್ಳುವಂತೆ ಬರೆದ. ಅವು ಆತನ ಸೌಂದರ್ಯ, ವಾಂಛೆ, ಆಕಾಂಕ್ಷೆ ಆದರ್ಶಗಳನ್ನೆಲ್ಲ ಸೇರಿಸಿದ ರಚನೆಗಳಾಗುತ್ತಿದ್ದವು.

ಒಟ್ಟಾರೆ ಆತನ ಜೀವನದ ಮುಖ್ಯ ಸೂತ್ರವೆಂದರೆ, ಅರ್ಥವಿಲ್ಲದ ಅಶಾಂತಿ ಧಗಧಗಿಸುವ ಅಸಂತೃಪ್ತಿ ಏನನ್ನೋ ಹೊಂದಬೇಕು ಎಂಬ ತೀವ್ರ ತಪನೆ. ಇವೆಲ್ಲವುಗಳೊಂದಿಗೆ ಯಾರೂ ಸರಿಪಡಿಸಲಾಗದಂತಹ ಅನಾರೋಗ್ಯ ಇಂತವೆಲ್ಲವೂಗಳ ಒಟ್ಟು ಮೊತ್ತದಂತಿದ್ದ ಚಲಂ, ಚಲಂ. ನಿಜಕ್ಕೂ ಹಾಗಿದ್ದರಾ? ಹಾಗೆ ಕಾಣಿಸುತ್ತಿದ್ದರಾ? ಅವರೊಳಗಿನ ತಲ್ಲಣಗಳೇನಿದ್ದವು? ಏಕಾಂತದಲ್ಲಿ ಮುಖಾಮುಖಿಯಾಗುತ್ತಿದ್ದ ಸತ್ಯದ ಸ್ವರೂಪವೇನು? ಅವರು ಹಾಗಿದ್ದರೆ ನಾವೇಕೆ ಹೀಗಿದ್ದೇವೆ? ಅದೇ ಭೂಮಿ, ಬಾನು, ಗಾಳಿ, ನೀರು. ಸೃಷ್ಟಿ ಮಾತ್ರ ಬೇರೆ. ಅದು ನಮ್ಮ ಮಿತಿಯಾ? ಅವರ ಗತಿ ಮತ್ತು ಸ್ಥಿತಿಯಾ? ಅವರ ಬದುಕನ್ನು ಹೇಗೆ ನೋಡಬೇಕು? ನಂತರ ಕಾಡುವ ಅತೃಪ್ತಿಯಿಂದ ಪಾರಾಗುವುದು ಹೇಗೆ ಒಂದು ಅತಿಗೆ ಹೋಗದ ಹೊರತು ಸತ್ಯದ ಹೊಸಿಲನ್ನು ತಾಕುವುದು ಸಾಧ್ಯವೇ ಇಲ್ಲವೇನೋ? ಸದಾ ನಿನ್ನ ಇತಿಮಿತಿಗಳನ್ನು ಅರಿತು ಬದುಕು ಅನ್ನುತ್ತದೆ ನಮ್ಮ ಓದು, ಕಲಿತ ಪಾಠ, ಸುತ್ತಲಿನ ಸಮಾಜ, ಧರ್ಮ ಮತ್ತು ನಮ್ಮ ವಿವೇಕದ ಅಧ್ಯಯನ ಮೂಲಕ ದಾಟಲು ಯತ್ನಿಸುತ್ತೇವೆ ಎನ್ನುವುದು ಭ್ರಮೆ. ಅನುಭವದ ಸೇತುವೆಯ ಮೇಲೆ ನಡೆದು ಆಚೆ ದಡ ಸೇರುತ್ತೇವೆ ಅನ್ನುವುದು ಸಹ ಮೂಢನಂಬಿಕೆ. ಕೆಳಗೆ ಆರ್ಭಟಿಸುತ್ತಾ ಹರಿಯುವ ನದಿಗೆ ಧುಮುಕಿ ಪಾರಾಗಲಾರೆವು.

ಪಾರಾಗಿ ಎತ್ತರಕ್ಕೇರುವ ಹಂಬಲದ ನಡುವೆ ತೋಯ್ಯುತ್ತಿರುವ ಮನಸ್ಸು ಚಲಂ ಆತ್ಮಕಥೆಯ ಮುಂದೆ ಅರೆಕ್ಷಣ ಬೆತ್ತಲಾಗಿ ನಿಲ್ಲುತ್ತದೆ. ಹಾಗೆ ಬೆತ್ತಲೆಗೊಳಿಸುವ ಶಕ್ತಿ ಅಹಂಕಾರವಿಲ್ಲದೆ ಹುಟ್ಟಿದ ಎಲ್ಲ ಕಲೆಗೂ ಇರುತ್ತದೇನೋ? ಆದರೆ ಅಹಂಕಾರದ ಲವಲೇಶವೂ ಇಲ್ಲದೆ, ಆತ್ಮಚರಿತ್ರೆ ಬರೆಯುವುದಾದರೂ ಹೇಗೆ? ನಾನೆಂಬ ಮಮಕಾರವನ್ನು ತೊರೆದು ತನ್ನ ಬದುಕನ್ನು ನಡುದಾರಿಯಲ್ಲಿ ಸತ್ತುಬಿದ್ದ ಅಪರಿಚಿತ ಶವವನ್ನು ನೋಡುವಷ್ಟು ಪರಕೀಯ ಭಾವದಿಂದ ನೋಡುವುದು ಸಾಧ್ಯವಾ? ಅದು ಚಲಂಗೆ ಹೇಗೆ ಸಾಧ್ಯವಾಯಿತು? ಜಗತ್ತಿನ ಜೊತೆಗೆ ಅಷ್ಟೊಂದು ಭಿನ್ನಾಭಿಪ್ರಾಯ ಇಟ್ಟುಕೊಂಡು ಹೇಗೆ ಜೀವಿಸಿದರು? ತನ್ನೊಂದಿಗೆ ಸಂಘರ್ಷ ಇಟ್ಟುಕೊಂಡು ಹೇಗೆ ಕ್ರಿಯಾಶೀಲವಾಗಿದ್ದರು? ಎಲ್ಲರನ್ನು ಸಂತೈಸುವ ಸಂಗತಿಗಳು ಅವರಿಗೇಕೆ ಸಾಂತ್ವನ ಹೇಳಲಿಲ್ಲ. ಚಲಂ ಭಾವತೀವ್ರತೆ, ವ್ಯಾಮೋಹ, ಸೆಳೆತ ಶೃಂಗಾದತ್ತ ಧಾವಿಸುವ ಉತ್ಕಟತೆ ಎಲ್ಲವನ್ನೂ ಮೀರಿದ್ದು ಅನುಭಾವದ ತುಡಿತ. ಇಂಥ ಅನುಭಾವವನ್ನು ತಾತ್ವಿಕತೆಯನ್ನು ಚಲಂ ತನ್ನ ಬದುಕನ್ನು ಸಮರ್ಥಿಸಿಕೊಳ್ಳಲು ಊರುಗೋಲು ಮಾಡಿಕೊಳ್ಳುವುದಿಲ್ಲ ಎಂಬುದೇ ಇಲ್ಲಿನ ವೈಶಿಷ್ಟ್ಯ.

ಚಲಂ ಬದುಕು ಅನುಕರಣೀಯವಲ್ಲ ಎಂದು ರವಿಯವರು ಹೇಳುತ್ತಾರೆ. ಚಲಂ ಅವರ ಜೀವನದ ವ್ಯಾಮೋಹ, ಶೃಂಗಾರ ಮತ್ತು ಪ್ರಣಯಕ್ಕೆ ಸಂಬಂಧಿಸಿದಂತೆ ಅದು ನಿಜ. ಆದರೆ ಅವರ ವಿಚಾರಧಾರೆಯಲ್ಲಿ ಕಂಡುಕೊಳ್ಳಬಹುದಾದ ಅನೇಕ ಅಂಶಗಳಿವೆ. ಜೀವನೋತ್ಸಾಹವನ್ನು ಹುರಿಗೊಳಿಸುವ ಜೀವ ತಂತುವಿದೆ. ಕಷ್ಟಕಾರ್ಪಣ್ಯಗಳನ್ನು ನಿರುಮ್ಮಳವಾಗಿ ಎದುರಿಸುವುದಕ್ಕೆ ನೆರವಾಗುವ ಸಂದೇಶವಿದೆ. ಬರೀ ಮರ್ಯಾದಸ್ಥರ ಪ್ರಪಂಚಕ್ಕೆ ಅವಿನಯವನ್ನು ಕಲಿಸುವ ಗುರುವಿನಂತೆಯೇ ನೀರ ಮೇಲಿನ ಗುಳ್ಳೆಯಂತೆ ಕಾಣುವ ಸಂಸಾರ ಸುಖದ ಹುಸಿ ಸಂತೋಷವನ್ನು ಒಡೆಯುವವರಂತೆಯೂ ಕಾಣುವ ಚಲಂರ ಆತ್ಮ ಕಥನವನ್ನು ಕನ್ನಡಕ್ಕೆ ತರುವ ಮೂಲಕ ನಮ್ಮ ಮಿತಿಗಳನ್ನು ದಾಟುವಂತೆ ಮಾಡಿದ್ದಾರೆ ರವಿ ಬೆಳಗೆರೆಯವರು.

ವಿಲಕ್ಷಣವಾಗಿ ಬದುಕಿದ ಪ್ರೊತಿಮಾ ಬೇಡಿಯ ಆತ್ಮ ಕಥನದ ಹೆಸರು ಟೈಮ್ ಪಾಸ್. ಅರವತ್ತರ ದಶಕದ ಕೊನೆಯಲ್ಲಿ ಮತ್ತು ಎಪ್ಪತ್ತರ ದಶಕದ ಮೊದಲಾರ್ಧದಲ್ಲಿ ಮುಂಬಯಿಯ ಮಾಡೆಲಿಂಗ್‌ನಲ್ಲಿ ಹೆಸರು ಮಾಡಿದ ಪ್ರೊತಿಮಾ, ಸಿನೆಮಾ ನಟ ಕಬೀರ್ ಬೇಡಿಯನ್ನು ಮದುವೆಯಾಗಿದ್ದಳು. ಮಕ್ಕಳು ಆಗಿದ್ದರು; ಪೂಜಾ ಮತ್ತು ಸಿದ್ಧಾರ್ಥ. ನಂತರ ಕಬೀರ್ ಬೇಡಿಯಿಂದ ದೂರವಾದಳು. ಅದಕ್ಕೆ ಮೂರು ವರ್ಷ ಮುಂಚೆ ಒಡಿಸ್ಸಿ ನೃತ್ಯ ಕಲಿಯಲು ಪ್ರಾರಂಭಿಸಿದ್ದಳು. ಕೆಲವೇ ವರ್ಷಗಳಲ್ಲಿ ಭಾರತದ ಪ್ರಸಿದ್ಧ ನೃತ್ಯಗಾರ್ತಿ ಎಂದು ಕರೆಯಿಸಿಕೊಳ್ಳಲು ಪ್ರೊತಿಮಾಗೆ ಸಾಧ್ಯವಾಯಿತು. ೧೯೯೦ರಲ್ಲಿ ಆಕೆ ಬೆಂಗಳೂರಿನ ಬಳಿ ಹೆಸರಘಟ್ಟದಲ್ಲಿ ನೃತ್ಯಗ್ರಾಮ ಆರಂಭಿಸಿದ್ದಳು. ಆದರೆ ಐವತ್ತು ತುಂಬುವುದಕ್ಕೆ ಮುಂಚೆ ೧೯೯೮ರಲ್ಲಿ ಸತ್ತುಹೋದಳು(೧೯೪೯–೧೯೯೮).

ಹೀಗೆ ಪ್ರೊತಿಮಾ ಬೇಡಿಯ ರೀತಿ ವಿಲಕ್ಷಣ ಜೀವಿಯಂತೆ ನಲವತ್ತೊಂಬತ್ತು ವರ್ಷಗಳ ಕಾಲ ಪ್ರತಿ ನಿಮಿಷವನ್ನೂ ಇಷ್ಟೊಂದು ತೀವ್ರವಾಗಿ ಬದುಕಿ ಬಿಡುವುದು ಮತ್ತ್ಯಾವ ಹೆಂಗಸಿಗಾದರೂ ಸಾಧ್ಯವೋ ಏನೋ? ಆದರೆ ಬದುಕಿದುದನ್ನೆಲ್ಲ ಇಷ್ಟು ನಿಚ್ಚಳವಾಗಿ ಬರೆದುಕೊಳ್ಳುವುದು ಮಾತ್ರ ಸದ್ಯದ ಭವಿಷ್ಯತ್ತಿನಲ್ಲಿ ಮತ್ತೊಬ್ಬ ಹೆಣ್ಣು ಮಗಳಿಗೆ ಸಾಧ್ಯವಾಗಲಾರದು. ಕಬೀರ್ ಬೇಡಿಯಿಂದ ಆರಂಭವಾಗಿ ಪಂಡಿತ್ ಜಸ್ ರಾಜ್ ತನಕ, ರಜನಿ ಪಟೇಲ್‌ನಿಂದ ಹಿಡಿದು ನಿಗೂಢ ಕೇಂದ್ರ ಮಂತ್ರಿ ಮನು ತನಕ ಚಿತ್ರವಿಚಿತ್ರದ, ದೇಶ ವಿದೇಶಗಳ ಗಂಡಸರೊಂದಿಗೆ ಸಂಬಂಧವಿರಿಸಿಕೊಂಡ

ಪ್ರೊತಿಮಾ ಬೇಡಿ ಸ್ವೇಚ್ಛೆಯನ್ನೇ ಸ್ವಾತಂತ್ರ್ಯವೆಂದು ಭಾವಿಸಿದಂತಹ ಹಿಪ್ಪಿಯುಗದಲ್ಲಿ, ವರ್ಷಗಟ್ಟಲೆ ಕುಡಿದಳು ಚರಸ್ ಸೇದಿದಳು, ಬೆತ್ತಲೆ ಓಡಿದಳು! ಇಷ್ಟೆ ಆಗಿದಿದ್ದರೆ ಪ್ರೊತಿಮಾ ಬೇಡಿಯ ಜೀವನ ಕಥನ, ಒಬ್ಬ ಕ್ಷುದ್ರ ಹೆಂಗಸಿನ ಹೀನ ಚರಿತ್ರೆಯೆನ್ನಿಸಿಕೊಂಡು ಬಿಡುತ್ತಿತ್ತು. ಆದರೆ ಅವಳು ತನಗೆ ಗೊತ್ತಿಲ್ಲದಂತೆ ಬದಲಾದಳು. ಒಡಿಸ್ಸಿ ನೃತ್ಯ ಸಾಮ್ರಾಜ್ಯದ ತಾರೆಯಾದಳು. ಸನ್ಯಾಸಿನಿಯಾದಳು. ತನ್ನಿಬ್ಬರು ಮಕ್ಕಳಿಗೆ ತಾಯಿಯಾಗಬೇಕೆಂದು ತುಂಬ ಚಡಪಡಿಸಿದಳು. ಕಳೆದುಕೊಂಡ ಗಂಡನಿಗಾಗಿ, ಗೆಳೆಯರಿಗಾಗಿ ಹಂಬಲಿಸಿದಳು. ಮೊಮ್ಮಗುವಿಗೆ ಪ್ರೀತಿಯ ಅಜ್ಜಿಯಾದಳು. ನೋಡ ನೋಡುತ್ತಲೇ ತನ್ನ ವಿಲಕ್ಷಣ ಬದುಕಿಗೆ ವಿದಾಯ ಹೇಳಿದಳು. ಪ್ರೊತಿಮಾ ತನ್ನ ವಿಲಕ್ಷಣ ಬದುಕಿನಿಂದ ಯಾವ ಹೆಣ್ಣಿನ ಜೀವನಕ್ಕೂ ಮಾರ್ಗದರ್ಶನ, ಆದರ್ಶವಾಗಲಾರಳು ಎಂದು ಅನ್ನಿಸುವುದು ಎಷ್ಟು ನಿಜವೋ ಅಷ್ಟೇ ಅವಳು ಕೊನೆಯ ದಿನಗಳಲ್ಲಿ ಬದುಕಿದ ರೀತಿಯಿಂದ ಮಾರ್ಗದರ್ಶಿಯಾಗುತ್ತಾಳೆ. ಯಾವ ರೀತಿ ಬದುಕಬಾರದು, ಯಾವ ರೀತಿ ಬದುಕಬೇಕು ಎಂಬೆರಡಕ್ಕೂ ಉದಾಹರಣೆಯಾಗಿ ಪ್ರೊತಿಮಾ ಬೇಡಿ ಜೀವನ ಕಥನ ಕಂಡುಬರುತ್ತದೆ.

### ೪.೪.೨. ಆತ್ಮ ಕಥನ

ಜೀವನಾನುಭವದ ವಿಶಿಷ್ಟ ಅಭಿವ್ಯಕ್ತಿಯೇ ಸಾಹಿತ್ಯ. ಈ ಸಾಹಿತ್ಯವು ಕಥೆ, ಕಾವ್ಯ ಕಾದಂಬರಿ, ವಿಮರ್ಶೆ ಹೀಗೆ ಹಲವಾರು ಪ್ರಕಾರಗಳ ಹರವನ್ನು ಪಡೆದಿದೆ. ಈ ಎಲ್ಲ ಸಾಹಿತ್ಯವನ್ನು ಸೃಷ್ಟಿಮಾಡುತ್ತಿರುವ ವ್ಯಕ್ತಿ ತನ್ನ ಬದುಕನ್ನೊಮ್ಮೆ ಹಿಂತಿರುಗಿ ನೋಡುತ್ತಾ ನೆನಪುಗಳನ್ನು ಮೇಲುಕು ಹಾಕುವುದು ಸಹಜ. ಅದು ಅವಶ್ಯವೂ ಹೌದು, ಅದೊಂದು ಬಗೆಯ ಆತ್ಮಾವಲೋಕನ. ಪ್ರತಿಯೊಬ್ಬ ವ್ಯಕ್ತಿಗೂ ತನ್ನದೇ ಅನುಭವಗಳು ಇದ್ದೇ ಇರುತ್ತವೆ. ಸಂತೋಷದ ಜೊತೆಗೆ ಕಷ್ಟದ ವಿಷವರ್ತುಲದಲ್ಲಿ ಸಿಕ್ಕು ಪಾರಾಗಿ ಜಯಸಿದಾಗಿನ ಅನುಭವಗಳನ್ನೂ ಗೆಳೆಯರ, ಆಪ್ತರ ಮುಂದೆಯೋ ಅಭಿವ್ಯಕ್ತಿಗೊಳಿಸಿದರೂ ಅವು ಇತರರಿಗೆ ತಿಳಿಯುವುದಿಲ್ಲ. ಇಲ್ಲಿ ಆತನ ಮನದಲ್ಲೇ ಉಳಿದು, ಅಳಿದು ಹೋಗಬಹುದು. ಆದರೆ ಅದನ್ನೇ ಪ್ರಾಮಾಣಿಕವಾಗಿ ಪ್ರಾಂಜಲ ಮನಸ್ಸಿನಿಂದ ದಾಖಲಿಸಿದಾಗ ಆ ಅನುಭವಗಳೇ ಆತ್ಮ ವೃತ್ತಾಂತವಾಗಿ ಶಾಶ್ವತವಾಗಿ ಉಳಿದುಕೊಳ್ಳುತ್ತವೆ.

ಜೀವನ ಅನುಭವಗಳ ಸಂತೆ. ಹಾಗೆ ಅನುಭವಗಳು ಪ್ರತಿಯೊಬ್ಬ ಮನುಷ್ಯನ ಜೀವನದ ಅವಿಭಾಜ್ಯ ಅಧ್ಯಾಯಗಳು. ಸಾಗಿಬಂದ ದಾರಿಗಿಂತ ಸಾಗಬೇಕಿರುವ ದಾರಿ ಉದ್ದವಿದೆ. ಆದರೆ ಹತ್ತಿ ಬಂದ ಮೆಟ್ಟಿಲುಗಳೆಡೆಗೆ ಮೆಚ್ಚುಗೆಯ ಮಾತುಗಳಿರಲೇಬೇಕು. ಅದು ರವಿಯವರ ಖಾಸ್‌ಬಾತ್‌ಗಳಲ್ಲಿ ಪದೇ ಪದೇ ಸಾಬೀತಾಗುವ ಅಂಶವೆಂದರೆ ಸುಳ್ಳಲ್ಲ. ಖಾಸ್ ಬಾತ್ ರವಿಯವರ ಆತ್ಮ ಕಥನ ಹಾಯ್ ಬೆಂಗಳೂರ್! ವಾರ ಪತ್ರಿಕೆಯಲ್ಲಿ ಪ್ರಕಟವಾಗಿ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಒಟ್ಟು ಹತ್ತು(೧೯೯೬ರಿಂದ ೨೦೦೫) ಪುಸ್ತಕಗಳು ಹೊರಬಂದಿವೆ. ರವಿಯವರ ಈ ಬರಹ ಆ ವಾರದ ಘಟನೆಯನ್ನು ಹೇಳೇಳುತ್ತಲೇ ಶುರುವಾಗುವ ಖಾಸ್‌ಬಾತ್ ಎರಡನೇ ಕಾಲಂ ದಾಟುವ ಹೊತ್ತಿಗೆ ಅವರ ಗತಜೀವನದ ದಿನಗಳಿಗೆ ಲಗ್ಗೆ ಹಾಕುತ್ತದೆ. ಹಾಗೆ ಇದ್ದಕ್ಕಿದ್ದಂತೆ ಮುಗಿದು, ಫಕ್ಕನೆ ಒಂದು ಚಿಂತನೆಗೆ, ಖಾಲಿತನಕ್ಕೆ ಓದುಗರನ್ನು ಈಡು ಮಾಡಿಬಿಡುತ್ತದೆ.

ಅವರು ತಮ್ಮ ಖಾಸ್ ಬಾತ್‌ಗಳಲ್ಲಿ ತಾವೊಬ್ಬ ಓದುಗರಂತೆ ತಮ್ಮನ್ನು ತಾವು ತೆರೆದುಕೊಳ್ಳುತ್ತಾರೆ. ಇದೆಲ್ಲ ಬರೆಯಬೇಕಿತ್ತೇ? ಎಂಬ ಅಳುಕಿನೊಂದಿಗೆ ಓದುಗರು ಓದಲು ಶುರುವಿಟ್ಟರೂ ಪ್ರತಿಯೊಂದು ಸಾಲು ಮುಗಿದಂತೆ, ಓದುಗ ತನ್ನನ್ನೇ ಅದರೊಂದಿಗೆ ಸಮೀಕರಿಸಿಕೊಳ್ಳಲಾರಂಭಿಸಿ ಬಿಡುತ್ತಾನೆ.

ಇದು ಕನ್ನಡದ ಬೇರಾವ ಲೇಖಕನ ಬರಹಕ್ಕೂ ಸಲ್ಲದ ವೈಶಿಷ್ಟ್ಯ. ದಾರ್ಶನಿಕರಂತೆ ಬರೆದು ಪ್ರಭುತ್ವ ಪ್ರದರ್ಶಿಸಿರುವವರ ಮಧ್ಯೆ ರವಿ ಬೆಳಗೆರೆಯವರು ತಮ್ಮ ಇಂತಹ ಸರಳ ಬರಹದ ವೈಶಿಷ್ಟ್ಯದಿಂದಾಗಿ ಎದ್ದು ಕಾಣುತ್ತಾರೆ.

ಕನ್ನಡಿಯ ಮುಂದೆ ನಿಲ್ಲ ಹೊರಟವನಿಗೆ ಮುನ್ನುಡಿ ಬೇಕಿಲ್ಲ. ನನ್ನ ಹಲುಬು, ಕನವರಿಕೆ, ಕನಸು, ಕಲ್ಪನೆಗಳೊಂದಿಗೆ ಮಾತಿಗಿಳಿಯುತ್ತಾ, ಆತ್ಮ ವಿಮರ್ಶೆ ಮಾಡಿಕೊಳ್ಳುತ್ತಾ ಪ್ರತಿ ವಾರಕ್ಕೊಂದು ಬಾರಿಯಂತೆ ಓದುಗರ ಮುಂದೆ ನಿಂತದ್ದರ ಫಲವೇ ಖಾಸ್‌ಬಾತ್‌ನ ಅನಾಮಧೇಯನೊಬ್ಬನ ಆತ್ಮಕತೆಯನ್ನು ಇಷ್ಟೊಂದು ಪ್ರೀತಿಯಿಂದ ಓದಿದ ಹಾಯ್ ಬೆಂಗಳೂರ್!ನ ಓದುಗರಿಗೆ ಕೃತಜ್ಞ'.[೨೮] 'ನಾನೊಬ್ಬನೇ ಎಲ್ಲವನ್ನೂ ಎದುರಿಸುತ್ತೇನೆ, ಅನುಭವಿಸುತ್ತೇನೆ, ಬದುಕುತ್ತೇನೆ! ಅಂಥ ನಿರ್ಧರಿಸಿದ ಮೂವತ್ತೇಳು ವರ್ಷಗಳ ಪ್ರತಿಫಲವೇ ಖಾಸ್‌ಬಾತ್...' ಪತ್ರಿಕೆ ಯಶಸ್ಸಿನ ಹಾದಿಗೆ ಹತ್ತುತ್ತಿದ್ದಂತೆಯೇ ಖಾಸ್‌ಬಾತ್' ಬರೆಯಲು ಆರಂಭಿಸಿದೆ. ವಾರಕ್ಕೊಮ್ಮೆ ನಿಮ್ಮೆದುರು ಅಂತರಂಗವನ್ನು ಬಿಚ್ಚಿಕೊಳ್ಳುವ ಕಸರತ್ತು. ಪತ್ರಿಕೆಯ ಎರಡನೇ ಪುಟದ ಯಾವ ಅಕ್ಷರದಲ್ಲೂ ಸುಳ್ಳಿರಬಾರದು–ಎಂದು ನಿರ್ಧರಿಸಿಯೇ ಬರೆಯಲು ಕುಳಿತೆ. ನನ್ನ imageನ ಬಗ್ಗೆ ಜನ ಏನೆಂದುಕೊಂಡಾರು ಎಂಬ ಬಗ್ಗೆ, ಮುಂದೆ ಏನಾದೀತು ಎಂಬುದರ ಬಗ್ಗೆ ಕೂಡ ಯೋಚಿಸದೆ–ಸುಮ್ಮನೆ ನೆನಪಾದುದ್ದನ್ನೆಲ್ಲ ಬರೆಯುತ್ತಾ ಹೋದೆ. I am Sure, ಇದು ನನ್ನ ಜೀವನ ಚರಿತ್ರೆಯಲ್ಲ. ಅದು ಹೀಗೆ ಒಂದೆರಡು ಪುಸ್ತಕಗಳಲ್ಲಿ ಮುಗಿಯಲಾರದು. ಕೇವಲ ನನ್ನ ಹಿಮಾಲಯದ ಅನುಭವಗಳನ್ನು ಬರದರೆ ಅದೇ ಒಂದು ಪುಸ್ತಕವಾದೀತು. ಯಾರ ಬದುಕಾದರೂ ಅಷ್ಟೆ: ಸಣ್ಣ ತೆಕ್ಕೆಯಲ್ಲಿ ಹೇಳಿ ಮುಗಿಸಲಿಕ್ಕಾಗದು. ಈ ಖಾಸ್‌ಬಾತ್ ಅಂಕಣದಲ್ಲಿ ಪ್ರಕಟವಾಗಿರುವುದೇನಿದ್ದರೂ ಬಿಡಿ ಬಿಡಿ ಘಟನೆಗಳ Capsule form. ಇದರಲ್ಲಿ ನಾನು ಈ ತನಕ ಹೇಳಿಕೊಂಡದ್ದು ನನ್ನ ಬದುಕಿನ ವೈಫಲ್ಯ, ದುರಂತ, ತಪ್ಪು, ಅಪಘಾತ–ಅವಘಡಗಳ ಬಗ್ಗೆಯೇ ಹೊರತು ಗೆಲುವಿನ, ಸಂಭ್ರಮದ, ಸಾಹಸದ ಕಥೆಗಳನಲ್ಲ. ಹೀಗಾಗಿ ಇಲ್ಲಿ ಸುಳ್ಳು ಹೇಳುವ, ನನ್ನ ಬಗ್ಗೆ ಒಂದು positive image ಬೆಳಸಿಕೊಳ್ಳುವ ಅವಶ್ಯಕತೆ ಬರಲೇ ಇಲ್ಲ. ತೆಪ್ಪಗೆ ನನ್ನ ಪಾಡಿಗೆ ನಾನು ಎಂಬಂತೆ, ನನ್ನೊಂದಿಗೆ ನಾನೇ ಮಾತಾಡಿಕೊಳ್ಳುವವನಂತೆ open up ಆಗುತ್ತ ಹೋದೆ.

ಬಹುಶಃ ನಿಮಗಿಷ್ಟವಾದದ್ದೇ ಅದು. ಪ್ರತಿ ಖಾಸ್‌ಬಾತ್ ಪ್ರಕಟವಾದಾಗಲೂ ರವಿ, ನಾನು ಬರಿಬೇಕು ಅಂದ್ಕೊಂಡದ್ದನ್ನೇ ನೀವು ಬರೆದಿದ್ದೀರಿ. ನನಗಾದ ಅನುಭವವೇ ಇದು. ಎಷ್ಟು Similar Situation ಗಳಲ್ಲವಾ? ಇಡೀ ಬರಹ ಸಾಪಲ್ಯವಿರುವುದೇ ಅದರಲ್ಲಿ. ನಾನು ನೋಡಿಕೊಂಡ ಕನ್ನಡಿಯಲ್ಲಿ ನಾನೊಬ್ಬನೇ ಅಲ್ಲ... ನೀವೂ ಕಾಣುತ್ತೀರಿ! ಹೀಗಾಗಿ ಇದು ನನ್ನೊಬ್ಬನ ಖಾಸ್‌ಬಾತ್ ಆಗಿ ಉಳಿದಿಲ್ಲ. ಆದರೆ, ಬದುಕುತ್ತಾ ಬದುಕುತ್ತಾ, ಬರೆಯುತ್ತಾ ಬೆಳೆಯುತ್ತಾ ನಾನೊಂದು ತೀರ್ಮಾನಕ್ಕೆ ಬಂದು ಬಿಟ್ಟಿದ್ದೇನೆ. ಅದನ್ನೇ ಈ ಪುಸ್ತಕದ ಪುಟದಲ್ಲಿ ಪ್ರಕಟಿಸಿದ್ದೇನೆ... 'ಮನುಷ್ಯ ಬೆತ್ತಲೆಯಾದಷ್ಟೂ ಮಾನವಂತನಾಗುತ್ತಾನೆ!' ನನ್ನ ಮಟ್ಟಿಗೆ ಇದೇ ಜೀವನ ಸಿದ್ಧಾಂತ'[೨೯] ಎನ್ನುವ ರವಿ ಬೆಳಗೆರೆಯವರ ಮಾತು ಮನುಷ್ಯ ಬದುಕಬೇಕಾದ, ಪ್ರಕಟಗೊಳ್ಳಬೇಕಾದ ಬಗೆಯನ್ನು ಹೇಳುತ್ತದೆ. ಒಂದು ಹಿಡಿ ಪ್ರೀತಿಗಾಗಿ ಎಲ್ಲರೂ ಹಂಬಲಿಸುತ್ತಾರೆ, ಹೇಳಿಕೊಂಡವರಿಗೂ, ಕೇಳಿಸಿಕೊಂಡವರಿಗೂ ಹೆಚ್ಚು ವ್ಯತ್ಯಾಸವಿಲ್ಲ ಅನ್ನಿಸಿದಾಗ ಅದು ರವಿ ಬೆಳಗೆರೆದಷ್ಟೇ ಖಾಸ್‌ಬಾತ್ ಆಗಿ ಉಳಿದೀತಾದರೂ ಹೇಗೆ? ಈ ಬರಹದಲ್ಲಿ ಅವರು ನಿಸ್ಸಂಕೋಚವಾಗಿ ಹೇಳಿಕೊಂಡದ್ದು, ಹುಡುಕಿಕೊಂಡು ಹೋದದ್ದು ಅವರ ಬದುಕಿನ ಕತೆ ಮತ್ತು ಅವರು ಬದುಕಿದ ರೀತಿಯನ್ನು.

'ಬಳ್ಳಾರಿಯ ಜನ ತಲೆಗೆ ಟೋಪಿ ಧರಿಸುವುದಿಲ್ಲ. ಕೊಡೆ ಅಪರೂಪ. ಕಾಲಿಗೆ ಚಪ್ಪಲಿಯಿಲ್ಲದವರು ಸಾವಿರಾರು. ಆ ಧಗಧಗಿಸುವ ಬಿಸಿಲಿನಲ್ಲಿ ಮೂರು ಗಾಲಿಯ ಸೈಕಲ್ ರಿಕ್ಷಾ ತುಳಿದುಕೊಂಡು ಹೋಗುವವರನ್ನ ನೆನೆಸಿಕೊಂಡರೂ ನನ್ನಲ್ಲಿ ಸೆಖೆಯ ಬೆವರು ಪುಟಿಯುತ್ತದೆ.

ಅಷ್ಟಾದರೂ ಅಲ್ಲಿನ ಜನ ಬೆಳಗಿನಿಂದ ಸಂಜೆಯ ತನಕ ಹತ್ತಾರು ಸಲ ಸೂಪರ್ ಸ್ಟ್ರಾಂಗ್ ಕಾಫಿ ಕುಡಿಯುತ್ತಾರೆ. ರಸ್ತೆಯ ಬದಿಯಲ್ಲಿ ಕರಿದು ಮಾರುವ ಮೆಣಸಿನಕಾಯಿ ಬೋಂಡ(ವಡೆ ಮೆಣ್ಸಿನಕಾಯಿ)ಗಳನ್ನು ಲಡ್ಡಿಗಿಂತ ಇಷ್ಟವಾಗಿ ತಿನ್ನುತ್ತಾರೆ. ಪರಮ ಘಾಟಾದ ಚಾರ್ಮಿನಾರು ಸಿಗರೇಟು ಸುಡುತ್ತಾರೆ. ರಣ ಖಾರದ ಚಿಕನ್ ಪೀಸು ನೆಮಲುತ್ತಾ ಇಡಿಯಾಗಿ ಒಂದು ಬಾಟಲಿ ರಮ್ ಇಳಿಸುತ್ತಾರೆ. ಮನೆಗಳಲ್ಲಿ ಖಾರದ್ದೇ ಕಾರು ಭಾರು.

ಅಲ್ಲಿ ಅಜೀರ್ಣದ ಸಮಸ್ಯೆಯಿಲ್ಲ. ಬಿಸಿಲು ಎಲ್ಲವನ್ನೂ ಭಸ್ಮ ಮಾಡಿಬಿಡುತ್ತದೆ. ಅಷ್ಟಿಷ್ಟು ಅರಗದೆ ಉಳಿದಿದ್ದರೆ, ಅದನ್ನು ರಾಯಲ್ ಸರ್ಕಲ್ ಬಸ್‌ಸ್ಟ್ಯಾಂಡಿನಲ್ಲಿ ಮಾರುವ 'ಗೋಲಿ ಸೋಡಾ' ಸದ್ದಿಲ್ಲದೆ ಕರಗಿಸಿ ಹಾಕುತ್ತದೆ. ಆದರೂ ಜನ ಬಿಸಿಲಿನ ತೀಕ್ಷ್ಣತೆಗೆ ಕ್ಯಾರೆ ಎನ್ನದೆ ಹಗಲಿಡೀ ದುಡಿಯುತ್ತಾರೆ. ಚಿತ್ರದಲ್ಲಿನ ಮರಗಳಂತೆ ಒಂದು ಎಲೆಯೂ ಅಲುಗದೆ ನಿಂತ ಬೇವಿನ ಮರಗಳನ್ನು ಶಪಿಸುತ್ತಾ ಮನೆಗಳ ಅಂಗಳಗಳಲ್ಲಿ ಅಂಗಾತ ಮಲಗುತ್ತಾರೆ. ಚಿಕ್ಕಿ ನೋಡುತ್ತಾ ನಿದ್ರೆಗೆ ಜಾರುತ್ತಾರೆ. ಎಲ್ಲೋ ಮಧ್ಯರಾತ್ರಿ ಕಳೆದ ಮೇಲೆ ಸದ್ದಿಲ್ಲದೆ ಬೀಸುವ ತಣ್ಣಗಿನ ಗಾಳಿಯಲೆ ಆ ಬೆವೆತ ದೇಹಗಳಿಗೊಂದು ಸಮೀರ ಸ್ನಾನ ಮಾಡಿಸುತ್ತದೆ. ಜೀವ ಹಾಯೆನ್ನುತ್ತದೆ. ಮರುದಿನದ ರಣ ಬಿಸಿಲನ್ನೂ ದಿಕ್ಕರಿಸಿ ದುಡಿಯಬಲ್ಲ ಕಸುವನ್ನು ಬೆಂದ ದೇಹಕ್ಕೆ ನೀಡುತ್ತೆ. ಬೆಳಗಾಗುತ್ತಿದಂತೆಯೇ ಮತ್ತೇ ಬಿಸಿಲ ತಾಂಡವಕ್ಕೆ ಮೈಯ್ಯೊಡ್ಡುತ್ತದೆ!

ಇಂಥ ಮೂವತ್ತು ಬಿಸಿಲುಗಾಲಗಳನ್ನು ಬಳ್ಳಾರಿಯಲ್ಲಿ ಮೈಯ್ಯಾರೆ ಅನುಭವಿಸಿದ್ದೇನೆ. ಇಲ್ಲಿ, ಬೆಂಗಳೂರಿನಲ್ಲಿ ಕೃಷ್ಣರಾವ್ ರಸ್ತೆಯ ಸೊಂಟದ ಮೇಲೆ ಎಲೆಯೆಲ್ಲ ಉದುರಿ ಹೋಗಿ, ಮಾನಗೆಟ್ಟ ಮಂತ್ರಿಗಳಂತೆ ಬೋಳು ಮರಗಳು ನಿಂತಿರುವುದು ಕಂಡರೆ ಫಕ್ಕನೆ ಬಳ್ಳಾರಿ ನೆನಪಾಗುತ್ತದೆ'.[೨೦] ಹೀಗೆ ಸಾಗುತ್ತದೆ ರವಿಯವರ ಖಾಸ್‌ಬಾತ್ ಬರವಣಿಗೆ. ಸುತ್ತಲ ಪರಿಸರ, ವ್ಯಕ್ತಿ, ಘಟನೆಗಳನ್ನೆಲ್ಲ ಸುತ್ತುವರಿದು ಬದುಕಿನೊಳಕ್ಕೆ ಪ್ರವೇಶಿಸುತ್ತದೆ. ಆ ಮೂಲಕ ಇದು ಬದುಕಿನ ಕತೆಯ ಜೊತಗೆ ಸಾಮಾಜಿಕ ಪರಿಸರದ ವಿಷಯವನ್ನೊಳಗೊಂಡು ಸಾಹಿತ್ಯದ ಭಾಗವೂ ಆಗಿ ನಿಲ್ಲುತ್ತದೆ.

ಬದುಕು ಅರ್ಥಪೂರ್ಣವಾಗಬೇಕಾದರೆ ವಾಸ್ತವದ ಅರಿವಿರಬೇಕು. ಜೀವನದಲ್ಲಿ ಬಂದ ಕಷ್ಟ ನಷ್ಟಗಳನ್ನು ಧೈರ್ಯವಾಗಿ ಎದುರಿಸುವ ಮನೋದಾಷ್ಟ್ಯವಿರಬೇಕು. ಕಲ್ಪನೆ ಮಾಡಿಕೊಂಡಂತೆ ಎಂದೂ ಯಾರ ಜೀವನವೂ ಇರುವುದಿಲ್ಲ. ಅವುಗಳಿಗೆ ಎದರದೆ, ಧೈರ್ಯಗುಂದದೆ ಸ್ಥಿತ ಪ್ರಜ್ಞರಾಗಿದ್ದಾಗ ಮಾತ್ರ ಬಾಳಿನಲ್ಲಿ ಗುರಿ ತಲುಪಬಹುದು. ತಮ್ಮನ್ನು ತಾವು ಆತ್ಮಾವಲೋಕನ ಮಾಡಿಕೊಂಡು ಬದುಕಿ ಬರೆದ ರವಿ ಬೆಳಗೆರೆಯವರ ಆತ್ಮ ಕಥನದಲ್ಲಿ, ಕೇವಲ ಜೀವನ ಪಯಣದ ವಿವರಣೆ ಇಲ್ಲ. ಜೊತೆಗೆ ಜೀವನದ ಎಡರು ತೊಡರುಗಳು, ಅಸ್ತಿತ್ವದ ಹೋರಾಟಗಳು ಅದರಲ್ಲಿ ದಾಖಲೆಗೊಂಡಿವೆ. ಅವು ಜೀವನಕ್ಕೆ ಹೊಸ ತಿರುವನ್ನು ನೀಡುತ್ತವೆ ಹಾಗೂ ಓದುಗರಲ್ಲಿ ಆತ್ಮಸ್ಥೈರ್ಯವನ್ನು ಮೂಡಿಸುತ್ತವೆ. ಈ ದೃಷ್ಟಿಯಿಂದಾಗಿಯೇ ಕನ್ನಡ ಸಾಹಿತ್ಯದಲ್ಲಿ ಆತ್ಮ ಕಥನ ಒಂದು ಪ್ರಕಾರವಾಗಿ ಗುರುತಿಸಿಕೊಂಡಿದೆಯಲ್ಲದೆ ವಿಪುಲವಾಗಿ ಬೆಳೆದಿದೆ.

### ೩.೬. ಪ್ರವಾಸ ಕಥನಗಳು

'ದೇಶ ಸುತ್ತು ಕೋಶ ಓದು' ಎಂಬ ಜನಪ್ರಿಯವಾದ ಗಾದೆಮಾತೊಂದಿದೆ. ಸಾಮಾನ್ಯವಾಗಿ ಪ್ರವಾಸದ ಆಕರ್ಷಣೆಗೆ ಎಲ್ಲರೂ ಒಳಗಾಗುತ್ತಾರೆ. ಆಕರ್ಷಣೆಯ ಬೆನ್ನು ಬಿದ್ದು ಹೋದ ಮೇಲೆ ಏನನ್ನಾದರೂ ತರಲೇಬೇಕಲ್ಲ. ಅದು ವಸ್ತುರೂಪದಲ್ಲಿರಬಹುದು, ಆಲೋಚನೆಗಳ ರೂಪದಲ್ಲಿರಬಹುದು. ಅದರೊಟ್ಟಿಗೆ ತನ್ನ ನೆಲದ ಜನರಿಗೆ ತಮ್ಮ ಅನುಭವಗಳನ್ನು, ನೆನಪುಗಳನ್ನು ಹಂಚುವ ಕೆಲಸವೂ ಸಹ ನಡೆಯುತ್ತದೆ. ಕೆಲವರಿಗೆ ಹೇಳುವ ಕೌತುಕವಿದ್ದರೆ ಮತ್ತೆ ಕೆಲವರಿಗೆ ಬರೆಯುವ ಕಲೆಯಿರುತ್ತದೆ. ಈ ಹಿನ್ನೆಲೆಯಲ್ಲಿ ಪ್ರವಾಸ ಸಾಹಿತ್ಯದ ಒಂದು ಪ್ರಕಾರವೇ ಹುಟ್ಟಿಕೊಂಡದ್ದು ಐತಿಹಾಸಿಕ ಸತ್ಯ. ಪ್ರವಾಸ ಸಾಹಿತ್ಯದ ಹರವು ವಿಶಾಲವಾದುದು. ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಪ್ರಮುಖ ಪ್ರಕಾರವಾಗಿ ಬೆಳೆದು ಬಂದಿದೆ. ಇದರ ಪರಿಚಯ ಮಾಡಿಕೊಳ್ಳುವಾಗ ಸಿಗುವ '೧೮೮೦ರಲ್ಲಿ ಕರ್ಕಿವೆಂಕಟರಮಣ ಶಾಸ್ತ್ರಿಯವರು ರಚಿಸಿದ "ದಕ್ಷಿಣ ಭಾರತಯಾತ್ರೆ"[೩೧] ಎಂಬ ಪ್ರವಾಸ ಪುಸ್ತಕ ಕನ್ನಡದ ಮೊದಲನೆಯ ಪ್ರವಾಸ ಕಥನ ಕೃತಿಯೆಂದು ತಿಳಿದುಬರುತ್ತದೆ. ಆದರೆ ಕನ್ನಡ ನಾಡಿನಲ್ಲೇ ಮಹತ್ವದ ಸ್ಥಳನೋಡಿ ಭಾವಮಯ ಗದ್ಯದಲ್ಲಿ ಬರೆದವರು ವಿ.ಸೀತಾರಾಮಯ್ಯನವರು. ಅವರ ಪುಸ್ತಕ 'ಪಂಪಯಾತ್ರೆ'. ತಮ್ಮ ಸ್ನೇಹಿತರೊಡನೆ ಪಾಳು ಬಿದ್ದ ಹಂಪೆಗೆ ಬಂದು, ಅದನ್ನು ಕಂಡ ಅನುಭವ ಈ ಕೃತಿಯಲ್ಲಿದೆ. ಇನ್ನೂರೈವತ್ತು ವರ್ಷಗಳ ಹಿಂದಿನ ಹಂಪೆಗಿದ್ದ ವೈಭವವನ್ನು ಅದರ ಇಂದಿನ ಪಾಳುಬಿದ್ದ ಸ್ಥಿತಿಯನ್ನು ಲೇಖಕರು ಹೋಲಿಸಿ ನೋಡುತ್ತಾರೆ.

ಕಾಲದ ದೃಷ್ಟಿಯಿಂದ ಸುಮಾರು ಶತಮಾನಗಳಷ್ಟು ಹಿಂದಕ್ಕೆ ಹೋಗುವ ಪ್ರವಾಸ ಸಾಹಿತ್ಯವು ಉದ್ದೇಶ, ರೀತಿಗಳಲ್ಲಿ ಕಾಲಕಾಲಕ್ಕೆ ಬದಲಾಗುತ್ತ ಬಂದಿದೆ. ಪ್ರಾಕೃತಿಕ, ಧಾರ್ಮಿಕ, ಬೌದ್ಧಿಕ, ವಾಣಿಜ್ಯ ಮತ್ತು ಸಾಂಸ್ಕೃತಿಕ ಕಾರಣಗಳಿಂದಾಗಿ ಪ್ರವಾಸ ಸಾಹಿತ್ಯ ಬೆಳೆಯುತ್ತಾ ಬಂದಿದೆ. ೧೯ನೆಯ ಶತಮಾನದ ಉತ್ತರಾರ್ಧದ ಕೈಗಾರಿಕಾ ಕ್ರಾಂತಿಯಿಂದಾಗಿ ಜನರಿಗೆ ಸಿಕ್ಕಿದ ಸೌಲಭ್ಯಗಳು, ಬದಲಾದ ಜೀವನ ನಿರೀಕ್ಷೆ, ವೈಜ್ಞಾನಿಕ ತಾಂತ್ರಿಕ ಬೆಳವಣಿಗೆ ಇವೆಲ್ಲವುಗಳ ಹಿನ್ನೆಲೆಯಲ್ಲಿ ಪ್ರವಾಸೋದ್ಯಮ ಬೆಳವಣಿಗೆಯನ್ನು ಕಂಡಿತು. ಕೆಲವು ಸಮಾಜ, ದೇಶಗಳಲ್ಲಿ ಪ್ರವಾಸವು ಜೀವನದ ಒಂದು ಭಾಗವೇ ಆಗಿದೆ. ಪ್ರವಾಸ ಸಾಹಿತ್ಯದ ಬೆಳವಣಿಗೆಯು ಪ್ರಧಾನವಾಗಿ ಪ್ರವಾಸ ಸಾಹಿತಿಗಳ ಸೃಜನಶೀಲತೆಯನ್ನು ಅವಲಂಭಿಸಿದೆಯಾದರೂ ಪ್ರವಾಸ ಸಾಧ್ಯತೆಗಳ ಭೌತಿಕ ಪರಿಸರವೂ ಒಂದು ಪ್ರಾಥಮಿಕ ಅಗತ್ಯವಾಗಿದೆ ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಪ್ರವಾಸ ಸಾಹಿತ್ಯದ ಪ್ರಸ್ತುತತೆ ಅಥವಾ ಮಹತ್ವವು ಇಮ್ಮುಖವಾದುದು. ಒಂದು ಸಾಹಿತ್ಯ ಕೃತಿಯಾಗಿಯೂ ಪ್ರವಾಸ ಸಾಹಿತ್ಯ ಕೃತಿಗೆ ಮಹತ್ವವಿದೆ. ಎಲ್ಲ ಪ್ರವಾಸ ಸಾಹಿತ್ಯ ಕೃತಿಗಳಲ್ಲೂ ಸಾಹಿತ್ಯಾಂಶ ಅಥವಾ ಕಲಾತ್ಮಕತೆ ಪ್ರಧಾನವಾಗಿರುವುದಿಲ್ಲ. ಆಯಾ ಲೇಖಕರ ಸಾಹಿತ್ಯ ಶಕ್ತಿಯನ್ನು ಅದು ಅವಲಂಭಿಸಿರುತ್ತದೆ. ಈ ಸಾಹಿತ್ಯದ ಮತ್ತೊಂದು ಮುಖ ಸಂಸ್ಕೃತಿ ಸಂವೇದನೆಯಲ್ಲಿನ ಅದರ ಪಾತ್ರ ದೊಡ್ಡದು, ಒಂದು ದೇಶದ ಸಾಂಸ್ಕೃತಿಕ ಪುನರ್ರಚನೆಯ ಸಂದರ್ಭದಲ್ಲಂತೂ ಪ್ರವಾಸ ಸಾಹಿತ್ಯದ ಅಗತ್ಯ ಒಂದು ತುರ್ತಿನ ಅಗತ್ಯವೆಂದು ಕಾಣುತ್ತದೆ. ಈ ಸಂದರ್ಭದಲ್ಲಿ ಅಗತ್ಯವಾದ ಒಂದು ಸಂಸ್ಕೃತಿಯ ಅಂತರ್ನಿರೀಕ್ಷಣೆ ತೀಕ್ಷ್ಣವಾಗಿ ನಡೆಯುವುದು ಸಂಸ್ಕೃತಿಗಳ ಮುಖಾಮುಖಿಯಲ್ಲಿ. ಆಳವಾದ ಒಳನೋಟ, ಎರಡು ಸಂಸ್ಕೃತಿಗಳ ಗಾಢವಾದ ತಿಳವಳಿಕೆ ಇದ್ದು ಸೂಕ್ಷ್ಮವಾಗಿ ಮತ್ತು ಸಾಮಾಜಿಕವಾಗಿ ಮತ್ತೊಂದು ಸಂಸ್ಕೃತಿಯನ್ನು ನೋಡುವಂಥ ಪ್ರವಾಸ ಸಾಹಿತ್ಯ ಫಲಪ್ರಧವಾಗುತ್ತದೆ.

ಮಾದರಿಯಂತೆ ನೋಡಿದಾಗ ವಿನಾಶಕ್ಕೊಳಗಾಗಿಯೂ ವೇಗವಾಗಿ, ಬಲಿಷ್ಠವಾಗಿ ಮೇಲೆಳುವ ಜರ್ಮನಿ, ಜಪಾನ್‌ಗಳನ್ನು ಕಾಣುವಾಗ ಅಂಥ ವಿನಾಶಕ್ಕೆ ಒಳಗಾಗದ್ದರೂ ಭಾರತವೇಕೆ ಹೀಗೆ ಎಂದು ಕಾಡುವ ಪ್ರಶ್ನೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಮತ್ತೊಂದು ಇತಿಹಾಸ, ಜೀವನ ಸ್ವರೂಪ, ಕಲೆ, ವಿಚಾರ, ಸಾಧನೆ ಮತ್ತು ಸಂಸ್ಕೃತಿ ಎತ್ತರದ ಮುಂದೆ ನಿಂತಾಗ ನಮ್ಮ ಪ್ರಜ್ಞೆಯು ಯಾವುದಾದರೂ ಪ್ರಮಾಣ ಮತ್ತು ಎತ್ತರದಲ್ಲಿ ವಿಸ್ತರಿಸುತ್ತ ಅರಳುತ್ತದೆ. ಸಾಹಿತ್ಯದ ಪರಮ ಪ್ರಯೋಜನವಾದ ಈ ಹಿಗ್ಗುವಿಕೆ ಅಥವಾ ಅರಳುವಿಕೆಯನ್ನು ಪ್ರವಾಸ ಸಾಹಿತ್ಯವೂ ಮಾಡಬಲ್ಲದು; ಕೊಡಬಲ್ಲದು. ಈ ದೃಷ್ಟಿಯಿಂದ ರವಿ ಬೆಳಗೆರೆಯವರು ಬರೆದ ಪ್ರವಾಸ ಕೃತಿಗಳನ್ನು ಗಮನಿಸುವುದು ಅವಶ್ಯವೆನಿಸುತ್ತದೆ. ಅವರು ಎರಡು ಪ್ರವಾಸ ಕಥನಗಳನ್ನು ಬರೆದಿದ್ದಾರೆ. ಒಂದು ಯುದ್ಧ ಭೂಮಿಯ ವರದಿಯನ್ನು ನೀಡುವ 'ಕಾರ್ಗಿಲ್‌ನಲ್ಲಿ ಹದಿನೇಳು ದಿನ' ಮತ್ತೊಂದು 'ಮುಸ್ಲಿಂ' ಎಂಬ ಕೃತಿ. ಇದು ಅಫಘನಿಸ್ತಾನ ಅಲ್ಲಿನ ಭಯೋತ್ಪಾದನೆ, ಉಗ್ರವಾದ, ಧರ್ಮದ ವಿಷಯಗಳ ಬಗ್ಗೆ ನೀಡುತ್ತದೆ. ಅಲ್ಲದೆ ಇವಕ್ಕೂ ಮುಂಚೆ ಅರುಣಾಚಲ ಪ್ರದೇಶದಿಂದ ಹಿಂತಿರುಗಿದ ಮೇಲೆ 'ಮಹಾಸ್ವಪ್ನ' ಎಂಬ ಹೆಸರಿನಿಂದ 'ಹಿಮಗರ್ಭದಲ್ಲಿ' ಅಂತ ಒಂದು ಪ್ರವಾಸ ಕಥನ ಬರೆದರು. ಅದು ವಾರ ಪತ್ರಿಕೆಯೊಂದರಲ್ಲಿ(ಕರ್ಮವೀರ) ಧಾರಾವಾಹಿಯಾಗಿ ಪ್ರಕಟವಾಯಿತೇ ಹೊರತು ಪುಸ್ತಕ ರೂಪದಲ್ಲಿ ಬರಲಿಲ್ಲ.

ಒಬ್ಬ ಪತ್ರಕರ್ತನಾಗಿ ಯುದ್ಧದಂತಹ ಒಂದು ಮಾನವ ನಿರ್ಮಿತ ಅನ್ಯಾಯ, ಅನಾಹುತವನ್ನು ಎಂದಿಗಾದರೂ ಸೈನಿಕರ ಸಾವು, ನೋವು, ಆಕ್ರಂದನಗಳನ್ನು ಮನಸತ್ವವಿರುವ ಯಾರಿಂದಲೂ ಮರೆಯಲು ಸಾಧ್ಯವಿಲ್ಲ. ಪತ್ರಿಕೆಯ ವಿಷಯಕ್ಕೆ ಸಂಬಂಧಿಸಿದಂತೆ ರವಿಯರವರಿಗೆ ಕಾರ್ಗಿಲ್ ಯಾತ್ರೆ ದೊಡ್ಡ ಖ್ಯಾತಿಯನ್ನು ತಂದಿತು ಅನ್ನುವವರಿದ್ದಾರೆ. ಅದು ಹೌದೋ ಅಲ್ಲವೊ ಆ ವಿಷಯ ಬೇರೆ. ಆದರೆ ಒಂದು ಕಡೆ ರವಿಯವರೆ ಹೇಳಿಕೊಳ್ಳುತ್ತಾರೆ. ವೈಯಕ್ತಿಕವಾಗಿ ನನ್ನ ಬದುಕಿಗೆ, ಚಿಂತನೆಗೆ ಮತ್ತು ನನ್ನ ವರ್ತನೆಗೆ ಖಚಿತವಾಗಿಯೂ ಒಂದು ತಿರುವು ನೀಡಿದ್ದು ಕಾರ್ಗಿಲ್ ಎಂದು. ತುಂಬ ಸುಖದ ದಿನಗಳಲ್ಲಿ ಒಬ್ಬ ಮನುಷ್ಯ ಅರಿತುಕೊಳ್ಳಲಾಗದ ಸತ್ಯಗಳು ಅವನಿಗೆ ಯುದ್ಧ ಭೂಮಿಯಂತಹ ಕಣ್ಣೆದುರಿನ ನರಕಗಳಲ್ಲಿ ಅರ್ಥವಾಗಿ ಬಿಡುತ್ತವಂತೆ. ಬಹುಶಃ ಅದು ನಿಜವಿರಬಹುದು. ಅದಕ್ಕೆ ನಮ್ಮ ಬುದ್ಧ ಸಾಕ್ಷಿಯಾಗಿ ಕಾಣುತ್ತಾನೆ.

ಯುದ್ಧದ ವರದಿಯನ್ನು ಆಧರಿಸಿದ ಈ ಕೃತಿ ಹಾಯ್ ಬೆಂಗಳೂರ್ ಪತ್ರಿಕೆಯಲ್ಲಿ ಪ್ರಕಟವಾಗಿ ಪುಸ್ತಕ ರೂಪಕ್ಕೆ ಬಂದಿದೆ. ಆ ಕೃತಿಯ ಒಳ ವಿಷಯಗಳನ್ನೆಲ್ಲ ಅಡಕಗೊಳಿಸಿರುವುದು ಅದರ ಅರ್ಪಣೆಯಲ್ಲಿ. 'ಯುದ್ಧಕ್ಕೆ ಹೋದ ಮಗ ಗೆದ್ದು ಬರಲಿ ಅಂತ ಹಾರೈಸಿ ಅವನಿಗಾಗಿ ಕಾಯುತ್ತ ಹೊಸ್ತಿಲ ಬಳಿ ಕುಳಿತೇ ಇದ್ದಾಳಲ್ಲ? ಆ ಅಮಾಯಕ ತಾಯಿಗೆ ಮತ್ತು ಸತ್ಯ ಗೊತ್ತಾದ ಮೇಲೆ ಒಳ ಮನೆಯಲ್ಲಿ ಒಬ್ಬಳೇ ಬಿಕ್ಕುತ್ತಿದ್ದಾಳಲ್ಲ? ಆ ಹೆಣ್ಣು ಮಗಳಿಗೆ ಈ ಪುಸ್ತಕ ಅರ್ಪಿತ' ಎಷ್ಟು ಅರ್ಥಗರ್ಭಿತ; ಭಾವ ತುಂಬಿದ ಸಾಲುಗಳಿವು. ದೇಶಕ್ಕಾಗಿಯೇ ತಾಯಿ ಮಗನನ್ನು, ಹೆಂಡತಿ ಗಂಡನನ್ನು ಕಳಿಸುವಂತಹ ಹೆಮ್ಮೆಯ ದೇಶಾಭಿಮಾನದ ದಿನಗಳವು. ಅಂದಿನ ಯುದ್ಧ ಪರಿಸ್ಥಿತಿ ಪರಿಣಾಮ ಇತ್ಯಾದಿ ಅನೇಕ ಅಂಶಗಳ ಮಾಹಿತಿಯನ್ನು ಈ ಕೃತಿ ನೀಡುತ್ತದೆ.

ಅನುಭವ, ಸುದ್ದಿ, ತೊಂದರೆಗಳ ಹೊರತಾಗಿ ಮತ್ತೇನನ್ನು ತರಲು ಸಾಧ್ಯವಿಲ್ಲದ ಅಫಘಾನಿಸ್ತಾನ ದೇಶದ ಇಡೀ ಮತಾಂಧ ಮುಸ್ಲಿಂ ಮೂಲಭೂತವಾದದ ಪರಿಣಾಮವನ್ನು ಅರ್ಥ

ಮಾಡಿಕೊಳ್ಳಬೇಕೆಂದರೆ, ಅಫಘಾನಿಸ್ತಾನದ ಚರಿತ್ರೆ ಮತ್ತು ವರ್ತಮಾನಗಳನ್ನು ಅರಿತುಕೊಳ್ಳುವುದು ಅವಶ್ಯ. ಅದು ಮತಾಂಧ ಚಳವಳಿಯ ಒಟ್ಟು ಪರಿಣಾಮಗಳಿಗೆ ಹಿಡಿದ ಕನ್ನಡಿ. ಹೀಗಾಗಿ ಮುಸ್ಲಿಂ ಕೃತಿಯ ಆರಂಭಿಕ ಪುಟಗಳಲ್ಲಿ ಅಫಘಾನಿಸ್ತಾನದ ಇತಿಹಾಸವನ್ನು ಆದಷ್ಟು ಸಂಕ್ಷಿಪ್ತವಾಗಿ ಹೇಳಲಾಗಿದೆ. ಅದಾದ ಮೇಲೆ 'ಮುಸ್ಲಿಂ ಬ್ರದರ್‌ಹುಡ್' ಹುಟ್ಟಿಕೊಂಡ ರೀತಿ ಮತ್ತು ಈಜಿಪ್ಟ್‌ನಲ್ಲಿ ಹುಟ್ಟಿ ಇಡೀ ಜಗತ್ತಿಗೆ ವಿಸ್ತರಿಸಿದ ರೀತಿ ಯಾವ ತರಹದ್ದು ಎಂಬುದನ್ನು ವಿವರಿಸಲಾಗಿದೆ. ಪಾನ್ ಇಸ್ಲಾಮಿಕ್ ಸಂಘಟನೆಗಳ ಕುರಿತು ವ್ಯಾಪಕವಾಗಿ ಚರ್ಚಿಸಲಾಗಿದೆ. ಒಸಾಮ ಬಿನ್ ಲಾಡೆನ್ ಎಂಬ ವ್ಯಕ್ತಿಗಾಗಿಯೇ ಒಂದು ಅಧ್ಯಾಯವನ್ನು ಬರೆಯಲಾಗಿದೆ. ಕೃತಿಯುದ್ದಕ್ಕೂ ಅವಶ್ಯವೆನಿಸಿದ ಕಡೆಯಲ್ಲೆಲ್ಲ ರವಿಯವರು ತಮ್ಮ ಅಫಘಾನಿಸ್ತಾನದ ಅನುಭವಗಳ ಸಮೇತ ಕಾಣಿಸಿಕೊಳ್ಳುತ್ತಾರೆ. ಈ ಕೃತಿಯ ರಚನೆಗೆ ನೆರವು ನೀಡಿದ ಕೃತಿಗಳ ಪಟ್ಟಿ, ತೆಗೆದ ಫೋಟೋಗಳನ್ನು ಪ್ರಕಟಿಸಿದ್ದಾರೆ. ಇದೇ ಕೃತಿಗೆ ಸಂಬಂಧಿಸಿದಂತೆ 'ಚಂಪಾಂಕಣ' ಕೃತಿಯ ಒಂದು ಲೇಖನದಲ್ಲಿ ಚಂದ್ರಶೇಖರ್ ಪಾಟೀಲರು ಹೀಗೆ ಬರೆಯುತ್ತಾರೆ.

'ಬೇರೆ ದೇಶಗಳ ಪತ್ರಕರ್ತರ ತಂಡದೊಂದಿಗೆ ಯುದ್ಧ ವರದಿಗಾಗಿ ತೆರಳಿದ್ದ ರವಿ ಬರೆದ, ೨೮೦ ಪುಟಗಳ ಪುಸ್ತಕ 'ಮುಸ್ಲಿಂ' ಆಕರ್ಷಕವಾಗಿ ಮುದ್ರಣಗೊಂಡಿದೆ. ಈ ಕೃತಿಯ ಮುಖ್ಯ ಭಾಗವೆಂದರೆ, ಹತ್ತು ಆಕರ ಗ್ರಂಥಗಳಿಂದ(ಇವುಗಳಲ್ಲಿ ಒಂಭತ್ತು ಲೇಖಕರು ಪಾಶ್ಚಿಮಾತ್ಯರು ಮತ್ತು ಮುಸ್ಲಿಮೇತರರು) ಮಾಹಿತಿಯನ್ನು ಕ್ರೋಢೀಕರಿಸಿ ಪಾನ್ ಇಸ್ಲಾಮಿಕ್ ಬ್ರದರ್‌ಹುಡ್ ಎಂಬ ಜಾಗತಿಕ ವಿದ್ಯಾಮಾನದ ಇತಿಹಾಸ ಸೆಪ್ಟೆಂಬರ್ ೧೧ ಮತ್ತು ಅನಂತರದ ಘಟನೆಗಳಿಗೆ ಈ ಇತಿಹಾಸ ಸರಿಯಾದ ಹಿನ್ನೆಲೆ ಒದಗಿಸಿದೆ. ಇನ್ನೊಂದು ಆಯಾಮ: ಯುದ್ಧ ವರದಿಗಳ ಜೊತೆಗೆ ಸಂಪರ್ಕಕ್ಕೆ ಬಂದ ಮುಸ್ಲಿಂ ಸಮುದಾಯದ ಮನಸ್ಸುಗಳ ಅನಾವರಣ ಮತ್ತು ಮಾನವೀಯ ಸಂಬಂಧಗಳ ಅಪರೂಪದ ವರ್ಣನೆಗಳು. ರವಿ ಬೆಳಗೆರೆ ತನ್ನ ಮಾಮೂಲಿ ಸಿನಿಮೀಯ ತಂತ್ರಗಳನ್ನು ಅತಿಯಾಗಿ ಬಳಸುವ ಶೈಲಿಯಿಂದಾಗಿ ಹಾಯ್ ಬೆಂಗಳೂರ್‌ನ ವಾರದ ಸಂಚಿಕೆಯನ್ನು ಓದುವ ಹಾಗೆ ಈ ಪುಸ್ತಕವನ್ನೂ ಓದಿ ಬದಿಗೆ ಇಡಬಹುದು. ಜೊತೆ ಜೊತೆಗೆ ವಿಭಿನ್ನ ವಾದಗಳನ್ನು ಬೇರೆ ಬೇರೆ ಪಾತ್ರಗಳ ಮೂಲಕ ಮಂಡಿಸುವ ನಾಟಕೀಯ ತಂತ್ರದ ಪ್ರಯೋಗವೂ ಇಲ್ಲಿದೆ'[೩೨] ಎಂದು ಬರೆಯುತ್ತಾರೆ.

ಸಮಕಾಲೀನ ಸಂದರ್ಭದಲ್ಲಿ ಇಂಥ ಸೂಕ್ಷ್ಮ ವಿಷಯಗಳ ಬಗ್ಗೆ ಬರೆಯುವ ಲೇಖಕನ ಶೈಲಿ, ವಿನ್ಯಾಸ ಮುಂತಾದವುಗಳಿಗಿಂತ ಆತನ ದೃಷ್ಟಿಕೋನ, ಮನೋಧರ್ಮ, ಉದ್ದೇಶ ಇವೇ ಮುಖ್ಯವಾಗುತ್ತವೆ. ಇನ್ನುಳಿದ 'ಹಿಮಗರ್ಭದಲ್ಲಿ' ಪ್ರವಾಸಕಥನ ಪತ್ರಿಕೆಯಲ್ಲಿ ಧಾರವಾಹಿಯಾಗಿ ಪ್ರಕಟವಾಗಿದೆ. ಕೃತಿಯಾಗಿ ಅದು ಹೊರಬಂದಿಲ್ಲ ಆ ಕಾರಣದಿಂದಾಗಿ ಅದನ್ನು ಇಲ್ಲಿ ಪ್ರಸ್ತಾಪಿಸಿಲ್ಲ.

ಹೀಗೆ ಪ್ರವಾಸ ಸಾಹಿತ್ಯವು ಸಾಮಾಜಿಕ ಅಧ್ಯಯನದಿಂದ ಒಂದು ಸಾಂಸ್ಕೃತಿಕ, ಧಾರ್ಮಿಕ ಅಧ್ಯಯನವಾಗಿ ವಿಸ್ತರಿಸುವುದು ಕಾಣಬಹುದಾಗಿದೆ. ಸಾಹಿತಿಯಲ್ಲಿ ಇರುವ ಎಲ್ಲಾ ವಿಶೇಷ ಗುಣಗಳಂತೆ ಪ್ರವಾಸ ಕಥನಗಾರನಿಗೂ ಇರಬೇಕಾಗುತ್ತದೆ. ಜಗತ್ತಿನ ವಿಶಾಲತೆ, ವೈವಿಧ್ಯತೆ, ವರ್ಣಮಯತೆ, ಸಮೃದ್ಧಿಯಾದ ವಿಚಾರಶೀಲತೆ ಪ್ರವಾಸ ಸಾಹಿತ್ಯದಿಂದ ತಿಳಿದುಬರುತ್ತದೆ. ಅಲ್ಲದೆ ನಮ್ಮ ಸಂಕುಚಿತ ಸ್ವಭಾವದ ಅಹಂಕಾರ ಭಂಗಕ್ಕೆ ಒಂದು ಉತ್ತಮವಾದ ಸಾಹಿತ್ಯ ಪ್ರಕಾರ ಪ್ರವಾಸ ಕಥನ ಎಂದು ಹೇಳಬಹುದು.

### ೩.೭ ದೇಶ, ಇತಿಹಾಸ, ಯುದ್ಧ ಮತ್ತು ಅನುವಾದಗಳು

ಮಾನವನ ಬದುಕು ನಿಂತ ನೀರಲ್ಲ, ಅದು ವಿಕಾಸಶೀಲವಾದುದು. ಬದುಕು ಬೆಳೆದಂತೆ, ಬದಲಿಸಿದಂತೆ ಅದರ ಅಭಿವ್ಯಕ್ತಿಯಾದ ಸಾಹಿತ್ಯ ಅನಿವಾರ್ಯವಾಗಿ ಬೆಳೆಯುತ್ತದೆ. ಹೊಸತನವನ್ನು ಅಳವಡಿಸಿಕೊಳ್ಳುತ್ತದೆ. ಹೀಗಾಗಿ ಯಾವುದೇ ಸಾಹಿತ್ಯದ ಚರಿತ್ರೆ ನಿರಂತರವಾದ ಕ್ರಾಂತಿ ಚಳುವಳಿಗಳ, ಪ್ರಯೋಗಗಳ ಕಥೆಯೇ ಆಗಿರುತ್ತದೆ. ಕನ್ನಡ ಈ ಮಾತಿಗೆ ಅಪವಾದವಲ್ಲ. ಕನ್ನಡ ಸಾಹಿತ್ಯದ ಉದ್ದಕ್ಕೂ ಪರಂಪರೆಯ ನೆಲೆಗಟ್ಟಿನ ಮೇಲೆ ನಿಂತೇ ಹೊಸತನವನ್ನು ಸ್ವಾಗತಿಸುತ್ತ, ಅರಸುತ್ತಾ, ಅರಗಿಸಿಕೊಳ್ಳುತ್ತ ಸಮನ್ವಯದ ಹಾದಿಯಲ್ಲಿ ಸಾಗಿ ಬಂದಿದೆ. ಇದರಲ್ಲಿ ಅನುವಾದವು ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

ಕನ್ನಡ ಸಾಹಿತ್ಯ ಎಷ್ಟು ಶ್ರೀಮಂತವಾದುದುದೋ, ಕನ್ನಡ ಅನುವಾದ ಸಾಹಿತ್ಯವೂ ಅಷ್ಟೇ ಶ್ರೀಮಂತವಾದುದು ಹಾಗೂ ವೈವಿಧ್ಯಮವಾದುದು. ಪ್ರಪಂಚದ ಹಲವು ಭಾಷೆಗಳಿಂದ ನೇರವಾಗಿ ಹಾಗೂ ದ್ವಿತೀಯ ಮೂಲಗಳಿಂದ ಸಾಹಿತ್ಯ ಕೃತಿಗಳು ಮಾತ್ರವಲ್ಲದೆ ಸಾಹಿತ್ಯೇತರ ಕೃತಿಗಳ ಹೇರಳವಾದ ಸಂಖ್ಯೆಯಲ್ಲಿ ಕನ್ನಡಕ್ಕೆ ಬಂದಿವೆ. ಬಹುಶಃ ಈ ದಿಸೆಯಲ್ಲಿ ಕನ್ನಡದಷ್ಟು ಸಮೃದ್ಧವಾದ ಮತ್ತೊಂದು ಭಾರತೀಯ ಭಾಷೆಯಿಲ್ಲ ಎಂದು ಹೇಳಿದ್ದರೆ ಅದು ಅತಿಶಯೋಕ್ತಿಯೇನು ಆಗಲಾರದು. ಆ ಹಿನ್ನೆಲೆಯಲ್ಲಿ ಅನುವಾದವೂ ಸಾಹಿತ್ಯ ಕ್ಷೇತ್ರದ ಒಂದು ಮಹತ್ವಪೂರ್ಣ ಚಟುವಟಿಕೆ. ತನ್ನ ಸೀಮಿತವೋ, ಅಮಿತವೋ ಆದಂಥ ಪ್ರಭಾವ, ಪರಿಣಾಮಗಳ ಫಲವಾಗಿ ಸಾಹಿತ್ಯ ಚರಿತ್ರೆಯಲ್ಲಿ ಉಚಿತ ಸ್ಥಾನಮಾನಗಳನ್ನು ಗಳಿಸುವುದರ ಜೊತೆಗೆ ಅನುವಾದಗಳು ಹಾಗೂ ಅನುವಾದಕರು ಸ್ವತಃ ಚರಿತ್ರೆಯನ್ನೇ ನಿರ್ಮಿಸಿದುಂಟು. ಈ ಅನುವಾದ ಪ್ರಕ್ರಿಯೆಯನ್ನು ಹಲವು ವಿದ್ವಾಂಸರು ಅನೇಕ ರೀತಿಯಲ್ಲಿ ವ್ಯಾಖ್ಯಾನಿಸಿ ವಿಂಗಡಿಸಿದ್ದಾರೆ. 'ನಿಜವಾದ ಭಾಷಾಂತರದ ಬಗ್ಗೆ ವಿದ್ವಾಂಸರು ನೀಡಿರುವ ವಿವರಣೆಯನ್ನೇ ಮಾನದಂಡವನ್ನಾಗಿ ಇಟ್ಟುಕೊಂಡು ನೋಡಿದಾಗ, ಆ ನಿಯಮಗಳಿಗೆ ಅನುಸಾರವಾದ ಭಾಷಾಂತರ ಸಿಗುವುದೇ ವಿರಳ. ಭಾಷಾಂತರಕಾರರು ಸ್ವಾತಂತ್ರ್ಯ ವಹಿಸಿ ಒಂದೊಂದು ತೆರನಾಗಿ ಭಾಷಾಂತರ ಮಾಡಿರುವುದು ಸ್ಪಷ್ಟವಾಗಿ ಗೋಚರವಾಗುವುದು. ಅವು ಮೂಲಕ್ಕಿಂತಲೂ ಯಾವುದೇ ರೀತಿಯಲ್ಲಿ ಭಿನ್ನಾವಾಗಿದ್ದರೂ ಅವುಗಳನ್ನೇ ಒಂದೊಂದು ವಿಶಿಷ್ಟ ಪ್ರಕಾರಗಳೆಂದು ಪರಿಗಣಿಸಿರುವರು. ಈ ಎಲ್ಲಾ ವಿಶಿಷ್ಟ ಪ್ರಕಾರಗಳೂ ಒಂದೊಂದು ಉದ್ದೇಶವನ್ನು ಹೊಂದಿವೆ. ಇವುಗಳಲ್ಲೆಲ್ಲಾ ಭಾಷಾಂತರಕಾರರು ಮೂಲಕರ್ತೃವಿನ ಅನುಭವದೊಂದಿಗೆ ತಮ್ಮ ಸ್ವಂತ ಅನುಭವನ್ನೂ ಸೇರಿಸಿ ತಮ್ಮ ತನವನ್ನು ಮೆರೆದಿರುವುದು ಕಾಣಬರುತ್ತದೆ. ಈ ದೃಷ್ಟಿಯಿಂದ ನೋಡಿದರೆ ಶುದ್ಧ ಭಾಷಾಂತರವನ್ನು ಹುಡುಕುವುದೇ ವ್ಯರ್ಥವೆನಿಸುತ್ತದೆ. ವಿವಿಧ ರೀತಿಯ ಭಾಷಾಂತರಗಳೇ ಹೇರಳವಾಗಿ ಸಿಗುತ್ತವೆ. ಇವುಗಳಲ್ಲಿ ಯಾವುದೇ ಒಂದು ಪ್ರಕಾರ ಉತ್ತಮವಾಗಿರುವುದೆಂದು ನಿರ್ಣಯಿಸುವುದು ಕಷ್ಟ ಪ್ರತಿಯೊಂದು ತನ್ನದೇ ಆದ ದೃಷ್ಟಿಯಿಂದ ಉತ್ತಮವಾಗಿರುವುದು ಮಾತ್ರವಲ್ಲದೆ ಉಪಯುಕ್ತವಾಗಿ ಪರಣಮಿಸಿದೆ ಎನ್ನಬಹುದು'.[೩೩]

ಅಲ್ಲದೆ 'ಅನುವಾದವನ್ನು ಸೃಜನಶೀಲ ಮತ್ತು ಸೃಜನೇತರ ಎಂದು ವಿಂಗಡಿಸುವುದು ಸರಿಯಲ್ಲ. ಏಕೆಂದರೆ ಪ್ರತಿಯೊಂದು ಕಾರ್ಯವೂ ಸೃಜನಶೀಲವೆಂದು ಪರಿಗಣಿಸಬೇಕಾದ್ದು ಸೂಕ್ತ'[೩೪] ಅದು ಏನೇ ಇರಲಿ, ಅನುವಾದ ಕೃತಿಗಳು ಕನ್ನಡದ ಸಂದರ್ಭದಲ್ಲಿ ವಿಭಿನ್ನ, ಸಾಂಸ್ಕೃತಿಕ ಲೋಕವನ್ನು ಅನಾವರಣಗೊಳಿಸಿವೆ. ಹೊಸ ನೆಲೆಯ ಓದುಗರನ್ನು ಸೃಷ್ಟಿ ಮಾಡುತ್ತಲಿವೆ. ಇಲ್ಲಿ ಸೃಜನಶೀಲ

ಮತ್ತು ಸೃಜನೇತರ ಎಂದು ವಿಂಗಡಿಸುವುದು ಸರಿಯಿಲ್ಲದಿದ್ದರೂ ಅವರೆಡೂ ಕ್ಷೇತ್ರಗಳಲ್ಲಿ ಅನುವಾದ ಕ್ರಿಯೆ ನಡೆದಿದೆ, ನಡೆಯುತ್ತಲೂ ಇದೆ. ಹೀಗಿರುವಾಗ ಅಧ್ಯಯನದ ಅನುಕೂಲಕ್ಕಾದರೂ ಈ ವಿಂಗಡನೆ ಅನಿವಾರ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿಯೇ ರವಿ ಬೆಳಗೆರೆಯವರು ಇತರ ಭಾಷೆಯಿಂದ ಕನ್ನಡಕ್ಕೆ ತಂದ ಕೃತಿಗಳನ್ನು ನೋಡಬೇಕು. ಅವರು ಸೃಜನಶೀಲ ಮತ್ತು ಸೃಜನೇತರ ಕೃತಿಗಳನ್ನು ತಂದಿದ್ದಾರೆ. ಸೃಜನಶೀಲದಲ್ಲಿ ಕಾದಂಬರಿ ಮತ್ತು ಸೃಜನೇತರದಲ್ಲಿ ದೇಶ, ಯುದ್ಧ, ಇತಿಹಾಸಕ್ಕೆ ಸಂಬಂಧಿಸಿದವುಗಳು ಎಂಬುದಾಗಿ ಗಮನಿಸಬಹುದು. ಕಾದಂಬರಿಗಳನ್ನು ಈಗಾಗಲೇ ಕಾದಂಬರಿ ಭಾಗದಲ್ಲಿ ಗಮನಿಸಲಾಗಿದೆ. ಇಲ್ಲಿ ಕೇವಲ ಸೃಜನೇತರ ಭಾಗದ ಕೃತಿಗಳನ್ನಷ್ಟೆ ಗಮನಿಸಲಾಗಿದೆ.

ರವಿಯವರ ಅನುವಾದ ಕೃತಿಗಳನ್ನು ಗಮನಿಸಿದಾಗ ಒಂದು ರೀತಿಯಲ್ಲಿ ಪುನರ್ಲೇಖನವೆಂದು ಹೇಳಬಹುದು. ಕಾದಂಬರಿಗಳನ್ನು ಕನ್ನಡದ ನೆಲಕ್ಕೆ ಒಗ್ಗುವಂತೆ ಇಲ್ಲಿನ ದೇಶಿಯತೆಯನ್ನು ಮೈಗೂಡಿಸಿಕೊಂಡು ಬೆಳೆದು ನಿಂತಿವೆ(ಅದಕ್ಕೆ ಉದಾಹರಣೆ ಮಾಂಡೋವಿ). ಇತರ ವಿಷಯಗಳಾದ ದೇಶ, ಯುದ್ಧ, ಇತಿಹಾಸಕ್ಕೆ ಸಂಬಂಧಿಸಿದ ಅಂಶಗಳಲ್ಲೂ ಅಷ್ಟೇ, ಅದು ಒಂದು ಸ್ವತಂತ್ರ ಕೃತಿಯೇನೊ ಎಂಬಂತೆ ಕನ್ನಡಿಗರಿಗೆ ಪರಿಚಯಿಸಿಕೊಟ್ಟಿದ್ದಾರೆ. ವಿಷಯದಲ್ಲಿ ಏನೂ ವ್ಯತ್ಯಯವಾಗದಂತೆ ಅವರ ನಿರೂಪಣಾ ಶೈಲಿ ಇದೆಯಲ್ಲ ಅದು ಮಾತ್ರ ಅನುವಾದಕನ ಬರವಣಿಗೆಯಂತಿರದೇ ಒಬ್ಬ ಸ್ವತಂತ್ರ ಬರಹಗಾರನ ಬರವಣಿಗೆ ಎಂಬಂತೆ ತರ್ಜುಮೆ ಮಾಡುತ್ತಾರೆ. ಅದು ಏನೇ ಇರಲಿ ಇತರ ಭಾಷೆಯಿಂದ ಕನ್ನಡಕ್ಕೆ ಅವರು ತಂದ ಕೃತಿಗಳ ವಿಷಯ, ಮಹತ್ವದ ಬಗೆಗೆ ಪರಿಚಯಾತ್ಮಕ ಗಮನ ಕೊಡುವುದು ಈ ಭಾಗದ ಉದ್ದೇಶ.

ತಾಪಿ ಧರ್ಮಾರಾವ್ ಅವರ 'ಪೆಳ್ಳಿ ದಾನಿ ಪುಟ್ಟು ಪೂರ್ವೋತ್ತರಾಲು' ಎಂಬ ಕೃತಿಯನ್ನು 'ವಿವಾಹ ಹುಟ್ಟು ಮತ್ತು ಪೂರ್ವೋತ್ತರ' ಎಂಬುದಾಗಿ ೧೯೮೩ರಲ್ಲಿ ಅನುವಾದಿಸಿದ್ದಾರೆ. ಇದೊಂದು ರೀತಿಯ ಪ್ರವಾಹದೆದುರು ಈಜಾಟ. ತಲೆಗಳಲ್ಲಿ ಹೂತುಕೊಂಡ ವಿಷಯಗಳಿಗೆ ವಿರುದ್ಧವಾದುದು. ಮಾನವ ಸೃಷ್ಠಿ ನಿನ್ನೆ ಮೊನ್ನೆಯದಲ್ಲ. ಆದಿಯಿಂದ ಇಂದಿನವರೆಗೂ ಇವನು ಒಂದೇ ರೀತಿಯಾಗಿ ಇದ್ದಾನೆಂದಾಗಲಿ, ಒಂದೇ ರೀತಿಯ ಅಭಿಪ್ರಾಯಗಳೊಂದಿಗೆ ಜೀವಿಸಿದನೆಂದಾಗಲೀ ಯಾರೂ ಹೇಳಲಾರರು. ಮಾನವ ಬದಲಾದಂತೆ ಅವನ ಬದುಕಿನ ಪದ್ಧತಿ ಬದಲಾಯಿತು. ಅವನ ಭಾವನೆಗಳು ಬದಲಾದವು, ವಿಜ್ಞಾನ ತಂತ್ರಜ್ಞಾನ ಬದಲಾಯಿತು. ಇವೆಲ್ಲವೂ ಇನ್ನೂ ಬದಲಾಗುತ್ತಲೇ ಇವೆ. ಬದಲಾಗುತ್ತಲೇ ಇರುತ್ತವೆಯೆಂಬುದೂ ನಿಜ. ಇದು ಎಲ್ಲರೂ ಅಂಗೀಕರಿಸಬಹುದಾದಂತಹುದೆ.

ಮದುವೆಯ ವಿಷಯವೂ ಅಷ್ಟೆ. ಆದಿಯಲ್ಲಿ ಮದುವೆಗಳು ಇಂದಿನ ಮದುವೆಗಳಂತೆಯೇ ಪುರೋಹಿತರ ಮಂತ್ರಗಳೊಂದಿಗೆ ಅಗ್ನಿಸಾಕ್ಷಿಯಾಗಿ 'ನಾತಿಚರಾಮಿ' ಎಂಬ ಪ್ರಮಾಣಗಳೊಂದಿಗೆ ನಡೆಯುತ್ತಲಿದ್ದವೆಂದರೆ ಜನ ನಂಬದಿರಬಹುದು. ಮದುವೆಗಳು, ಮದುವೆಗೆ ಸಂಬಂಧಿಸಿದ ಅಭಿಪ್ರಾಯ ಆಚಾರಗಳೂ ಸಹ ಹಂತ, ಹಂತವಾಗಿ ಬದಲಾಗುತ್ತಾ ಬಂದವು. ಅವುಗಳ ಬಗ್ಗೆ ಆರಂಭದಲ್ಲಿ ಮದುವೆ ಎಂಬ ಪದ್ಧತಿಯ ಹುಟ್ಟು, ಹಿನ್ನೆಲೆ ಅದರ ರೀತಿ ನೀತಿ, ಆಚಾರ ವಿಚಾರಗಳ ಬಗ್ಗೆ ಈ ಕೃತಿ ಮಾಹಿತಿಯನ್ನು ನೀಡುತ್ತದೆ. ನಂತರ ಅದರ ಒಳಭಾಗಗಳಲ್ಲಿ ಮದುವೆ: ಪ್ರಶ್ನೆ ಪರಂಪರೆಗಳು, ಮಕ್ಕಳಿಗಾಗಿ ಮದುವೆಯೇ?, ಅಕ್ಕನ ಗಂಡ ಎಲ್ಲರಿಗೂ ಗಂಡ, ವಿಚಿತ್ರ ಮದುವೆಗಳು, ರುಚಿ ಮದುವೆಗಳು, ಪಾತಿವ್ರತ್ಯ!, ಮದುವೆಗೆ ಮುಂಚಿನ ಸ್ವೇಚ್ಛೆ ಮುಂತಾದವುಗಳು ಈ ಕೃತಿಯ ಪ್ರಧಾನ ಅಂಶಗಳು.

ಈ ಕೃತಿ ಮದುವೆ ವಿಷಯಗಳನ್ನು ಅಧ್ಯಯನ ಮಾಡಿದುದರಿಂದ ಇಂದು ಅನವಶ್ಯಕವಾಗಿ ಮದುವೆಯ ಕಾರ್ಯವನ್ನೂ ಬೆಳೆಸಿ, ಬೆಳೆಸಿ ದೊಡ್ಡದೊಂದು ಭೂತವನ್ನಾಗಿಸಿದ್ದೇವೆಂಬುದು ಸುಸಷ್ಟಗೊಳ್ಳುತ್ತದೆ. ದೇಶ, ಕಾಲ, ಪರಿಸ್ಥಿತಿಗಳಿಂದಾಗಿ ಅಕ್ಕಪಕ್ಕದ ಜನಾಂಗಳವರ ಆಚಾರಗಳನ್ನು ಅನುಕರಿಸಿದುದರಿಂದಾಗಿ ಕೆಲವು ಆಚಾರಗಳನ್ನು ಪೂರ್ವದಲ್ಲೆಂದೋ ಅವಲಂಭಿಸಿಕೊಳ್ಳಲಾಗಿದೆ. ಆ ಪರಿಸ್ಥಿತಿಗಳು ಬದಲಾದವು; ಆ ಜನಾಂಗಳವರ ಅಭಿಪ್ರಾಯಗಳನ್ನು ತಿಳಿದುಕೊಳ್ಳದೆಯೇ ಆಚಾರಗಳನ್ನು ಮಾತ್ರ ಅರ್ಥ ರಹಿತವಾಗಿ ಪಾಲಿಸುತ್ತಿದ್ದೇವೆ. ಇನ್ನಾದರೂ ಈ ಅನವಶ್ಯಕ ಆಡಂಬರದ ಮದುವೆಗಳನ್ನು ಬಿಟ್ಟು, ಸಾಲ ಸೊಲಗಳಿಗೆ ಗುರಿಯಾಗದಂತೆ ಮದುವೆ ಮಾಡಿಕೊಳ್ಳುವುದು ಒಳ್ಳೆಯದಲ್ಲವೆ? ಮದುವೆಯ ಹುಚ್ಚು ಮತ್ತು ನಂತರದ ಪ್ರಕ್ರಿಯೆಗಳ ಬಗ್ಗೆ ಇರುವ ಈ ಕೃತಿಯನ್ನು ತೆಲುಗಿನಿಂದ ೧೯೮೩ರಲ್ಲಿ ಅನುವಾದಿಸಿದ್ದರೆ, ೧೯೮೪ರಲ್ಲಿ ಉತ್ತಮ ಅನುವಾದ ಕೃತಿ ಎಂಬ ಪ್ರಶಸ್ತಿಯನ್ನು ಪಡೆಯಿತು. ಇದರಿಂದ ಇದರ ಅನುವಾದ, ಮಹತ್ವದ ಅರಿವಾಗುತ್ತದೆ.

ಯುದ್ಧವೆಂದರೆ ಕೇವಲ ಕೊಲ್ಲುವ ಸಾಯುವ, ಒಂದು ಗಡಿ ರಕ್ಷಿಸಿಕೊಳ್ಳುವ, ಮತ್ತೊಂದು ಗಡಿಯೊಳಕ್ಕೆ ನುಗ್ಗಿ ಆಕ್ರಮಿಸುವ, ಗುಂಡು ಹಾರಿಸುವ, ಷೆಲ್ ದಾಳಿಯಿಂದ ತಪ್ಪಿಸಿಕೊಳ್ಳುವ, ಕೊನೆಯದಾಗಿ ವಿಜಯದ ಪತಾಕೆ ಹಾರಿಸಿ ಬರುವ ದೈಹಿಕ ಸಾಮರ್ಥ್ಯವಷ್ಟೇ ಅಲ್ಲ. ಯುದ್ಧ ಕತೆಯೆಂದರೆ ಎರಡು ದೇಶಗಳ ಇತಿಹಾಸ, ಇಬ್ಬರು ಮುಖಂಡರುಗಳ ಮನಸ್ತತ್ವ, ಎರಡು ದೇಶಗಳ ಆಂತರಿಕ ರಾಜಕಾರಣ, ಎರಡು ದೆಶಗಳ ಆರ್ಥಿಕ ಸ್ಥಿತಿಗತಿ, ಯುದ್ಧದ ಸಿದ್ಧತೆ, ಸೈನ್ಯಗಳ ಪರಿಸ್ಥಿತಿ, ಒಂದು ಸವಿಸ್ತಾರವಾದ ಯುದ್ಧ ಯೋಜನೆ ಮತ್ತು ಅಂತಿಮವಾಗಿ ಎರಡು ರಾಷ್ಟ್ರಗಳ ಕೋಟ್ಯಂತರ ಜನಗಳ ಮನಃಸಿದ್ಧತೆ.

'ಹಿಮಾಲಯನ್ ಬ್ಲಂಡರ್' ಪುಸ್ತಕದಲ್ಲಿ ಬ್ರಿಗೇಡಿಯರ್ ಜಾನ್ ಪಿ. ದಳವಿಯವರು, ಮುಖ್ಯವಾಗಿ ಭಾರತ ದೇಶದ ನಾಯಕರ, ಸೈನ್ಯಾಧಿಕಾರಿಗಳ ಮನಃಸ್ಥಿತಿ, ೧೯೬೨ರ ಯುದ್ಧದ ಮುಂಚಿನ ದಿನಗಳಲ್ಲಿ ಹೇಗಿತ್ತು ಎಂಬುದನ್ನು ವಿವರಿಸುತ್ತಾ ಹೋಗುತ್ತಾರೆ. ದಿಲ್ಲಿಯ ರಾಜಕೀಯ ಸಿಂಹಾಸನದ ಮೇಲಿರುವ ನೆಹರು(ಅಂದಿನ ಪ್ರಧಾನಿ), ಅವರಿಂದ ಶುರುವಾಗಿ, ತನ್ನ ರೈಫಲ್ಲಿನಲ್ಲಿದ್ದ ಕಡೆಯ ಗುಂಡನ್ನು ಶತ್ರುವಿನೆಡೆಗೆ ಹಾರಿಸಿದ ನಂತರ ಸಾಯಲು ಸಿದ್ಧವಾಗಿದ್ದ ಭಾರತೀಯ ಸೈನಿಕನವರೆಗೆ ಅದೊಂದು ದೊಡ್ಡ ಸರಪಳಿ. ಒಂದು ಕಡೆಯಿಂದ ೧೯೬೨ರ ನಿಜವಾದ ಯುದ್ಧಭೂಮಿಯ ಚಿತ್ರಣ ಸಿಗುತ್ತದೆ. ಆದರೂ, ಮತ್ತೊಂದು ಕಡೆ ದೆಹಲಿಯಿಂದ ನಮ್ಕಾ ಚು ನದಿ ದಂಡೆಯವರೆಗೆ ರಾಜಕಾರಣಿಗಳು, ಸೈನ್ಯಾಧಿಕಾರಿಗಳು ಒಂದು ಯುದ್ಧಕ್ಕೆ ಸಿದ್ಧತೆ ಆಗಿರಲಿಲ್ಲ ಎಂಬುದನ್ನು ಬ್ರಿಗೇಡಿಯರ್ ದಳವಿಯವರು ವಿವರಿಸುತ್ತಾ ಹೋಗುತ್ತಾರೆ. ಅದಕ್ಕೆ ಹೇಳಿದ್ದು; ಯುದ್ಧವೆಂದರೆ ಕೇವಲ ಕೊಲ್ಲುವ, ಸಾಯುವ ಕಥೆಯಲ್ಲ. ದಳವಿಯವರೇ NEFT(North East Frontien Agency) ಗಡಿಯ ತವಾಂಗ್ ಸೆಕ್ಟರ್‌ನಲ್ಲಿ ಕಾರ್ಯಚರಣೆಯಲ್ಲಿದ್ದ, ಸೆವೆನ್ ಇನ್‌ಫೆಂಟ್ರಿ ಬ್ರಿಗೇಡ್‌ನ ಕಮಾಂಡ್ ಕೈಗೆತ್ತಿಕೊಂಡರು. ಅವರನ್ನು ೨೨ ಅಕ್ಟೋಬರ್ ೧೯೬೨ರಂದು ಚೀನೀ ಸೈನ್ಯ ಬಂಧಿಸಿ, ವಶಕ್ಕೆ ತೆಗೆದುಕೊಂಡಿತು. ನಂತರ ಮೇ ೧೯೬೩ರಲ್ಲಿ ಅವರನ್ನು ಭಾರತಕ್ಕೆ ವಾಪಸು ಕಳಿಸಲಾಯಿತು. ಆ ಏಳು ತಿಂಗಳ ಅವಧಿಯಲ್ಲಿ ಬರೆದದ್ದೆ ಹಿಮಾಲಯನ್ ಬ್ಲಂಡರ್ ಕೃತಿ.

'ಸಾಧಾರಣ ಅನುವಾದಕರು ಮನಕೊಡದ 'ಹಿಮಾಲಯನ್ ಬ್ಲಂಡರ್', 'ಗಾಂಧೀ ಹತ್ಯೆ ಮತ್ತು ಗೋಡ್ಸೆ'ಯಂಥ ಪುಸ್ತಕಗಳನ್ನು ಕನ್ನಡಕ್ಕೆ ತರುವ ಸತ್ಯ ನಿಷ್ಠೆ ಮತ್ತು ಅವರು ಇತರ ಪುಸ್ತಕಗಳ

ಮೂಲಕ ಹೊರ ಹಾಕಿರುವ ಸಂಗತಿಗಳು ಟ್ಯಾಬ್ಲಾಯ್ಡ್ ಜಾತಿಯ ರಂಜಕಗಲ್ಲ: ಉಳಿದವರು ಮುಚ್ಚಿಟ್ಟಿದ್ದ ಮುಚ್ಚಿಡಬಯಸುವ ಸತ್ಯಗಳು'.[೩೫] ಹಾಗಂತ 'ಎಸ್.ಎಲ್.ಭೈರಪ್ಪ'ನವರು ಬರೆಯುತ್ತಾರೆ. ಅವರ ಈ ಮಾತಿಗೆ ಆಧಾರವೆಂಬಂತಿದೆ ಹಿಮಾಲಯನ್ ಬ್ಲಂಡರ್. ೧೯೬೨ರ ಥಗ್ಲಾ ಯುದ್ಧವನ್ನು ಭಾರತದ ಸೈನ್ಯ ಸೋತದ್ದೇಕೆ ಎಂಬ ಪ್ರಶ್ನೆಗೆ ಪುಸ್ತಕದುದ್ದಕ್ಕೂ ಉತ್ತರಗಳು ಸಿಗುತ್ತವೆಯಾದರೂ, ಯೋಧರಾದ ದಳವಿಯವರು ತಮ್ಮದೇಯಾದ ಶೈಲಿಯಲ್ಲಿ ಭಾರತದ ರಾಜಕಾರಣ, ಅಧಿಕಾರಿ ಹಾಗೂ ಸೈನಿಕರ ನಡುವಿನ ಸಾಮರಸ್ಯದ ಕೊಂಡಿ ತಪ್ಪಿಹೋದದ್ದಕ್ಕೆ ಸ್ಪಷ್ಟ ಕಾರಣಗಳನ್ನು ಹುಡುಕಿ ಓದುಗರ ಮುಂದಿಡುವ ರೀತಿ ಮೆಚ್ಚುವಂತಹದ್ದು. ಒಂದರ್ಥದಲ್ಲಿ ಇಡೀ ಪುಸ್ತಕವೇ ಒಂದು ಚರಮಗೀತೆ. ಒಬ್ಬ ಯೋಧನ ಕಣ್ಣೀರು. ಒಂದು ದೇಶ ಅನುಭವಿಸಿದ ಕಳಂಕ.

ರವಿ ಬೆಳಗರೆಯವರೆ ಈ ಕೃತಿಯ ಮುನ್ನಡಿಯಲ್ಲಿ 'ಇದನ್ನೊಂದು ಅನುವಾದ ಎಂದು ಕರೆಯಲು ನಾನೇ ಸಿದ್ಧನಿಲ್ಲ. ಏಕೆಂದರೆ ಮೂಲತಃ ಇದೊಂದು ಕಲಾಕೃತಿಯಲ್ಲ, ಕಾದಂಬರಿಯಲ್ಲ, ಪ್ರಬಂಧವಲ್ಲ, ಇತಿಹಾಸವೂ ಅಲ್ಲ, ೧೯೬೨ರ ಸೆಪ್ಟೆಂಬರ್-ಅಕ್ಟೋಬರ್ ತಿಂಗಳುಗಳಲ್ಲಿ ಭಾರತದ NEFA ಗಡಿಯಲ್ಲಿ ನಡೆದ ಭಯಾನಕ ಕದನದಲ್ಲಿ ಚೀನೀಯರು ಹಾರಿಸಿದ ಮೊದಲ ಗುಂಡಿಗೆ ಉತ್ತರ ನೀಡಿದ ಮಹಾಯೋಧನೊಬ್ಬನ ಕತೆ, ಅದಾದ ಆರು ವರ್ಷಗಳ ನಂತರ ಕುಳಿತು ಮತ್ತೆ ಎಲ್ಲವನ್ನು ನೆನಪಿಸಿಕೊಂಡು ಬರೆದಿಡುತ್ತ ಹೋದ ಒಂದು ಡಾಕುಮೆಂಟ್‌ನ ಹೆಸರು ಹಿಮಾಲಯನ್ ಬ್ಲಂಡರ್' ಎಂದು ಹೇಳುತ್ತಾರೆ. ಚೀನಾದ ಶತ್ರು ಶಿಬಿರದಲ್ಲಿ ಯುದ್ಧ ಬಂಧಿಯಾಗಿ ತಿಂಗಳುಗಟ್ಟಲೆ ಇದ್ದು ಹೊರಬಂದ ದಳವಿಯವರು ಈ ದೇಶವನ್ನಾಳುವವರ ಕೈಗೆ ಬರೆದುಕೊಟ್ಟ ವಾರ್ ರಿಪೋರ್ಟ್(ಯುದ್ಧ ವರದಿ) ಇದು. ನೆಮ್ಮದಿಯ ಕಾಲದಲ್ಲಿ ಜನ ಮೂವರನ್ನು ಮರೆತು ಬಿಡುತ್ತಾರೆ. ದೇವರನ್ನು, ವೈದ್ಯರನ್ನು ಹಾಗೂ ಸೈನಿಕನನ್ನು ನಾನು ಮೂರನೆಯವನು! ಎಂದು ಮೇಜರ್ ಪುರುಷೋತ್ತಮ್ ಹೇಳುತ್ತಾರೆ. ಹೀಗಾಗಿ ಇದು ಒಂದು ಅಪರಾಧ(ಬ್ಲಂಡರ್)ದ ಕಥೆಯಲ್ಲ: ಇದು ಸರಣಿ ಅಪರಾಧಗಳ ಸವಿಸ್ತಾರವಾದ ಕಥೆ. ನಿಜವಾದ ಅರ್ಥದಲ್ಲಿ ಹಿಮಾಲಯನ್ ಬ್ಲಂಡರ್!(ದೊಡ್ಡ ತಪ್ಪು, ಪ್ರಮಾದ). ಭಾರತ ಮತ್ತು ಚೀನಿಯರ ಯುದ್ಧ ವಿವರಗಳನ್ನೊಳಗೊಂಡ ರವಿಯವರ ಈ ಕೃತಿ. ಇತರ ಅನೇಕ ಅನುವಾದಗಳಲ್ಲಿ ಅಗ್ರ ಸ್ಥಾನವನ್ನು ಪಡೆದುಕೊಂಡಿದೆ.

ಸಿ.ದಿನಕರ್ ಸಾವಿರಾರು ಸಂಗತಿಗಳ, ಹುದುಗಿಟ್ಟ ಸತ್ಯಗಳ, ಮುಟ್ಟಿಹಾಕಿದ ಘಟನೆಗಳ ವಿವರಗಳನ್ನೂ ತಮ್ಮ 'ರಾಜ್ಯ ರಹಸ್ಯ' ಕೃತಿಯಲ್ಲಿ ವಿವರಿಸುತ್ತಾರೆ. ರಾಕಾರಣಿಗಳು, ಅಧಿಕಾರಿಗಳು, ವಕೀಲರು, ಭೂಗತ ಜೀವಿಗಳು, ವಂಚಕರು, ಸುಳ್ಳರು, ಪತ್ರಕರ್ತರು, ಪೊಲೀಸರು, ಪವರ್ ಬ್ರೋಕರುಗಳು, ಚಳವಳಿಗಾರರು, ವಸೂಲಿ ವೀರರು, ಉಗ್ರಗಾಮಿಗಳು, ಅವರ ಏಜೆಂಟರು, ನಿಜವಾದ ಕ್ರಾಂತಿಕಾರಿಗಳು, ಮಹಾನ್ ನಿಷ್ಠೆಯ ಅಮಾಯಕರು, ಆವೇಶ ವಶಯೋಧರು, ಅಮಾಯಕರು ಹೀಗೆ ಎಲ್ಲರೂ ಪಾಲ್ಗೊಂಡ, ಎಲ್ಲರ ಕಣ್ಣಿಗೂ ಕಂಡ, ಕಂಡೂ ಕಾಣದಂತೆ ಉಳಿದ ಕನ್ನಡ ಚಲನಚಿತ್ರ ನಟ ರಾಜಕುಮಾರ್ ಅಪಹರಣ ಎಂಬ ನೂರಾ ಎಂಟು ದಿನಗಳ ಬೃಹನ್ನಾಟಕವಿದೆಯಲ್ಲ? ಅದನ್ನು ಮತ್ತು ಕರ್ನಾಟಕದ ಆಡಳಿತ ಚುಕ್ಕಾಣಿ ಹಿಡಿದ ಅತ್ಯುನ್ನತರು ರಾಜಕುಮಾರ್ ಅಪರಹರಣವಾದ ಸಮಯದಲ್ಲಿ ಬಿಡುಗಡೆ ನಂತರ ಮತ್ತೆ ಮುಂದಿನ ದಿನಗಳಲ್ಲೂ (ಬಹುಶಃ ಇವತ್ತಿಗೂ) ಹೇಳುತ್ತ ಬಂದ ಸುಳ್ಳುಗಳ ಮುಖವಾಡ ತೆಗೆದು ರಾಜ್ಯರಹಸ್ಯದ ಮೂಲಕ ಕನ್ನಡಿಗರ ಮುಂದಿರಸಿದ್ದಾರೆ ದಿನಕರ್.

ಅವರು ಯಾರನ್ನೂ ಬಿಟ್ಟಿಲ್ಲ. ಅನಾವಶ್ಯಕವಾಗಿ ಯಾರಾದರೂ ಬೆನ್ನತ್ತಿಲ್ಲ. ಅವರ ಕಣ್ಣಿಗೆ ಪಾರ್ವತಮ್ಮನವರಷ್ಟೇ ನಿಸ್ಸಹಾಯಕರಾಗಿ ಎಸ್.ಎಂ.ಕೃಷ್ಣ ಕಾಣಿಸಿದ್ದಾರೆ. ಅಂತೆಯೇ ಅವರ ಮನಸ್ಸು ಎಸ್.ಎಂ.ಕೃಷ್ಣರ ಅಪಸವ್ಯ ಅಕ್ರಮಗಳನ್ನು ಕಂಡಾಗ ರೇಗಿದಂತೆಯೇ ಪಾರ್ವತಮ್ಮ ಮತ್ತು ಅವರ ಮಕ್ಕಳ ಅತಿರೇಕ, ಅಧಿಕ ಪ್ರಸಂಗಗಳನ್ನು ಕಂಡು ರೇಗಿದೆ; ತಿರುಗಿಬಿದ್ದಿದೆ. ಕೊಡವ ಕೈ ಬಿಟ್ಟಿದೆ, ತಮ್ಮ ಸಹೋದ್ಯೋಗಿಗಳನ್ನು ಕೈಕೆಳಗಿನ ಅಧಿಕಾರಿಗಳನ್ನು ಕೃತಿಯುದ್ದಕ್ಕೂ ದಿನಕರ್ ಗೇಲಿ ಮಾಡಿದ್ದಾರೆ, ಟೀಕಿಸಿದ್ದಾರೆ, ಖಂಡಿಸಿದ್ದಾರೆ. ಅಂತೆಯೇ ಒಳ್ಳೆಯ/ವರು ಕಂಡಾಗ ಅಭಿನಂದಿಸಿದ್ದಾರೆ. ದಿನಕರ್ ಕವಿಯಲ್ಲ. ನಿಷ್ಠುರ ಮನಸ್ಸಿನ ಅಧಿಕಾರಿ (ಈ ಕೃತಿಗೆ ಸಂಬಂಧಿಸಿದಂತೆ ಬರವಣಿಗೆಯನ್ನು ಗಮನಿಸಿ). ಅವರ ಬರಹ ಕೆಲವೊಮ್ಮೆ ಪೊಲೀಸಿನವನೊಬ್ಬನು ಠಾಣೆಯಲ್ಲಿ ಕುಳಿತು ಬರೆದ ದಸ್ತಾವೇಜಿನಂತಹ, ಛಾರ್ಜ್‌ಷೀಟಿನಂತೆ, ನ್ಯಾಯಾಲಯಕ್ಕೆ ಕಳುಹಿಸಿದ ಪ್ರಥಮ ವರ್ತಮಾನದ(FIR) ವರದಿಯಂತೆ ಕಾಣುತ್ತದೆ. ಆದರೆ ಇದ್ದಕ್ಕಿದ್ದಂತೆ ಒಂದೊಂದು ಬೀಸು, ಹೊಡೆತ, ಗೇಲಿ, ವಿಡಂಬನೆ ಸ್ಫೋಟಿಸುವ ದಿನಕರ್ ನಿತ್ತರಿಸಿಕೊಳ್ಳಲಾಗದಂತಹ ಸತ್ಯವೊಂದನ್ನು ತಟ್ಟಿಸಿ ಹೇಳಿ ನಂತರದ ಅಧ್ಯಾಯಕ್ಕೆ/ವಿಷಯಕ್ಕೆ ನಡೆದು ಬಿಡುತ್ತಾರೆ. ಹೀಗಾಗಿ ಅವರ ನಿರ್ಭಾವುಕ ಶೈಲಿಯ ಬರಹವೂ ಸಹ ಇದ್ದಕ್ಕಿದ್ದಂತೆ ಒಂದು ಸಾಹಿತ್ಯ ಕೃತಿಯ ಸ್ವರೂಪ ಪಡೆದು ಬಿಡುತ್ತದೆ.

ರಾಜ್‌ಕುಮಾರ್ ಬಿಡುಗಡೆಗೆ ಎಷ್ಟು ಹಣ ಕೊಡಲಾಯಿತು? ನೂರು ಎಂಟು ದಿನಗಳ ವನವಾಸ ಮುಗಿಸಿ ಈಚೆಗೆ ಬರುತ್ತಿದ್ದಂತೆಯೇ ಎಲ್ಲರೂ ಕೇಳಿದ ಪ್ರಶ್ನೆಯೇ ಅದು 'ಹಣ ಕೊಡಲಾಯಿತು ಅನ್ನೋ ಮಾತೇ ಅರ್ಥಹೀನ' ಅಂದರು ಎಸ್.ಎಂ.ಕೃಷ್ಣ ಜನಕ್ಕೆ ಗೊತ್ತು; ಸರ್ಕಾರವು ನಿರಾಕರಿಸಿ ಹೇಳಿಕೆ ನೀಡುತ್ತದೆಂದರೆ, ಆ ವದಂತಿ ನಿಜವಾಗಿಯೇ ಇರುತ್ತದೆ! ಆದ್ದರಿಂದ, ಒತ್ತೆ ಹಣದ ಪ್ರಶ್ನೆಯನ್ನು ಜನ ಕೇಳುತ್ತಲೇ ಇದ್ದರು. ಈ ಕೃತಿ ಜನರ ಆ ಪ್ರಶ್ನೆಗೆ ಒಂದು ನಿಕರವಾದ ಉತ್ತರ ಕೊಡುತ್ತದೆ. ಒತ್ತೆ ಹಣವನ್ನು ಕೊಟ್ಟೇ ಇಲ್ಲ ಅಂತ ಸಂಬಂಧಪಟ್ಟ ಜನ ಹೇಳಬಹುದು. ಒಬ್ಬ ನಿಷ್ಠಾವಂತ ಮತ್ತು ದಕ್ಷ ಪೊಲೀಸ್ ಅಧಿಕಾರಿ, ಒಬ್ಬ ವಕೀಲನೂ ಆಗಿರುವಾಗ ಎಷ್ಟು ಜವಾಬ್ದಾರಿಯುವಾಗಿರಬೇಕಾಗುತ್ತದೆ ಎಂಬುದನ್ನು ತಿಳಿದುಕೊಂಡೇ ಇರುತ್ತಾನಲ್ಲವೇ? ಅದಲ್ಲದೆ, ಅಧಿಕಾರದಲ್ಲಿರುವ ಜನ ಹೇಗೆ ವರ್ತಿಸುತ್ತಾರೆ, ಹೇಗೆ ಪ್ರತಿಕ್ರಿಯಿಸುತ್ತಾರೆ. ಯಾವ್ಯಾವ ಶಕ್ತಿಗಳು ಅವರ ಮೇಲೆ ಪ್ರಭಾವ ಬೀರುತ್ತಿರುತ್ತವೆ ಮತ್ತು ಹೇಗೆ ಸರಿಯಾದ ನಿರ್ಣಯಗಳನ್ನು ತೆಗೆದುಕೊಳ್ಳಬೇಕಾದ ಜನ ತಪ್ಪುಗಳನ್ನೆಸಗುತ್ತಾರೆ ಎಂಬೆಲ್ಲ ಸಂಗತಿಗಳ ಬಗ್ಗೆ ಈ ಕೃತಿ ಬೆಳಕು ಬೀರುತ್ತದೆ.

ಈ ಕೃತಿ ಸಿ.ದಿನಕರ್ ಅವರ VERAPPAAN'S PRIZ CATCH: RAJAKUMAR ಎಂಬ ಇಂಗ್ಲೀಶ್‌ನ ಕನ್ನಡಾನುವಾದ ಇದರ ಅನುವಾದಕ್ಕೆ ಸಂಬಂಧಿಸಿದಂತೆ ರವಿಯವರು ತಮ್ಮ ಅನುವಾದಕನ ಮಾತು 'ಈ ಪುಸ್ತಕವನ್ನು ನಾನೇ ಬರೆದಿರುತ್ತಿದ್ದಿದ್ದರೆ, ಇದನ್ನು ಬೇರೆಯದೇ ಆದ ರೀತಿಯಲ್ಲಿ ಬರೆದಿರುತ್ತಿದ್ದೆ. ಆದರೆ ಇಂಥದೊಂದು ಪುಸ್ತಕವನ್ನು ಹೀಗೇ ಬರೆಯಬೇಕು; ದಿನಕರ್ ಅವರು ಬರೆದಂತೆಯೇ ನಿರ್ಭಾವುಕವಾಗಿ, ನಿರ್ಮಲವಾಗಿ, ಆವೇಶವಿಲ್ಲದ ಶೈಲಿಯಲ್ಲಿ ಆ ಕಾರಣಕ್ಕಾಗಿಯೇ ನಾನಿದನ್ನು ಕೇವಲ ಅನುವಾದಸಿದ್ದೇನೆ.' ರವಿ ಬೆಳಗೆರೆಯವರಾಗಲೀ, ಅವರ ಶೈಲಿಯಾಗಲೀ ಕಂಡುಬರುವುದಿಲ್ಲ. ಇಂಗ್ಲೀಶ್‌ನಲ್ಲಿ ಇರುವುದನ್ನು ಸುಮ್ಮನೆ ಕನ್ನಡಕ್ಕೆ ತಂದಿದ್ದಾರೆ. ಹೀಗಾಗಿ ಇದರಲ್ಲಿ ಪತ್ರಕರ್ತ ರವಿ ಬೆಳಗೆರೆಯವರನ್ನು ಅವರ ಶೈಲಿಯನ್ನು ಹುಡುಕುವ ಪ್ರಯತ್ನ ವಿಫಲವಾಗುತ್ತದೆ ಎಂದು ಹೇಳಬಹುದು.

ಜಿ.ಡಿ.ಖೋಸ್ಲಾರವರ 'Murder of Mahatma' ಮತ್ತು ತಪನ್ ಘೋಸ್‌ರವರ 'Gandhi Murder Trial' ಎಂಬ ಎರಡೂ ಪುಸ್ತಕಗಳ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಬರೆದ ಕೃತಿ 'ಗಾಂಧೀ ಹತ್ಯೆ ಮತ್ತು ಗೋಡ್ಸೆ'. ಭಾರತ ದೇಶದ ಕೆಲವು ವಿವಾದಗ್ರಸ್ತ ಚಿಂತನೆಗಳ ಹಾಗೆ ಈ ಗಾಂಧಿ, ಗೋಡ್ಸೆ ಬಗೆಗಿನ ಚಿಂತನೆಯೂ ಒಂದು. ಅದು ಇಂದು ನಿನ್ನೆಯದೇನಲ್ಲ. ಭಾರತ ದೇಶದ ಮಹಾಕಾವ್ಯಗಳ ಕಾಲದಿಂದಲೂ ಇಂಥ ದುರಂತ ಸಂಭವಿಸುತ್ತಲೇ ಬಂದಿದೆ. ರಾಮಾಯಣವನ್ನು ಓದಿದರೆ ಅಲ್ಲಿ ರಾಮ ಒಳ್ಳೆಯ ವ್ಯಕ್ತಿತ್ವವುಳ್ಳವನು. ಅದಕ್ಕೆ ತದ್ವಿರುದ್ಧವಾಗಿ ರಾವಣ ಹತ್ತು ತಲೆಯ ನೀಚ, ದುಷ್ಟ, ಒಂದು ಕಡೆ ಪರಿಪೂರ್ಣವಾಗಿ ಒಳ್ಳೆಯವನಾದ ರಾಮ. ಮತ್ತೊಂದೆಡೆ ಪರಿಪೂರ್ಣವಾಗಿ ದುಷ್ಟನಾದ ರಾವಣ. ಅಲ್ಲಿ ಸಾಮಾನ್ಯ ಪಾತ್ರಗಳೇ ಇಲ್ಲ. ರಾಮಾಯಣಕ್ಕೆ ಹತ್ತಿರ ನಿಲ್ಲುವ ಯಾವ ಪುರಾಣ, ಪುಣ್ಯಕತೆ, ಕಾದಂಬರಿ, ಕಾವ್ಯ ಏನೇ ತೆಗೆದುಕೊಂಡರೂ ಇವರೆಡೆ ಪ್ರಧಾನ ಪಾತ್ರಗಳು. ಈ ರೀತಿಯಲ್ಲಿ ಪುರಾಣ ಕಾಲದಿಂದಲೂ ಒಂದು ಒಳ್ಳೆಯ ಮತ್ತು ಕೆಟ್ಟ ಪಾತ್ರದ ಪರಿಕಲ್ಪನೆಯಿಟ್ಟುಕೊಂಡು ಓದುತ್ತ, ಬರೆಯುತ್ತ, ಕೇಳುತ್ತಾ ಬಂದಿದ್ದೇವೆ. ಇವರೆಡೆ ಪಾತ್ರಗಳಿಗೆ ನಾವು ಮಾನಸಿಕವಾಗಿ ಸಿದ್ಧರಾಗಿದ್ದೇವೆ. ಇವರೆಡರನ್ನು ಹೊರತುಪಡಿಸಿ ಬೇರೆ ಊಹಿಸಿಕೊಳ್ಳಲು ಸಿದ್ಧರಿಲ್ಲ. ಒಂದು ಒಳ್ಳೆಯದಿದ್ದರೆ ಕೆಟ್ಟದ್ದು ಇರಲೇಬೇಕು. ಒಂದು ವೇಳೆ ಕೆಟ್ಟದಿದ್ದರೆ ಒಳ್ಳೆಯದಿರಲೇಬೇಕು. ಈ ಪಾತ್ರಗಳ ಹೊರತಾಗಿ ಮತ್ತೊಂದು ಸ್ವಭಾವದ ವ್ಯಕ್ತಿತ್ವವನ್ನು ಒಪ್ಪಿಕೊಳ್ಳಲು ಮಾನಸಿಕವಾಗಿ ಸಿದ್ಧರಿರುವುದಿಲ್ಲ.

ಗಾಂಧೀ ಹತ್ಯೆ ಲೇಖನ ಮಾಲಿಕೆ ಪತ್ರಿಕೆಯಲ್ಲಿ ಆರಂಭವಾದ ಮೇಲೆ ಕೆಲವರು ರವಿ ಬೆಳಗೆರೆಯವರನ್ನು ಅರೆಸ್ಸೆಸ್ಸಿಗ, ಗಾಂಧಿ ವಿರೋಧಿ ಮತ್ತು ಗೋಡ್ಸೆಯನ್ನು ವಿಜೃಂಭಿಸಿ ಬರೆಯುತ್ತಿದ್ದಾನೆ ಅಂದರಂತೆ. ರವಿ ಕಮ್ಯುನಿಷ್ಟ ಸಿದ್ಧಾಂತ ಓದಿದವರು. ಅದರ ಅತಿದೊಡ್ಡ ಪಾಠವೆಂದರೆ, ಕಣ್ಕಾಪು ಕಿತ್ತೆಸೆದು ಎಲ್ಲವನ್ನು ನೋಡುವುದು. ಈ ಹಿನ್ನೆಲೆಯಲ್ಲಿ ನೋಡಿದ್ದರ ಫಲವಾಗಿಯೇ ನನಗೆ ಗೋಡ್ಸೆ ಮತ್ತು ಗಾಂಧಿ ಇಬ್ಬರ ವ್ಯಕ್ತಿತ್ವಗಳನ್ನೂ ಹೆಚ್ಚು ಸ್ಪಷ್ಟವಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿದೆ ಎಂಬುದಾಗಿ ಈ ಕೃತಿಯ ಆರಂಭದಲ್ಲಿ ಲೇಖಕರು ಹೇಳಿಕೊಳ್ಳುತ್ತಾರೆ. ಇಲ್ಲಿ ಲೇಖಕರ ವೈಯಕ್ತಿಕ ಸಿದ್ಧಾಂತ, ಅವರು ಅರೆಸ್ಸೆಸ್ಸಿಗರೇ, ಅಲ್ಲವೇ. ಹಾಗಾದರೆ ಅವರು ಇನ್ನ್ಯಾವುದಕ್ಕೆ ಸಂಬಂಧಿಸಿದವರು ಅದು ಇಲ್ಲಿ ಅಪ್ರಸ್ತುತ ಇಲ್ಲಿ ಕೃತಿಯಲ್ಲಿ ಅಡಕಗೊಂಡಿರುವ ಅಂಶವಷ್ಟೇ ಪ್ರಸ್ತುತ.

ಮಹಾತ್ಮ ಗಾಂಧಿ ಆ ಕಾಲಘಟ್ಟದ ಬಹುದೊಡ್ಡ ವ್ಯಕ್ತಿತ್ವ. ಒಂದು ನಾಡಿನ ಭವಿಷ್ಯದ ದಿಕ್ಕು ಬದಲಿಸಿದ ಮಹನೀಯ. ನಿಸ್ವಾರ್ಥ ದೇಶ ಪ್ರೇಮಿ. ಅದನ್ನು ಯಾರೂ ಅಲ್ಲಗಳೆಯಲಾರರು. ಆದರೆ ಗಾಂಧೀಜಿ ತಪ್ಪುಗಳನ್ನು ಮಾಡಲಿಲ್ಲವೇ? ಇತಿಹಾಸ ಬರೆಯುವವರು, ಹಾಗೆ ಕೇವಲ ರಾಮುನನ್ನು ಹುಡುಕಲಾರರು: ಹುಡುಕಲೂಬಾರದು. ಅಂತ ಮಹಾತ್ಮನಲ್ಲೂ ಇರುವ ಬಲಹೀನತೆಯನ್ನು ಬಯಲಿಗೆಳೆಯಬೇಕಾಗುತ್ತದೆ. ಎಳೆಯುತ್ತಾನೆ ಸಹ. ಗಾಂಧೀಜಿಯ ವ್ಯಕ್ತಿತ್ವ ಮತ್ತು ಅವರ ವರ್ತನೆಗಳನ್ನು ಈ ಕೃತಿಯ ಉದ್ದಕ್ಕೂ ರವಿಯವರು ನೋಡುತ್ತಾ ಹೋಗಿರುವುದು ಆ ದೃಷ್ಟಿಯಿಂದಲೇ. ಗಾಂಧೀಜಿಯವರ ವಿರುದ್ಧ ಅನೇಕರು, ಅನೇಕ ತಕರಾರುಗಳ ದೊಡ್ಡ ಪಟ್ಟಿಯನ್ನೇ ನೀಡುತ್ತಾರೆ. ಗೋಡ್ಸೆಗೂ ಅಂಥವೇ ತಕರಾರುಗಳಿದ್ದವು. ಇದ್ದವೆಂಬ ಕಾರಣಕ್ಕೆ ಆತ ಗಾಂಧೀಜಿಯವರಂತಹ ವ್ಯಕ್ತಿಯನ್ನು ಈ ಪ್ರಪಂಚದಿಂದ ಇಲ್ಲದಂತೆ ಒರೆಸಿ ಹಾಕಿದುದು ಸರಿಯೆ? ಆ ಹತ್ಯೆಯನ್ನು ಸಮರ್ಥಿಸಿಕೊಳ್ಳುವುದು ಸರಿಯೆ? ಗಾಂಧಿಯನ್ನು ಕೊಂದನೆಂಬ ಕಾರಣಕ್ಕೆ

ಗೋಡ್ಸೆಯನ್ನು ರಾವಣ ಸದೃಶನೆಂದು ಚಿತ್ರಿಸುವುದು ಸರಿಯಾ? ವೀರ ಸಾವರ್ಕರ್‌ರನ್ನು ದೇಶದ್ರೋಹಿ ಎನ್ನುವುದು ಸರಿಯಾ? ಇತ್ಯಾದಿ ಪ್ರಶ್ನೆಗಳ ಆಧಾರದ ಮೇಲೆ ಕೃತಿ ಬೆಳೆದು ನಿಲ್ಲುತ್ತದೆ.

ಆದರೆ ಗೋಡ್ಸೆ ಎಂಬ ಭಾವುಕ(ದೇಶಾಭಿಮಾನಿ) ವ್ಯಕ್ತಿಗೆ ಕಾಲಮಾನವನ್ನು ಗುರುತಿಸುವುದು ಸಾಧ್ಯವಾಗಿರಲಿಲ್ಲ. ಗುರುಗೋವಿಂದ ಸಿಂಹ, ರಾಣಾ ಪ್ರತಾಪ, ಛತ್ರಪತಿ ಶಿವಾಜಿಯರ ಕಾಲಕ್ಕೂ, ದೇಶ ವಿಭಜನೆಯಾದ ೧೯೪೭ರ ಕಾಲಕ್ಕೂ ಬದುಕು ಬದಲಾಗಿದೆ. ನ್ಯಾಯದ ಪರಿಕಲ್ಪನೆ ಬದಲಾಗಿದೆ. ಜಾತಿ, ಧರ್ಮಗಳ ಪರಿಕಲ್ಪನೆ ಬದಲಾಗಿದೆ ಎಂಬ ವಿವೇಕ ಗೋಡ್ಸೆಗಿರಲಿಲ್ಲ. ೧೯೪೭ಕ್ಕೂ ೧೯೪೮ಕ್ಕೂ ನಡುವೆ ಆಗಲೇ ವಿದ್ಯಮಾನಗಳು ಬದಲಾಗಿದ್ದವು. ಅವುಗಳ ಪರಿಕಲ್ಪನೆಗಳು ಬದಲಾಗಿದ್ದವು. ಬಹುಶಃ ಇದು ಆತನಿಗೆ ಅರ್ಥವಾಗಿರಲಿಲ್ಲ ಎನಿಸುತ್ತದೆ. ಹಾಗೆ ವಾಸ್ತವದ ನೆಲೆ ಬಿಟ್ಟು ಹೊರಟವನ ತಿಳವಳಿಕೆಗೆ ಸರಿ ಅನ್ನಿಸಿದ್ದು, ಗಾಂಧಿಯನ್ನು ಈ ನೆಲದ ಮೇಲಿರದಂತೆ ಮಾಡಿಬಿಡುವಿಕೆ! ಈ ಭಾವವನ್ನು ನಾಥೂರಾಮ ಗೋಡ್ಸೆ ತನ್ನ ಕೊನೆಯ ದಿನದವರೆಗೆ ವಾದಿಸುತ್ತ, ಸಮರ್ಥಿಸಿಕೊಳ್ಳುತ್ತ ಬರುತ್ತಾನೆ. ಒಟ್ಟಿನಲ್ಲಿ ಇಂತಹ ವಿಷಯಗಳನ್ನು ಬರೀ ಇತಿಹಾಸದ ಕೃತಿಗಳಂತೆ ಓದುವುದಾದರೆ ಉಪಯುಕ್ತ. ಹಾಗೆಯೇ ಈ ಕೃತಿಯನ್ನು ಇತಿಹಾಸದ ಪುಸ್ತಕವಾಗಿ ಓದಿಕೊಳ್ಳಲಿಕ್ಕೆ ಸಾಧ್ಯವಾದರೆ ಉಪಯುಕ್ತವಾಗುತ್ತದೆ ಎಂದು ಹೇಳಬಹುದು.

ಇದೇ ಕೃತಿಯಲ್ಲಿ ಇನ್ನೆರಡು ಹತ್ಯೆಯ ವಿವರಗಳಿವೆ. ಒಂದು ರಾಜೀವ್ ಗಾಂಧಿಯ ಹತ್ಯೆ, ಅದನ್ನು ವಿವರಿಸುವ ಭಾಗಕ್ಕೆ ರವಿಯವರು ಕೊಟ್ಟ ಹೆಸರು 'ರಾಜ ಬೇಟೆ'. ಮತ್ತೊಂದು ಭಾಗ ಇಂದಿರಾ ಗಾಂಧಿಯ ಹತ್ಯೆಯ ಬಗೆಗಿನದು. ಅದಕ್ಕೆ ಅವರಿಟ್ಟ ಹೆಸರು 'ಇಂದಿರಾ ವಧೆ'. ಈ ತಲೆ ಬರಹಗಳೇ ಸಾಕು ಆ ವಿಷಯಗಳನ್ನು ರವಿಯವರು ಅವುಗಳಲ್ಲಿನ ಪ್ರಮುಖ ವ್ಯಕ್ತಿತ್ವಗಳನ್ನು ಹೇಗೆ ವಿವರಿಸಿರುವರೆಂಬುದನ್ನು ಅರ್ಥಮಾಡಿಕೊಳ್ಳಲು. ಹೀಗೆ ಈ ಕೃತಿ 'ಗಾಂಧಿ'ಯರುಗಳ ಹತ್ಯೆವ ಕುರಿತಾಗಿ ಮಾಹಿತಿಯನ್ನು ಒದಗಿಸುತ್ತದೆ. ಇದರ ಜೊತೆಯಲ್ಲೇ ಸಂಜಯ್ ಗಾಂಧಿಯ ಬಗ್ಗೆಯೂ ರವಿ ಬೆಳಗೆರೆಯವರು ಪುಸ್ತಕವನ್ನು ಬರೆದಿದ್ದಾರೆ. ಅದರ ಹೆಸರು ಇಂದಿರೆಯ ಮಗ ಸಂಜಯ ಎಂದು. (ಈ ಕೃತಿಯ ಬಗ್ಗೆ ಹಿಂದೆ ಹೇಳಲಾಗಿದೆ) ಇವುಗಳನ್ನು ನೋಡಿದರೆ ನಾಲ್ಕು 'ಗಾಂಧಿ'ಗಳು ಹಾಗೂ ಐದನೆಯವರಾದ ಫಿರೋಜ್ ಗಾಂಧಿಯೂ ಸ್ಪಷ್ಟವಾಗಿ ಅರ್ಥವಾಗಬಹುದು.

'ಪತ್ರಿಕೋದ್ಯಮವನ್ನು ಇತಿಹಾಸದ ಮೊದಲ ಡ್ರಾಫ್ಟು' ಅನ್ನುತ್ತಾರೆ. ನನಗೆ ಎರಡೂ ತಳುಕು ಬಿದ್ದವು. ಕಡಿಮೆ ಮಾರ್ಕು ಬಂದದ್ದರಿಂದ ಆರ್ಟ್ಸ್ ತೆಗೆದುಕೊಂಡೆ. ಇತಿಹಾಸದ ಮೇಲೆ ಆಸಕ್ತಿ ಕುದುರಿತು. ಹೊಟ್ಟೆಪಾಡು ಕರೆದದ್ದರಿಂದ ಪತ್ರಿಕೋದ್ಯಮಿಯಾದೆ. ಇತಿಹಾಸ ಓದುವುದು ಬೇರೆ ಯಾರಿಗೆ ಉಪಯೋಗವಾಗಿದ್ದರೂ ಪತ್ರಿಕೋದ್ಯಮಿಗೆ ದೊಡ್ಡ ಉಪಕಾರವಾಗುತ್ತದೆ. ಇತಿಹಾಸದ ಕ್ಯಾನ್ವಾಸ್ ಇಟ್ಟುಕೊಂಡು ನಾನು ಯಾವಾಗ್ಯಾವಾಗ ಪತ್ರಿಕೆಗೆ ಬರೆದೆನೋ, ಆಗೆಲ್ಲ ಓದುಗನಿಗೆ ಅದು ಇಷ್ಟವಾಗಿದೆ: ಹಿಮಾಲಯನ್ ಬ್ಲಂಡರ್‌ನಿಂದ ಹಿಡಿದು 'ಪಾಪಿಗಳ ಲೋಕದಲ್ಲಿ'ಯ ತನಕ. ಮನಸಿಗೆ ಇಷ್ಟವಾದುದನ್ನು ಮಾಡುವುದು ಮನುಷ್ಯನ ಸ್ವಭಾವ ಅದನ್ನೇ ಈಗ ಮಾಡುತ್ತಿದ್ದೇನೆ;: ದಂಗೆಯ ದಿನಗಳ ಮೂಲಕ. ಹಾಗಂತ ರವಿ ಬೆಳಗೆರೆಯವರು ಮನೋಹರ ಮಳಗಾಂವಕರ್ ಅವರ 'Devil's Wind' ಅನ್ನು ಕನ್ನಡಕ್ಕೆ ತಂದ ಸಂದರ್ಭದಲ್ಲಿ ಹೇಳುತ್ತಾರೆ.

ದಂಗೆಯ ದಿನಗಳು, 'Devil's Wind'ನ ಕನ್ನಡಾನುವಾದ. ೧೮೫೭ರ ಸ್ವಾತಂತ್ರ್ಯ ದಿನಗಳು ಭಾರತದ ಇತಿಹಾಸಕ್ಕೊಂದು ನಿಶ್ಚಿತ ತಿರುವು ನೀಡಿದಂತಹ ದಿನಗಳು. ಮನುಷ್ಯನ ನಿಸ್ಸಹಾಯಕತೆ

ಪ್ರತಿಭಟನೆ, ಆಸೆ, ನಿಷ್ಠೆ, ಕ್ರೌರ್ಯ, ಮೋಸ, ಸಣ್ಣತನ, ಔದಾರ್ಯ ಹೀಗೆ ಎಲ್ಲ ಮುಖಗಳನ್ನೂ ಒಂದೆಡೆ ಚಿತ್ರಿಸಿಕೊಟ್ಟ ಕೃತಿ ದಂಗೆಯ ದಿನಗಳು. ಇದು ಸಿಪಾಯಿ ದಂಗೆಯೆಂದೂ, ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮವೆಂದೂ ಕರೆಯಲ್ಪಟ್ಟ ೧೮೫೭ರ ಘಟನೆಯ ವಿವರಗಳನ್ನು ಈ ಪುಸ್ತಕ ಒಳಗೊಂಡಿದೆ. ಒಂದು ಇತಿಹಾಸ ವಿಷಯಾಧಾರಿತ ಕೃತಿ, ಕಾದಂಬರಿಯಂತೆ ಓದಿಸಿಕೊಂಡು ಹೋಗುವುದು ಇದರ ವಿಶೇಷವೆಂದು ಹೇಳಬಹುದು.

ಇದೇ ಲೇಖಕರ ಇನ್ನೊಂದು ಕೃತಿಯನ್ನು ರವಿಯವರು ಕನ್ನಡಕ್ಕೆ ತಂದಿದ್ದಾರೆ. ಅದು 'The Men Who Killed Gandhi' ಕನ್ನಡಕ್ಕೆ ಬರುವುದರೊಳಗೆ 'ಅವನೊಬ್ಬನಿದ್ದ ಗೋಡ್ಸೆ' ಎಂದಾಗಿದೆ. ಮನೋಹರ ಮಳಗಾಂವಕರ್ ಅವರು ೧೯೭೦ರ ದಶಕದ ಆರಂಭದಲ್ಲಿ ಈ ಪುಸ್ತಕದಲ್ಲಿನ ವಿಷಯ ಕುರಿತು ಸಂಶೋಧನೆ ಮಾಡುತ್ತಿದ್ದಾಗ, ಅವರೆಲ್ಲರೂ ಬದುಕಿದ್ದರು. ಗೋಪಾಲ ಗೋಡ್ಸೆ, ವಿಷ್ಣು ಕರ್‌ಕರೆ ಮತ್ತು ಮದನ್‌ಲಾಲ್ ಪಹವಾ ತಮ್ಮ ಜೀವಾವಧಿ ಶಿಕ್ಷೆ ಮುಗಿಸಿ ಜೈಲಿನಿಂದ ಹೊರಬಂದಿದ್ದರು. ಸರ್ಕಾರಿ ಸಾಕ್ಷೀದಾರನಾಗಿದ್ದ ದಿಬಂಗರ ಬಡ್ಗೆಗೆ ಕ್ಷಮಾದಾನ ಸಿಕ್ಕಿತ್ತು. ಹೀಗಾಗಿ ಪ್ರತಿಯೊಬ್ಬರೂ ತಮ್ಮ ಪಾತ್ರದ ಬಗ್ಗೆ ಮುಕ್ತವಾಗಿ ಲೇಖಕರೊಂದಿಗೆ ಮಾತನಾಡಿದರು ಎಂಬುದಕ್ಕೆ ಈ ಕೃತಿಯಲ್ಲಿ ವಿವರಗಳು ದೊರೆಯುತ್ತವೆ.

ಈ ಪುಸ್ತಕದ ವಿಷಯ ಸರಿಸುಮಾರು ಆರುವರೆ ದಶಕಗಳ ಹಿಂದೆ ನಡೆದ ಭಾರತದ ಅತಿಮುಖ್ಯ ಹತ್ಯೆಯೊಂದರ ಕಥೆ. ೧೯೪೮ರಲ್ಲಿ ನಡೆದ ಹತ್ಯೆಯ ಬಗ್ಗೆ ಬರೆಯಲು ಮಳಗಾಂವಕರ್ ಅವರು ಸುಮಾರು ೧೯೭೭ರಲ್ಲಿ ಕೂಡುತ್ತಾರೆ. ಆ ಸಮಯಕ್ಕೆ ಹತ್ಯೆಯ ಪಾತ್ರಧಾರಿಗಳಾದ ವಿಷ್ಣು ಕರ್‌ಕರೆ, ಮದನಲಾಲ್ ಪಹವಾ, ದಿಗಂಬರ ಬಡ್ಗೆ, ಗೋಪಾಲ ಗೋಡ್ಸೆ ಮುಂತಾದವರೆಲ್ಲ ಜೀವಾವಧಿ ಶಿಕ್ಷೆಯನ್ನು ಪೂರೈಸಿ ಬಂದಿರುತ್ತಾರೆ. ಲೇಖಕರು ಅವರೆಲ್ಲರನ್ನು ನೇರವಾಗಿ ಬೇಟಿಮಾಡುತ್ತಾರೆ. ನೂರಾರು ದಾಖಲೆ ದಸ್ತಾವೇಜುಗಳನ್ನು ಓದುತ್ತಾರೆ. ಗಾಂಧಿಯವರಿಂದ ಹಿಡಿದು ಬಡ್ಗೆಯವರೆಗೆ ಯಾರ ಬಗ್ಗೆಯೂ ಅವರು ಸೂಪರ್ ಲೇಟಿವ್‌ಗಳನ್ನು ಹಚ್ಚಿ ಮಾತನಾಡುವುದಿಲ್ಲ. ಅಪ್ಪಿತಪ್ಪಿಯೂ ಗಾಧಿಯನ್ನು 'ಗಾಂಧೀಜೀ' ಅನ್ನುವುದಿಲ್ಲ. ಹಾಗಂತ ಲೇಖಕರಿಗೆ ಗಾಂಧಿಯ ಬಗ್ಗೆ ಯಾವುದೇ ಅಗೌರವ ಕಂಡುಬರುವುದಿಲ್ಲ. ಆದರೆ ಅವರು ಪಾತ್ರಗಳನ್ನು ಪರಿಚಯಿಸುವ ಶೈಲಿಯೇ ವಿಭಿನ್ನ. ನಾಥೂರಾಮ ಬಳಸಿದ ಪಿಸ್ತೂಲಿನ ಚಿತ್ರ, ವಿಚಾರಣೆ ನಡೆದ ಕೋರ್ಟಿನ ಪೋಟೋ, ಮನೋರಮಾ ಸಳವಿಯ ಹೇಳಿಕೆ, ಪೊಲೀಸರು ಸಲ್ಲಿಸಿದ ಪ್ರಥಮ ವರ್ತಮಾನದ ವರದಿ(FIR) ಮುಂತಾದ ಮಹತ್ವ ಪೂರ್ಣವಾದ ಅನೇಕ ಸಂಗತಿಗಳು ಈ ಪುಸ್ತಕದಲ್ಲಿವೆ.

'ಬ್ಲ್ಯಾಕ್ ಫ್ರೈಡೇ' ಇಂಗ್ಲೀಶ್ ಮೂಲ ಎಸ್.ಹುಸೇನ್ ಜೈದಿ ಅವರು, ೧೯೯೩ರಲ್ಲಿ ಮುಂಬಯಿ ಎಂಬ ನಗರದಲ್ಲಿ ನಡೆದ ಸರಣಿ ಬಾಂಬ್ ಸ್ಫೋಟಗಳ ವಿಷಯಾಧಾರಿತ ಕೃತಿ. ಈ ಪುಸ್ತಕದ ಉಳಿದೆಲ್ಲ ಪಾತ್ರಗಳಿಗಿಂತ ದಾವೂದ್ ಇಬ್ರಾಹಿಂ ಕಸ್ಕರ್ ಮತ್ತು ಟೈಗರ್ ಮೆಮನ್‌ರ ಪಾತ್ರಗಳು ಅತ್ಯಂತ ವಿವಾದಾತ್ಮಕವಾದಂಥವು. ಯಾಕೆಂದರೆ ಈ ಕೃತಿ ಕಾಲ್ಪನಿಕವಾದುದಲ್ಲ. ೧೯೯೩ರ ಮುಂಬಯಿ ಸರಣಿ ಬಾಂಬ್ ಸ್ಫೋಟವನ್ನು ಆಧರಿಸಿದೆ. ಪಾಕಿಸ್ತಾನದ ಕುತಂತ್ರಕ್ಕೆ ಜೊತೆಯಾದದ್ದು ಮುಂಬಯಿಯ ಭೂಗತ ಜಗತ್ತು. ಅಲ್ಲದೇ ಅವರೊಂದಿಗೆ ಕೈ ಜೋಡಿಸಿದವರು ಬಾಲಿವುಡ್‌ನ ಸಿನೆಮಾ ನಟರು. ಒಟ್ಟಾರೆ ಈ ಕೃತಿ ದಾವೂದ್ ಇಬ್ರಾಹಿಂನಿಂದ ಹಿಡಿದು ಟೈಗರ್ ಮೆಮನ್‌ವರೆಗೆ, ಛೋಟಾ ಶಕೀಲ್‌ನಿಂದ ಹಿಡಿದು ಸಂಜಯ್‌ದತ್‌ವರೆಗೆ ಎಲ್ಲರ ಚಿತ್ರವೂ ಇದರಲ್ಲಿವೆ. ಅಲ್ಲಲ್ಲಿ ಸಂಭಾಷಣೆಯ

ರೂಪದಲ್ಲಿ ಕಥಾನಕ ಸಾಗುತ್ತದೆ. ಅದನ್ನೂ ಸಹ ಸಂದರ್ಭಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸೃಷ್ಟಿ ಮಾಡಲಾಗಿದೆ. ಒಬ್ಬ ಪತ್ರಕರ್ತನಿಗಿರಬೇಕಾದ ಮೊದಲ ಜವಾಬ್ದಾರಿಯೆಂದರೆ, ಆತ ಪ್ರಶ್ನೆಗಳನ್ನು ಎತ್ತಬೇಕೇ ಹೊರತು ತೀರ್ಪು ಕೊಡಲು ಹೋಗಬಾರದು. ಈ ಕೆಲಸವನ್ನು ಹುಸೇನ್ ಜೈದಿಯವರು ಜವಾಬ್ದಾರಿಯುತವಾಗಿ ನಿಭಾಯಿಸಿದ್ದಾರೆ ಎಂಬುದಕ್ಕೆ ಈ ಕೃತಿಯೇ ಸಾಕ್ಷಿ. ಇಷ್ಟಾಗಿಯೂ ಈ ಪುಸ್ತಕ ಓದಲು ಕುಳಿತಾಗ ಪತ್ತೇದಾರಿ ಕಾದಂಬರಿಯಂತೆ, ಓದಿ ಮುಗಿಸಿಯಾದ ಮೇಲೆ ಇತಿಹಾಸದ ಒಂದು ದುರಂತ ಅಧ್ಯಾಯದಂತೆ ಭಾಸವಾಗುತ್ತದೆ ಎಂದು ಹೇಳಬಹುದು.

'ವೀಕ್ಲಿ ಇಂಡಿಪೆಂಡೆಂಟ್' ಪತ್ರಿಕೆಯ ಮಾಜಿ ಸಂಪಾದಕ 'ಅಮೀರ್ ಮೀರ್' ಪಾಕಿಸ್ತಾನ ಕಂಡ ಪ್ರಮುಖ ತನಿಖಾ ಪತ್ರಿಕೋದ್ಯಮಿಗಳಲ್ಲಿ ಒಬ್ಬರು. ಇಸ್ಲಾಮಿಕ್ ಉಗ್ರ ಸಂಘಟನೆಗಳ ಬಗ್ಗೆ, ಅವುಗಳಿಗೆ ಪಾಕಿಸ್ತಾನದ ಸೈನ್ಯ ಮತ್ತು ಬೇಹುಗಾರಿಕಾ ಸಂಸ್ಥೆಯಾದ ಐ.ಎಸ್.ಐ.(ISI)ನೊಂದಿಗಿರುವ ಸಂಬಂಧದ ಬಗ್ಗೆ ಅಮೀರ್ ಮೀರ್ ಬರೆದ ಬರಹಗಳು ಪದೇ ಪದೆ ಪಾಕಿಸ್ತಾನದ ಮುಷರ್ರಫ್ ಸರ್ಕಾರದ ಕೆಂಗಣ್ಣಿಗೆ ಗುರಿಯಾಗಿದ್ದವು. ಪಾಕಿಸ್ತಾನದ ಲಾಹೋರ, ಪಂಜಾಬ್ ವಿಶ್ವವಿದ್ಯಾನಿಲಯದಿಂದ ರಾಜ್ಯಶಾಸ್ತ್ರದಲ್ಲಿ ಎಂ.ಎ. ಪದವಿ ಪಡೆದ ಅಮೀರ್ ಮೀರ್, ೧೯೮೮ರಲ್ಲಿ 'ಫ್ರಾಂಟಿಯರ್ ಪೋಸ್ಟ್' ಪತ್ರಿಕೆಯಲ್ಲಿ ಕೆಲಸ ಮಾಡುವುದರೊಂದಿಗೆ ತಮ್ಮ ಪತ್ರಿಕೋದ್ಯಮ ವೃತ್ತಿಯನ್ನು ಆರಂಭಿಸಿದರು. 'ನೀನಾ ಪಾಕಿಸ್ತಾನ?' ಎಂಬುದು ಅಮೀರ್ ಅವರ 'The Pakistan's Terror Network' ಎಂಬ ಕೃತಿಯ ಅನುವಾದ. ಇದು ಪಾಕಿಸ್ತಾನದ ಜಿಹಾದಿ ಜಗತ್ತಿನ ಕರಾಳ ಮುಖಗಳನ್ನು ಪರಿಚಯಿಸಿಕೊಡುತ್ತದೆ. ಅದಕ್ಕೆ ಆ ದೇಶ ಸ್ವತಂತ್ರಗೊಂಡ ಹಲವು ವರ್ಷಗಳ ನಂತರವೂ ಹಾಗಿದೆ. ಮತ್ತೇನನ್ನು ಉತ್ಪಾದನೆ ಮಾಡಲಾಗದ ಸ್ಥಿತಿಯಲ್ಲಿರುವ ಪಾಕಿಸ್ತಾನ, ಇವತ್ತು ಕೇವಲ ಭಯೋತ್ಪಾದನೆಯನ್ನು ಹುಟ್ಟುಹಾಕುತ್ತಿದೆ. ಅದರ ಆಂತರ್ಯದಲ್ಲಿ ಹುಟ್ಟಿ ಬೆಳೆದ ಹಲವಾರು ಭಯೋತ್ಪಾದಕ ಸಂಘಟನೆಗಳ ಸಂಪೂರ್ಣ ಪರಿಚಯ ನೀಡುವುದು ಈ ಪುಸ್ತಕದ ಉದ್ದೇಶ.

ಇಷ್ಟಾಗಿಯೂ ಈ ಪುಸ್ತಕದಲ್ಲಿ ಕೆಲವು ಮಹತ್ವದ ಪ್ರಶ್ನೆಗಳು ಉಳಿಯುತ್ತವೆ. ಕೆಲವಕ್ಕೆ ಅದರಲ್ಲಿಯೇ ವಿವರ ಸಿಕ್ಕುತ್ತದೆ. ಕೆಲವು ಪ್ರಶ್ನೆಗಳು, ಪ್ರಶ್ನೆಗಳಾಗಿಯೇ ಉಳಿಯುತ್ತವೆ. ಅವುಗಳೆಂದರೆ, ಜಿಹಾದಿ ಸಂಘಟನೆಗಳ ವಿವರಗಳಿಂದ ಹಿಡಿದು, ಅಮೇರಿಕಾದ FBIನ ದಸ್ತಾವೇಜುಗಳವರೆಗೆ ಎಲ್ಲವನ್ನು ದಾಖಲಿಸುತ್ತಾರೆ ಅಮೀರ್ ಮೀರ್. ಜೊತೆಗೆ ಭಯೋತ್ಪಾದಕತೆಯ ವಿರುದ್ಧ ಅಷ್ಟೆಲ್ಲ ಅಬ್ಬರಿಸಿ ಯುದ್ಧ ಸಾರಿದ ಅಮೇರಿಕ, ಅಷ್ಟು ಬಡಿದಾಡಿದರೂ ಯಾಕೆ ಅಲ್ ಖೈದಾ ಮತ್ತು ತಾಲಿಬಾನ್‌ಗಳನ್ನು ಸಂಪೂರ್ಣವಾಗಿ ನಾಶ ಮಾಡಲು ಸಾಧ್ಯವಾಗಲಿಲ್ಲ ಎಂಬ ಪ್ರಶ್ನೆಗೆ ವಿವರಗಳನ್ನು ನೀಡುತ್ತಾರೆ. ಸಾಕಷ್ಟು ಬಂಧನಗಳಾದರೂ, ಅಲ್ ಖೈದಾ ನಾಯಕರ, ಕಮ್ಯಾಂಡರುಗಳ ಹತ್ಯೆಯಾದರೂ ಅದರ ಗುಂಪಿನ ಭಯೋತ್ಪಾದಕರು ಹೇಗೆ ಮತ್ತೆ ಮತ್ತೆ ಚಿಗಿತು ನಿಲ್ಲಲು ಸಾಧ್ಯವಾಗುತ್ತಿದೆ ಎಂಬುದನ್ನೂ ಚಿತ್ರಿಸುತ್ತಾರೆ. ಇತ್ತೀಚಿನ ಘಟನೆಗಳನ್ನು ನೋಡುತ್ತಿದ್ದರೆ ಜಿಹಾದಿ ಎಂಬುದು ಪಾಕಿಸ್ತಾನ ಸರ್ಕಾರದ ನಿಯಂತ್ರಣದಿಂದಲೂ ಮೀರಿ ಬೆಳೆದು ಬಿಟ್ಟಿದೆ ಅನ್ನಿಸುತ್ತದೆ. ಇದಕ್ಕೆ ಪರಿಹಾರವೇನು? ಇದು ಈ ಪುಸ್ತಕದ ಕೊನೆಗೆ ಉಳಿಯುವ ಪ್ರಶ್ನೆ. ಬಹುಶಃ ಅದು ಇಡೀ ಜಗತ್ತನ್ನು ಕಾಡುತ್ತಿರುವ ಪ್ರಶ್ನೆ ಎನ್ನಿಸುತ್ತದೆ.

ಇಂಗ್ಲೀಶ್‌ನಲ್ಲಿರುವ ಈ ಮೂಲ ಕೃತಿಯ ಹೆಸರು '26/11 Mumbai Attaced'. ಅದು ಕನ್ನಡಕ್ಕೆ ಬರುವ ಹೊತ್ತಿಗೆ 'ಮೇಜರ್ ಸಂದೀಪ್ ಹತ್ಯೆ' ಆಗಿದೆ. ಇಂಗ್ಲೀಶ್‌ನ ಮೂಲ ಕೃತಿಯನ್ನು ಪತ್ರಕರ್ತೆ

ಹರೀಂದರ್ ಬವೇಜಾ ಸಂಪಾದನೆ ಮಾಡಿದ್ದಾರೆ. ಇದರಲ್ಲಿನ ಬರಹಗಳನ್ನು ಹೆಸರಾಂತ ಪತ್ರಕರ್ತರೂ, ಸಾರ್ವಜನಿಕ ಜೀವನದಲ್ಲಿ ತಮ್ಮದೇ ಆದ ಸ್ಥಾನ ಹೊಂದಿರುವವರೂ ಆದ ಆಶೀಶ್ ಖೇತಾನ್, ಬಚಿ ಕರ್ಕಾರಿಯಾ, ಕ್ರಿಸ್ ಖೇತಾನ್, ಜಾರ್ಜ್ ಕೋಷಿ, ಹರೀಂದರ್ ಬವೇಜಾ, ಹರ್ಷ್ ಜೋಶಿ, ಜೂಲಿಯೋ ರೆಬೆರೋ ಮತ್ತು ರಾಹುಲ್ ಶಿವಶಂಕರ್ ಬರೆದಿದ್ದಾರೆ. ಇವರಲ್ಲಿ ಹೆಚ್ಚಿನವರು ಮುಂಬಯಿಯ ಘಟನೆಗೆ ಪ್ರತ್ಯಕ್ಷ ಸಾಕ್ಷಿಯಾದವರು. ಅರವತ್ತು ಗಂಟೆಗಳ ತನಕ ನಡೆದ ಆ ದುರಂತವನ್ನು ಪತ್ರಿಕೆಗಳಿಗೆ, ಟಿವಿಗಳಿಗೆ ವರದಿ ಮಾಡಿದವರು. ಈ ಪೈಕಿ ಪತ್ರಕರ್ತೆ ಹರೀಂದರ್ ಬವೇಜಾ ಪಾಕಿಸ್ತಾನಕ್ಕೆ ಹೋಗಿ ಲಷ್ಕರ್-ಎ-ತೊಯ್ಬಾದ ಪ್ರಮುಖರನ್ನೇ ಸಂದರ್ಶಿಸಿ ಸಾದ್ಯಂತವಾಗಿ ಬರೆದಿದ್ದಾರೆ.

ಮುಂಬಯಿ ಮೇಲೆ 26/11ರಂದು ನಡೆದ ದಾಳಿಯ ಅಗಾಧತೆಯನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನವೇ ಈ ಪುಸ್ತಕ. ಭಾರತದ ಕೆಂಪುಕೋಟೆ ಮತ್ತು ಪಾರ್ಲಿಮೆಂಟ್ ಸೇರಿದಂತೆ ಅದರ ಪ್ರಜಾಸತ್ತಾತ್ಮಕ ಸಂಸ್ಥೆಗಳ ಮೇಲೆ ಈ ಮುಂಚೆ ಗಂಭೀರ ತರದ ದಾಳಿಗಳು ನಡೆದಿವೆಯಾದರೂ, 26/11ರ ದಾಳಿಯ ಉದ್ದೇಶ ಮತ್ತು ಅದರ ಅಗಾಧತೆಕಗಳೆರಡೂ ತೀರ ವಿಭಿನ್ನ. ಇವರು ಈವರೆಗೆ ಭಾರತಕ್ಕೆ ಬಂದ ಇತರೆ ಉಗ್ರರಂತಲ್ಲ. ಕರಾಚಿಯಿಂದ ಮುಂಬಯಿಯವರೆಗೆ ಸಮುದ್ರದ ಮೂಲಕ ಬಂದ 'ಫಿದಾಯೀನ್'ಗಳೆಂಬ ಆತ್ಮಹತ್ಯಾಳದ ಉಗ್ರರು ಉಳಿದವರೆಲ್ಲರಿಗಿಂತ ವಿಭಿನ್ನ. ಅವರಿಗೆ ಅತ್ಯಂತ ವ್ಯವಸ್ಥಿತವಾದ ತರಬೇತಿ ನೀಡಲಾಗಿರುತ್ತದೆ. ಸುಮಾರು ಒಂದು ವರ್ಷ ಈ ದಾಳಿಯನ್ನು ಯೋಜಿಸಲಾಗಿತ್ತು. ಪೂರ್ವ ಸಿದ್ಧತೆ ನಡೆದಿದ್ದಿತು. ಎಷ್ಟು ವ್ಯವಸ್ಥಿತವಾಗಿ ಯೋಜನೆ ರೂಪಗೊಂಡಿತ್ತೆಂಬುದು. ಈ ದಾಳಿಯ ಭೀಕರತೆಯನ್ನು ಗಮನಿಸಿದರಿಗೆ ಅರ್ಥವಾಗುತ್ತದೆ. ತರಬೇತುಗೊಂಡ ೩೨ ಜನರಲ್ಲಿ ಹತ್ತು ಜನ ಭಯೋತ್ಪಾದಕರನ್ನು ಆಯ್ದು 'ಮಿಷನ್ ಮುಂಬಯಿ'ಗೆ ಕಳುಹಿಸಿಕೊಡಲಾಗಿತ್ತು.

ಈ ಪುಸ್ತಕದಲ್ಲಿನ ಕೆಲವು ಅಧ್ಯಾಯಗಳು ನಡೆದುಹೋದ ದುರಂತವನ್ನು ಸಾದ್ಯಂತವಾಗಿ, ಅದರ ಭೀಕರತೆಯ ಸಮೇತ ಚಿತ್ರಿಸುತ್ತವೆ. ಇಡೀ ಭಾರತ ಹತ್ತು ಜನ ಉಗ್ರರ ಕೈಗೆ ಒತ್ತೆ ಬಿದ್ದಂತಹ ಆ ಅರವತ್ತು ಗಂಟೆಗಳಲ್ಲಿ ಹಿಂಸೆಯೆಂಬುದು ಹೇಗೆ ಹೆಜ್ಜೆ ಹೆಜ್ಜೆಗೂ ಬಿಚ್ಚಿಕೊಂಡು ತಾಂಡವವಾಡಿತು ಎಂಬುದನ್ನು ಅವು ವಿವರಿಸುತ್ತವೆ. ಉಗ್ರರು ಹೇಗೆ ಸಂಚು ಹೂಡಿದ್ದರು ಮತ್ತು ಹೇಗೆ ಅದನ್ನು ಕಾರ್ಯಗತ ಮಾಡಿದರು ಎಂಬುದರ ಕುರಿತು ಬಹುಶಃ ಈವರೆಗೆ ಎಲ್ಲೂ ಬಯಲಾಗದ ಮಾಹಿತಿ ಈ ಕೃತಿಯ ಅಧ್ಯಾಯಗಳಲ್ಲಿದೆ. ಪತ್ರಕರ್ತರಾದ ಆಶೀಶ್ ಖೇತಾನ್ ಮತ್ತು ರಾಹುಲ್ ಶಿವಶಂಕರ್ ಹೊಟೇಲ್ ತಾಜ್, ಒಬೆರಾಯ್ ಮತ್ತು ನಾರಿಮನ್ ಹೌಸ್‌ನಲ್ಲಿ ನಡೆದ ದುರಂತ ಘಟನೆಗಳ ಪ್ರತಿ ವಿವರವನ್ನೂ ನೀಡಿದ್ದಾರೆ. ಭಯೋತ್ಪಾದಕರ ಕಾರ್ಯವಿಧಾನ, ಅವರೊಂದಿಗೆ ಪಾಕಿಸ್ತಾನದಲ್ಲಿ ಕುಳಿತ ಅವರ ಮುಖಂಡರುಗಳು ನಡೆಸಿದ ಸಂಭಾಷಣೆಯ ವಿವರಗಳು, ಅಂಥ ಉಗ್ರರೊಂದಿಗೆ ಇಲ್ಲಿಯ ನ್ಯಾಷನಲ್ ಸೆಕ್ಯುರಿಟಿ ಗಾರ್ಡ್‌ನ ಬಡಿದಾಟದ ರೀತಿ, ಅವರ ಕಾರ್ಯತಂತ್ರ, ಅಂತಿಮವಾಗಿ ಉಗ್ರರ ಮೇಲೆ ಜಯಗಳಿಸಿದ್ದು ಎಲ್ಲವೂ ಇಲ್ಲಿ ದಾಖಲಾಗಿವೆ.

ಹೇಗೆ ನಮ್ಮ ಬೇಹುಪಡೆಗಳು ವಿಫಲವಾದವು, ಈ ಕೂಡಲೇ ಸರಿಪಡಿಸಬೇಕಾದಂತಹ ವೈಫಲ್ಯಗಳು ಯಾವವು ಎಂಬುದರ ಬಗ್ಗೆಯೂ ಇಲ್ಲಿ ಚರ್ಚಿಸಲಾಗಿದೆ. ಜೀವಂತವಾಗಿ ಉಳಿದುಕೊಂಡ ಏಕೈಕ ಉಗ್ರ ಅಜ್ಮಲ್ ಕಸಬ್ ಸೇರಿದಂತೆ ಎಲ್ಲ ಉಗ್ರರನ್ನೂ ತರಬೇತುಗೊಳಿಸಿ ಕಳಿಸುವ ಲಾಹೋರದ

ಬಳಿಯ 'ಮುರಿಡ್ಕೆಯತ್ತ' ಓದುಗರನ್ನು ಮತ್ತೊಂದು ಅಧ್ಯಾಯ ಕರೆದೊಯ್ಯುತ್ತದೆ. ಹರ್ಷ್ ಜೋಶಿ, ಜಾರ್ಜ್ ಕೋಷಿ ಮತ್ತು ಬಚಿ ಕರ್ಕಾರಿಯಾ ಅವರು ತಮ್ಮ ಅಧ್ಯಾಯಗಳಲ್ಲಿ ಸಾವಿನಂಚಿಗೆ ಹೋಗಿ ಮರಳಿ ಬಂದ ಒತ್ತೆಯಾಳುಗಳ ಕಥನಗಳನ್ನು, ಮುಂಬಯಿಯ ಬದುಕು ಮತ್ತು ಮನಸುಗಳನ್ನು ಸೆರೆ ಹಿಡಿದಿದ್ದಾರೆ.

ಒಂದು ಕಡೆ 26/11ರ ದುರಂತದ ಕುರಿತ ಸಮಗ್ರ ಚಿತ್ರಣ ನೀಡುತ್ತಿರುವಾಗಲೇ, ಕ್ರಿಸ್ ಖೇತನ್ ಅವರು ಈ ವೃತ್ತಾಂತದಲ್ಲಿ ಸಾವನಪ್ಪಿದ ಮುಂಬಯಿ ಪೊಲೀಸರ ಕುಟುಂಬದವರನ್ನು ಮಾತನಾಡಿಸಿ ಬಂದಿದ್ದಾರೆ. ಈ ಕೃತಿ 26/11ರ ಹಲ್ಲೆ, ಅದರ ತಂತ್ರ, ಯೋಜನೆ ಮತ್ತು ಕಾರ್ಯಚರಣೆಗಳ ಬಗ್ಗೆ ಹೇಳುತ್ತಲೇ, ಆ ನಂತರ ಪೊಲೀಸರು ಮಾಡಿದ ತನಿಖೆಯ ಬಗ್ಗೆಯೂ ಮಾತನಾಡುತ್ತದೆ. ಅಂತೆಯೇ ಭಾರತದ ಇನ್ನು ಮುಂದೆಯೂ ಏಕೆ ಮತ್ತು ಹೇಗೆ ಇಂತಹ ದಾಳಿಗಳನ್ನು ಎದುರಿಸಬೇಕಾಗುತ್ತದೆ ಎಂಬುದರ ಚರ್ಚೆಯನ್ನಿಲ್ಲಿ ಮಾಡಲಾಗಿದೆ. ಈ ದುರಂತಕ್ಕೆ ಕಾರಣರಾದ ಭಯೋತ್ಪಾದಕರ ನಿಗ್ರಹ ಕಾರ್ಯಚರಣೆಯಲ್ಲಿ ಕನ್ನಡದ ಸಂದೀಪ್ ಉನ್ನಿಕೃಷನ್ ಒಬ್ಬರು ಎಂಬುದು ಗಮನೀಯ ವಿಷಯ. ಈ ಪುಸ್ತಕದ ಅನುವಾದಕರಾದ ರವಿ ಬೆಳಗೆರೆಯವರು ಈವರೆಗೆ ಮುಂಬಯಿಯ ಸರಣಿ ಬಾಂಬ್ ಸ್ಫೋಟಗಳಿಗೆ ಸಂಬಂಧಿಸಿದಂತೆ ಬ್ಲ್ಯಾಕ್ ಫ್ರೈಡೇ ಪುಸ್ತಕವನ್ನು ಅನುವಾದಿಸಿದ್ದಾರೆ. ಅಲ್ಲದೆ ಇಲ್ಲಿಯವರೆಗೆ ಇಂಗೀಶ್‌ನಲ್ಲಿಯೂ ಬರದೆ ಇರುವಂತಹ ಪುಸ್ತಕ 'ಡಿ ಕಂಪೆನಿ' ಎಂಬ ಶೀರ್ಷಿಕೆಯಲ್ಲಿ, ಮುಂಬಯಿಯ ಭೂಗತ ಜಗತ್ತಿನ ಬಗ್ಗೆ ಹೇಳುವ ಕೃತಿಯನ್ನು ಬರೆದಿದ್ದಾರೆ. ಈ ಎಲ್ಲ ಅಂಶಗಳಿಂದ ಭಯೋತ್ಪಾದನೆ ಎಂಬುದು ಇಂದಿಗೂ ಪ್ರಪಂಚಕ್ಕೆ ಮಾಯದ ಹುಣ್ಣಿನಂತಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿಗಳಲ್ಲಿ ಒಬ್ಬನಾಗಿದ್ದ 'ಮೆಡೋಸ್ ಟೇಲರ್' ಭಾರತವನ್ನು ಕುರಿತು ಬರೆದವರಲ್ಲಿ ಪ್ರಮುಖರು. ಥಗ್ಗ(ಠಕ್ಕ)ರ ಗುಂಪಿನ ನಾಯಕನೊಬ್ಬ ಕೈದಿಯಾಗಿದ್ದು, ಅವನಿಂದಲೇ ಆತ್ಮ ಕಥನ ರೂಪದಲ್ಲಿ ಥಗ್ಗ ವೃತ್ತಿಯ ಭೀಕರತೆಯನ್ನು ಹೇಳಿಸಿಕೊಂಡು ದಾಖಲಿಸಿದ್ದಾರೆ. ಅದರ ಹೆಸರು 'Confessions of A Thug'. ಇದನ್ನು ರವಿ ಬೆಳಗೆರೆಯವರು 'ರೇಷ್ಮೆ ರುಮಾಲು' ಎಂಬ ಶೀರ್ಷಿಕೆಯಡಿ ಅನುವಾದಿಸಿದ್ದಾರೆ.

೧೮-೧೯ನೆಯ ಶತಮಾನಗಳಲ್ಲಿನ ಭಾರತೀಯ ಸ್ಥಿತಿಗತಿಗಳ ಬಗ್ಗೆ ಬೆಳಕು ಬೀರುವಂತಹ ಒಂದು ಕೃತಿಯಿದು. ಇಲ್ಲಿನ ಘಟನಾವಳಿಗಳನ್ನು ಅರಿತುಕೊಳ್ಳುವುದಕ್ಕೆ ಸ್ಥೂಲವಾಗಿಯಾದರೂ, ಆ ಯುಗದ ಸ್ಪಷ್ಟವಾದ ಐತಿಹಾಸಿಕ ಹಿನ್ನೆಲೆಯ ಒಂದು ಚಿತ್ರಣ ಅಗತ್ಯ. ೧೭೦೭ರಲ್ಲಿ ಮೊಗಲ್ ಸಂತತಿಯ ಕೊನೆಯ ಸಮರ್ಥ ಸಾಮ್ರಾಟ ಔರಂಗಜೇಬ ನಿಧನನಾದ ಮುಂದಿನ ೧೫೦ ವರ್ಷಗಳ ಕಾಲ ಭಾರತದ ರಾಜಕೀಯ ರಂಗದಲ್ಲಿ ನಿರ್ಣಾಯಕವಾದ ಮೇಲುಗೈ ಸಾಧಿಸುವ ಉದ್ದೇಶದಿಂದ ನಮ್ಮ ದೇಶದಲ್ಲಿ ಬಹುಮುಖ ಸೆಣಸಾಟಗಳು, ಹೋರಾಟಗಳು ಜರುಗಿದವು. ಇದರಲ್ಲಿ ಬ್ರಿಟಿಷರು, ಮರಾಠರು ಸ್ವತಂತ್ರ ಅಸ್ತಿತ್ವ ಗಳಿಸಲು ಸಾಹಸ ಪಡುತ್ತಿದ್ದ ಮೊಗಲರ ಮಾಜಿ ಸುಭೇಧಾರರು, ನವಾಬರು ಮುಖ್ಯರು. ಈ ರಾಜಕೀಯ ಅಸ್ಥಿರತೆಯ ಸನ್ನಿವೇಶದಲ್ಲಿ ಐವತ್ತು-ನೂರು ಅನುಯಾಯಿಗಳನ್ನು ಕೂಡಿಸಿಕೊಂಡು ಶಸ್ತ್ರಸಜ್ಜಿತರಾಗಿ, ಕುದುರೆಗಳನ್ನೇರಿ ಹೊರಟವರೆಲ್ಲರೂ ಜನ ಸಾಮಾನ್ಯರೂ, ಮುಖ್ಯವಾಗಿ ವ್ಯಾಪಾರಿಗಳು, ಗ್ರಾಮೀಣ ಸಮುದಾಯದವರನ್ನು ಹೆದರಿಸಿ, ಬೆದರಿಸಿ ಅಥವಾ ಹತ್ಯಾಕಾಂಡಗಳನ್ನು ಜರುಗಿಸಿ ಸುಲಿಗೆ ಮಾಡತೊಡಗಿದರು. ಈ ಕಾಂದಬರಿಯಲ್ಲಿ ಚಿತ್ರಿತವಾಗಿರುವ ಥಗ್ಗ ವೃತ್ತಿಯು ೧೩ನೆಯ

ಶತಮಾನದಿಂದಲೂ ಅಲ್ಲಲ್ಲಿ ಅಸ್ತಿತ್ವದಲ್ಲಿದ್ದಿತೆಂದು ಹೇಳಲಾಗಿದೆ. ಆದರೆ ೧೯ನೆಯ ಶತಮಾನದ ಆದಿ ಭಾಗದಲ್ಲಿ ಅದರ ಹಾವಳಿ ಪ್ರಬಲವಾಯಿತು ಎಂದು ತಿಳಿದುಬರುತ್ತದೆ. ಆ ಶತಮಾನದಲ್ಲಿ ಕ್ರಮೇಣವಾಗಿ ಭಾರತದಲ್ಲಿ ಆಡಳಿತವನ್ನು ಬಿಗಿಗೊಳಿಸುತ್ತಿದ್ದ ಬ್ರಿಟಿಷರು ಕೈಗೊಂಡ ಪ್ರಮುಖ ಕಾರ್ಯಾಚರಣೆಗಳಲ್ಲಿ ಒಂದು, ಈ ಥಗ್ಗ ವೃತ್ತಿಯ ನಿರ್ಮೂಲನ.

ಇತರ ದೃಷ್ಟಿಗಳಿಂದಲೂ ಪ್ರಸಿದ್ಧನಾದ ಗವರ್ನರ್ ಜನರಲ್ ವಿಲಿಯಂ ಬೆಂಟಿಂಕ್ ಥಗ್ಗರು ಮತ್ತು ಡಕಾಯಿತರನ್ನು ನಿರ್ಮೂಲನ ಮಾಡುವ ಸಲುವಾಗಿ ಒಂದು ಇಲಾಖೆಯನ್ನೇ ಸ್ಥಾಪಿಸಿ, ೧೮೩೫ರಲ್ಲಿ ಡಬ್ಲ್ಯೂ ಎಚ್. ಸ್ಲೀಮನ್ ಎಂಬ ಅಧಿಕಾರಿಯನ್ನು ಅದರ ಮುಖ್ಯಸ್ಥನನ್ನಾಗಿ ನೇಮಿಸಿದನು. ಈ ಕಾದಂಬರಿಯಲ್ಲಿ ಅದೇ ಶತಮಾನದಲ್ಲಿ ಪ್ರಬಲವಾಗಿದ್ದ ಪಿಂಡಾರಿ ಚಟುವಟಿಕೆಗಳ ಒಂದು ಸ್ಥೂಲ ಚಿತ್ರಣವೂ ದೊರೆಯುತ್ತದೆ. ೧೮೧೭–೧೮ರಲ್ಲಿ ಜರುಗಿದ ಮೂರನೆಯ ಮರಾಠ ಯುದ್ಧವನ್ನು ಪಿಂಡಾರಿ ಯುದ್ಧ ಎಂದೂ ಕರೆಯಲಾಗಿದೆ. ಇಲ್ಲಿ ಬರುವ ಪಿಂಡಾರಿ ನಾಯಕ ಜೀತು ಅವರ ಪ್ರಮುಖರಲ್ಲಿ ಒಬ್ಬ. ಪಿಂಡಾರಿಗಳನ್ನು ತಹಬದಿಗೆ ತರುವುದಕ್ಕಾಗಿ ಬ್ರಿಟಿಷರು ದ್ವಿಮುಖ ನೀತಿಯೊಂದನ್ನು ಅನುಸರಿಸಿದರು ಎಂಬುದಾಗಿ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಥಗ್ಗರ ಮುಂದಾಳು ಅಮೀರ್ ಅಲಿಯು ಇಲ್ಲಿ ಹೇಳಿಕೊಂಡಿರುವ ತನ್ನ ವೃತ್ತಾಂತವನ್ನು ಫಿಲೀಪ್ ಮೆಡೋಸ್ ಟೇಲರ್ ದಾಖಲಿಸುತ್ತ ಹೋಗಿದ್ದಾರೆ. ಒಂದು ರೀತಿಯಲ್ಲಿ ಇದು ಅಮೀರ್ ಅಲಿಯ ಆತ್ಮ ಕಥನ. ಅದರ ಲೇಖಕರು ಮಾತ್ರ ಮೆಡೋಸ್ ಟೇಲರ್.

ಆತ ಹೀಗೊಂದು ಪುಸ್ತಕ ಬರೆಯುವವರೆಗೆ ಭಾರತ ದೇಶದಲ್ಲಿ ಥಗ್ಗ ಸಂಪ್ರದಾಯ ಅಂತ ಒಂದಿದೆ ಎಂಬುದು ಹೊರ ಜಗತ್ತಿಗೆ ಗೊತ್ತೇ ಇರಲಿಲ್ಲ. ಸಂಭಾವಿತ(ಸರಳ) ಜೀವನ ಸಾಗಿಸುತ್ತಲೇ ವರ್ಷಕ್ಕೊಂದು ಸಲ ಗುಂಪು ಕಟ್ಟಿಕೊಂಡು ಹೊರಡುತ್ತಿದ್ದ ಥಗ್ಗರು, ದಾರಿಯುದ್ದಕ್ಕೂ ನೂರಾರು ಕೊಲೆಗಳನ್ನು ಮಾಡಿ, ಶವಗಳ ಸುಳಿವೂ ಸಿಗದಂತೆ ಹೂತು ಹಾಕಿ ಹಿಂತಿರುಗಿ ಮತ್ತೆ ಸಭ್ಯತೆಯ ಪರದೆಯ ಹಿಂದೆ ಬದುಕುತ್ತಿದ್ದರು. ಅವರಲ್ಲಿ ಹಿಂದೂಗಳೂ, ಸೈಯದ್ ಸುನ್ನಿ, ಮುಸಲ್ಮಾನರೂ ಇರುತ್ತಿದ್ದರು. ದೇವರ ಹೆಸರಿನಲ್ಲಿ ಎಲ್ಲವೂ ನಡೆಯುತ್ತಿತ್ತು. ಪ್ರತ್ಯೇಕವಾದ 'ರಾಮಸಿ' ಎಂಬ ಭಾಷೆಯೇ ಇತ್ತು ಎಂಬುದಾಗಿ ಈ ಕೃತಿಯಿಂದ ತಿಳಿದುಬರುತ್ತದೆ.

ಇದು ಕೇವಲ ಹತ್ಯಾ ಕಥನವಾಗದೆ, ಸಾಗುತ್ತ ಸಾಗುತ್ತ ಭಾರತ ಇತಿಹಾಸದ ಒಂದು ಭಾಗವೇ ಆಗುತ್ತದೆ. ಅಲ್ಲೆಲ್ಲೋ ಇದು ಮಾನವೀಯ ಸಂಬಂಧಗಳ ಕನ್ನಡಿಯಾಗುತ್ತದೆ. ರಾಗ ದ್ವೇಷಗಳ ಘಟ್ಟವಾಗುತ್ತದೆ. ಪಶ್ಚಾತ್ತಾಪದ, ಕರುಣೆಯ ಮೂಟೆಯಾಗುತ್ತದೆ. ಬಹುಶಃ ಇವೆಲ್ಲ ಕಾರಣಗಳಿಂದಾಗಿಯೇ ಸಾವಿರ ಕೊಲೆಗಳ ಕಥನವಾದರೂ ಓದಿಸಿಕೊಂಡು ಹೋಗುತ್ತದೆ. ಇದು ಏಕಕಾಲದಲ್ಲಿ ಸಾಹಿತ್ಯವು ಹೌದು, ಇತಿಹಾಸವೂ ಹೌದು, ಒಂದು ರೀತಿಯಲ್ಲಿ ಸಮಯೋಚಿತವಾದ ಎಚ್ಚರಿಕೆಯೂ ಹೌದು.

ಹತ್ಯೆಯೊಂದರ ಬಗ್ಗೆ ಕಾದಂಬರಿ ಬರೆದರೆ ಓದಲು ಚೆನ್ನಾಗಿರುತ್ತದೆ. ಆದರೆ ಒಬ್ಬ ಮನುಷ್ಯ ಎದುರಿಗೆ ಕುಳಿತು ಒಂದೇ ರೀತಿಯಲ್ಲಿ ತಾನು ಮಾಡಿದ ಸರಿಸುಮಾರು ಒಂದು ಸಾವಿರ ಹತ್ಯೆಗಳ ಬಗ್ಗೆ ವಿವರಣೆ ಕೊಡುತ್ತ ಹೋದರೆ ಓದುವ ಆಸಕ್ತಿ ಹೇಗೆ ತಾನೇ ಉಳಿದೀತು? ಆದರೆ ಆಸಕ್ತಿ ಉಳಿಯುವ ಹಾಗೆ ಕಡೆತನಕ ಓದಿಸಿಕೊಂಡು ಹೋಗುವ ಹಾಗೆ ಬರೆದಿದ್ದಾರೆ ಮೆಡೋಸ್ ಟೇಲರ್. ಅವರ ಇದೇ ಪುಸ್ತಕವನ್ನು 'ಠಕ್ಕನೊಬ್ಬನ ಆತ್ಮಚರಿತ್ರೆ' ಎಂಬುದಾಗಿ ರವಿಯವರಿಗಿಂತ ಮುಂಚೆಯೇ(೨೦೦೦) ಎನ್.ಪಿ.ಶಂಕರನಾರಾಯಣರಾವ್ ಕನ್ನಡಕ್ಕೆ ತಂದಿದ್ದಾರೆ. ವಿಷಯ

ದೃಷ್ಟಿಯಿಂದ ಏನು ವ್ಯತ್ಯಾಸವನ್ನು ಕಾಣಲಾಗದಾದರೂ, ಹೇಳುವ ಶೈಲಿಯಲ್ಲಿ ರವಿಯವರ ಹಿಂದಿನ ಎಲ್ಲ ಬರಹಗಳ ಶೈಲಿ ರೇಷ್ಮೆ ರುಮಾಲು ಕೃತಿಯಲ್ಲಿ ಕಾಣಬಹುದು.

ರವಿ ಬೆಳಗೆರೆಯವರು ಅನೇಕ ಕೃತಿಗಳನ್ನು ಅನುವಾಸಿದ್ದಾರೆ. ಅವುಗಳಲ್ಲಿ ಭಯೋತ್ಪಾದನೆ, ಇತಿಹಾಸ, ದೇಶಕ್ಕೆ ಸಂಬಂಧಿಸಿದ ವಿಷಯಗಳನ್ನು ಕಾಣಬಹುದು. ಮೂಲತಃ ಅನುವಾದ ಕೃತಿಗಾಳದರೂ ಕನ್ನಡಕದ ಓದುಗರಿಗೆ ಅವು ಸ್ವತಂತ್ರ ಕೃತಿಗಳಂತೆ ಕಾಣುತ್ತವೆ. ಮತ್ತು ಮೂಲ ಲೇಖಕರುಗಳೆಲ್ಲರೂ ಹೆಚ್ಚಿನದಾಗಿ ಪತ್ರಕರ್ತರೇ ಎಂಬುದು ಮತ್ತೊಷದು ವಿಶೇಷ. ಅವರುಗಳ ವಿಷಯಗಳ ಆಯ್ಕೆಯ ಹಿನ್ನೆಲೆಯನ್ನು ಗಮನಿಸಿದಾಗ, ಸಾಮಾಜಿಕ ಕಳಕಳಿಯ ಅರಿವಾಗುತ್ತದೆ. ಸಮಾಜಕ್ಕೆ ಅಂತಹ ವಿಷಯಗಳನ್ನು ತಲುಪಿಸುವ, ಎಚ್ಚರಿಸುವ, ಚಿಂತಿಸುವಂತೆ ಮಾಡುವ ಜವಾಬ್ದಾರಿ ಗಮನೀಯ ಸಂಗತಿ. ಒಬ್ಬ ಪತ್ರಕರ್ತ ಏನನ್ನು ಮಾಡಬಲ್ಲನೆಂದರೆ, ಸಮಾಜಕ್ಕೆ ವಿಷಯವನ್ನು ಮುಟ್ಟಿಸಬಲ್ಲ, ಪ್ರಶ್ನಿಸುವಂತೆ ಮಾಡಬಲ್ಲ. ರವಿಯವರನ್ನೊಳಗೊಂಡು ಮೇಲಿನ ಎಲ್ಲ ಲೇಖಕರು ತಮ್ಮ ಬರಹಗಳ ಮೂಲಕ ಅದನ್ನು ಮಾಡಿದ್ದಾರೆ ಎನಿಸುತ್ತದೆ.

ಮುಖ್ಯವಾಗಿ ಈ ಭಾಗದ ಉದ್ದೇಶವಿಷ್ಟೆ ರವಿ ಬೆಳಗೆರೆಯವರು ಇತರ ಭಾಷೆಗಳಿಂದ ಕನ್ನಡಕ್ಕೆ ತಂದ ಕೃತಿಗಳ ವಿಷಯ, ಮಹತ್ವವನ್ನು ಪರಿಚಯಿಸಿಕೊಡುವುದೇ ಹೊರತು ಅನುವಾದದ ಬಗ್ಗೆ ಹೇಳುವುದಲ್ಲ. ಆ ಕಾರಣದಿಂದ ಅನುವಾದದ ಆಳ-ವಿಸ್ತಾರಕ್ಕೆ ಇಣುಕುವ ಪ್ರಯತ್ನಕ್ಕೆ ಮುಂದಾಗಿರುವುದಿಲ್ಲ.

**೩.೮. ಅಂಕಣ ಮತ್ತು ಪತ್ರ ಸಾಹಿತ್ಯ**

ಸುಮಾರು ಐವತ್ತು ವರ್ಷಗಳ ಹಿಂದೆ ಪ್ರಾರಂಭವಾದ ಹೊಸ ರೀತಿಯ ಒಂದು ಬರಹ ಈ ಅಂಕಣ ಸಾಹಿತ್ಯ. ಇಂಗ್ಲೀಶ್‌ನಲ್ಲಿ ಯಾವುದನ್ನು 'ಕಾಲಮ್ ರೈಟಿಂಗ್' ಎನ್ನುತ್ತಾರೋ ಅದರ ಕನ್ನಡ ರೂಪವೇ ಅಂಕಣ ಬರಹ. ಅದನ್ನು ಬರೆಯುವವನು 'ಕಾಲಮಿಸ್ಟ್', ಅಂದರೆ 'ಅಂಕಣಕಾರ'. 'ಎಸ್ಸೇಯಿಸ್ಟ್' ಎಂದರೆ ಪ್ರಬಂಧಕಾರ ಇರುವ ಹಾಗೆ. ಇದು ವರ್ತಮಾನ ಪತ್ರಿಕೆಗಳಲ್ಲಿ ಪ್ರಕಟವಾಗುವ ವಿವಿಧ ಲೇಖನಗಳ ಗದ್ಯ ಸಾಹಿತ್ಯದ ಬೆಳವಣಿಗೆಗೆ ತನ್ನ ಕೊಡುಗೆಯನ್ನು ನೀಡಿದೆ. ಪತ್ರಿಕೋದ್ಯಮ ಮಾಡಿದವರಲ್ಲಿ ಪ್ರಸಿದ್ಧ ಸಾಹಿತಿಗಳೂ ಇದ್ದಾರೆ. ಡಿ.ವಿ.ಜಿ, ತಿ.ತಾ. ಶರ್ಮ, ಮಾಸ್ತಿ, ಸಿದ್ದವನಹಳ್ಳಿ ಕೃಷ್ಣಶರ್ಮರಂಥವರು ಇದಕ್ಕೆ ನಿದರ್ಶನ. ಇವರೆಲ್ಲ ಸಾಹಿತ್ಯ ಮಾತ್ರವಲ್ಲದೆ ಕಲೆ, ರಾಜಕೀಯ, ಸಾಮಾಜಿಕ ಚಿಂತನೆ ಹೀಗೆ ಬೇರೆ ಬೇರೆ ಜ್ಞಾನ ಶಾಖೆಗಳಿಗೆ ಸೇರಿದ ವಿಷಯಗಳ ಸಂಬಂಧವಾಗಿಯೂ ಲೇಖನಗಳನ್ನು ಪ್ರಕಟಿಸಿದವರು. ಆ ಮೂಲಕ ಅವು ಕನ್ನಡ ಗದ್ಯ ಬೆಳವಣಿಗೆಗೆ ಕಾರಣವಾಗಿವೆ. ಹಿಂದೆ ಪತ್ರಿಕೋದ್ಯಮದಲ್ಲಿ ಇದ್ದವರು ಮಾತ್ರ ಇಂಥ ಬರಹವನ್ನು ಮಾಡುತ್ತಿದ್ದರು; ಈಗಲೂ ಮಾಡುತ್ತಿದ್ದಾರೆ. ಕಾಲಾಂತರದಲ್ಲಿ ಹೊರಗಿನ ಲೇಖಕರೂ ಆ ಬಗೆಯ ಲೇಖನವನ್ನು ಪತ್ರಿಕೆಗಳಿಗೆ ಬರೆಯತೊಡಗಿದರು. ಒಬ್ಬನೇ ಲೇಖಕ ಒಂದೇ ಪತ್ರಿಕೆಯಲ್ಲಿ ನಿರ್ದಿಷ್ಟ ಕಾಲ ನಿಯಮಿತವಾಗಿ ಲೇಖನ ಬರೆಯುವ ಪದ್ಧತಿ ಪ್ರಾರಂಭವಾಗಿ ಅದು ಅಂಕಣ ಬರಹದ ಉದಯಕ್ಕೆ ದಾರಿ ಮಾಡಿಕೊಟ್ಟಿತು.

ಪತ್ರಿಕೋದ್ಯಮಕ್ಕೂ ಅಂಕಣ ಸಾಹಿತ್ಯಕ್ಕೂ ಬಿಡದ ನಂಟು. 'ವರ್ತಮಾನ ಪತ್ರಿಕೆಗೆ ಕ್ರಮವಾಗಿ ತನ್ನ ಹೆಸರಿನಲ್ಲಿ ಸಮಕಾಲೀನ ಸ್ಥಿತಿಗತಿಗಳನ್ನು ವ್ಯಾಖ್ಯಾನಿಸುವ ಸ್ಥಿರ ಶೀರ್ಷಿಕೆಯ ಲೇಖನಮಾಲೆಯನ್ನು ಬರೆಯುವವನು ಅಂಕಣಕಾರ ಎಂಬುದಾಗಿ ಅಂಕಣಕಾರನನ್ನು ಬ್ರಿಟಾನಿಯಾ ವಿಶ್ವಕೋಶ

ವ್ಯಾಖ್ಯಾನಿಸುತ್ತದೆ'.[೬೬] ಈ ಪ್ರಕಾರದ ವಸ್ತು ಲಘುವಾಗಿರಬಹುದು. ಗಂಭೀರವಾಗಿಯೂ ಇರಬಹುದು. ಯಾವುದಾದರೂ ನಿರ್ದಿಷ್ಟ ವಿಚಾರವನ್ನು ಕುರಿತಾಗಿರಬಹುದು. ಇಲ್ಲವೇ ಜೀವನ ಬಗೆಗಿನ ಬಹುಮುಖ ನೋಟವನ್ನು ಹೊಂದಿರಬಹುದು. ವಿಷಯ ಏನೇ ಇರಲಿ, ಅಂಕಣಕಾರನ ಧೋರಣೆಗೆ ಆದ್ಯತೆ, ಸಾಂದರ್ಭಿಕತೆ ಎನ್ನುವುದು ಅದರ ಮತ್ತೊಂದು ಗುಣ. ಅಲ್ಲದೇ ಅದುವೇ ಅಂಕಣಗಳ ಶಕ್ತಿ ಹಾಗೂ ಮಿತಿ. ವಾರ, ಪಕ್ಷ, ತಿಂಗಳು ಹೀಗೆ ನಿರ್ದಿಷ್ಟ ಕಾಲ ಮಿತಿಗೆ ಹಾಗೂ ಸಂಪಾದಕರು ಒದಗಿಸಿದ ಸ್ಥಳಾವಕಾಶದ ಮಿತಿಗೆ ಬದ್ಧವಾಗಿದ್ದು, ತಮ್ಮ ಆಯ್ಕೆಯ ವಿಷಯಕ್ಕೆ ಅದನ್ನು ಸಹಜ ಮಿತಿಯನ್ನಾಗಿ ಒಗ್ಗಿಸಿಕೊಳ್ಳುವ ಕೌಶಲ ಅಂಕಣಕಾರನಿಗೆ ಇರಬೇಕಾಗುತ್ತದೆ.

ಪ್ರಸಿದ್ಧ ಅಂಕಣಕಾರ ಹಾ.ಮಾ.ನಾಯಕರು ಹೇಳುವಂತೆ 'ಸೃಜನಶೀಲ ಕಲೆ ಕಲೆಗಾರನ ಮನಸ್ಸು ಹೌದು; ಸಮಷ್ಟಿ ಸಮುದಾಯದ ಮನಸ್ಸೂ ಹೌದು. ಸಾಮೂಹಿಕ ಮನಸ್ಸಿಗೆ ರೂಪುಕೊಡುವುದಕ್ಕಾಗಿ ಲೇಖಕನೂ ಸೇರಿದಂತೆ ಕಲೆಗಾರನನ್ನು ಒಂದು ಸಮೂಹ ಆಯ್ಕೆ ಮಾಡುತ್ತದೆ. ಅವನಲ್ಲಿ ಸಮೂಹ ಹಿಂದಿನ, ಇಂದಿನ ಮಾತ್ರವಲ್ಲ ಮುಂದಿನ ಮನಸ್ಸೂ ರೂಪುಗೊಳ್ಳುತ್ತದೆ'.[೬೭] ಇತರ ಸಾಹಿತ್ಯ ಪ್ರಕಾರಗಳಂತೆಯೇ ಸಮುದಾಯದ ಅಗತ್ಯ ಹಾಗೂ ಬರಹಗಾರರ ಆಂತರಿಕ ಪ್ರೇರಣೆ ಒಂದಾಗಿ ಅಂಕಣ ಸಾಹಿತ್ಯ ಉಗಮವಾಯಿತು. ಅಂಕಣ ಸಾಹಿತ್ಯ ಎಷ್ಟರ ಮಟ್ಟಿಗೆ ಸಾಹಿತ್ಯವಾಗಬಹುದು, ಸೃಜನಶೀಲವಾಗಿರಬಹುದು ಎಂಬುದನ್ನು ಅನೇಕ ಲೇಖಕರು ತೋರಿಸಿಕೊಟ್ಟಿದ್ದಾರೆ. ಜಗತ್ತನ್ನು ತನ್ನ ತೆಕ್ಕೆಗೆಳೆದುಕೊಂಡು ಅಂಕಣದ ಮೂಸೆಯಲ್ಲಿಡುವಾಗ ಸದಾ ತೆರೆದಿರುವುದು ಅಂಕಣಕಾರನ ಒಳಗಣ್ಣು. ಆದ್ದರಿಂದ ಅಂಕಣ ಸಾಹಿತ್ಯ ಸಂಪೂರ್ಣವಾಗಿ ಅಂಕಣಕಾರನದೇ ಆಗಿರುತ್ತದೆ. ಈ ಪ್ರಕಾರದಲ್ಲಿ ಸಾಧ್ಯವಿರುವಷ್ಟು ಆತ್ಮನಿಷ್ಠತೆ, ಲಲಿತ ಪ್ರಬಂಧವನ್ನುಳಿದು ಬೇರೊಂದು ಪ್ರಕಾರದಲ್ಲಿ ಇಲ್ಲ. ಆತ್ಮ ನಿಷ್ಠತೆಯನ್ನುವುದು ವಸ್ತುನಿಷ್ಠತೆಯಾಗಿ ಮಾರ್ಪಡುವುದೇ ಈ ಪ್ರಕಾರದ ಒಂದು ಮಹತ್ವದ ವೈಶಿಷ್ಟ್ಯ.

ಇಂಥ ಅಂಕಣ, ಅಂಕಣಕಾರನ ಆಶಯಗಳನ್ನು ಅರಿಯಲು, ವಿಶ್ಲೇಷಣೆಯ ಲಾಭ ಪಡೆಯಲು ಜಗತ್ತಿನಾದ್ಯಂತ ಓದುಗರು ಕುತೂಹಲಿಗಳಾಗಿರುತ್ತಾರೆ. ಒಂದು ರೀತಿಯಲ್ಲಿ ಅಂಕಣಕಾರ ಓದುಗ, ಸಹೃದಯನ ಗೆಳೆಯ, ತತ್ವಶಾಸ್ತ್ರಿ ಮತ್ತು ಮಾರ್ಗದರ್ಶಿ ಆಗಿರುತ್ತಾನೆ. ಇದು ಬರಿಯ ರಾಜಕೀಯಕ್ಕೆ ಸಂಬಂಧಿಸಿರುವುದಿಲ್ಲ. ಜೀವನದ ಎಲ್ಲ ವಲಯಗಳಿಗೂ ವಿಸ್ತರಿಸಿರುತ್ತದೆ. ಅವೆಲ್ಲಕ್ಕೂ ಅಂಕಣಕಾರ ವಿವರಣೆ ಕೊಡುತ್ತಾನೆ. ಈರುಳ್ಳಿಯ ಬೆಲೆ ಯಾಕೆ ಏರಿಕೆಯಾಯಿತು, ಪುಸ್ತಕದ ಪ್ರಕಟಣೆಯ ವಿಳಂಬವಾದ ಬಗೆಯಿಂದ ಹಿಡುದು ನಟಿಯೊಬ್ಬಳ ದಾಂಪತ್ಯ ವಿಫಲವಾದುದ್ದರ ತನಕ ಅಂಕಣಗಳಲ್ಲಿ ಜಾಗ ಸಿಕ್ಕುತ್ತದೆ. ಈ ಕಾರಣದಿಂದಲೇ ಅಂಕಣಗಳು ಜನಪ್ರಿಯವೂ, ಉಪಯುಕ್ತವೂ ಆಗಿರುತ್ತವೆ.

ಸೃಜನಶೀಲ ಸಾಹಿತ್ಯ ಎಂಬ ಹೆಸರಿನಲ್ಲಿ ಪ್ರಕಟವಾಗುವುದೆಲ್ಲ ಹೇಗೆ ಶ್ರೇಷ್ಠವಾಗಲಾರದೋ ಹಾಗೆಯೇ ಅಂಕಣ ಸಾಹಿತ್ಯವೆಲ್ಲ ಶ್ರೇಷ್ಠವಾಗಿರುವುದೂ ಸಾಧ್ಯವಿಲ್ಲ. ಆದರೆ ಅದು ಅಂಕಣ ಬರಹ ಆದ ಮಾತ್ರಕ್ಕೆ ತನ್ನೆಲ್ಲ ಮೌಲ್ಯವನ್ನು ಕಳೆದುಕೊಳ್ಳುವುದಿಲ್ಲ ಎಂಬುದನ್ನು ಮರೆಯಲಾಗದು. ಅನೇಕ ಅಂಕಣ ಲೇಖಕರ ಕೃತಿಗಳು ಸಂಗ್ರಹಗೊಂಡು ಪುಸ್ತಕ ರೂಪದಲ್ಲಿ ಪ್ರಕಟವಾಗಿ ಪ್ರಸಿದ್ಧಿಗಳಿಸಿವೆ; ವಿಮರ್ಶಕರ ಮೆಚ್ಚುಗೆ ಪಡೆದಿವೆ. ಲಿಪ್‌ಮನ್, ಖುಷವಂತ್ ಸಿಂಗ್, ತ್ರಿವೇದಿ ಮೊದಲಾದ ಅಂಕಣಕಾರರ ಸಂಕಲನಗಳು ಇದಕ್ಕೆ ನಿದರ್ಶನಗಳಾಗಿವೆ. ಕನ್ನಡದಲ್ಲಿಯೇ ಸಿದ್ಧವನಹಳ್ಳಿ ಕೃಷ್ಣಶರ್ಮ, ನಿರಂಜನ, ಕು.ಶಿ.ಹರಿದಾಸಭಟ್ಟ, ಎಚ್ಚೆಸ್ಕೆ, ವಿ.ಎಂ.ಇನಾಂದಾರ್ ಮತ್ತು ಹಾ.ಮಾ. ನಾಯಕ ಮೊದಲಾದವರ ಅಂಕಣಗಳು ಪುಸ್ತಕಗಳಾಗಿ ಪ್ರಕಟವಾಗಿ ದಶಕಗಳ ನಂತರವೂ

ವಾಚನಯೋಗ್ಯವೆನ್ನಿಸಿವೆ. ಜನಪ್ರಿಯತೆಯಿಂದ ಯಾವ ಕೃತಿಯೂ ಮೌಲಿಕವಾಗಿ ಕುಗ್ಗುವುದಿಲ್ಲ. ಜನಪ್ರಿಯವಾಗದ್ದೆಲ್ಲ ಶ್ರೇಷ್ಠವಲ್ಲ! ರವಿ ಬೆಳಗೆರೆಯವರ ಬರಹಗಳನ್ನು ಈ ದೃಷ್ಟಿಯಿಂದ ನೋಡಬೇಕು. ಅತ್ಯುತ್ತಮ ಸಾಹಿತ್ಯ ಯಾವುದರಿಂದ ಲಭಿಸುತ್ತದೆಂದು ನಾವು ಭಾವಿಸುತ್ತೇವೆಯೋ ಆ ಗುಣ ಅವರ ಬರಹದಲ್ಲಿಯೂ ಕಾಣಿಸಿಕೊಂಡಾಗ ಅದೇಕೆ ಉತ್ತಮ ಸಾಹಿತ್ಯವಾಗುವುದಿಲ್ಲ?

‘ಅಂಕಣ ಬರಹಗಳನ್ನು ಸ್ಥೂಲವಾಗಿ ಎರಡು ಬಗೆಯಾಗಿ ವಿಂಗಡಿಸಬಹುದೆಂದು ತೋರುತ್ತದೆ. ಒಂದು ಬಗೆಯದು, ಎಲ್ಲ ಬರಹಗಳಂತೆ ಸಾಮಾನ್ಯವಾದ ಬರಹ. ಇನ್ನೊಂದು ಬಗೆಯದು ಸ್ವಂತ ಅಂಕಣ. ಇದು ಅಂಕಣಕಾರನ ಸ್ವಂತ ಅನುಭವ ಚಿತ್ರಣ. ಇದರಲ್ಲಿ ಆಗಾಗ ‘ನಾನು’ ಎಂಬುದು ಅನಿವಾರ್ಯವಾಗಿ ಕಾಣಿಸಿಕೊಳ್ಳುತ್ತದೆ. ಈ ‘ನಾನು’ ಅನುಭವದ ಭಾಗಿತ್ವವನ್ನು ಹೇಳುತ್ತದೆಯೇ ಹೊರತು, ಲೇಖಕನ ಅಹಂಕಾರವನ್ನು ಸೂಚಿಸುವುದಿಲ್ಲ. ಇಂಥ ಅಂಕಣ ಆತ್ಮೀಯ ಬರಹವಾಗುತ್ತದೆ. ಲೇಖನಕ್ಕೂ, ಓದುಗನಿಗೂ ಅಂಕಣಕಾರ ಸೇತುವೆಯಾಗಿ ನಿಲ್ಲುತ್ತಾನೆ. ಇದರಿಂದ ಬರಹದ ಸ್ವಾರಸ್ಯ ಸಹಜವಾಗಿಯೇ ಹಿಗ್ಗುತ್ತದೆ’.[೩೮] ರವಿಯವರ ಅಂಕಣ ಬರಹಗಳಿಗೂ ಈ ಮಾತು ಅನ್ವಯಿಸುತ್ತದೆ. ಅಂಕಣ ಬರಹಗಳು ಕೇವಲ ಪತ್ರಿಕಾ ವರದಿಗಳಾಗಿ ಮಾಸಿಹೋಗದೆ, ಪುಸ್ತಕ ರೂಪದಲ್ಲಿ ಪ್ರಕಟವಾಗಿ ಹೊಸ ಸಾಹಿತ್ಯ ಪ್ರಕಾರವೊಂದನ್ನು ನಿರ್ಮಿಸಿವೆ.

ಸಾಮಾನ್ಯವಾಗಿ ಲೇಖಕರು ತಮಗಾಗಿ ಬರೆದುಕೊಳ್ಳುವುದಾಗಿ ಹೇಳುತ್ತಾರೆ. ಅಭಿವ್ಯಕ್ತಿ ಒಂದು ಅಗತ್ಯ ಎನಿಸುವ ಮಟ್ಟಿಗೆ ಇದು ಸರಿ. ಆದರೆ ಅಷ್ಟಕ್ಕೆ ಅದು ನೀಲ್ಲುವುದಿಲ್ಲ. ಸಾಹಿತ್ಯದ ಸಾರ್ಥಕತೆ ಓದುಗನಲ್ಲಿ ಎಂಬುದನ್ನು ಮರೆಯುವುದು ಹೇಗೆ. ರವಿ ಬೆಳಗೆರೆಯವರು ಮಾಡಿದ್ದು ಸಹ ಅದನ್ನೇ. ಅನೇಕ ವರ್ಷಗಳ ಕಾಲ ಕನ್ನಡದ ಮನಸನ್ನು ರೂಪಿಸಿದರು. ಪತ್ರಿಕಾ ರಂಗದಲ್ಲಿ ಲಂಕೇಶ್ ಯುಗವೆಂಬ ಕಾಲಘಟ್ಟವೊಂದನ್ನು ಗುರುತಿಸಲು ಅವಕಾಶವಿರುವಂತೆ, ‘ರವಿ ಬೆಳಗೆರೆ ಯುಗ’ ಎಂದು ಗುರುತಿಸಬಹುದೇನೋ! ಹಾಯ್ ಬೆಂಗಳೂರ್! ಪತ್ರಿಕೆಯು ತನ್ನ ವರದಿ, ಬಾಟಮ್ ಐಟಮ್, ಖಾಸ್‌ಬಾತ್, ಕವಿತೆ, ಹಲೋ, ಲವ್‌ಲವಿಕೆ, ಲೇಖನ, ಕೇಳಿಗಳ ಮೂಲಕ ಒಂದು ಕ್ರಾಂತಿಯನ್ನೇ ಉಂಟುಮಾಡಿತೆನ್ನಬಹುದು. ಭಾಷೆಯ ಬಗೆಗೆ ಹೇಳುವುದಾದರೆ, ಪತ್ರಿಕಾ ಸಾಹಿತ್ಯಕ್ಕೆ ಒಂದು ವಿನೂತನ ನುಡಿಗಟ್ಟನ್ನೇ ಅದು ರೂಪಿಸಿತು ಎಂದೇ ಹೇಳಬೇಕಾಗುತ್ತದೆ. ಅದಕ್ಕೆ ಪೂರಕವೆಂಬಂತೆ ಅಂಕಣ ಬರಗಳಲ್ಲೂ ವೈವಿಧ್ಯತೆ, ಹೊಸತನಗಳು ಕಾಣಿಸಿಕೊಳ್ಳ ತೊಡಗಿದವು. ಸ್ವತಃ ಬೆಳಗೆರೆಯವರ ಖಾಸ್‌ಬಾತ್, ಬಾಟಮ್ ಐಟಮ್, ಲವ್‌ಲವಿಕೆ ಮತ್ತು ಕೇಳಿಗಳ ಭಾಷೆ, ವಿಷಯ ನಿರ್ವಹಣೆ, ನಿರೂಪಣೆ, ಸಂವಹನ ವಿಧಾನಗಳಿಂದಾಗಿ ಓದುರಿಗೆ ಹೆಚ್ಚು ಪ್ರಿಯವಾದವು, ಆಪ್ತವಾದವು. ಇತರ ಬರಹಗಾರರು ಸಾಮಾನ್ಯವಾಗಿ ಎತ್ತಿಕೊಳ್ಳುವಂತಹ ಎಲ್ಲ ಬಗೆಯ ವಸ್ತು-ವಿಷಯಗಳನ್ನು ಹೆಚ್ಚು ಕಡಿಮೆ ರವಿಯವರೂ ತಮ್ಮ ಬರಹಗಳಿಗೆ ಬಳಸಿಕೊಂಡಿದ್ದಾರೆ. ಆದರೆ ಬರವಣಿಗೆಯಲ್ಲಿ ಅವುಗಳನ್ನು ನಿರ್ವಹಿಸಿದ ರೀತಿ ಮಾತ್ರ ವಿಭಿನ್ನವಾದದ್ದು. ಇತರರು ದಾರ್ಶನಿಕರಂತೆ, ಸಾಮಾನ್ಯ ಓದುಗರಿಗೆ ಅರ್ಥವಾಗದಂತೆ, ಬುದ್ಧಿವಾದ ಹೇಳುವಂತೆ ಬರೆದರೆ ರವಿಯವರು ಸರಳವಾಗಿ ಅರ್ಥವಾಗುವಂತೆ ತಮ್ಮ ಕಷ್ಟ-ಸುಖ-ಸಂತೋಷ ಮುಂತಾದವುಗಳೆಲ್ಲವನ್ನು ಎಲ್ಲರವೂ ಎನ್ನುವಂತೆ ಬರೆದರು. ಬಹುಶಃ ಓದುಗರಿಗೆ ಇಷ್ಟವಾಗಿದ್ದೂ ಇದೆ ಎನಿಸುತ್ತದೆ. ಅಲ್ಲದೆ ಕೆಲವು ವಿಶಿಷ್ಟ ವಿನೂತನ ವಿಷಯಗಳ ಬಗೆಗೂ ರವಿಯವರು ಬರೆಯುತ್ತಾರೆ. ಉದಾಹರಣೆಗೆ ಹದಿಹರೆಯದ ಮನಸ್ಸುಗಳನ್ನು ಕುರಿತು, ಮನ್ಮಥನ ಆಗಮನ, ಸಮಾಧಾನ, ಪ್ರೀತಿ-ಪ್ರೇಮಕ್ಕೆ ಸಂಬಂಧಿಸಿದಂತೆ, ಪತ್ರ ಬರಹವಾದ

ಲವ್‌ಲವಿಕೆಗಳನ್ನು ಗಮನಿಸಬಹುದು. ವೈಜ್ಞಾನಿಕ ವಿಷಯಗಳನ್ನು ಓದುಗರಿಗೆ ಅಪ್ಯಾಯಮಾನವಾಗುವಂತೆ ಹೇಗೆ ಬರೆಯಬಹುದೆಂಬುದಕ್ಕೆ ಈ ಬರವಣಿಗೆಗಳೇ ಸಾಕ್ಷಿಯಾಗುತ್ತವೆ. ಕಥೆ, ವಿಮರ್ಶೆ, ತತ್ವ ಚಿಂತನೆ ಇವೆಲ್ಲ ಗುಣಗಳನ್ನೂ ಇಲ್ಲಿನ ಅವರ ಬರಹಗಳಲ್ಲಿ ಕಾಣಬಹುದಾಗಿದೆ. ಅವರು ಏನೇ ಬರೆದರೂ ಅಲ್ಲಿ ಒಂದು ಚಿಂತನೆಯಿರುತ್ತದೆ. ಓದುಗರನ್ನು ಅದು ಚಿಂತನೆಗೆ ಹಚ್ಚುತ್ತದೆ. ತಮ್ಮ ಬಾಟಮ್ ಐಟಮ್‌ಗಳ ಮೂಲಕ ಉತ್ತಮ ಗದ್ಯದ ಮಾದರಿಯೊಂದನ್ನು ಅವರು ಕನ್ನಡಿಗರಿಗೆ ಒದಗಿಸಿಕೊಟ್ಟರು. ಅಂಕಣ ಬರಹಗಳಿಗೆ ಸಂಬಂಧಪಟ್ಟಂತೆ ಅದುವರೆಗೆ ರೂಢಿಯಲ್ಲಿದ್ದ ನುಡಿಗಟ್ಟನ್ನೂ ಬದಲಿಸಿದರು.

ರವಿ ಬೆಳಗೆರೆಯವರ ಬಾಟಮ್ ಐಟಮ್‌ಗಳ(ಖಾಸ್‌ಬಾತ್ ರವಿಯವರ ಆತ್ಮ ಕಥನವಾದರೂ ಅದು ಹಾಯ್ ಬೆಂಗಳೂರ್! ಪತ್ರಿಕೆಯಲ್ಲಿ ಪ್ರತಿವಾರ ಅಂಕಣ ರೂಪದಲ್ಲಿ ಪ್ರಕಟವಾಗಿದೆ. ಅಂಕಣದ ಲಕ್ಷಣಗಳಿದ್ದರೂ, ಅದನ್ನು ಈ ಹಿಂದೆ ಆತ್ಮ ಕಥನ ಭಾಗದಲ್ಲಿ ಪ್ರಸ್ತಾಪಿಸಿದ್ದರಿಂದ ಇಲ್ಲಿ ಪುನಃ ಪ್ರಸ್ತಾಪಿಸಿಲ್ಲ.) ಜೊತೆ ಜೊತೆಗೆ ಹೆಸರಿಸಬೇಕಾದ ಮತ್ತೊಂದು ಮಹತ್ವದ ಅಂಕಣ ಬರಹಗಳ ಸಂಕಲನವೆಂದರೆ ಲವ್‌ಲವಿಕೆ. ಹಾಯ್ ಬೆಂಗಳೂರ್! ಪತ್ರಿಕೆಯಲ್ಲಿ 'ನಿನ್ನವನು', 'ನಿನ್ನವಳು' ಎಂಬ ಹೆಸರಿನಲ್ಲಿ ಪ್ರಕಟವಾಗುತ್ತಿದ್ದ ಇದು, ಪತ್ರರೂಪದ ಬರಹವಾಗಿದೆ. ಹದಿಹರೆಯದವರಿಗಾಗಿ ಅಥವಾ ಪ್ರೀತಿಸುವ ಎಲ್ಲ ಮನಸ್ಸುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆದ ಬರಹವಿದು. ನಂತರ ಪುಸ್ತಕ ರೂಪದಲ್ಲಿ ಹೊರತರಲಾಗಿದೆ. ಪ್ರೀತಿ–ಪ್ರೇಮ, ಸೋಲು–ಗೆಲುವು, ಸರಸ–ವಿರಸ, ವಿಫಲ–ವಿಷಾದ, ಹತಾಶೆ, ಮುನಿಸು ಇಷ್ಟೆಲ್ಲ ವಿಷಯಗಳು ಲವ್‌ಲವಿಕೆಯ ವಸ್ತುಗಳು ಆ ಅಂಕಣದ ಉತ್ತಮ ಭಾವಾಭಿವ್ಯಕ್ತಿಗಳಾಗಿ ಗಮನ ಸೇಳೆಯುತ್ತವೆ.

ರವಿ ಬೆಳಗೆರೆಯವರ ಅಂಕಣ ಬರಹವನ್ನು ಕುರಿತು ಸುಬ್ಬಣ್ಣ ರೈ ಅವರು ಹೀಗೆ ಹೇಳುತ್ತಾರೆ. 'ಅವರ ಅಂಕಣ ಅಥವಾ ಸಂಪಾದಕೀಯ ಬರೆಹಗಳ ಮಟ್ಟಿಗೂ ಈ ಮಾತು ಸತ್ಯ. ತಮ್ಮ ಹಾಯ್ ಬೆಂಗಳೂರ್! ಪತ್ರಿಕೆಯ ಮೂಲಕ ಓದುಗರೊಂದಿಗೆ ರವಿ ಹಂಚಿಕೊಂಡ ಖಾಸ್‌ಬಾತ್(ಸ್ವಂತದ ಮಾತುಗಳು) ಈಗ ಪುಸ್ತಕ ರೂಪದಲ್ಲಿ ಹೊರಬಂದಿವೆ. ಶೀರ್ಷಿಕೆಯೇ ಸೂಚಿಸುವಂತೆ ಇಲ್ಲಿನ ಬರೆಹಗಳೆಲ್ಲ ಸ್ವಂತದ ಅನುಭವ ಕಥನಗಳಂತಿವೆ, ಆತ್ಮಕಥೆಗಳಂತಿವೆ. ತಮ್ಮ ಬದುಕಿನ ನೈಜ ಅನುಭವ ಘಟನೆಗಳೆಂಬಂತೆ ರವಿ ನಿರೂಪಿಸುವ ಅನೇಕ ಪ್ರಸಂಗಗಳು, ಅಲ್ಲಿನ ಭಾಷೆ, ಕಥನ ಕ್ರಮಗಳಿಂದಾಗಿ ಓದುಗರಿಗೆ ಪ್ರಿಯವಾಗುತ್ತವೆ. ಬಾಲ್ಯದ ನೆನಪುಗಳನ್ನು, ಯೌವ್ವನದ ಅನುಭವಗಳನ್ನು, ಬದುಕಿನಲ್ಲುಂಟಾದ ಸೋಲು–ಗೆಲುವುಗಳನ್ನು, ನೋವು–ನಲಿವುಗಳನ್ನು ಲೇಖಕರು ರೋಚಕವಾಗಿ ಅಭಿವ್ಯಕ್ತಿಸುತ್ತಾರೆ'.[೩೯] ಖಾಸ್‌ಬಾತ್ ಅವರ ಆತ್ಮ ಕಥನವಾದರೆ, ಬಾಟಮ್ ಐಟಮ್ ಜೀವನದ ಅನೇಕ ಅಂಶಗಳ ಬಗ್ಗೆ ಸಲಹೆ, ಸೂಚನೆ, ಸಾಂತ್ವನ, ಧೈರ್ಯ, ಸ್ಫೂರ್ತಿ ನೀಡುವ ಗೆಳೆಯನಂತಿದೆ. ಅವುಗಳಿಂದ ಕೆಲವು ಕಥನ ಕ್ರಮಗಳನ್ನು ನೋಡುವುದಾದರೆ.

ಯಾಕೆ ಹೆಸರಿಡುತ್ತೀ ಸಂಬಂಧಕ್ಕೆ?

ನಂಗೆ ನೀನು ಏನೂ ಆಗಬೇಕಿಲ್ಲ. ಅಣ್ಣ, ತಮ್ಮ, ಬಂಧು, ಸಂಬಂಧಿ, ಗೆಳೆಯ, ಗೆಳತಿ, ಕಲೀಗು, ಪ್ರತಿಸ್ಪರ್ಧಿ, ಸಹಚಾರಿ... ಉಹುಂ, ಬೇಕಾಗಿಲ್ಲ. ಅಸಲು ನಮ್ಮ ಸಂಬಂಧಕ್ಕೊಂದು ಹೆಸರೇ ಬೇಕಾಗಿಲ್ಲ. ಇದಕ್ಕೆ ಬೇಕಾಗಿರೊದು ಕೇವಲ Purpose! ಹೆಸರೇ ಇಡದ ಸಂಬಂಧಗಳು ಕಡೆತನಕ ಬದುಕಿಬಿಡಬಹುದು. ದೊಡ್ಡ ಸಮಾರಂಭ ಮಾಡಿ, ಸಾವಿರಾರು ಮಂದಿಗೆ ಅನ್ನಹಾಕಿ, ವಿಡಿಯೋ

ತೆಗೆಸಿ ಗಂಡ-ಹೆಂಡ್ತಿ ಅಂತ ಹೆಸರಿಟ್ಟುಕೊಂಡೆವಲ್ಲ? ಆ ಸಂಬಂಧ ಸತ್ತೇ ಹೋಗಬಹುದು. ಪ್ರಶ್ನೆ ಅದಲ್ಲ ನಮ್ಮ ಸಂಬಂಧಕ್ಕೊಂದು Purpose ಅಂತ ಇದೆಯಾ? ಅದೇ ಇಲ್ಲ ಅಂದ ಮೇಲೆ ಅಂಥ ಸಂಬಂಧ ಕಟ್ಟಿಕೊಂಡು ನಂಗೂ ನಿಂಗೂ ಏನಾಗಬೇಕಾಗಿದೆ. Get lost'.[೬೦] ಹೆಚ್ಚಿನ ಸಲ, ಬಹುತೇಕ ಸಂಬಂಧಗಳಲ್ಲಿ ಬರೀ ಇಷ್ಟೇ ಆಗಿರುತ್ತದೆ. ಗಂಡ-ಹೆಂಡತಿಯ ಮಧ್ಯೆ ಮಕ್ಕಳು ಮಲಗಿರುತ್ತವೆ. ಮನೆಗಳಲ್ಲಿ, ಮನಗಳಲ್ಲಿ ಗೋಡೆಗಳೆದ್ದಿರುತ್ತವೆ. ವರಾಂಡದಲ್ಲಿ ಛೇರು ಹಾಕಿಕೊಂಡು ದಿನಾ ಕೂತಿರುತ್ತಾರೆ. ಆದರೆ ಮಾತೇ ಸತ್ತು ಹೋಗಿರುತ್ತವೆ. ಅಕಸ್ಮಾತ್ ಅವರಿಬ್ಬರ ನಡುವೆ ಮಕ್ಕಳು ಎಂಬ ಸೇತುವೆಗಳು ಹುಟ್ಟಿಕೊಳ್ಳದೆ ಹೋಗಿದಿದ್ದರೆ ಆ ಸಂಬಂಧ ಅದೆಷ್ಟೋ ವರ್ಷಗಳಿಗೆ ಮೊದಲೇ ಅರ್ಥಹೀನವಾಗಿ ಬಿಡುತ್ತಿತ್ತಲ್ಲವಾ? ಭೈರಪ್ಪನವರ 'ವಂಶವೃಕ್ಷ' ಕಾದಂಬರಿಯಲ್ಲೂ ಇದೆ ರೀತಿಯಿಂದ ಸನ್ನಿವೇಶದಿಂದ ಕೂಡಿದ ಘಟನೆಯನ್ನು ನೆನಪಿಸಿಕೊಳ್ಳಬಹುದು.

ಅದರಲ್ಲಿ ಸದಾಶಿವರಾಯ ಇತಿಹಾಸ ಸಂಶೋಧಕ. ಆತನ ಹೆಂಡತಿ ನಾಗಲಕ್ಷ್ಮಿ. ತುಂಬ ಒಳ್ಳೆಯವಳು. ಆತನೂ ಅಷ್ಟೆ. ಅವರಿಬ್ಬರಿಗೆ ಮನೆಯಿದೆ, ಮಗುವಿದೆ, ಸಂಸಾರವಿದೆ. ಆದರೆ ಎಲ್ಲೋ ಒಂದು ಕಡೆ ಅವರ ಸಂಬಂಧಕ್ಕೊಂದು Purpose ಇಲ್ಲ. ಹಾಗಿರುವಾಗ ಶ್ರೀಲಂಕಾದಿಂದ ಇತಿಹಾಸ ಕಲಿಯಲು ಕರುಣಾರತ್ನೆ ಬರುತ್ತಾಳೆ. ಸದಾಶಿವರಾಯನೊಂದಿಗೆ ಕೆಲಸ ಮಾಡುತ್ತಾ ಮಾಡುತ್ತಾ ಒಂದು ಪ್ರೀತಿ ಬೆಳೆಯುತ್ತದೆ. ಅದೂ ಒಂದು ಸಂಬಂಧ. ಅದಕ್ಕೊಂದು Purpose ಇದೆ. ಕರುಣಾರತ್ನೆ ತುಂಬ ದಿನ ಮದುವೆಯೇ ಆಗದೆ ಕಡೆಗೂ ಮಕ್ಕಳಾಗದೆ ಅವನೊಂದಿಗೆ ಉಳಿದುಬಿಡುತ್ತಾಳೆ. ಉಳಿದದ್ದು ಅವನಿಗೋಸ್ಕರವಾ? ಪ್ರೀತಿಗೋಸ್ಕರವಾ? ಅವರಿಬ್ಬರೂ ಕಂಡುಕೊಂಡ ಆ ಸಂಬಂಧದಾಚೆಗಿನ Purpose ಗೋಸ್ಕರವಾ? ಇಂಥದ್ದೇ ಒಂದು Purpose ಸದಾಶಿವ ರಾಯನಿಗೂ-ನಾಗಲಕ್ಷ್ಮಿಗೂ ಮಧ್ಯೆ ಇದ್ದಿದ್ದರೆ, ಆ ಸಂಸಾರ ಛಿದ್ರಗೊಳ್ಳದೆ ಇರುತ್ತಿತ್ತಲ್ಲವಾ? ಸಂಬಂಧಳನ್ನು ಕಲ್ಪಿಸಿಕೊಳ್ಳುವಾಗ ಯೋಚಿಸಬೇಕಾದದ್ದು ಇದರ ಬಗ್ಗೆ ಎಂಬುದಾಗಿ ರವಿಯವರು ಹೇಳುತ್ತಾರೆ. ಮನುಷ್ಯ ಸಂಬಂಧಗಳು ಅವರ ಅತ್ಯಂತ ಆಸಕ್ತಿಯ ವಿಷಯ. ದಾಂಪತ್ಯ ಸಹ ಒಂದು ವಿಚಿತ್ರ ಪಾತ್ರೆ, ಅದರೊಳಗಿನ ನೀರು ದಿನಾ ಆವಿಯಾಗುತ್ತಿರುತ್ತದೆ. ಇಬ್ಬರೂ ತಂದು ಸುರಿಯುತ್ತಲೇ ಇರಬೇಕು. ಪಾತ್ರೆಯ ಬುಡದಲ್ಲಿ ಪರ್ಪಸ್ ಎಂಬ ನಿತ್ಯಾಗ್ನಿ ಉರಿಸುತ್ತಲೇ ಇರಬೇಕು ಎಂಬುದು ರವಿಯವರ ಬರಹದ ಆಶಯ.

ಈ ರೀತಿಯಾದ ಬರವಣಿಗೆ ಇದೆಯಲ್ಲ? ಕನ್ನಡ ಸಾಹಿತ್ಯ ಸಂದರ್ಭಕ್ಕೆ ಹೊಸದು. ಅಂಕಣಗಳಲ್ಲಿ ರಾಜ್ಯದ, ದೇಶದ, ವಿದೇಶದ, ಅಭಿವೃದ್ಧಿಯ, ಸಾಹಿತ್ಯ, ವ್ಯಕ್ತಿ ಚಿತ್ರ ಮುಂತಾದ ಅನೇಕ ವಿಷಯಗಳ ಬಗ್ಗೆ ಚರ್ಚೆ ನಡೆಯುತ್ತವೆ. ಜೀವನದ ಅಂತರಾಳಕ್ಕೆ ಇಳಿಯುವ ಅಂಕಣಗಳು ಇಲ್ಲವೆಂದು ಹೇಳಬಹುದು. ಆದರೆ ರವಿಯವರು ಅಂತಹ ಒಂದು ಪ್ರಯತ್ನವನ್ನು ಮಾಡಿದ್ದಾರೆ. ಈ ಅಂಕಣ ರೂಪಗೊಂಡದ್ದರ ಬಗ್ಗೆ ರವಿಯವರು 'ನನಗೆ ತೋಚುವ, ನನ್ನನ್ನು ಕಾಡುವ, ಎಲ್ಲೋ ಇದಿರಾಗುವ ಭಾವ-ಅನಿಸಿಕೆಗಳನ್ನೆಲ್ಲ ನನ್ನ ಓದುಗರೊಂದಿಗೆ ಹಂಚಿಕೊಳ್ಳಬೇಕೆನಿಸುತ್ತದೆ. ಅಂಥದೊಂದು ಪುಟ್ಟ ಪ್ರಯತ್ನವಾಗಿ ಆರಂಭಗೊಂಡದ್ದೇ ಬಾಟಮ್ ಐಟಮ್ ಅಂಕಣ. ನಾವು ಎಷ್ಟೇ ಪರ್‌ಫೆಕ್ಟ್ ಮನುಷ್ಯರು ಅಂದುಕೊಂಡರು ನಮ್ಮ ವ್ಯಕ್ತಿತ್ವ, ಚಿಂತನೆ, ವರ್ತನೆ ಇವು ಪ್ರತಿನಿತ್ಯ ಇಷ್ಟಿಷ್ಟೇ ಕರೆಕ್ಷನ್ನಿಗೆ ಒಳಗಾಗಬೇಕಿರುತ್ತವೆ. ಬಾಟಮ್ ಐಟಮ್ ಅಂಕಣದಲ್ಲಿ ಯಾವತ್ತಿದ್ದರು ನಾನು ನಮ್ಮ ಇಮ್ಮಿಡಿಯಟ್ ಬದುಕಿಗೆ ಸಂಬಂಧಿಸಿದುದನ್ನೇ ಬರೆದಿದ್ದೇನೆ. ಅನೇಕ ಸಲ ನನ್ನ ನ್ಯೂನ್ಯತೆ, ಸಮಸ್ಯೆ, ತಕರಾರು,

ಯಡವಟ್ಟುಗಳ ಬಗ್ಗೆಯೇ ಬರೆದುಕೊಂಡಿದ್ದೇನೆ. ಹೀಗೆ ತೀರ ಬದುಕಿಗೆ ಸಂಬಂಧಿಸಿದ ವಿಷಯಗಳನ್ನಷ್ಟೇ ಆಯ್ದುಕೊಂಡು ಬರೆಯುವುದರಲ್ಲೊಂದು ಮಜಾ ಇದೆ. ನಾನು ಹೊಸದೇನನ್ನೋ ಹೇಳುತ್ತೇನೆ ಅಂದುಕೊಂಡು ಹೊರಡಬಾರದು. ಎಲ್ಲರಿಗೂ ಗೊತ್ತಿದ್ದ ಸಣ್ಣ ಸಣ್ಣ ಸೂಕ್ಷ್ಮ ಸಂಗತಿಗಳನ್ನೇ ಹೇಳಬೇಕು. ಓದಿದ ತಕ್ಷಣ 'ಹೌದಲ್ಲಾ ನನಗೂ ಇದು ಹೀಗೆ ಅನ್ನಿಸಿತ್ತು' ಅಂತ ಓದುಗನಿಗೆ ಫೀಲ್ ಆಗಬೇಕು. ಆತನನ್ನು ಅಂಥದೊಂದು ಫೀಲಿಂಗಿಗೆ ಒಡ್ಡುತ್ತ ಒಡ್ಡುತ್ತಲೇ ಒಂದು ಕರೆಕ್ಷನ್, ಒಂದು ಬದಲಾವಣೆ ಆತನಿಗೆ ಸೂಚಿಸಿರಬೇಕು. ಅಲ್ಲಿ ಲೇಖಕ ಪ್ರವಾದಿಯಾಗಬಾರದು. ಎಲ್ಲಕ್ಕೂ ಮಿಗಿಲಾಗಿ ದೇವರೊಬ್ಬನಿದ್ದಾನೆ; ಅವನ ಮೇಲೆ ಭಾರ ಹಾಕಿ ಎಂಬಂತಹ ನಿರರ್ಥಕ, ಫಿಜೂಲ ಮಾತುಗಳನ್ನಾಡಬಾರದು. ಜನಸಾಮಾನ್ಯನ ನಿಲುಕಿಗೆ ಸಿಕ್ಕದಂತಹ, ಆತನ ಪ್ರಪಂಚಕ್ಕೆ ಸಂಬಂಧವಿರದಂತಹ ಸಂಗತಿಗಳನ್ನು ಆಯ್ದುಕೊಳ್ಳಬಾರದು. ಹೀಗೆಲ್ಲ ಕೆಲವು broad guide lines ಇಟ್ಟುಕೊಂಡು ಬರೆಯುತ್ತ ಬಂದೆ. ಬಾಟಮ್ ಐಟಮ್ ಅತ್ಯಂತ ಜನಪ್ರಿಯ ಅಂಕಣವಾಯಿತು'.[೪೧] ಎಂದು ಹೇಳುತ್ತಾರೆ ರವಿ ಬೆಳಗೆರೆಯವರು. ಗಂಡ-ಹೆಂಡತಿಯ ಜಗಳದಿಂದ ಹಿಡಿದು ರಜೆಗಾಗಿ ಒಂದು ಅರ್ಜಿ ಬರೆಯುವುದು ಹೇಗೆ ಅಂತ ವಿವರಿಸುವ ತನಕ, ಜೀವನ ಬಹುತೇಕ ಎಲ್ಲಾ ಸಂಗತಿಗಳನ್ನು ತನ್ನ ತೆಕ್ಕೆಗೆ ತಗೆದುಕೊಂಡ ಅಂಕಣವಿದು. ಎಷ್ಟೋ ಸಲ ರವಿಯವರ ಗಂಭೀರ ಬರಹಗಳಾದ 'ಖಾಸ್‌ಬಾತ್' ಮತ್ತು 'ಹಲೋ'ಗಳಿಗಿಂತಲೂ ಹೆಚ್ಚಿನ ಪ್ರತಿಕ್ರಿಯೆ, ಮಹತ್ವ ಪಡೆದುಕೊಂಡ ಅಂಕಣ ಇದು.

ಒಟ್ಟಾರೆಯಾಗಿ ಬಾಟಮ್ ಐಟಮ್ ಅಂಕಣದ ಬರಹಗಳು ಓದುಗನಿಗೆ ಒಬ್ಬ ಆತ್ಮೀಯ ಗೆಳೆಯ ನೀಡುವ ಸಾಂತ್ವನ, ನಂಬಿಕೆ, ಧೈರ್ಯ, ಪ್ರೋತ್ಸಾಹ, ಮಾರ್ಗದರ್ಶನ, ಛಲ ಎಲ್ಲವನ್ನು ಈ ಅಂಕಣದಲ್ಲಿನ ಬರಹಗಳು ನೀಡುತ್ತವೆ. ಅವುಗಳು ಒಂದರ್ಥದಲ್ಲಿ ದೈನಂದಿನ ತತ್ವಶಾಸ್ತ್ರಗಳೆಂದು ಕರೆದರೆ ತಪ್ಪಾಗಲಾರದು. ಮತ್ತೆ ರವಿಯವರ ಇನ್ನೊಂದು ಅಂಕಣವೆಂದರೆ ಖಾಸ್‌ಬಾತ್. ಇದು ಅವರ ಆತ್ಮ ಕಥನ. ಆದರೆ ಪ್ರತಿವಾರವೂ ಹಾಯ್ ಬೆಂಗಳೂರ್! ಪತ್ರಿಕೆಯಲ್ಲಿ ಅಂಕಣ ರೂಪದಲ್ಲಿ ಪ್ರಕಟವಾಗಿ ನಂತರ ಪುಸ್ತಕ(ಒಟ್ಟು ೧೯೯೬ರಿಂದ ೨೦೦೫ರ ವರೆಗೆ ಹತ್ತು) ರೂಪದಲ್ಲಿ ಹೊರತರಲಾಗಿದೆ. ಒಂದೊಂದು ವಾರ ತಮ್ಮ ಜೀವನದಲ್ಲಿ ಘಟಿಸಿದ ಘಟನೆಗಳನ್ನು ಮೆಲುಕು ಹಾಕುವ ರೀತಿಯಲ್ಲಿ ಪ್ರಸ್ತುತ ವಿಷಯದಿಂದ ಆರಂಭವಾಗುವ ಅಂಕಣ ಇದ್ದಕ್ಕಿದ್ದ ಹಾಗೆ ಹಳೇ ಘಟನೆಗಳ ಕಡೆಗೆ ನಡೆದು ಬಿಡುತ್ತದೆ. ಅವರ ಖಾಸ್‌ಬಾತ್ ಅನೇಕ ಓದುಗರ ಖಾಸ್‌ಬಾತ್ ಆಗಿದೆ. ಈ ಅಂಕಣ ಬರಹದ ಬಗ್ಗೆ 'ನಿಸಾರ್ ಅಹಮದ್' ಅವರು ಒಂದೆಡೆ 'ರವಿ ಬೆಳಗೆರೆಯ ಲೇಖನಗಳಲ್ಲಿ ನನಗೆ ಖಾಸ್‌ಬಾತ್ ಅಚ್ಚುಮೆಚ್ಚು. ಉಳಿದ ಬರವಣಿಗೆಗಳು ರಾಣಿಯರಾದರೆ, ಖಾಸ್‌ಬಾತ್ ಪಟ್ಟಮಹಿಷಿ. ಹದಿಮೂರು ವರ್ಷಗಳ ಮುಂಚೆ ನನಗೆ ರವಿಯರವರ ಬಗ್ಗೆ ಆಸಕ್ತಿ ತಳೆಸಿದ್ದು, ಮೊದಲ ನೋಟದಲ್ಲೇ ಮೊಹಬ್ಬತಿಸಿದ್ದು ಖಾಸ್‌ಬಾತ್. ಇವತ್ತಿಗೂ ಅದರ ಮೋಡಿಯ ಮತ್ತಿನಿಂದ, ಅದರ ಬಗೆ ಬಗೆಯ ಹಾವಭಾವಗಳ ಗಮ್ಮತ್ತಿನಿಂದ ಬಚಾವಾಗಲು ನನ್ನಿಂದ ಸಾಧ್ಯವಾಗಿಲ್ಲ. ಖಾಸ್‌ಬಾತ್ ಲೇಖಕರ ವೈವಿಧ್ಯಮಯವೂ, ವಿಭಿನ್ನತರವೂ ಆದ ಜೀವನ ಸಂದರ್ಭಗಳ; ನಾನಾ ನಡವಳಿಕೆಗಳ, ಅನೇಕಾನೇಕ ಋಜು-ವಕ್ರ ರಾಗಭಾವ ಸ್ವಭಾವಗಳ, ವ್ಯಕ್ತಿಗಳ ಕಥಾರೂಪಿ ಸ್ವಾರಸ್ಯದಿಂದೊಡಗೂಡಿರುವ ವರ್ಣರಂಜಿತ ವರ್ಣನೆಯ ಪೆರೇಡ್'[೪೨] ಎನ್ನುತ್ತಾರೆ. ಅಂತಹ ಖಾಸ್‌ಬಾತ್‌ನ ಕೆಲವು ತುಣುಕುಗಳನ್ನು ನೋಡಬಹುದು.

'ಹಾಗೆ ಶುರುವಾದ ನನ್ನ ಮರಣಾಸಕ್ತಿ ಇವತ್ತಿಗೂ ಹೋಗಿಲ್ಲ. ಕಂಡಕಂಡಲ್ಲಿ ಅಲೆದು ಬರುತ್ತೇನೆ. ಏನನ್ನೋ ಅರಸುತ್ತೇನೆ. ಉತ್ತರ ಸಿಗದ ಪ್ರಶ್ನೆಗಳನ್ನೂ ಹಾಕಿಕೊಂಡು ಹಲುಬುತ್ತೇನೆ. ಇಷ್ಟಾದರೂ, ಸಾವು ನನ್ನಲ್ಲಿ ಭೀತಿಯನ್ನುಂಟು ಮಾಡಿಲ್ಲ. ಹುಟ್ಟು, ಬೆಳವಣಿಗೆ, ತಾರುಣ್ಯ, ಸ್ಖಲನ, ಮದುವೆ– ಎಲ್ಲವೂ ಬದುಕಿನ ಇನ್ಸಿಡೆಂಟುಗಳೇ, ಕೊನೆಯ ಇನ್ಸಿಡೆಂಟು ಸಾವು. ಉಳಿದ್ಯಾವಕ್ಕೂ ಹೆದರದ ಮನುಷ್ಯ ಸಾವಿಗೇಕೆ ಹೆದರುತ್ತಾನೋ? ರಸ್ತೆಯಲ್ಲಿ ಹೆಣ ಕಂಡರೂ ಹೆದರುವವರಿದ್ದಾರೆ. ರಕ್ತ ಕಂಡರೆ ತಲೆ ತಿರುಗಿ ಬೀಳುವವರಿದ್ದಾರೆ. ದೇವರೇ ಬಂದು ವರ ಕೊಡುತ್ತೇನೆಂದರೂ ಸ್ಮಶಾನದೊಳಕ್ಕೆ ಕಾಲಿಡಲು ಹಿಂಜರಿಯುವವರಿದ್ದಾರೆ.

ಇದು ಧೈರ್ಯದ ಪ್ರಶ್ನೆಯಲ್ಲ. ಬುದುಕಿನ ಕಷ್ಟಗಳನ್ನು(ಯಾರದೋ ಕಷ್ಟಗಳನ್ನು ಕೂಡ!) ನೋಡಲು ಒಲ್ಲದ ಮನಸ್ಸುಗಳ ವರ್ತನೆ. ಅಂಥವರನ್ನೇ ಸಾವು, ರೋಗ ಒಬ್ಬಂಟಿತನಗಳು ಹೆಚ್ಚು ಹೆದರಿಸುತ್ತವೆ'.[೪೩] ಜಗತ್ತಿನ ಯಾವುದೇ ಪ್ರೀತಿಪಾತ್ರನೂ ಸತ್ತ ಮೇಲೆ ಒಂದು ದಿವಸಕ್ಕಿಂತ ಜಾಸ್ತಿ ಇಟ್ಟುಕೊಳ್ಳಲು ಆಗುವುದಿಲ್ಲ. ಮಗ, ಗಂಡ, ಪ್ರಿಯಕರ, ತಂದೆ, ಅಣ್ಣ, ತಾಯಿ, ಹೆಂಡತಿ, ಸೋದರಿ ಸತ್ತ ಮೇಲೆ ಇದ್ಯಾವ ಸಂಬಂಧವೂ ಉಳಿಯುವುದಿಲ್ಲ. ಕೊನೆಯಲ್ಲಿ ಅದು ಅಣ್ಣ, ತಂಗಿ, ಗಂಡ ಇದ್ಯಾವುದೂ ಅಲ್ಲ. ಒಟ್ಟಿನಲ್ಲಿ ಅದು ಮನುಷ್ಯನೇ ಅಲ್ಲ. ಕೇವಲ ಹೆಣ; ದಾರಿಲಿ ಹೋಗೋವಾಗ ಕಾಲಲ್ಲಿನ ಹರಿದ ಚಪ್ಪಲಿಯನ್ನೂ ಯಾರ ಮನೆಯ ಮುಂದಾದರೂ ಹೇಳಿ ಬಿಟ್ಟು ಹೋಗಬಹುದು. ಆದರೆ ಅದೇ ತರಹ ಹೆಣವನ್ನು ಬಿಟ್ಟು ಹೋಗಲು ಸಾಧ್ಯವೇ ಇಲ್ಲ. ಸ್ವಂತ ಮನೆಯಲ್ಲಿಯಾದರೂ ಸರಿ, ಅದನ್ನು ಬೇಗ ಮುಗಿಸಬೇಕು. ಇಲ್ಲಿ ಗಮನಿಸಬೇಕಾದದ್ದು ಎಂದರೆ ಮೇಲೆ ಉಲೇಖಿತ ಬರಹದ ಪ್ರತಿ ಮಾತೂ ಜೀವನ್ಮುಖಿಯಾದದ್ದು ಅನ್ನುವುದು.

"ಸಾಕು ಮಾರಾಯಾ... ಗಂಡಸರ ಸಾವಾಸ. ಒಬ್ಬೇ ಥಣ್ಣಗಿದ್ದೀನಿ!" ಅಂದಳು. ಅವಳ ಹಣೆಯ ಮೇಲಿನ ಬಿಂದಿಗೆಯಲ್ಲಿ ವೈಧವ್ಯದ ಕುರುಹಿರಲಿಲ್ಲ. ಜೀವನ್ಮುಖತೆಯ ಹೊಳಪಿತ್ತು. ವಿಕ್ಟೋರಿಯಾದ ಕಂಪೋಂಡಿನಲ್ಲಿ ಕಂಗಾಲಾಗಿ ನಿಂತಿದ್ದ ಆ ಒಣಕಲು ಹುಡುಗಿಗೂ, ಕೈನೆಟ್ಟಿಕ್ಗೆ ಆತು ನಿಂತ ಈ ಆರೋಗ್ಯವಂತ ಹೆಣ್ಣುಮಗಳಿಗೂ ಎಲ್ಲಿಂದೆಲ್ಲಿಯ ಹೋಲಿಕೆ? ಬದುಕಿನ ಈ ಎರಡು ದಂಡೆಗಳ ಮಧ್ಯೆ ಒಂದೇ ಒಂದು ಸಾವಿನ ನದಿ ಹರಿದು ಹೋಗಬೇಕಿತ್ತೆ?

ನನ್ನ ಛೇಂಬರಿನಲ್ಲಿ ನಿಂತ ಹುಡುಗ ಇವತ್ತು ಬೆಳಿಗ್ಗೆ, 'ನಿಮಗೆ ಗೊತ್ತಿರೋ ಡೈರೆಕ್ಟರಿಗೆ ಹೇಳಿ ಸಿನೆಮಾದಲ್ಲಿ ನಂಗೊಂದು ಛಾನ್ಸು ಕೊಡಿಸಿ ಸಾರ್' ಅಂದ ಕೂಡಲೇ ಫಕ್ಕನೆ ಇದೆಲ್ಲ ನೆನಪಾಯಿತು. ಇವತ್ತು ನನ್ನ ಪತ್ರಿಕೆಯ ಹೆಸರಿಟ್ಟುಕೊಂಡೇ ಒಂದು ಸಿನೆಮಾ ಹುಟ್ಟುತ್ತಿದೆ. ಅವತ್ತು ನಾನು ಒಂದು ಜೋಕರ್ ಪಾತ್ರಕ್ಕಾಗಿ ನಾಯಿಯಂತೆ, ಕೋತಿಯಂತೆ ನೆಲದ ಮೇಲೆ ತೆವಳಿದ್ದೆ. ಈ ಎರಡು ದಂಡೆಗಳ ಮಧ್ಯೆ ಅದಿನ್ನೆಂಥ ಬದುಕಿನ ನದಿ ಹರಿದು ಹೋಯಿತ್ತಲ್ಲ?'[೪೪] ಈ ಬರಹ ರವಿಯವರು ತಮಗೆ ತಾನೇ ಎಂಬಂತೆ ಹೇಳಿಕೊಂಡದ್ದು. ತಾನೇ ಮತ್ತೆ ಹುಡುಕಿಕೊಂಡು ಹೋದ ತನ್ನದೇ ಹೆಜ್ಜೆಯ ಜಾಡು, ತಾನು ಬದುಕಿದ ಕತೆ, ಬದುಕಿದ ರೀತಿ. ರವಿಯವರ ಖಾಸ್‌ಬಾತ್‌ಗಳಲ್ಲಿ ಜೀವನದ ಅಷ್ಟೊಂದು ಪ್ರೀತಿ, ವಿಷಾದ, ಕೋಪ, ಮರುಕವಿದೆ. ಕಳೆದುಹೋದ ದಿನಗಳ ಜ್ಞಾಪಕ ಚಿತ್ರಗಳಿವೆ. ಗಮ್ಯದ ನಡುವಿನ ಕಂದಕವಿದೆ. ಎದುರಾಗುವ ದುರಂತಗಳಿವೆ. ಅಲ್ಲದೇ ಅಲ್ಲಿ ಅನೇಕ ಓದುಗರ ಪಡಿನೆರಳ ಪಾತ್ರಗಳು ಕದಲುತ್ತವೆ.

ಜೀವನ ಅನುಭವಗಳ ಸಂತೆ. ಹಾಗೆಯೇ ಅನುಭವಗಳು ಪ್ರತಿಯೊಬ್ಬ ಮನುಷ್ಯನ ಜೀವನದ ಅವಿಭಾಜ್ಯ ಅಧ್ಯಾಯಗಳು. ಸಾಗಿಬಂದ ದಾರಿಗಿಂತ ಸಾಗಬೇಕಿರುವ ದಾರಿ ಉದ್ದವಿದೆ, ದೊಡ್ಡದಿದೆ ಎಂಬುದನ್ನು ಮನಕ್ಕೆ ಮುಟ್ಟುವಂತೆ ಬರೆಯುತ್ತಾರೆ. ಪ್ರತಿವಾರವೂ ಅತ್ಯಂತ ಸಂವೇದನಾಪೂರ್ಣವಾಗಿ ಬರೆಯುತ್ತಾ, ಅವರ ಬಾಟಮ್ ಐಟಮ್, ಖಾಸ್‌ಬಾತ್‌ಗಳಿಗಾಗಿ ಓದುಗರನ್ನು ಕಾಯುವಂತೆ ಮಾಡುತ್ತಿದ್ದುದೂ ಸಹ ಅವರ ಅತ್ಯುತ್ತಮ ಸಾಹಿತ್ಯಿಕ ಶಕ್ತಿಯೇ. ಆಡಂಬರವಿಲ್ಲದ ಭಾಷೆ, ಅಚ್ಚುಕಟ್ಟಾಗಿ ಹೃದಯಕ್ಕೆ ತಾಕುವಂತೆ ಇರುವ ನಿರೂಪಣೆ, ದೇಶ–ವಿದೇಶಗಳ ಮತ್ತು ವಿಜ್ಞಾನ, ವೈಜ್ಞಾನಿಕ ವಿಷಯಗಳನ್ನೂ, ಯಾವುದೇ ಬೌದ್ಧಿಕ ಪ್ರದರ್ಶನಕ್ಕೆ ಅವಕಾಶವಿರದಂತೆ, ಮನೆಯಂಗಳದ ಮಾತುಕತೆಯೆಂಬಂತೆ ಮಂಡಿಸುವ ಶೈಲಿ ವಿಶೇಷವಾದವುಗಳೇ. ಇವೆಲ್ಲ ವಾರ ಪತ್ರಿಕೆಗಳ, ಸಂಪಾದಕೀಯಗಳ ವಿಷಯಕ್ಕೆ ಸಂಬಂಧಿಸಿದಂತೆ ಹೇಳಬೇಕೆಂದರೆ, ರವಿ ಬೆಳಗೆರೆಯವರದು ಪಂಥ ಪ್ರವರ್ತಕ ಬರವಣಿಗೆ ಎಂದು ಹೇಳಬಹುದು. ಅವರ ಅಂಕಣಗಳ ಸಹ ದೈನಂದಿನ ತತ್ವಜ್ಞಾನಗಳೇ ಎಂದು ಹೇಳಬಹುದಾದಂತವು. ಅವುಗಳಲ್ಲಿ ಮನುಷ್ಯ ಜೀವನದ ಪ್ರತಿ ಸಣ್ಣ ವಿಷಯದಿಂದ ಅನೇಕ ಗಂಭೀರ ವಿಷಯಗಳ ಬಗ್ಗೆಯೂ ಮಾಹಿತಿ, ಪರಿಹಾರ, ಸಾಂತ್ವನ, ಧೈರ್ಯ, ಆತ್ಮವಿಶ್ವಾಸ ಮತ್ತು ನಂಬಿಕೆಯನ್ನು ನೀಡುತ್ತವೆ. ಪ್ರೇರೇಪಿಸುತ್ತವೆ. ಆ ಕಾರಣಕ್ಕಾಗಿಯೇ ಅವು ದೈನಂದಿನ ಜೀವನದ ತತ್ವಜ್ಞಾನ ಎಂದು ಕರೆಯಿಸಿಕೊಳ್ಳುವ ಲಕ್ಷಣವನ್ನು ತೋರುತ್ತವೆ.

ಇವುಗಳಂತೆಯೇ ಹಾಯ್ ಬೆಂಗಳೂರ್! ಪತ್ರಿಕೆಯಲ್ಲಿ ಪ್ರಕಟವಾದ ಮತ್ತೊಂದು ಅಂಕಣವೆಂದರೆ 'ಲವ್‌ಲವಿಕೆ'. ಇದು ಪತ್ರರೂಪದ ಬರಹ ಪ್ರತಿ ವಾರವೂ ಒಂದೊಂದು ಪ್ರೇಮ ಪತ್ರ ಪ್ರಕಟವಾಗುತ್ತಿತ್ತು. 'ನಿನ್ನವನು/ನಿಮ್ಮವನು, ನಿನ್ನವಳು/ನಿಮ್ಮವಳು' ಎಂಬ ಸರ್ವನಾಮದಲ್ಲಿ ಪ್ರಕಟವಾಗುತ್ತಿದ್ದ ಈ ಅಂಕಣದ ಬಗ್ಗೆ ರವಿ ಬೆಳಗೆರೆಯವರು, 'ಢವಗುಟ್ಟುವ ಎದೆಯ ಹುಡುಗನೊಬ್ಬ ಈ ಹತ್ತು ಹಾಡುಗಳನಿಟ್ಟುಕೊಂಡು ಅದರ ಸುತ್ತ ಪುಟ್ಟದೊಂದು ಪತ್ರ ಹೆಣೆಯಬಹುದಾದರೆ, ಅದು ಹೇಗಿರುತ್ತೆ ಅಂತ ಯೋಚಿಸಿದೆ. ಆಗ ಹುಟ್ಟಿಕೊಂಡದ್ದೇ ಈ 'ಲವ್‌ಲವಿಕೆ'ಯೆಂಬ ಅಂಕಣ! ಇದು ಮೊದಲು 'ಕರ್ಮವೀರ'ದಲ್ಲಿ ಪ್ರಕಟವಾಯಿತು. ಮುಂದೆ ಕರ್ಮವೀರದ ನಂಟು ಬಿಟ್ಟು ಹೋಯಿತು. ಆದರೆ ಲವ್‌ಲವಿಕೆಯ ನಂಟು ಬಿಡುವುದುಂಟೆ? ಹಾಯ್ ಬೆಂಗಳೂರ್ ಆರಂಭಿಸಿದಾಗ ಅದೇ ಪ್ರಯೋಗ ಮುಂದುವರೆಸಿದೆ. ಬಹುಶಃ ಖಾಸ್‌ಬಾತ್‌ನಷ್ಟೇ ವ್ಯಾಪಕವಾಗಿ ಇವತ್ತಿಗೂ ಓದಿಸಿಕೊಳ್ಳುವ ಅಂಕಣವೆಂದರೆ ಲವ್‌ಲವಿಕೆ'[೪೫] ಎಂದು ಹೇಳುತ್ತಾರೆ.

ಖಾಸ್‌ಬಾತ್‌ನಷ್ಟೇ ಆಕರ್ಷಕತೆಯನ್ನು ಹೊಂದಿದೆಯೆಂದರೆ ಇದರ ಮಹತ್ವದ ಅರಿವಾಗುತ್ತದೆ. ಪ್ರೀತಿಸುವ ಪ್ರತಿ ಮನಸ್ಸು ಪತ್ರಿಕೆ ಕೈಗೆತ್ತಿಕೊಂಡ ಕೂಡಲೆ ಈ ಬರಹಕ್ಕಾಗಿ ತಡಕಾಡುತ್ತದೆ. ಪ್ರೀತಿಯ ಬಗ್ಗೆ ಬರೆಯಲು ಕುಳಿತಾಗ ಬಹುಶಃ ಈ ಜಗತ್ತಿನಲ್ಲಿ ಯಾರೂ ಇಲ್ಲಿಯವರೆಗೆ ಅಕ್ಷರಗಳ ಕೊರತೆಯಿಂದ ನರಳಿದವರಿಲ್ಲ ಎನಿಸುತ್ತದೆ. ಈ ಜಗತ್ತಿನ ಎಲ್ಲ ಲೇಖಕರೂ, ಎಲ್ಲ ಕಾಲಗಳಲ್ಲಿಯೂ ಬರೆದು ಮುಗಿಸಿದ ನಂತರವೂ ಬಾಕಿ ಉಳಿಯುವ ಏಕೈಕ ವಿಷಯವೆಂದರೆ ಅದು ಪ್ರೀತಿ. ಇಲ್ಲಿಯವರೆಗೆ ರವಿಯವರು ಬರೆದ ಪ್ರೇಮ ಪತ್ರಗಳಿಗೆ ಸಾಹಿರ್, ಶೈಲೇಂದ್ರ, ಗಾಲಿಬ್, ಗುಲ್ಜಾರ್, ಆರ್.ಎನ್.ಜಯಗೋಪಾಲ್, ಸೀತಾರಾಮ ಶಾಸ್ತ್ರಿ, ಅಡಿಗ, ನರಸಿಂಹಸ್ವಾಮಿ, ಬೇಂದ್ರೆಯಂತಹ ಮುಂತಾದ ಕವಿಗಳಿಂದ ಕವಿತೆಗಳನ್ನು, ಹಾಡುಗಳನ್ನೂ ತಂದು ಪತ್ರಗಳಲ್ಲಿ ಸೇರಿಸಿದ್ದಾರೆ. ಅಲ್ಲಿ ಉರ್ದು, ಹಿಂದಿ, ಕನ್ನಡ, ತೆಲುಗು ಭಾಷೆ, ಭಾಷೆಯ ಕವಿತೆ, ಹಾಡು(ಚಿತ್ರಗೀತೆಗಳು) ಎಲ್ಲವೂ

ಇವೆ. ಒಂದು ಕಡೆ ಅವರೆ ಹೇಳುವಂತೆ ನನ್ನ ವಿಷಯದಲ್ಲಿ 'ಕನ್ನಡ ಕವಿತೆ ಮುನಿದಿರಬಹುದು, ಉರ್ದು ಕವಿತೆ ನನ್ನ ಗದ್ಯವನ್ನು ಗಟ್ಟಿಗೊಳಿಸುತ್ತೆ'[೪೬] ಎಂದು. ಪ್ರೀತಿಗಾಗಿ ಉರ್ದು ಕಲಿತು ಅದರಿಂದ ಅನೇಕ ಘಝಲ್‌ಗಳನ್ನು ತಮ್ಮ ಅನೇಕ ಪ್ರೇಮ ಪತ್ರಗಳಲ್ಲಿ ತಂದಿದ್ದಾರೆ. ಉರ್ದು ಕವಿತೆಗಳು ಅವರ ಗದ್ಯವನ್ನು ಗಟ್ಟಿಗೊಳಿಸಿರಬಹುದು. ಕನ್ನಡ ಭಾಷೆ ವೇದಿಕೆಯಾಗಿ ಸಹಾಯಕವಾಗಿದೆ ಎಂದು ಹೇಳಬೇಕಾಗುತ್ತದೆ.

'ತುಮ್ ಬಿನ್ ಜೀವನ್ ಕೈಸೆ ಬೀತಾ
ಪೂಛೋ ಮೆರೇ ದಿಲ್ ಸೇ...'

ಹಾಗೆ ನೀನು ನನ್ನೆಲ್ಲ ಭಾವನೆಗಳಿಗೆ, ವಿನಂತಿಗಳಿಗೆ, ಭಿನ್ನಹಗಳಿಗೆ ಕಲ್ಲಾಗಿ ಹೋದ ಮೇಲೆ ನನಗೆ ಉಳಿದದ್ದು ನಾನು ಮತ್ತು ನನ್ನ ಅಸಮಾಧಾನ ಮಾತ್ರ. ಅವಮಾನದ ಬರೆಗಳನ್ನು, ತುಚ್ಛಕಾರದ ಗಾಯಗಳನ್ನು ಒಬ್ಬನೇ ಕುಳಿತು ನೇವರಿಸಿಕೊಳ್ಳುತ್ತ ನೀನಲ್ಲದ ನಿನ್ನೊಂದಿಗೆ ಮಾತಿಗಿಳಿಯುತ್ತೇನೆ. ನೀನು ಪ್ರೀತಿಸು; ಪ್ರೀತಿಸದೆ ಇರು ಮನಸ್ಸಿನೊಳಗೊಂದು ಪದ್ಮಾಸನ ಹಾಕಿ ಕುಳಿತು ಬಿಟ್ಟಿದೆಯಲ್ಲ ನಿನ್ನ ಚಿತ್ರ? ಅದರೊಂದಿಗೆ ನನ್ನ ವ್ಯವಹಾರಗಳೆಲ್ಲ ಬಿಡುವಿಲ್ಲದೆ ನಡೆದುಹೋಗುತ್ತವೆ. ಅಲ್ಲಿ ಜಗಳವಿಲ್ಲ ತುಚ್ಛೀಕಾರವಿಲ್ಲ, ತಿರಸ್ಕಾರವಿಲ್ಲ, ತಕರಾರುಗಳಿಲ್ಲ. ನನ್ನ ಗಾಯಗಳಿಗೆ ನಾನೇ ಮದ್ದು. ನನ್ನ ಪ್ರಶ್ನೆಗಳಿಗೆ ನಾನೇ ಉತ್ತರ ನನ್ನೊಳಗಿನ ಸಮುದ್ರಕ್ಕೆ ನಾನೇ ನಾವೆ; ಕಣ್ಣೆದುರಿಗಿನ ತೀರಕ್ಕೆ ನಾನೇ ಫಾಸಲೆ!

'ಮುಝೆ ತುಮ್ ಸೆ ಕುಛ್ ಭಿ ನ ಚಾಯಿಯೇ
ಮುಝೆ ಮೇರೆ ಹಾಲ್ ಪೆ ಛೋಡ್ ದೋ...'

ಕೆಲವು ಯಾತನೆಗಳಿರುತ್ತವೆಯಂತೆ; ಅವುಗಳೊಂದಿಗೆ ಬದುಕಲೇ ಬೇಕು ಮತ್ತೆ ಕೆಲವು ಭಾವನೆಗಳಿರುತ್ತವೆಯಂತೆ; ಅವುಗಳನ್ನು ಹುಟ್ಟುತ್ತಲೇ ಕೊಲ್ಲಬೇಕು. ಮೊದಲನೆಯದನ್ನು ಒಪ್ಪಿಕೊಂಡಿದ್ದೇನೆ. ಎರಡನೆಯದು ತಡವಾಗಿ ಗೊತ್ತಾಗಿದೆ. ಈಗ ಉಪಯೋಗವಿಲ್ಲ. ನಿನ್ನೆದುರಿಗೆ ನಿಂತು ಮೊದಲ ಬಾರಿಗೆ ಹಲೋ ಅನ್ನುವುದಕ್ಕೆ ಮುಂಚಿನ ಸಂತೋಷವೆಲ್ಲ ಎಲ್ಲಿ ಸೋರಿ ಹೋಗಿದೆಯೋ ಲೆಕ್ಕ ಸಿಗುತ್ತಿಲ್ಲ. ಮತ್ತೆ ಅದೆಲ್ಲ ಚೈತನ್ಯ ಮೈಗೂಡಿತೆಂಬ ಭರವಸೆಯೂ ನನ್ನಲ್ಲಿಲ್ಲ.

'ಬಾಡಿಹೋದ ಬಳ್ಳಿಯಿಂದ
ಹೂವು ಅರಳಬಲ್ಲದೇ
ತಂತಿ ಹರಿದ ವೀಣೆಯಿಂದ
ನಾದ ಹೊರಡಬಲ್ಲದೇ?'

ಇಷ್ಟಾದರೂ ಒಂದು ಹಠ, ಒಂದು ಸಮಾಧಾನ, ಒಂದು ಹುಂಬ ಸಂತೋಷ ನನ್ನಲ್ಲಿದೆ ಏನು ಗೊತ್ತೆ? ನಿನ್ನೆಲ್ಲ ಹಮ್ಮು, ಬಿಗುಮಾನ, ಅಹಂಕಾರಗಳಿಗೆ ಕಾರಣನಾದವನು ನಾನು. ನಿನ್ನನ್ನು ಸಂತೋಷವಾಗಿರಿಸಿರುವುದೇ ನನ್ನ ಪ್ರೀತಿ. ನಿನ್ನ ಮುಗುಳ್ನಗು ಅರಳುತ್ತಿರುವುದೇ ನನ್ನ ಕಣ್ಣೀರಿನ ಕನ್ನಡಿಯಲ್ಲಿ. ಪ್ರತಿಬಿಂಬದ ಬಗ್ಗೆ ಯಾಕೆ ಯೋಚಿಸಿ ದುಃಖಿತನಾಗಲಿ? ಏಷ್ಟಾದರೂ ಇದು ಒಡೆಯುವ ಕನ್ನಡಿಯಲ್ಲ!'

ನಿನ್ನವನು[೪೭]

ಇದೇನೂ ತುಂಬ ಗಂಭೀರವಾದ ಸಾಹಿತ್ಯವಲ್ಲ, ಸಾಹಿತ್ಯವೆಂಬುದು ಗಂಭೀರವಾಗಿರಬೇಕೆಂಬ ಕಾಯಿದೆಯೂ ಇಲ್ಲ. ಹೇಳಿಕೊಳ್ಳಲಾಗದ್ದನ್ನು, ಹೇಳಲು ಬಾರದನ್ನು ಈ ಹಾಡುಗಳು ಸರಾಗವಾಗಿ

ಹೇಳಿಬಿಡುತ್ತವೆ. ಪ್ರೀತಿಸುವವರ ಜಗತ್ತೇ ಅಂಥದ್ದು. ಪ್ರೀತಿ ಎಂದಾಕ್ಷಣ ಅದು ಕೇವಲ ವಯಸ್ಸಿನ ಹುಡುಗ ಹುಡುಗಿಯರಿಗೆ ಮಾತ್ರ ಸೀಮಿತ ಎಂದು ಭಾವಿಸುವವರೆ ಹೆಚ್ಚು. ಎಂತವರಿಗೂ ಈ ಬರವಣಿಗೆ ಒಂದು ತೆರನಾದ ಆನಂದವನ್ನು ಕೊಡುವಂತಹದ್ದು, ಲವ್‌ಲವಿಕೆಯುಂಟು ಮಾಡುವಂತಹದ್ದು. ಇದರಲ್ಲಿ ಪ್ರೀತಿ ಪ್ರೇಮದ ಜೊತೆಗೆ ಕಾವ್ಯ ಸೌಂದರ್ಯವೂ ಅಡಕವಾಗಿದೆ. ಪ್ರೇಮ ಪತ್ರವೆಂದರೆನೇ ಕಾವ್ಯಾತ್ಮಕವಾಗಿರುವಂತಹುಗಳು. ಅಲ್ಲಿ ವರ್ಣನೆ, ಹೊಗಳಿಕೆ, ಉಪಮೆ, ರೂಪಕ ಎಲ್ಲವನ್ನು ಒಳಗೊಂಡಿರುತ್ತವೆ. ಇವುಗಳ ಜೊತೆ ಜೊತೆಗೆ ಅನೇಕ ಕವಿಗಳ ಕವಿತೆಗಳನ್ನು ಓದುಗರಿಗೆ ಪರಿಚಯಿಸಿದ್ದಾರೆ. ಕವಿಗಳು ಪರಿಚಯವಿದ್ದಾರೋ ಇಲ್ಲವೋ, ಅಷ್ಟಕ್ಕೂ ಅವು ಯಾರವು ಎಂಬುದು ತಿಳಿದಿಯೋ ಇಲ್ಲವೋ ತಿಳಿಯದು. ಆದರೆ ಅನೇಕರ ಮನದಲ್ಲಿ ಎಷ್ಟೋ ಕವಿಗಳು ಈ ಪ್ರತ ಬರಹಗಳ ಮೂಲಕ ಓದುಗರ ಉಳಿದಿದ್ದಾರೆ ಎಂದು ಹೇಳಬಹುದು.

ಈ ಅಂಕಣ ಆರಂಭವಾದಂದಿನಿಂದ ಇಲ್ಲಿಯವರೆಗೆ ಪ್ರಕಟಗೊಂಡ ಪತ್ರಗಳನ್ನೆಲ್ಲ ಸಂಗ್ರಹಿಸಿ ಅದೇ ಶೀರ್ಷಿಕೆಯೊಂದಿಗೆ ಒಟ್ಟು ನಾಲ್ಕು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಇವು ಕೇವಲ ಪುಸ್ತಕವಲ್ಲ ಚಿಕ್ಕವರಿಗಾಗಿ, ಅವರ ಕನಸು ಕನವರಿಕೆಗಳಿಗಾಗಿ, ಅವರೇಲ್ಲರ ಪ್ರೀತಿ ಫಲಿಸಲೆಂಬ ಆಸೆ ಹೊತ್ತು ಬರೆದ ಪತ್ರಗಳು. ಇವುಗಳಿಂದ ಬೊಗಸೆಯಷ್ಟು ಪ್ರೀತಿ ಸಿಕ್ಕರೆ, ದುಗುಡ, ಬೇಸರ, ದುಮ್ಮಾನಗಳೆಲ್ಲ ಕಳೆದು ಅಲ್ಲಷ್ಟು ಲವ್‌ಲವಿಕೆ ಮೂಡಿದರೆ ಸಾಕು, ಅದಕ್ಕಿಂತ ಸಾರ್ಥಕತೆ ಬೇಕಿಲ್ಲ ಎಂಬ ಲೇಖಕರ ಆಶಯ ಈ ಬರಹಗಳಲ್ಲಿ ಕಂಡುಬರುತ್ತದೆ. ಈ ಬರಹಗಳು,

> ‘ದೇವಲೀಲೆಯೋ ಕಾಣೆ ಕರ್ಮಜಾಲವೋ ಕಾಣೆ
> ಅದು ನಮ್ಮ ಬುದ್ಧಿಯಾಚೆಗಿನ ಮಾತು
> ಯಾವದೇನೆ ಇರಲಿ ಪ್ರೀತಿಯಂಥಾ ವಸ್ತು
> ಭವದಲ್ಲಿ ಕಾಣೆ ಮನಗಂಡ ಮಾತು’
>
> –ಮಧುರ ಚೆನ್ನ

ಯಾವುದೇನೇ ಇರಲಿ ಭೂಮಿಯ ಮೇಲೆ ಹುಟ್ಟಿದ ಮೊಟ್ಟ ಮೊದಲ ಗಂಡು–ಹೆಣ್ಣು ಮತ್ತು ಈ ಜಗತ್ತಿನ ಕಟ್ಟಕಡೆಯ ಗಂಡು–ಹೆಣ್ಣಿನ ಹೃದಯದಲ್ಲಿ ಪ್ರೀತಿ ಮೊಳಕೆಯೊಡೆಯುತ್ತದೆ. ಪ್ರೀತಿಯಂಥ ವಸ್ತು ಬೇರೆ ಯಾವುದು ಇಲ್ಲವೇನೋ! ಅಷ್ಟೊಂದು ತೀವ್ರವಾಗಿ ಮನುಷ್ಯನನ್ನು ಆಳುವ ಒಂದೇ ಒಂದು ವಸ್ತುವೆಂದರೆ ಅದು ಪ್ರೀತಿ ಎಂದು ರವಿಯವರ ಈ ಬರಹಗಳು ಹೇಳುತ್ತವೆ. ಬಹುಮಟ್ಟಿಗೆ ಅವರ ಎಲ್ಲ ಬರಹಗಳ ವಿಷಯದಲ್ಲಿಯೂ ಇದು ನಿಜವೆಂದು ಹೇಳಬಹುದು.

**೩.೯. ಇತರೆ**

ರವಿ ಬೆಳಗೆರೆಯವರು ಪತ್ರಿಕೆ, ಸಾಹಿತ್ಯ, ಕ್ರೈಮ್ ವರದಿ, ಟಿ..ವಿ ಕಾರ್ಯಕ್ರಮ, ಸಿನೆಮಾ ಇತ್ಯಾದಿಗಳ ಮಧ್ಯೆ ಒಂದು ನೂತನ ಪ್ರಯೋಗವೆಂಬಂತೆ ಆಡಿಯೋ ಸಿ.ಡಿ.ಗಳನ್ನು ಸಿದ್ಧಮಾಡಿ ಕೇಳುಗರನ್ನು ತಲುಪಿಸಿದ್ದಾರೆ. ಭಾಗದಲ್ಲಿ ಅವುಗಳನ್ನು ಗಮನಿಸಲಾಗಿದೆ. ಇವುಗಳ ಜೊತೆಗೆ ಪತ್ರಿಕೆಯ ಇನ್ನೊಂದು ಅಂಕಣವಾದ ‘ಕೇಳಿ’ ಪ್ರಶ್ನೋತ್ತರ ಮಾಲಿಕೆಯನ್ನು ಪುಸ್ತಕ ರೂಪದಲ್ಲಿ ಸಂಗ್ರಹಿಸಿ ತಂದಿದ್ದಾರೆ. ಅದರ ಬಗೆಗೂ ಈ ಭಾಗದಲ್ಲಿಯೇ ಸ್ಥಳಾವಕಾಶವನ್ನು ಮಾಡಿಕೊಡಲಾಗಿದೆ.

**೩.೯.೧ ಕೇಳಿ–ಪ್ರಶ್ನೋತ್ತರ ಮಾಲಿಕೆ**

‘ಕೇಳಿ’ ಹಾಯ್ ಬೆಂಗಳೂರ್! ಪತ್ರಿಕೆಯ ಪ್ರತಿವಾರದ ಕಚಗುಳಿ. ಎಷ್ಟು ತುಂಟಾಟವಾಡಿದರೂ ಜನರಿಗೆ ತೊಂದರೆ ಮಾಡದ, ಭಯ ಹುಟ್ಟಿಸದ ನಿರುಪದ್ರವಿ ಕೇಳಿ. ಪತ್ರಿಕೆಯ ಆರಂಭದಿಂದಲೇ

ಶುರುವಾದ ಈ ಪ್ರಶ್ನೋತ್ತರ ಮಾಲೆ, ಇವತ್ತಿಗೂ ಅಬಾಧಿತವಾಗಿ ಜಾರಿಯಲ್ಲಿದೆ. ಮೊದಲು 'ಸುಧಾ' ವಾರ ಪತ್ರಿಕೆಯಲ್ಲಿ ಬೀಚಿ ಅವರು ಉತ್ತರಿಸುತ್ತಿದ್ದ 'ನೀವು ಕೇಳಿದಿರಿ' ಅಂಕಣದ ನಂತರ ಲಂಕೇಶ್ ಉತ್ತರಿಸುತ್ತಿದ್ದ 'ಕಣ್ಣಾಮುಚ್ಚಾಲೆ'ಯ ಆ ನಂತರದಲ್ಲಿ ಬಹುಶಃ ಕನ್ನಡ ಪತ್ರಿಕೋದ್ಯಮದಲ್ಲಿ ಓದುಗರಿಗೆ ದೊಡ್ಡ ಸಂತೋಷದ ಅನುಭೂತಿ ನೀಡಿದ ಅಂಕಣವೆಂದರೆ ಕೇಳಿ.

ರಾಜಕೀಯ, ಪ್ರೇಮ, ಕಾಮ, ಪತ್ರಿಕೆಗಳ ಕೋಳಿ ಕಾಳಗ, ಸಿನೆಮಾ, ನಟ–ನಟಿಯರ ಗೇಲಿ, ಮಠಾಧೀಶರ ಬಹಿರಂಗ ಹರಾಜು, ಖಾಸಗಿ ದುಗುಡ ದುಮ್ಮಾನ, ಸಮಸ್ಯೆಗಳ ಅನಾವರಣ ಮುಂತಾದ ಎಲ್ಲಕ್ಕೂ ವೇದಿಕೆಯಾದದ್ದು ಇದು. ಕೇಳಿ ವಿಶೇಷವೆಂದರೆ ಈ ವೇದಿಕೆಯ ಮೇಲೆ ನಿಂತು ಪ್ರಶ್ನೆ ಕೇಳಿದವರಿಗೂ, ಉತ್ತರ ನೀಡಿದವರಿಗೂ ಸದಾ ಹದಿನಾರರ ವಯಸ್ಸು. ಹೀಗಾಗಿ ಕೇಳಿ ನಿರಂತರ ಮತ್ತು ಆರೋಗ್ಯಪೂರ್ಣವಾಗಿ ಎರಡು ದಶಕಗಳನ್ನು ಪೂರೈಸಿದೆ.

ಪತ್ರಿಕೆಗಳ ಪುಟಗಳು, ಅದರಲ್ಲೂ ಹಾಯ್ ಬೆಂಗಳೂರ್! ನಂತಹ ಧಾಟಿಯ ಪತ್ರಿಕೆಯ ಪುಟಗಳು ತೀರ ಗಂಭೀರ ಮತ್ತು ಜಾಸ್ತಿ ಅನ್ನಿಸಿದಾಗ ಹುಟ್ಟಿಕೊಳ್ಳುವುದೇ ಈ ಪ್ರಶ್ನೋತ್ತರ ಸಾಹಿತ್ಯ. ಇದೇನೂ ಗಂಭೀರವಾದ ಸಾಹಿತ್ಯವಲ್ಲ. ಈ ಹಿಂದೆ ಹೇಳಿದಂತೆ ಸಾಹಿತ್ಯ ಗಂಭೀರವಾಗಿರಬೇಕೆಂದು ಇಲ್ಲ. ಇದು ಓದುಗರನ್ನು ತೊಡಗಿಸಿಕೊಂಡು ಕೊಂಚ ನಗಿಸುತ್ತ, ಯಾರದೋ ಒಂದು ಸಭ್ಯ ಗೇಲಿಗೆ ನೆರವಾಗುತ್ತ, ಯಾವತ್ತೋ ನೆನಪಾಗಿ ಸಣ್ಣಗೆ ಕಚಗುಳಿಯಿಟ್ಟರೆ ಸಾಕು. ಇಲ್ಲಿ ಪ್ರಶ್ನೆ ಕೇಳುವವರ(ಓದುಗರ) ತುಂಟತನ ಮತ್ತು ಸಂಪಾದಕನ ತಾಕತ್ತು ಎರಡೂ ಪರೀಕ್ಷೆಗೊಳಗಾಗುತ್ತವೆ. ಪ್ರಶ್ನೆಗಳನ್ನು ಆಯ್ಕೆ ಮಾಡಿಕೊಳ್ಳುವಾಗಲೇ ಜಾಣತನ ವಹಿಸಬೇಕು. ಎಲ್ಲೂ ಓದುಗರನ್ನು ನೋಯಿಸಬಾರದು. ಅವತ್ತಿನ ದಿನಮಾನದ ಸನ್ನಿವೇಶಕ್ಕೆ ತಕ್ಕಂತೆ ಗೇಲಿ, ವಿಡಂಬನೆ, ವ್ಯಂಗ್ಯ ಮುಂತಾದವು ಪ್ರಶ್ನೆ ಮತ್ತು ಉತ್ತರಗಳೆರಡರಲ್ಲೂ ಇರುವಂತೆ ನೋಡಿಕೊಳ್ಳಬೇಕು. ಹೀಗೆ ಕೇಳಿ ಅಂಕಣ ತನ್ನದೇ ಆದ ಕೆಲವು ನಿಯಮಗಳನ್ನು ಹೊಂದಿರುತ್ತದೆ. ಅವು ಅಂಕಣದ ಯಶಸ್ಸಿಗೆ ಕಾರಣವಾಗುತ್ತವೆ. ಕೇಳಿ ಕಚಗುಳಿಯ ಕೆಲವು ಪ್ರಶ್ನೋತ್ತರಗಳನ್ನು ನೋಡಬಹುದು; ಅವುಗಳ ಸ್ವರೂಪದ ಅರಿವಿಗಾಗಿ.

ಪ್ರ: ಲೇಖಕಿಯನ್ನು ಮದುವೆಯಾಗಬೇಕೆಂದಿರುವೆ. ಸಲಹೆ ಗುರೂ?

ಉ: ವಿಮರ್ಶೆಯ ಮಾನದಂಡಗಳು ನೇರವಾಗಿರಲಿ!

ಪ್ರ: ನೀವೇಕೆ ಜಾಣಜಾಣೆಯರ ಸಂಪಾದಕನೊಂದಿಗೆ ಜಗಳಕ್ಕಿಳಿಯುವುದಿಲ್ಲ.

ಉ: ಅಂಗವಿಕಲರ ಮೇಲಿನ ಅನುಕಂಪದಿಂದ!

ಪ್ರ: 'ಪ್ರೀತಿ' ಈ ಎರಡಕ್ಷರಗಳ ಶಕ್ತಿ ಎಷ್ಟು?

ಉ: ಭಾರತದ ಜನಸಂಖ್ಯೆಯಷ್ಟು ಅಥವಾ ಕುಟುಂಬ ಯೋಜನೆಯ ವೈಫಲ್ಯದಷ್ಟು.

ಪ್ರ: ತಮಿಳರದು ದುರಭಿಮಾನ, ಮರಾಠಿಗರದು ಅಂಧಾಭಿಮಾನ, ಕನ್ನಡಿಗರದು?

ಉ: ಅರ್ಧ ಅಭಿಮಾನ, ಇನ್ನರ್ಧ ಅನುಮಾನ!

ಪ್ರ: ಕನಸಿಗೂ ನನಸಿಗೂ ಇರುವ ವ್ಯತ್ಯಾಸವೇನು?

ಉ: ಒಂದು ಕಿ.ರಂ.ನಾಗರಾಜ್ ವಿಮರ್ಶೆ, ಇನ್ನೊಂದು ಹುಳಿಯಾರ್ ತಲೆಹರಟೆ!

ಪ್ರ: ಮಾತೆ ಮಹಾದೇವಿಗೆ ಮತ್ತೆ ಯೌವ್ವನ ಬಂದರೆ?

ಉ: ವಚನ ಬದಲಾಗುತ್ತದೆ. 'ಸ್ಥಾವರಕ್ಕಳಿವುಂಟು ಯೌವ್ವನಕ್ಕಳಿವಿಲ್ಲ!'

ಪ್ರ: ಇಲ್ಲೊಬ್ಬರು ನಿಮ್ಮನ್ನು ಅಂತರ್ಗಾಮಿ ಅಂತಾರಲ್ಲ?

ಉ: ಭೂಮಂತರ್ಗಾಮಿ ಅಂತ ವಿವರಿಸಿ ಹೇಳಿ!

ಪ್ರ: ಈ ವಿಮರ್ಶಕರೇಕೆ ಶಾಂತಿನಾಥ ದೇಸಾಯಿಯ 'ಬೀಜ', ಅನಂತಮೂರ್ತಿಯವರ 'ಸಂಸ್ಕಾರ' ಅಂತ ಬರೀತ್ತಾರೆ?

ಉ: ಈಗ ವಾಸಿ; ಮೊದಲು ಲಂಕೇಶ್‌ರ 'ಅಕ್ಕ', ಚಂಪಾರ 'ಅಪ್ಪ' ಅಂತ ಬರೀತಿದ್ರು!

ಪ್ರ: ವಿದ್ಯಾರ್ಥಿನಿ ತನ್ನ ಉಪನ್ಯಾಸಕನನ್ನೇ ಪ್ರೀತಿಸುವುದಕ್ಕೆ ಏನಂತೀರಿ?

ಉ: ಗುರುತ್ವಾಕರ್ಷಣೆ!

ಪ್ರ: ಸಂಪಾದಕರ ವಿರುದ್ಧ ಅವರ ಪತ್ನಿಯರೆಲ್ಲ ಸೇರಿ ಒಂದು ಪತ್ರಿಕೆ ಮಾಡಿದರೆ?

ಉ: ಅದರ ಹೆಸರು ಸಂ-ಪಾದುಕೆ!

ಪ್ರ: ಬೇಲೂರು ಶಿಲಾಬಾಲಿಕೆಯರಿದ್ದ ಹಾಗೆ ಶಿಲಾಬಾಲಕರು ಏಕಿಲ್ಲ?

ಉ: ಆತ ಶ್ರವಣ ಬೆಳಗೊಳದಲ್ಲಿದ್ದಾನೆ!

ಪ್ರ: ಹೆಂಗಸರು ನಡೆಯುವಾಗ ಸೊಂಟವೇಕೆ ಬಳಕುತ್ತೆ?

ಉ: ಇಲ್ದಿದ್ರೆ ಬಿಂದಿಗೆ ಹೇಗೆ ತುಳುಕುತ್ತೆ?

ಹೀಗೆ ಕೇಳಿಯು ವಿಡಂಬನೆ, ಗೇಲಿ ಮೂಲಕ ಮನರಂಜನೆಯನ್ನು ನೀಡುತ್ತದೆ. ಇದೊಂದು ಪ್ರಶ್ನೋತ್ತರ ಆಟ, ಮನೋರಂಜನೆಯ ಆಟ. ಇಲ್ಲಿ ವಿಷಯವಿದೆ, ಜ್ಞಾನವಿದೆ, ಭಾಷಾ ಚಮತ್ಕಾರವಿದೆ, ಪ್ರಾಸವಿದೆ, ವಿನೋದವಿದೆ. ಅನೇಕ ರೀತಿಯಲ್ಲಿ ಸಹಾಯವಾಗುವಂತೆ ಸಭ್ಯ ಕಚಗುಳಿಯಿದೆ. ಹಾಗೆಯೇ ಇದಕ್ಕೆ ಅದರದೆ ಆದ ರೀತಿ-ನೀತಿಗಳಿವೆ, ಮಿತಿ-ನಿರ್ಬಂಧಗಳಿವೆ. ಇದೆ ಮಾದರಿಯಂತೆ ಕರ್ಮವೀರದಲ್ಲಿ 'ಸವಾಲ್ ಜವಾಬ್' ಲಂಕೇಶ್ ಪತ್ರಿಕೆಯಲ್ಲಿ 'ಕಾಗೆಗೂಡು' ಇತ್ತೀಚೆಗೆ ವಿಜಯ ಕರ್ನಾಟಕದಲ್ಲಿ ಯೋಗರಾಜ್ ಭಟ್ಟರು ಪ್ರತಿ ಭಾನುವಾರ 'ಖಾಲಿದಾಸ'ದಲ್ಲಿ ಓದುಗರ ಪ್ರಶ್ನೆಗಳಿಗೆ ಉತ್ತರಿಸುತ್ತಾರೆ. ಅಲ್ಲದೆ ಅನೇಕ ಪತ್ರಿಕೆಗಳಲ್ಲಿ ಈ ರೀತಿಯ ಅಂಕಣಗಳನ್ನು ಕಾಣಬಹುದಾಗಿದೆ. ಇದೊಂದು ನಿರುಪದ್ರವಿ ಅಂಕಣ. ಆ ಕಾರಣದಿಂದಲೇ ಕೇಳಿ ಎರಡು ದಶಕದಿಂದಲೂ ಹಾಯ್ ಬೆಂಗಳೂರ್! ಪತ್ರಿಕೆಯಲ್ಲಿ ನಿರಂತರವಾಗಿ ಜಾರಿಯಲ್ಲಿದೆ. ಬಹುಶಃ ಇದೇ ಅದರ ವಿಶೇಷ, ಮಹತ್ವವನ್ನು ಹೇಳುತ್ತದೆ.

**೩.೯.೨. ಆಡಿಯೋ ಸಿ.ಡಿ.ಗಳು**

ಪತ್ರಿಕೋದ್ಯಮ, ಸಾಹಿತ್ಯ, ರೇಡಿಯೋ(ಎಫ್.ಎಂ.) ಟಿ..ವಿ ಮತ್ತು ಸಿನೆಮಾ ಇವೆಲ್ಲವೂಗಳಲ್ಲದೆ ರವಿಯರವರ ಸೃಜನಶೀಲತೆ ಇಲೆಕ್ಟ್ರಾನಿಕ್ ಮಾಧ್ಯಮವನ್ನು ಬಳಸಿಕೊಂಡಿದೆ. ಅದಕ್ಕೆ ಉದಾಹರಣೆ ಎಂದರೆ ಅವರು ಭಾವನಾ ಆಡಿಯೋ ರೀಚ್‌ನಿಂದ ಸಿ.ಡಿಯನ್ನು ಬಿಡುಗಡೆ ಮಾಡಿರುವುದು. ಒಂದು ಘಂಟೆ ಸಮಯವನ್ನೊಳಗೊಂಡ ಒಟ್ಟು ಮೂರು ಸಿ.ಡಿಗಳು: 'ಮನಸ್ಸೇ...', 'ಕನಸೇ...' ಮತ್ತು 'ಒಲವೇ...'

ಬರವಣಿಗೆಯ ಮೂಲಕ ಓದುಗರನ್ನು ತಲುಪಿಯಾಗಿತ್ತು. ರೇಡಿಯೋ, ಟಿ.ವಿ. ಮತ್ತು ಸಿನೆಮಾಗಳು ದೀರ್ಘ ಸಮಯದವರೆಗೆ ಅವಕಾಶವನ್ನು ನೀಡದಂಥವು, ಪುನಃ ಬೇಕು ಅನಿಸಿದಾಗ ಸಿಗದಂತಹವು. ಇದರಲ್ಲಿ ಸಿನೆಮಾವೊಂದು ದೊರೆಯುತ್ತದಾದರೂ ಅದು ಒಮ್ಮೆ ನೋಡಿಬಿಡುವಂತಹದ್ದು. ಆದರೆ ಆಡಿಯೋ ಆಗಲ್ಲ. ಒಳ್ಳೆಯ ವಿಷಯವನ್ನೊಳಗೊಂಡಿದ್ದರೆ ಯಾವಾಗಲೂ ಮತ್ತೆ ಮತ್ತೆ ಕೇಳಬಹುದಾದಂತಹದ್ದು. ಇತ್ತೀಚೆಗಂತು ಮೊಬೈಲ್‌ನಲ್ಲಿ ಡೌನ್‌ಲೋಡ್ ಮಾಡಿಕೊಂಡು

ಯಾವಾಗಲೂ ಕೇಳುತ್ತಿರಬಹುದು. ಅಂತಹ ವ್ಯವಸ್ಥೆಯನ್ನು ಒಳಗೊಂಡಿವೆ. ಹಾಗೆಯೇ ಎಲ್ಲ ತರಹದ ಓದುಗರನ್ನು, ಕೇಳುಗರನ್ನು ತಲುಪುವಲ್ಲಿ ಯಶಸ್ವಿ ಪ್ರಯತ್ನವೂ ಆಗುತ್ತದೆ. ಅವುಗಳಲ್ಲಿ ಇರುವ ವಿಷಯ, ಮಹತ್ವದ ಅಂಶವನ್ನು ಗಮನಿಸಿದರೂ, ವೃಥಃ ಕಾಲಹರಣ ಮಾಡುವಂತಹದೇನಲ್ಲ. ಜೀವನದ ಒಂಟಿತನ, ಬೇಸರ, ಉತ್ಸಾಹ, ವಿಶ್ವಾಸ, ಸ್ಫೂರ್ತಿ, ನಂಬಿಕೆಯನ್ನು ನೀಡುತ್ತವೆ. ಧೈರ್ಯವನ್ನು ಕೊಡುತ್ತವೆ. ಬದುಕಿನೆಡೆಗೆ ಒಂದು ಅದಮ್ಯ ಪ್ರೇಮ, ಛಲ, ಆತ್ಮವಿಶ್ವಾಸವನ್ನು ತುಂಬುತ್ತವೆ, ಕೆಲವು ವಿಷಯಗಳ ಜ್ಞಾನವನ್ನು, ಕೆಲವು ಅಂಶಗಳಿಗೆ ಸಂಬಂಧಿಸಿದಂತೆ ಬುದ್ಧಿವಾದವನ್ನು ಹೇಳಲು ಇವುಗಳ ಮೂಲಕ ಪ್ರಯತ್ನಿಸಿದ್ದಾರೆ.

'ಮನಸ್ಸೇ...' ಆಡಿಯೋ ಸಿ.ಡಿಯಲ್ಲಿ ಬದುಕಿನ ಬಗ್ಗೆ, ಯಶಸ್ಸಿನ ಬಗ್ಗೆ ಹೇಳುತ್ತಾರೆ. ಅದಕ್ಕಾಗಿ ನಿರ್ವಹಿಸಿಬೇಕಾದ ಕೆಲಸದ ಬಗ್ಗೆ ಹೇಳುತ್ತಾರೆ. ಅದು ಹೇಗೆ? ಮನುಷ್ಯ, ಶ್ರದ್ಧೆ, ಶ್ರಮ ಜೀವಿಯಾಗಿರಬೇಕು ಎಂಬ ಹಿನ್ನೆಲೆಯಲ್ಲಿ ಅದಕ್ಕಾಗಿ ಅವರು ಕೊಟ್ರೇಶ್, ಡೆವಿಡ್ ಹಾರ್ಡ್‌ಮನ್, ವಿಜಯ ಸಂಕೇಶ್ವರ, ಅಮಿತಾಬ್, ಬಾಲಸುಬ್ರಮಣ್ಯಂ ಅವರುಗಳನ್ನು ಮಾದರಿಯಾಗಿ ಹೇಳುತ್ತಾರೆ. ಅವರು ಮಾಡಿದ ಕಾರ್ಯವೈಖರಿಯ ಬಗ್ಗೆ ಯಶಸ್ವಿಗಾಗಿ ದುಡಿದಿದ್ದರ ಬಗ್ಗೆ ಮಾಹಿತಿ ನೀಡುತ್ತಾರೆ. ಡೆವಿಡ್ ಒಬ್ಬ ಕುರುಡು ಹುಡುಗ. ಆತನ ಬಯಕೆ ಒಬ್ಬ ಡಾಕ್ಟರ್ ಆಗಬೇಕೆಂಬುದು. ಒಬ್ಬ ಕುರುಡು ವ್ಯಕ್ತಿ ಡಾಕ್ಟರ್ ಆಗಲು ಹೇಗೆ ಸಾಧ್ಯ? ಆದರೆ ಪರಿಶ್ರಮ ಮತ್ತು ಶ್ರದ್ಧೆಗಳಿದ್ದರೆ ಅದು ಸಾಧ್ಯವೆಂದು ಅದಕ್ಕೆ ಡೆವಿಡ್ ಡಾಕ್ಟರ್‌ನಾಗಿದ್ದನ್ನು ಹೇಳುತ್ತಾರೆ. ಇಂತಹ ಉದಾಹರಣೆಗಳನ್ನು ನೀಡುವ ಮೂಲಕ ಮನುಷ್ಯನ ಮನಸ್ಸಿನಲ್ಲಿರುವ ಬಲಹೀನತೆಯ ಭಾವವನ್ನು ಹೋಗಲಾಡಿಸುವ, ಆತ್ಮ ಸ್ಥೈರ್ಯವನ್ನು ತುಂಬುವ ಪ್ರಯತ್ನ ಮಾಡಿದ್ದಾರೆ. ಪ್ರತಿ ಹಕ್ಕಿಯೂ ತನ್ನ ಹೊಟ್ಟೆಯಲ್ಲಿ ಮೊಟ್ಟೆ ಮೊಳೆತಾಕ್ಷಣ ಗೂಡು ಕಟ್ಟಬೇಕೆಂದು ನಿರ್ಧರಿಸುತ್ತದೆ. ನಿರ್ಧರಿಸಿದ ಕ್ಷಣದಿಂದಲೇ ಒಂದೊಂದೆ ಹುಲ್ಲು ಕಡ್ಡಿ ತಂದು ಜೋಡಿಸೋಕೆ ಸುರುಮಾಡುತ್ತದೆ. ಗೂಡು ಅನ್ನುವುದು Major Target. ಅದಕ್ಕಾಗಿ ಅದು ತನ್ನ ಚುಂಚ್ಚಿನಿಂದ ಆಯ್ದು ತರುವ ಒಂದೊಂದೆ ಹುಲ್ಲುಕಡ್ಡಿ ಆ ಕ್ಷಣದ Shart and small target. ನಿರಂತರ ಶ್ರಮ, ಶ್ರದ್ಧೆ ಸೂಚಕ ನಮ್ಮ ಗುರಿಗಾಗಿ ನಾವು ಹೆಚ್ಚಿನ ಶ್ರಮ ಪಡಬೇಕು, ಸಣ್ಣ ಸಣ್ಣ ಕನಸು ಆಸೆಗಳೇ ನಮ್ಮನ್ನು ದೊಡ್ಡವರನ್ನಾಗಿಸುತ್ತವೆ. ಅವುಗಳನ್ನು ಸಕಾರಮಾಡಿಕೊಳ್ಳಬೇಕು ಅಷ್ಟೇ ಎಂದು ಹೇಳುತ್ತಾರೆ. ಒಟ್ಟಾರೆ ಈ ಆಡಿಯೋ ಜೀವನದಲ್ಲಿ ಸೋತ ಬಲಹೀನ ಮನಸ್ಸಿಗೆ ಆತ್ಮಸ್ಥೈಯವನ್ನು ತುಂಬುವ ಪ್ರಯತ್ನವನ್ನು ಮಾಡುತ್ತದೆ.

ಎರಡನೆಯದು 'ಕನಸೇ...' ಪ್ರತಿಯೊಬ್ಬ ಮನುಷ್ಯನು ತನ್ನ ಜೀವಿತಾವಧಿಯಲ್ಲಿ ಅನೇಕ ರೀತಿಯ ಕನಸ್ಸುಗಳನ್ನು ಕಾಣುತ್ತಾನೆ. ಕನಸು ಕಾಣುವುದು ಮನುಷ್ಯನ ಸ್ವಾಭಾವಿಕ ಗುಣ. ಆದರೆ ಈ ಕನಸೇ ಆಡಿಯೋ ಸಿ.ಡಿ. ಕನಸಿನ ಮನೆ ಕಟ್ಟುವ ವಿಷಯಕ್ಕೆ ಸಂಬಂಧಿಸಿದ್ದು. ಪ್ರತಿಯೊಬ್ಬ ವ್ಯಕ್ತಿಯಲ್ಲೂ ಮನೆ ಕಟ್ಟಬೇಕು ಎಂಬ ಕನಸ್ಸು ಇದ್ದೇ ಇರುತ್ತದೆ. ಮನೆಕಟ್ಟುವಾಗಿನ ಸಮಸ್ಯೆ, ಅಭಿರುಚಿ, ಆತಂಕಗಳ ಬಗ್ಗೆ ಇದರಲ್ಲಿ ಹೇಳುತ್ತಾರೆ. ಅವರು ಮನುಷ್ಯನ ಅತಿ ದೊಡ್ಡ ಕೊಡುಗೆ ಎಂದರೆ 'ಕುಟುಂಬ' ಎಂದು ಹೇಳುತ್ತಾರೆ. ಕುಟುಂಬದ ಪರಿಕಲ್ಪನೆಯನ್ನು ಹುಟ್ಟುಹಾಕಿರುವುದೇ ಮನುಷ್ಯನ ನಿಜವಾದ ಮತ್ತು ಪ್ರಮುಖವಾದ ಕೊಡುಗೆ. ಮನೆ ಕಟ್ಟಿಸುವಾಗ, ವಾಸ್ತುವನ್ನು ನಂಬಬೇಕೋ ಬೇಡವೋ? ಸಾಲ ಸೂಲದ ವಿಷಯ, ತಾಯಿ ತಂದೆಯರಿಗೆ ಪ್ರತ್ಯೇಕ ಕೋಣೆ ಮುಂತಾದ ಅನೇಕ ವಿಷಯಗಳ ಮಾಹಿತಿಯನ್ನು ಅದರ ಕಾಗದ ಪತ್ರಗಳ ಜಾಗರೂಕತೆಯನ್ನು ತಿಳಿಸುತ್ತಾರೆ.

'ಒಲವೇ...' ಮೂರನೆಯ ಆಡಿಯೋ ಸಿ.ಡಿ. ಇದು ಪ್ರೀತಿ-ಪ್ರೇಮಕ್ಕೆ ಸಂಬಂಧಿಸಿದ ವಿಷಯವನ್ನೊಳಗೊಂಡ ಸಿ.ಡಿ. ಪ್ರೀತಿಯೆಂಬುದು ಯಾಕೆ, ಹೇಗೆ, ಎಂತಹವರಲ್ಲಿ ಹುಟ್ಟುತ್ತದೆ ಎಂಬುದನ್ನು ನಿಖರವಾಗಿ ಹೇಳಲಾಗದಿದ್ದರೂ ಅದರ ನಂತರದ ಸ್ವಭಾವ, ಇರಬೇಕಾದ ರೀತಿ, ಪಡೆದುಕೊಳ್ಳುವ ಬಗೆ, ವಿಫಲವಾಗಿ ಹತಾಶರಾಗದೇ, ಪ್ರೀತಿಸಿದವರಿಗೆ ತೊಂದರೆಯನ್ನು ಮಾಡದೇ ತಮ್ಮಗೆ ತಾವೇ ಜೀವಹಾನಿ ತಂದುಕೊಳ್ಳದೆ ಇರುವಂತೆ ಆತ್ಮವಿಶ್ವಾಸದ ಮಾತುಗಳನ್ನು ಆಡುತ್ತಾರೆ. ಇದರಲ್ಲಿ ಎರಡು ಮುಖಗಳ ಬಗ್ಗೆಯೂ ಹೇಳುತ್ತಾರೆ. ಒಂದು: ಪ್ರೀತಿಯನ್ನು ಪಡೆದು ಉಳಿಸಿ, ಬೆಳಸಿ ಅದನ್ನು ಪಡೆದುಕೊಳ್ಳುವ ಕುರಿತು. ಎರಡು: ವಿಫಲವಾದ ನಂತರ ಇಬೇಕಾದ ರೀತಿಯ, ಗೆಲ್ಲುವ ಬಗೆ ವಿವರಿಸುತ್ತಾರೆ. ಬಿಟ್ಟು ಹೋದವರಿಗಿಂತ ಉಳಿದು ಹೋದವರು ಒಂಟಿ ಎನಿಸುತ್ತಾರೆ, ತುಂಬ ದುಃಖಿತರಾಗುತ್ತಾರೆ. ಅಂಥವರಿಗಾಗಿ ಹೇಳಿರುವ ಆತ್ಮ ವಿಶ್ವಾಸದ ಮಾತುಗಳು ಇದರಲ್ಲಿವೆ.

ಒಟ್ಟಾರೆಯಾಗಿ ಈ ಮೂರು ಆಡಿಯೋ ಸಿ.ಡಿಗಳು ತಲಾ ಒಂದು ಗಂಟೆಯ ಅವಧಿಯನ್ನು ಒಳಗೊಂಡಿದ್ದು, ಅನೇಕ ಹಾಡು. ಕವಿತೆ, ಗಜಲುಗಳನ್ನು ಬಳಸಿಕೊಂಡದ್ದಾರೆ. ನಾಗರಾಜ ಹವಾಲ್ದಾರ್ ಮತ್ತು ಪ್ರವೀಣ ಗೋಡಖಿಂಡಿಯವರು ಹಿನ್ನೆಲೆ ಸಂಗೀತವನ್ನು ನೀಡಿರುತ್ತಾರೆ. ಮನಸಿಗೆ ಬೇಸರವೆನಿಸಿದಾಗ, ಒಬ್ಬಂಟಿ ಎನಿಸಿದಾಗ ಕುಳಿತು ಕೇಳಬಹುದಾದಂತಹವು ಎಂದು ಹೇಳಬಹುದು. ಸಾಹಿತ್ಯವನ್ನು ಹೊರತುಪಡಿಸಿ ಅವರು ಮಾಡಿದ ಈ ತಾಂತ್ರಿಕ ಕೆಲಸದ ಬಗ್ಗೆ ರವಿಯವರ ಆಸಕ್ತಿಯ ಕ್ಷೇತ್ರಗಳ ಹಿನ್ನೆಲೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಇವುಗಳನ್ನು ಪ್ರಸ್ತಾಪಿಸಲಾಗಿದೆ.

**೩.೧೦. ಜನಪ್ರಿಯ ಸಾಹಿತ್ಯ ಮತ್ತು ರವಿ ಬೆಳಗೆರೆ**

ಕನ್ನಡದಲ್ಲಿಗ ಸೃಷ್ಟಿಯಾಗುತ್ತಿರುವ ಸಾಹಿತ್ಯದ ಪ್ರಮಾಣ ಅಧಿಕವಾಗಿದೆ. ಅದರೆ ಓದುವವರ ಸಂಖ್ಯೆ ಕಡಿಮೆಯಾಗಿದೆ. ಬಾಲ್ಯದಲ್ಲಿ ಚಂದಮಾಮ, ರಾಜ-ರಾಣಿ, ಅಣ್ಣ-ತಂಗಿ ಇತ್ಯಾದಿ ಮಕ್ಕಳ ಕತೆಗಳನ್ನು ಅಜ್ಜಿಯರಿಂದ ತುಂಬ ಆಸಕ್ತಿಯಿಂದ ಕೇಳುತ್ತಿದ್ದೆವು. ಇಂದಿನ ಮಕ್ಕಳಿಗಂತೂ ಅಜ್ಜಿಯ ಕತೆಗಳು ಕಾಣೆಯಾಗಿವೆ. ಏನಿದ್ದರೂ ವಿಡಿಯೋ ಗೇಮ್ ಕಾಲ. ಇಂತಹ ಸಂದರ್ಭದಲ್ಲಿ ದೈನಂದಿನ ತುರ್ತುಗಳಿಂದ ಸಾಹಿತ್ಯದ ಓದಿಗಾಗಿ ಬಿಡುವು ಸಿಗುವುದೇ ದುಸ್ತರವಾಗಿರುವುದು ಒಂದು ಕಾರಣವಾದರೆ, ಬಾಲ್ಯದಿಂದಲೇ ಇಂಗ್ಲೀಶ್‌ನಲ್ಲಿ ಕಲಿತ ಹೊಸ ಪೀಳಿಗೆ. ಪ್ರಬುದ್ಧರಾದ ಸಮಯ ಈಗ ಬಂದಿದೆ. ಬಿಡುವಿನ ಸಮಯವೇ ಕಡಿಮೆ. ಅದರಲ್ಲೂ ಆಸಕ್ತಿ ಹಲವು. ಬಹುತೇಕರಿಗೆ ಟಿ.ವಿ.ಯೇ ಪ್ರಥಮ ಒಲವು. ಅದು ಬಿಟ್ಟು ಇಂದಿನವರೂ ಏನೇ ಸ್ವಲ್ಪ ಓದುವುದಿದ್ದರೂ ಅದನ್ನು ಇಂಗ್ಲೀಶ್‌ನಲ್ಲಿಯೇ ಓದಿಕೊಳ್ಳುತ್ತಾರೆ. ಅಂತೆಯೇ ಇಂಗ್ಲೀಶ್‌ನಲ್ಲಿ ಬರೆಯುವ ಭಾರತೀಯ ಸಾಹಿತಿಗಳ ಸಂಖ್ಯೆಯೂ ಸಹ ದಿನದಿಂದ ದಿನಕ್ಕೆ ಏರುತ್ತಲೇ ಇದೆ. ಕನ್ನಡ ಸಾಹಿತ್ಯವನ್ನೇ ಓದುವುದು ಕಡಿಮೆಯಾಗಿರುವಾಗ ಜನಪ್ರಿಯ ಸಾಹಿತ್ಯದ ಓದು ಇನ್ನೂ ಸೊರಗಿದೆ.

ರವಿ ಬೆಳಗೆರೆಯವರು ಒಬ್ಬ ಜನಪ್ರಿಯ ಬರಹಗಾರರು ಎಂದು ಗುರಿತಿಸಿಕೊಂಡಿದ್ದಾರೆ. ಅಲ್ಲದೇ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ತಮ್ಮದೇ ಆದ ಓದುಗ ವರ್ಗವನ್ನು ಸೃಷ್ಟಿಸಿಕೊಂಡಿದ್ದಾರೆ. ಇಷ್ಟಾದರೂ ಅವರನ್ನು ಸಾಹಿತಿಯಂತೆ, ಅವರ ಬರಹಗಳನ್ನು ಸಾಹಿತ್ಯವೆಂದು ಅಕಾಡೆಮಿಗಳಾಗಲೀ, ವಿಮರ್ಶಕರಾಗಲೀ ಸ್ವೀಕರಿಸಿಲ್ಲ. ಯಾಕೆ ಎಂಬ ಪ್ರಶ್ನೆಗೆ ಉತ್ತರವಾಗಿ, ಅವರದೂ ಸಾಹಿತ್ಯವೇ ಅಲ್ಲವೆಂಬ ದೂರು ಕೇಳಿಬರುತ್ತದೆ. ಅದಕ್ಕೆ ಜನಪ್ರಿಯ ಬರಹಗಾರನಾಗಿರುವುದು ಕಾರಣವಿರಬಹುದು. ಹೀಗಾಗಿ ಸಂಕೀರ್ಣತೆ ಎಂಬುದು ವಸ್ತುವಿನಲ್ಲಿ ಇರಬೇಕೆ ಹೊರತು ಸಂವಹನದಲ್ಲಿ

ಅಲ್ಲ. ಸಂವಹನ ಸರಳವಾಗಿರಬೇಕು, ಕಲಾತ್ಮಕವಾಗಿರಬೇಕು, ಮನಮುಟ್ಟುವಂತಿರಬೇಕು. ಬದುಕಿನ ಎಲ್ಲ ಆಯಾಮಗಳನ್ನು ಆಯ್ದುಕೊಂಡ ವಸ್ತು ಸ್ಪರ್ಶಿಸಬೇಕು. ಸೂಕ್ಷ್ಮಾತಿಸೂಕ್ಷ್ಮ ವಿವರಗಳಿಂದ ಜೀವನವನ್ನು ಸೂರೆಗೊಳ್ಳುವ ವಸ್ತು ತನ್ನನ್ನು ಅಭಿವ್ಯಕ್ತಿಗೊಳಿಸಿಕೊಳ್ಳಲು ಸರಳವಾದ, ಕಲಾತ್ಮಕವಾದ ಮಾರ್ಗವೊಂದನ್ನು ಹಿಡಿಯಬೇಕು. ಅಭಿವ್ಯಕ್ತಿಯ ಕ್ರಮದಲ್ಲಿ ಕ್ಲಿಷ್ಟತೆ ಸಲ್ಲದು. ಲೇಖಕರ ಮುಂದೆ ಇರುವ ಸವಾಲುಗಳು ಬರೀ ಇವುಗಳಷ್ಟೇ ಅಲ್ಲ. ಆರಂಭದಲ್ಲಿ ಸರಳವಾಗಿ ಬರೆಯುವುದೇ ಕಷ್ಟ. ವಿಷಯ ಎಷ್ಟೇ ಗಹನವಾಗಿರಲಿ ಅದನ್ನು ಸುಲಭವಾಗಿ ಓದುಗರಿಗೆ ತಲುಪಿಸುವ ಕಲೆ ಲೇಖಕರಿಗೆ ಸಿದ್ಧಿಸಿರಬೇಕು. ಕಥೆ, ಕಾದಂಬರಿಯೊಂದು ಜನಪ್ರಿಯ ಆಗುವ ವಿಧಾನ ಇದು.

'ಜನಪ್ರಿಯ ಎಂದರೇನು? ಈ ಮಾತಿಗೆ 'ಹೆಚ್ಚು ಜನರಿಗೆ ಬೇಕಾಗಿರುವುದು' ಎಂಬ ಸರಳ ಅರ್ಥವಿದೆಯಷ್ಟೆ. ಇದು ವಿವರಣೆ ನೀಡುವ ಬಗೆಯದು. ಇದಲ್ಲದೆ ಹೆಚ್ಚು ಜನರಿಗೆ ಬೇಕಾಗಿರುವುದರಿಂದ ಉತ್ತಮವಾದುದು ಇಲ್ಲವೇ ಉತ್ತಮವಲ್ಲದು ಎಂಬ ತರತಮ ಭಾವದ ಮೌಲ್ಯಾತ್ಮಕ ನೆಲೆಯ ಅರ್ಥದ ಬಳಕೆಯೂ ಒಂದಿದೆ.'[೪೮] ಆಕರ್ಷಕ ಶೈಲಿ, ಕುತೂಹಲಕಾರಿ ಘಟನೆ, ನೈತಿಕ ಮೌಲ್ಯವನ್ನು ಪರಿಣಾಮಕಾರಿಯಾಗಿ ಕಟ್ಟಿಕೊಡುವುದು, ಚುರುಕು ಮುಟ್ಟಿಸುವ ಸಂಭಾಷಣೆ ಎಲ್ಲವೂ ಜನಪ್ರಿಯ ಸಾಹಿತ್ಯ ಎಂದು ಕರೆಯಿಸಿಕೊಳ್ಳುತ್ತವೆ. ಜನಪ್ರಿಯ ಸಾಹಿತ್ಯ ಸೊಬಗು ಇರುವುದು ಇಲ್ಲೇ. ಅಲ್ಲದೆ ಭಾಷೆ ಸಾಹಿತ್ಯದ ಅಭಿವ್ಯಕ್ತಿಯ ಮಾಧ್ಯಮ. ಅದು ಸಾಹಿತ್ಯದ ಸಲಕರಣೆಯೂ ಹೌದು. ಅದರ ಅನುಕೂಲತೆಯನ್ನು ಬಳಸಿಕೊಂಡು ಲೇಖಕರು ತಮ್ಮ ಸ್ಮರಣ ಶಕ್ತಿಯೊಂದಿಗೆ ಅನುಸಂಧಾನ ಮಾಡಿಕೊಂಡು, ಕಂಡ ನೋವುಗಳನ್ನು ಅನುಭವಿಸಿದ ಸುಖ-ದುಃಖ-ಕಷ್ಟಗಳನ್ನೂ ಕೆರಳಿಸಿ ಹೊರಗಿರಡುವುದೇ ಜನಪ್ರಿಯ ಸಾಹಿತ್ಯ.

ಸಾಹಿತ್ಯದ ಯಾವ ಪ್ರಕಾರಕ್ಕೆ ಭಾವ, ಭಾಷೆ, ಬಂಧುರಗಳಿರುವುದಿಲ್ಲವೋ ಅದು ಜನಪ್ರಿಯ ಸಾಹಿತ್ಯವಾಗಲು ಸಾಧ್ಯವಿಲ್ಲ. ಯಾವ ಸಾಹಿತ್ಯವು ಭಾವವನ್ನು ಉದ್ದೀಪನ ಗೊಳಿಸುವುದಿಲ್ಲವೋ ಅದು ಜನಪ್ರಿಯ ಸಾಹಿತ್ಯವಲ್ಲ. ಓದುಗನ ಹೃದಯದೊಳಕ್ಕೆ ಕೈಯಿಕ್ಕಿ, ಮನಸ್ಸು ಕಲಕುವಂತೆ ಮಾಡುವುದೇ ಜನಪ್ರಿಯ ಸಾಹಿತ್ಯ. ಆದರೂ ಜನಪ್ರಿಯ ಸಾಹಿತ್ಯ ಅಂದಕೂಡಲೇ ವಿಮರ್ಶೆಯ ಒಂದು ವಲಯ ಮೂಗು ಮುರಿಯುತ್ತದಲ್ಲ ಯಾಕೆ? ಜನಪ್ರಿಯ ಸಾಹಿತ್ಯದ ಕುರಿತ ಅವರ ತಾತ್ಸಾರಕ್ಕೆ ಕಾರಣವೇನು? ಜನಪ್ರಿಯವಾದುದು ಮೌಲಿಕವಾದುದಲ್ಲ ಎಂದು ನವ್ಯ ವಿಮರ್ಶೆಯ ಒಂದು ಗುಂಪು ಪರಿಭಾವಿಸಿದ್ದೇಕೆ? ಜನಪ್ರಿಯತೆ ಕುರಿತು ಅವ್ಯಕ್ತ ಭಯಕ್ಕೆ ಕಾರಣವೇನಿರಬಹುದು? ಜನಪ್ರಿಯ ಸಾಹಿತಿಯೂ 'ನಾನು ಜನಪ್ರಿಯ ಅಲ್ಲ' ಎಂದು ಹೇಳಿಕೊಳ್ಳುವಂತಹ ಕೃತಕ ವಾತಾವರಣ ನಿರ್ಮಾಣ ಆಗಿದ್ದು ಯಾಕೆ? ಅಗ್ಗದ ಸಾಹಿತ್ಯವನ್ನೂ ಜನಪ್ರಿಯ ಎಂದು ಕರೆಯಲಾಗಿದೆ. ಆದರೆ ಜನಪ್ರಿಯ ಅಂದರೆ ಅದಿಷ್ಟೇ ಅಲ್ಲ, ಅದರಾಚೆಯೂ ರಾಶಿ ರಾಶಿ ಜನಪ್ರಿಯ ಸಾಹಿತ್ಯವೇ ಇದೆ.

ತ್ರಿವೇಣಿ, ತರಾಸು, ಅ.ನ.ಕೃ, ನಿರಂಜನ, ಅನುಪಮಾ ನಿರಂಜನ, ಬಸವರಾಜ ಕಟ್ಟೀಮನಿ, ಕೃಷ್ಣಮೂರ್ತಿ ಪುರಾಣಿಕ, ಮಿರ್ಜಿ ಅಣ್ಣರಾಯ, ರಾವ್ ಬಹದ್ದೂರ, ಬೀಚಿ, ದು.ನಿಂ.ಬೆಳಗಲಿ, ಎಂ.ಕೆ.ಇಂದಿರಾ, ಕೆ.ಟಿ.ಗಟ್ಟಿ, ಟಿ.ಸುನಂದಮ್ಮ ಸೇರಿದಂತೆ ಕನ್ನಡದ ಇನ್ನೂ ಹಲವಾರು ಸಾಹಿತಿಗಳು ಜನಪ್ರಿಯ ಕಥೆ, ಕಾದಂಬರಿಗಳನ್ನು ಬರೆದಿದ್ದಾರೆ, ಬರೆಯುತ್ತಲೂ ಇದ್ದಾರೆ. ಹಾಗಾಗಿ ಇವರೆಲ್ಲ ಜನಪ್ರಿಯ ಸಾಹಿತಿಗಳೇ ಆಗಿದ್ದಾರೆ. ಇವರ ಬರಹಗಳಲ್ಲಿ ವೈಚಾರಿಕತೆ ಇದೆ, ಮಾನವೀಯತೆ ಇದೆ, ಅಂತಃಕರಣ ಇದೆ. ಇವರೆಲ್ಲ ಜನಪ್ರಿಯರಾದ ಕಾರಣಕ್ಕೆ ಹೆಚ್ಚು ಓದುಗರನ್ನು ತಲುಪಿದ್ದಾರೆ. ಓದುಗರ

ಅಭಿರುಚಿಯನ್ನು ಅವರೆಂದೂ ಕೆಡಿಸಿಲ್ಲ. ಶಿವರಾಮ ಕಾರಂತ, ಕುವೆಂಪು ಅವರ ಕಾದಂಬರಿಗಳಂತೆ ಇವರೆಲ್ಲರ ಕಥೆ, ಕಾದಂಬರಿಗಳಿಗೂ ಅವುಗಳದೇ ಆದ ವಿಶೇಷತೆ, ಮಹತ್ವ ಇದೆ. ಅವುಗಳನ್ನು ಅಕಾಡೆಮಿಗಳು, ವಿಮರ್ಶಕರು ಗುರುತಿಸುವ ಸೌಜನ್ಯ ತೋರಬೇಕಷ್ಟೇ.

ರವಿಯವರ ಬರಹಗಳನ್ನು ಸಾಹಿತ್ಯವಲ್ಲ ಎಂದು ತಿರಸ್ಕರಿಸಲು ಮತ್ತು ಸಾಹಿತ್ಯದ ಶ್ರೇಷ್ಠತೆಯನ್ನು ಅಳೆಯುವ ಮಾಪನ, ಮಾನಂದಡ ಯಾವುದು? ಅದು ಎಷ್ಟು ಜನಪ್ರಿಯವಾಗಿದೆ ಎನ್ನುವುದೇ? ಅಥವಾ ಎಷ್ಟು ಜನ ವಿದ್ವಾಂಸರು, ವಿಮರ್ಶಕರು ಮಾತ್ರ ಅದರ ರಸವನ್ನು ಆಸ್ವಾದಿಸುತ್ತಾರೆ, ಅನ್ನುವುದೇ? ಅವುಗಳನ್ನು ಓದಿ ಸುಖಿಸಲು ಬೇರೆ ಓದಿನ ವಿಸ್ತಾರವಾದ ಹಿನ್ನೆಲೆ ಇರಬೇಕು ಅನ್ನುವುದೆ? ಇಲ್ಲವೇ ಇವುಗಳನ್ನು ಅರ್ಥಮಾಡಿ ಅರಗಿಸಿಕೊಳ್ಳಲು ಸಿಗ್ಮಂಡ್ ಫ್ರಾಯ್ಡ್‌ನ ಸೈಕಾಲಜಿ ತಿಳಿದಿರಬೇಕು, ಕಾಮೂ, ಕಾಫ್ಕಾರನ್ನು ಅರೆದು ಕುಡಿದಿರಬೇಕು, ಮಾರ್ಕ್ಸ್‌ನನ್ನು ಪಳಗಿಸಿಕೊಂಡಿರಬೇಕು, ಅರ್ನಾಲ್ಡ್‌ನನ್ನು ಅರಗಿಸಿಕೊಂಡಿರಬೇಕು ಅನ್ನುವುದೇ? ಯಾವುದು ಸಾಹಿತ್ಯವನ್ನು ಅಳೆಯಲು ಅಥವಾ ಜೀರ್ಣಿಸಿಕೊಳ್ಳಲು ಬೇಕಾದ ಮಾನದಂಡ, ಸಿದ್ಧಾಂತ ಅಥವಾ ಪ್ರಬುದ್ಧತೆ? ಏನೂ ಕೆಲಸವಿಲ್ಲವೆಂದು ಜನ ಸಾಹಿತ್ಯವನ್ನು ಓದಲು ಕುಳಿತುಕೊಳ್ಳುವುದಿಲ್ಲ. ಸಾಹಿತ್ಯದತ್ತ ಬಂದ ಜನ ಅದರಿಂದ ಓದಿನ ಸುಖ, ಮನೋರಂಜನೆ, ಹೊಸ ಜೀವನದ ಅರಿವು, ಬದುಕಿಗೆ ಒಂದಷ್ಟು ಸ್ಫೂರ್ತಿ ಬಯಸುತ್ತಾರಲ್ಲದೆ, ಮಾನಸಿಕ ಹಿಂಸೆಯನ್ನು ಹಣಕೊಟ್ಟು, ಸಮಯ ಹಾಳು ಮಾಡಿಕೊಂಡು ಯಾರೂ ಸಹ ತಲೆನೋವನ್ನು ತಂದುಕೊಳ್ಳಲು ಬಯಸುವುದಿಲ್ಲ. ಹೀಗಿರುವಾಗ ಸಾಹಿತ್ಯ ಹೇಗಿರಬೇಕು. ಉದಾಹರಣೆಗೆ ಇಬ್ಬರು ಕವಿಗಳು ಪರಸ್ಪರ ಮಾತನಾಡಿಕೊಳ್ಳುತ್ತಿರುವಾಗ ತಮ್ಮ ತಮ್ಮ ಬರಹಗಳ ಬಗೆಗೆ ವಿಚಾರಿಸಿಕೊಳ್ಳುತ್ತಾರೆ. ಒಬ್ಬ ತನ್ನ ಬರಹ ವಿದ್ವಾಂಸರ, ವಿಮರ್ಶಕ, ಬುದ್ಧಿವಂತರ ಮಧ್ಯೆ ವಿಮರ್ಶೆ, ವಿಶ್ಲೇಷಣೆ, ಚರ್ಚೆಗೆ ಒಳಗಾಗಿರುವುದನ್ನು ಹೇಳುತ್ತಾರೆ. ಇನ್ನೊಬ್ಬ ತಾನು ಬರೆದ ಬರಹ ಜನಸಾಮಾನ್ಯರ ಜನಪದರ, ಮಕ್ಕಳ ಮಧ್ಯೆ ಸುಳಿದಾಡುತ್ತಿದೆ ಎಂದು ಹೇಳುತ್ತಾನೆ. ಒಟ್ಟಾರೆ ಇದರ ತಾತ್ಪರ್ಯವಿಷ್ಟೇ ಗಂಭೀರವಾದದ್ದು ವಿದ್ವಾಂಸರ, ವಿಮರ್ಶಕರ, ಬುದ್ಧಿವಂತರ ಮಧ್ಯೆ ಒಂದು ಸ್ಥಾನವನ್ನು ಗಳಿಸಿಕೊಂಡರೆ, ಸರಳವಾದದ್ದು ಜನಸಾಮಾನ್ಯರ, ಅನಕ್ಷರಸ್ಥರ, ಮಕ್ಕಳ, ಜನಪದರ ಮಧ್ಯೆ ತನ್ನದೇಯಾದ ಒಂದು ನೆಲೆಯನ್ನು ಪಡೆದುಕೊಂಡಿರುತ್ತದೆ. ಇದಕ್ಕೆ ಅತ್ಯುತ್ತಮ ಮಾದರಿಯೆಂದರೆ ಪಂಪ, ಕುಮಾರವ್ಯಾಸರ ಹೆಸರನ್ನು ಹೆಸರಿಸಬಹುದು. ಪಂಪ ಕೇವಲ ಒಂದು ವರ್ಗಕ್ಕೆ ಮಾತ್ರ ಸೀಮಿತವಾದರೆ, ಕುಮಾರವ್ಯಾಸ ಎಲ್ಲ ವರ್ಗಕ್ಕೂ ವಿಸ್ತರಿಸಿದ. ಪಂಪ ಕಲಿತವರಿಗೆ ಕಲ್ಪವೃಕ್ಷ. ಕುಮಾರವ್ಯಾಸ ಕಲಿಯದವರಿಗೂ ಕಾಮಧೇನು. ಈ ಎರಡನೆಯದನ್ನು ಇಂದು ಜನಪ್ರಿಯ ಸಾಹಿತ್ಯ ಎಂಬ ಹಣೆ ಪಟ್ಟಿಯಿಂದ ಗುರುತಿಸಲಾಗುತ್ತಿದೆ.

ಸಾಹಿತ್ಯಕ್ಕಾಗಿ ಸಾಹಿತ್ಯ ಎನ್ನುವ ಒಂದು ಕಾಲವಿತ್ತು. ಆದರೆ ಈಗ ಅದೆಲ್ಲ ಹಳತಾಗಿದೆ. ಈಗೇನಿದ್ದರೂ ಅದು ಬದುಕಿಗಾಗಿ ಕಲೆ, ಬದುಕಿಗಾಗೇ ಸಾಹಿತ್ಯ ಎನ್ನುವಂತ ದಿನಗಳು. ಮನುಷ್ಯ ಬದುಕುವುದು ಮುಖ್ಯ, ನಂತರವೇ ಉಳಿದದ್ದೆಲ್ಲ. ಜನಪ್ರಿಯ ಸಾಹಿತ್ಯ ಎಂದರೆ ಅದು ಜನಪದ, ಜೀವನಪರವಾಗಿರದೆ ಕೆಲವೇ ವಿದ್ವಾಂಸರಿಗಾಗಿ ಬರಿಯುತ್ತ ಬೆರಳೆಣಿಕೆಯ ವಿಮರ್ಶಕರ ಮುಲಾಜಿಗೆ ಒಳಪಡುತ್ತ, ಅವರು ಮೆಚ್ಚುಗೆಗಾಗಿ, ಗುರುತಿಸುವಿಕೆಗಾಗಿ ತಂತ್ರ, ಶೈಲಿ, ಕಲೆ ಇತ್ಯಾದಿ ಎಂದು ಸಾಮಾನ್ಯ ಓದುಗರಿಗೆ ತಿಳಿಯದಂತೆ ಗೊಂದಲದ ಗೂಡಾಗಿಸಿ ಬರೆಯುತ್ತ, ಕೆಡಿಸುತ್ತ ಮತ್ತೆ ತಿದ್ದಿ ತೀಡಿ ಬರೆಯುತ್ತ ಕೂಡುವುದರಲ್ಲಿ ಅರ್ಥವಿಲ್ಲ. ಸಾಮಾನ್ಯ ಜನರಿಂದ ನೂರಾರು ಮೈಲಿ ದೂರವಿರುವ

ಸಾಹಿತ್ಯ ಒಂದರ್ಥದಲ್ಲಿ ಬರಹದ ಬಹಿಷ್ಕಾರಕ್ಕೆ ಒಳಪಟ್ಟಂತಾಗುತ್ತದೆ. ಅಲ್ಲದೆ 'ಸಾಹಿತ್ಯವನ್ನು ಸಮಾಜದ ಕನ್ನಡಿ' ಎಂದು ಹೇಳಲಾಗುತ್ತದೆ. ಸಮಕಾಲೀನ ಜನರ ಸಮಸ್ಯೆಗಳ ಬಗ್ಗೆ, ಸಂಕಟಗಳ ಬಗ್ಗೆ, ಶೋಷಣೆಗಳ ಬಗ್ಗೆ ಬರೆಯುತ್ತ ಸಾಮಾನ್ಯರಲ್ಲಿ ಅರಿವು ಮೂಡಿಸಿ, ಅವರಿಗೆ ಸತ್ಯದರ್ಶನ ಮಾಡಿಸಿ ಅವುಗಳಿಗೆಲ್ಲ ಪರಿಹಾರ ಕಂಡುಕೊಳ್ಳುವಲ್ಲಿ ಚಿಂತನೆಗೆ ಹಚ್ಚುವುದು ಒಬ್ಬ ಸಾಹಿತಿಯ ಜವಾಬ್ದಾರಿಯೂ ಸಹ.

ಅಲ್ಲದೆ ಅರ್ಥವಾಗುವಂತೆ ರಂಜನೀಯವಾಗಿ ಬರೆದರೂ ಓದುವವರು ಸಿಗಂದತಹ ಸಾಹಿತ್ಯಿಕ ಬರಗಾಲದಲ್ಲಿ, ಅರ್ಥವಾಗದಂತೆ ಬರೆಯುವುದೇ ಸಾಹಿತ್ಯವೆಂದು ಪ್ರತಿಪಾದಿಸುತ್ತ ಕುಳಿತುಕೊಳ್ಳುವ ಬದಲು ಯಾವುದು ಜನಪ್ರಿಯ ಸಾಹಿತ್ಯ, ಯಾವುದು ಅಗ್ಗದ ಸಾಹಿತ್ಯವೆಂಬುದನ್ನು ಅರ್ಥಮಾಡಿಕೊಳ್ಳಬೇಕಿದೆ. ಅಂತಹ ಹಿರಿಯ ಸಾಹಿತಿ ನಿರಂಜನ ಅವರ 'ಚಿರಸ್ಮರಣೆ'ಯಂತಹ ಮೌಲಿಕ ಕಾದಂಬರಿಯನ್ನು ಉತ್ತಮವೆಂದು ಒಪ್ಪಿಕೊಳ್ಳಲು ವಿಮರ್ಶಕರಿಗೆ ಹಲವು ವರ್ಷಗಳು ಬೇಕಾಯಿತು. ಕಾದಂಬರಿ ಸಾರ್ವಭಾಮ, ಓದುಗರಲ್ಲಿ ಓದುವ ಅಭಿರುಚಿಯನ್ನು ಹತ್ತಿಸಿದ ಅ.ನ.ಕೃ. ಅಂಥವರ ಬಗ್ಗೆಯೇ ಮೂಗು ಮುರಿದವರಿದ್ದರು. ವಿಷಯದ ಬೆನ್ನತಿ, ಆಳವಾಗಿ ಅಧ್ಯಯನಮಾಡಿ ಬರೆದರೂ, ಎಸ್.ಎಲ್.ಭೈರಪ್ಪನವರನ್ನು ಇಂದಿಗೂ ದೂಷಿಸುವುದನ್ನು ಕಾಣುತ್ತಿದ್ದೇವೆ. ಆದರೆ ಕನ್ನಡದಲ್ಲಿ ಜನಪ್ರಿಯವಾಗಿ ಬರೆಯುತ್ತಲೇ ಗಂಭೀರವಾದ ಚಿಂತನೆಗಳನ್ನು ಸಮಾಜಕ್ಕೆ ನೀಡಿದ ಅನೇಕ ಸಾಹಿತಿಗಳ ಗುಂಪು ನಮ್ಮಲ್ಲಿತ್ತು ಎಂಬುದನ್ನೇ ಮರೆತಿದ್ದಾರೆ. ಅವರಲ್ಲಿ ಮ.ನ.ಮೂರ್ತಿ ನಿರಂಜನ, ಅ.ನ.ಕೃ. ಬಸವರಾಜ ಕಟ್ಟೀಮನಿ, ತರಾಸು, ಭೈರಪ್ಪ, ನಾ.ಡಿಸೋಜ, ಸತ್ಯರಾಮ, ಬೀಚಿ, ಬಿ.ಎಲ್.ವೇಣು, ಕೆ.ಟಿ.ಗಟ್ಟಿ. ತ್ರೀವೇಣಿ, ಅನುಪಮಾ ನಿರಂಜನ ಇವರ್‍ಯಾರೂ ಜನರ ಅಭಿರುಚಿಯನ್ನು ಕೆಡಿಸಲಿಲ್ಲ, ಬದಲಾಗಿ ಓದುಗ ಬಳಗವನ್ನು ಹೆಚ್ಚಿಸಿದ್ದರು. ಅಂದಿನಿಂದ ರವಿ ಬೆಳಗೆರೆಯವರನ್ನು ಒಳಗೊಂಡಂತೆ ಇಂದಿನವರೆಗೆ ಜೋಗಿ, ಭೈರಪ್ಪ, ನಾಗತೀಹಳ್ಳಿ ಚಂದ್ರಶೇಖರ, ಮಣಿಕಾಂತ್‌ರಂತಹ ಮುಂತಾದ ಜನಪ್ರಿಯ ಬರಹಗಾರವರಗೆ ನಿರ್ಲಕ್ಷ್ಯವಿನ್ನೂ ಮುಂದುವರೆದಿದೆ ಎಂಬುದು ಮಾತ್ರ ವಿಷಾದನೀಯ ಸಂಗತಿ.

ಕಣ್ಣೆದುರಿಗಿನ ವಿವರಗಳನ್ನೂ ಯಥಾವತ್ತಾಗಿ ದಾಖಲಿಸುವ, ಮನಸ್ಸಿನಾಳಕ್ಕೆ ಪಾತಾಳಗರಡಿ ಹಾಗೆ ಅಂತರಂಗದ ವ್ಯಾಪಾರಗಳನ್ನು ದಾಖಲಿಸುವ ಶಕ್ತಿ ಸಹ ಒಬ್ಬ ಲೇಖಕನಿಗಿದ್ದರೆ ಆತ ಬರೆಯುವ ಕೃತಿ ಏಕಕಾಲಕಕ್ಕೆ ಆತ್ಮ ಶೋಧಕವೂ, ಬಹಿಮುರ್ಖವೂ ಆಗುತ್ತದೆ. ರವಿ ಬೆಳಗೆರೆಯವರ ಕಾದಂಬರಿಗಳನ್ನು, ಬರಹಗಳನ್ನು ನೋಡಿದರೆ ಬಹುತೇಕ ಮನೋಲೋಕದಲ್ಲಿ ಘಟಿಸುತ್ತದೆ. ಮನಸ್ಸಿನೊಳಗಿನ ಆಗು ಹೋಗು, ಬಹಿರಂಗದ ಘಟನೆಗಳಿಗಿಂತ ಹಿರಿದು ಎಂಬ ನಂಬಿಕೆ ಅವರದು. ಮನುಷ್ಯನನ್ನು ಗಟ್ಟಿಗೊಳಿಸುವುದು, ದೃಢವಾಗಿಸುತ್ತಾ ಹೋಗುವುದು, ಎತ್ತರಕ್ಕೇರಿಸುವುದು ಅದೇ ಎಂದೂ ಅವರು ನಂಬಿದವರು. ಬಾಟಮ್ ಐಟಮ್, ಖಾಸ್‌ಬಾತ್ ಇತರ ಬರಹಗಳಾದ 'ಮನಸ್ಸಿನ್ಯಾಗಿನ ಮಾತು', ಓದುಗರ ಪ್ರಶ್ನೆಗಳಿಗೆ ಉತ್ತರಿಸುವ 'ಸಮಾಧಾನ'ಗಳಲ್ಲಿ ಈ ಮನೋಚಿಕಿತ್ಸಕ ಗುಣ ಕಾಣುವುದು ಅವರ ವಿಶಿಷ್ಟ ಶಕ್ತಿ. ತನ್ನೆದುರು ಇರುವ ಸಮಸ್ಯೆ, ಪ್ರಶ್ನೆಯ ಆಳಕ್ಕೆ ಇಳಿದು(ಅದು ದೊಡ್ಡದಿರಲಿ, ಸಣ್ಣದಿರಲಿ) ಅದರೊಳಗೊಂದಾಗಿ ಎಲ್ಲವನ್ನೂ ವಿಶ್ಲೇಷಿಸುವುದಕ್ಕೆ ಆರಂಭಿಸುತ್ತಾರೆ. ಹೀಗಾಗಿ ಅವರಿಗೆ ಆಯಾ ಸಂದರ್ಭಕ್ಕೆ, ಸನ್ನಿವೇಶಕ್ಕೆ ತಕ್ಕುದಾದ ಪರಿಹಾರ, ಉತ್ತರ ಮತ್ತು ಉಪಾಯಗಳನ್ನು ನೀಡುವುದು ಸಾಧ್ಯವಾಗಿದೆ. ಆ ಪರಿಹಾರಗಳು ಏಕಕಾಲಕ್ಕೆ ವ್ಯಕ್ತಿನಿಷ್ಠವೂ,

ಸಾರ್ವತ್ರಿಕವೂ ಆಗಿರುತ್ತದೆ. ಲೇಖಕ ಆಪ್ತನಾಗುವುದು ಇಂತಹ ಬರಹವನ್ನು ರೂಢಿಸಿಕೊಂಡು ಬರಹಗಳಲ್ಲಿ ಪಡಿಮೂಡಿದಾಗಲೇ.

ಬರೆದು ಬದುಕುತ್ತೇನೆ ಎಂದು ಹೊರಡುವವರ ಎದುರಿಗಿರುವ ಸವಾಲು ಇದು. ತನ್ನ ಓದುಗ ವರ್ಗವನ್ನು ಆ ಲೇಖಕ ಉಳಿಸಿಕೊಳ್ಳಬೇಕಾಗುತ್ತದೆ. ಬೆಳೆಸಬೇಕಾಗುತ್ತದೆ. ಲೇಖಕ ಇದ್ದಲ್ಲೇ ಇರುತ್ತಾನೆ. ಓದುಗ ನಡೆಯುತ್ತಲೇ ಇರುತ್ತಾರನೆ. ಎಷ್ಟೋ ಸಲ ಲೇಖಕನನ್ನು ಓದುಗರು ದಾಟಿಕೊಂಡು ಎಷ್ಟೋ ಮುಂದೆ ಹೋಗಿಯಾಗಿರುತ್ತೆ. ಬಹಳಷ್ಟು ಲೇಖಕರ ವಿಚಾರದಲ್ಲಿ ಆಗಿರುವುದು ಅದೇ. ಅವರು ಅಲ್ಲೇ ಇದ್ದಾರೆ, ಓದುಗರು ಮತ್ತೆಲ್ಲೋ ಇದ್ದಾರೆ. ಈ ಸೂಕ್ಷ್ಮವೂ ರವಿ ಬೆಳಗೆರೆಯವರಿಗೆ ಬಹುಶಃ ಗೊತ್ತಿದಂತೆ ಕಾಣುತ್ತದೆ. ಹೀಗಾಗಿ ಅವರು ಓದುಗರ ಜೊತೆಗೇ ಸಾಗುತ್ತಾರೆ. ಅದು ಹಿಮಾಲಯನ್ ಬ್ಲಂಡರ್ ಇರಲಿ, ಖುಷವಂತ್ ಸಿಂಗ್‌ರ ದಿ ಕಂಪೆನಿ ಆಫ್ ವಿಮೆನ್ ಇರಲಿ, ಚಲಂ ಆತ್ಮ ಚರಿತ್ರೆಯೇ ಇರಲಿ, ಕನ್ನಡ ಓದುಗರಿಗೆ ಸಂಬಂಧಿಸಿದಂತೆ ಬಹುತೇಕರಿಗೆ ಪರಿಚಯವಿರದ ಮಾರ್ಕ್ವೆಜ್ ಆಗಿರಲಿ ರವಿ ಬೆಳ ರಗೆರೆಯವರ ಅನುವಾದದಲ್ಲಿ ಕನ್ನಡದವರೇನೋ ಎಂಬಂತೆ ಕಾಣಿಸತೊಡಗುತ್ತಾರೆ. ಎ.ಎನ್.ಪ್ರಸನ್ನ ಅನುವಾದಿಸಿದ 'ಒನ್ ಹಂಡ್ರೆಡ್ ಇಯರ್ಸ್ ಆಫ್ ಸಾಲಿಟ್ಯೂಡ್' ಮತ್ತು ರವಿ ಬೆಳರಗೆರೆಯವರು ಅನುವಾದಿಸಿದ 'ಮಾಂಡೋವಿ' ನೋಡಿದರೆ ವ್ಯತ್ಯಾಸ ಸ್ಪಷ್ಟವಾಗುತ್ತದೆ. ಇದಕ್ಕೆ ಮತ್ತಷ್ಟು ಪುಷ್ಟಿಕೊಡುವಂತ್ತಿರುವ ಟೇಲರ್ ಅವರ 'ಕನ್‌ಫೆಷನ್ಸ್ ಆಫ್ ಎ ಥಗ್'ನ್ನು ಎನ್.ಪಿ. ಶಂಕರನಾರಾಯಣರಾವ್ ಮತ್ತು ರವಿ ಬೆಳಗೆರೆಯವರು ಕನ್ನಡಿಸಿದ್ದಾರೆ. ಅಲ್ಲಿಯೂ ವ್ಯತ್ಯಾಸ ಸ್ಪಷ್ಟವಿದೆ.

ಮಾಂಡೋವಿಯ ಪಾತ್ರಗಳೆಲ್ಲ ನಮ್ಮವು, ಕತೆಯೂ ನಮ್ಮದೇ. ಬಹುಶಃ ಬೇರೆ ಯಾರೇ ಅನುವಾದಿಸಿದ್ದರೂ ಅದು ಕನ್ನಡದ್ದಾಗುತ್ತಿರಲಿಲ್ಲ. ಹೀಗೆ ಕಂಡದ್ದನ್ನೆಲ್ಲ ತನ್ನದಾಗಿಸಿಕೊಳ್ಳುವ ಶಕ್ತಿ ಒಬ್ಬ ಲೇಖಕನ ಪಾಲಿಗೆ ವರ ಮತ್ತು ಶಾಪ. ಆ ಲೇಖಕನ ಶೈಲಿ, ಭಾಷೆ ಮತ್ತು ನಿರೂಪಣೆ ಸೊಗಸಾಗಿದ್ದಾಗ ಅದು ವರ. ಕೆಡುಕಾಗಿದ್ದರೆ, ಆ ಕಾಂದಬರಿಯ ಅಂತರಾತ್ಮವನ್ನು ಗ್ರಹಿಸದೇ ಹೋದರೆ ಅದು ಶಾಪ. ಆ ಮೂಲಕ ಪ್ರೀತಿ, ಆರ್ದ್ರತೆ, ಮಾರ್ದವಗಳ ಅರಿವಾಗುತ್ತದೆ. ಅನುವಾದ ಎನ್ನುವುದಕ್ಕಿಲ್ಲಿ ಯಾವ ಪುರಾವೆಯೂ ದೊರೆಯುವುದಿಲ್ಲ.

ಸೃಜನಶೀಲ ಬರವಣಿಗೆಗಿಂತ ಕಷ್ಟದ ಕೆಲಸವಿದು. ಇಂತಹ ಕಷ್ಟವನ್ನು ಅವರು ಅನೇಕ ಸಲ ಕೈಗೆತ್ತಿಕೊಂಡಿದ್ದಾರೆ. ಪ್ರೊತಿಮಾ ಬೇಡಿಯಿಂದ ಖುಷವಂತ್ ಸಿಂಗ್‌ರವರೆಗೆ, ಎಲ್ಲರೂ ಅನೇಕ ಓದುಗರಿಗೆ ಅಪರಿಚರಾಗಿದ್ದವರೇ ಅಂತವರನ್ನೆಲ್ಲ ಕನ್ನಡಕ್ಕೆ ಕರೆತಂದು ಪರಿಚಯಿಸಿದ್ದಾರೆ. ಆ ಮೂಲಕ ಓದುಗರ ಪ್ರಜ್ಞಾವಲಯವನ್ನು ವಿಸ್ತರಿಸಿದ್ದಾರೆ ಎಂದು ಹೇಳಬಹುದು.

ಕನ್ನಡ ಕಥಾ ಜಗತ್ತು ಮುಟ್ಟಿ ನೋಡದ, ಇಣುಕಿ ಹಾಕದ ಜಗತ್ತೊಂದರಿಂದ ಕತೆಗಳನ್ನು ತಂದುಕೊಟ್ಟವರು ರವಿ ಬೆಳಗರೆಯವರು. ಅವರ ಪಾ.ವೆಂ.ಹೇಳಿದ ಕತೆ ಮತ್ತು ದಾರಿ ಸಂಕಲನದ ಒಂದೊಂದು ಕತೆಯೂ ಆ ಅರ್ಥದಲ್ಲಿ ಒಂದೊಂದು ಹೊಸ ವಸ್ತು-ವಿಷಯದೊಂದಿಗೆ ಹಾಜರಾಗುತ್ತವೆ. ಆ ಮಟ್ಟಿಗೆ ಅವರ ನಿಲುವೇ ಬೇರೆ. ಒಂದು ಬರಹ ಒಬ್ಬ ಓದುಗನನ್ನು ಬದುಕುವಂತೆ ಪ್ರೇರೇಪಿಸಬೇಕು ಎನ್ನುವ ನಿಲುವಿನಿಂದ ಬರೆದವರು ರವಿಯವರು. ಅದು ಖಾಸ್‌ಬಾತ್ ಆಗಿರಲಿ, ಬಾಟಮ್ ಐಟಮ್ ಆಗಿರಲಿ ಎಲ್ಲದರ ಹಿಂದಿನ ತತ್ವವು ಒಂದೇ. ಹಿಡಿ ಆತ್ಮವಿಶ್ವಾಸ, ಮೊಗೆದಷ್ಟು ಜೀವನ ಪ್ರೀತಿ ಹುಟ್ಟಿಸುವುದೇ ಲೇಖಕನ ಕರ್ತವ್ಯ ಎಂದು ನಂಬಿ ಬರೆದವರು. ಸುಮ್ಮನೆ ರವಿ ಬೆಳಗೆರೆಯವರು ಬರೆದ ಅಷ್ಟೂ ಕೃತಿಗಳನ್ನೂ ತಿರುವಿ ಹಾಕಿ ನೋಡಿದರೆ, ಅವುಗಳಲ್ಲಿ ಅನೇಕ

ಹೊಸ ವಿಚಾರಗಳು, ಪ್ರಕಾರಗಳು ಇವೆ ಎಂಬುದು ತಿಳಿಯುತ್ತದೆ. ಖಾಸ್‌ಬಾತ್ ಒಳ್ಳೆಯ ಪ್ರಬಂಧವೂ ಆಗುತ್ತದೆ. ರವಿ ಬೆಳಗೆರೆ ಎಂಬ ಬರಹಗಾರನ ಕುರಿತು ಏನೇನೂ ತಿಳಿಯದವರ ದೃಷ್ಟಿಗೆ ಅದೊಂದು ಸಣ್ಣಕತೆ. ಇಷ್ಟಕ್ಕೂ ಕತೆಯೆಂದರೆ ಮತ್ತೊಬ್ಬರ ಆತ್ಮಕತೆಯೇ ತಾನೇ. ಗಾಡ್ ಫಾದರ್ ಕೃತಿಯನ್ನೇ ತೆಗೆದುಕೊಂಡರೂ ಅಷ್ಟೇ. ಅದು ಕನ್ನಡಕ್ಕೆ ಬರಲು ಅಷ್ಟೊಂದು ವರ್ಷ ಕಾಯಬೇಕಾಗಿರಲಿಲ್ಲ. ಆದರೆ ಅದನ್ನು ಅನುವಾದಿಸುವುದಕ್ಕೆ ಬೇಕಾದ ಮನಸ್ಥಿತಿ ಮತ್ತು ಕೌಶಲ್ಯ ಕನ್ನಡದ ಬಹುತೇಕ ಲೇಖಕರಲ್ಲಿ ಇರಲಿಲ್ಲ.

ವಾಮಾಚಾರ, ತಾಂತ್ರಿಕ ಜಗತ್ತು, ಅಘೋರಿಗಳ ವಿಚಿತ್ರ ವಿಕ್ಷಿಪ್ತ ಆಚರಣೆಗಳು, ಸಾಮಾಜಿಕ ಕಾದಂಬರಿಯ ರೂಪದಲ್ಲಿ ಓದಗರಿಗೆ ಲಭ್ಯವಾದದ್ದು ರವಿ ಬೆಳಗೆರೆಯವರ ಕಾದಂಬರಿಯ ಮೂಲಕ. ಮಾಟಗಾತಿ ಕಾಂದಬರಿಯಲ್ಲಿ ಬರುವ ವಿವರಗಳನ್ನೇ ನೋಡಿ. ವಾಮಾಚಾರ ಜಗತ್ತಿನ ಸಕಲ ವಿವರಗಳೊಂದಿಗೆ ಆ ಕಾದಂಬರಿ ಮತ್ತೊಂದು ಜಗತ್ತನ್ನು ಕಣ್ಮುಂದೆ ಅನಾವರಣಗೊಳಿಸುತ್ತ ಸಾಗುತ್ತದೆ. ತಾಂತ್ರಿಕ ಶ್ರದ್ಧೆ, ಆಚಾರ, ಅರ್ಚನೆ, ವಿಧಿ ವಿಧಾನಗಳನ್ನೆಲ್ಲ ಕಣ್ಣಾರೆ ಕಂಡವನ ನಿಖರತೆಯನ್ನು ಆ ಕಾದಂಬರಿಯಲ್ಲಿ ಕಾಣಬಹುದು. ಹಾಗೆ ಬರೆಯುವ ಹೊತ್ತಿಗೆ, ಆ ಪಾತ್ರಗಳ ಸಂವೇದನೆಗಳು ಮಾನವ ಸಹಜ ನೆಲೆಯಿಂದ ದೂರಾಗದಂತೆಯೂ ರವಿಯವರು ಎಚ್ಚರ ವಹಿಸುತ್ತಾರೆ. ಹೀಗಾಗಿ ಅವು ಈ ನೆಲದ, ಒಂದು ಕಾಲಕ್ಕೆ, ಒಂದು ಪ್ರದೇಶಕ್ಕೆ ಸೀಮಿತವಾದ ನಡಾವಳಿಗಳು ಎನ್ನುವುದನ್ನು ಅವರು ಸೂಚಿಸುತ್ತಾ ಹೋಗುತ್ತಾರೆ. ಮಾಟಗಾತಿ ಮತ್ತು ಸರ್ಪ ಸಂಬಂಧದಲ್ಲಿ ಹೀಗೆ ಅನಾವರಣಗೊಳ್ಳುವ ಜಗತ್ತು ಕನ್ನಡಕ್ಕೆ ಅಷ್ಟೊಂದು ವಿಫುಲವಾಗಿ ಒದಗಿ ಬಂದದ್ದು ರವಿ ಬೆಳಗೆರಯವರ ಬರಹಗಳಿಂದಲೇ. ಇವುಗಳ ನಂತರ ಬಂದ 'ಹೇಳಿ ಹೋಗು ಕಾರಣ'ದ ಕೊನೆ ಕೊನೆಗೆ, ಇವೆಲ್ಲಕ್ಕೂ ಮೊದಲು ಬಂದ 'ಅರ್ತಿ'ಯ ಕೆಲವು ಪುಟಗಳಲ್ಲಿ ದಾಖಲಾಗಿರುವ ವಿವರಗಳನ್ನು ಅರಗಿಸಿಕೊಂಡು ಕನ್ನಡ ಕಾದಂಬರಿ ಲೋಕ ಸಮೃದ್ಧಗೊಂಡಿದೆ.

ಕಾದಂಬರಿಗಳಲ್ಲಷ್ಟೇ ಅಲ್ಲ, ಲೇಖನಗಳಲ್ಲೂ ರವಿಯವರು ಈ ವಾಮಾಚಾರ ಜಗತ್ತಿನ ವಿವರಗಳನ್ನು ನೀಡಿದ್ದಾರೆ. ಕೊಳ್ಳೇಗಾಲದ ಮಾಂತ್ರಿಕರ ಕುರಿತು ಲೇಖನಮಾಲೆ, ಅಘೋರಿಗಳ ಕುರಿತ ಬರಹಗಳಲ್ಲೂ ಈ ವಿಕ್ಷಿಪ್ತ ಜಗತ್ತು ತೆರೆದುಕೊಂಡಿದೆ. 'ಒಬ್ಬ ಲೇಖಕ ತನ್ನ ನಂಬಿಕೆಯನ್ನು ಬರಹದಲ್ಲಿ ಮೀರುತ್ತಾನೆ' ಎನ್ನುವ ಮಾತಿದೆ. ರವಿಯವರ ಬರಹಗಳನ್ನು ನೋಡಿದಾಗ ಹಾಗನ್ನಿಸುವುದು ಸಹಜ. ಅವರ ನಾಸ್ತಿಕತೆ, ಅತಿಮಾನುಷತೆಯ ಬಗ್ಗೆ ಇರುವ ಅಪನಂಬಿಕೆ ವಿಜ್ಞಾನದ ತಾರ್ಕಿಕತೆಯ ಕುರಿತು ಅವರಿಗಿರುವ ನಿಷ್ಠೆ ಇವೆಲ್ಲವನ್ನು ಅವರು ತಮ್ಮ ಕೃತಿಗಳಲ್ಲಿ ಮೀರುತ್ತಾರೆ. ಕೃತಿ ಬರಹಗಾರನಿಗಿಂತ ದೊಡ್ಡದಾಗುವುದೇ ಹೀಗೆ.

'ಮನುಷ್ಯ ಬೆತ್ತಲೆಯಾದಷ್ಟು ಮಾನವಂತನಾಗುತ್ತಾನೆ!' ಎಂಬುದು ರವಿಯವರ ಬದುಕಿನ ನಿಲುವೂ ಹೌದು, ಸಾಹಿತಿಕ ನಿಲುವೂ ಹೌದು. ಹೀಗಾಗಿ ಅವರ ಸಾಹಿತ್ಯ ಮತ್ತು ಬದುಕನ್ನು ತೀರ ದೂರ ದೂರವಿಟ್ಟು ನೋಡುವುದು ಕಷ್ಟದ ಕೆಲಸ, ಹಾಗೆ ನೋಡಲೂಬಾರದು ಸಹ. ಲಂಕೇಶ್‌ರು ಪತ್ರಿಕೆ ಆರಂಭಿಸಿದ ನಂತರದ ದಿನಗಳಲ್ಲಿ ಅವರನ್ನೂ ಹಾಗೆ ಪ್ರತ್ಯೇಕವಾಗಿ ನೋಡುವುದು ಸಾಧ್ಯವಾಗುತ್ತಿರಲಿಲ್ಲ. ಖುಷ್‌ವಂತ್ ಸಿಂಗ್ ವಿಚಾರದಲ್ಲೂ ಅಷ್ಟೇ. ಅದಕ್ಕೆ ಕಾರಣ ಇವರೆಲ್ಲರ ವೃತ್ತಿ. ಪತ್ರಕರ್ತನ ಬದುಕು ಸಾಹಿತಿಯ ಬದುಕಿನಷ್ಟು ಖಾಸಗಿಯಲ್ಲ. ಸಾಹಿತಿ ಎಲ್ಲವನ್ನೂ ದೂರ ಕೂಳಿತೇ ನೋಡುತ್ತಾನೆ. ಆತ ನಿಲುವುಗಳನ್ನು ತಾಳಬೇಕಾಗಿಲ್ಲ, ತಕ್ಷಣ ಪ್ರತಿಕ್ರಿಯಿಸಬೇಕಿಲ್ಲ, ಅನ್ನಿಸಿದ್ದನ್ನು ಕಂಡದ್ದನ್ನು,

ಅನುಭವಿಸಿದ್ದನ್ನು ಹೆಪ್ಪುಗಟ್ಟುವವರೆಗೆ ಕಾಯುವ ಸಂಯಮ, ಸಮಯ ಮತ್ತು ಅನುಕೂಲ ಸಾಹಿತಿಗಳಿಗೆ ಇರುತ್ತದೆ. ಆದರೆ ಪತ್ರಕರ್ತನಿಗೆ ಇರುವುದಿಲ್ಲ.

ಆ ಕಾರಣಕ್ಕಾಗಿಯೇ ಪತ್ರಕರ್ತನೊಬ್ಬ ಬರೆದ ಸಾಹಿತ್ಯವನ್ನು ಇತರೇ ಸಾಹಿತಿಗಳ ಬರಹಗಳಿಂದ ದೂರವಿಟ್ಟು ನೋಡಬೇಕಾ? ರವಿಯವರ ವಿಷಯದಲ್ಲಿ ಬಹುಶಃ ಈಗಾಗಿರುವುದು ಅದೇ. ಯಾವುದೋ ಬರಹಗಾರನಿಗಿಂತ ಓತಪ್ರೋತವಾಗಿ, ಓದುಗರನ್ನು ತಲುಪುವಂತೆ ಬರೆಯಬಲ್ಲ ಪರ್ತಕರ್ತ ತನ್ನನ್ನು ಸಾಹಿತ್ಯಲೋಕದ ಜನ ಸಂದಣಿಯಲ್ಲಿ ಗುರುತಿಸಿಕೊಳ್ಳಲು ಪ್ರಯತ್ನಿಸಿದಾಗ ಮತ್ತೊಂದಷ್ಟು ತೊಡಕುಗಳು ಎದುರಾಗುತ್ತವೆ. ರವಿಯವರ ಬರಹಗಳನ್ನೇ ಗಮನಿಸಿದಾಗ ಅವರ ಬರಹಕ್ಕೊಂದು ಸೊಗಸಾದ ಶೈಲಿಯಿದೆ. ಅದು ಅವರೇ ರೂಢಿಸಿಕೊಂಡ ನಿರೂಪಣಾ ಶೈಲಿ. ಬರೆದ ಒಂದು ಸಾಲು ಸಹ ವ್ಯರ್ಥವಾಗಬಾರದು. ಓದುಗರನ್ನು ತಲುಪದೇ ಉಳಿಯಬಾರದು. ಆತ ಅದರ ಅರ್ಥಕ್ಕಾಗಿ ಅಲೆಯುವಂತಾಗಬಾರದು ಎಂಬ ಎಚ್ಚರ ಪರ್ತಕರ್ತರಲ್ಲಷ್ಟೇ ಕಾಣುವುದಕ್ಕೆ ಸಾಧ್ಯವೇನೋ? ಹೀಗಾಗಿ ಪತ್ರಕರ್ತನ ಸರಳವಾದ ಮಾತುಗಳಲ್ಲಿ, ತನ್ನ ಕಣ್ಮುಂದೆ ಇರುವ ಎಲ್ಲರಿಗೂ ತಿಳಿದಿರುವ ರೂಪಕಗಳನ್ನು ಬಳಸುತ್ತಾ, ಬರಹವನ್ನು ಸಮೃದ್ಧಗೊಳಿಸುತ್ತಾ ಸಾಗುತ್ತಾನೆ. ಅಂಥದ್ದರ ಮಧ್ಯೆಯೂ ಒಬ್ಬ ಪತ್ರಕರ್ತನಿಗೆ ತನ್ನದೇ ಆದ ಭಾಷೆಯೊಂದನ್ನು ಹುಡುಕಿಕೊಳ್ಳುವುದಕ್ಕೆ ಸಾಧ್ಯವಾದರೆ ಆತ ಗೆದ್ದಂತೆಯೇ.

ರವಿಯವರಿಗೆ ಮುಚ್ಚಿಡುವುದರಲ್ಲಿ ನಂಬಿಕೆಯಿಲ್ಲ. ಅದು ಖಾಸ್‌ಬಾತ್ ಆಗಲಿ, ಇನ್ನೊಂದು ಪಾತ್ರದ ಒಳಹೊಕ್ಕು ನೋಡುವ ಶೋಧಕ ದೃಷ್ಟಿಯೇ ಆಗಲಿ, ಜೀವನ ಚರಿತ್ರೆ, ಮತ್ಯಾವುದೋ ನಿಗೂಢ ಲೋಕದ ಅನಾವರಣ ಇತ್ಯಾದಿ ಅದು ಅವರ ಬರಹ ಶಕ್ತಿಯೂ ಆಗಿ ಪರಿಣಮಿಸಿದೆ. ನಿರೂಪಣಾ ಶೈಲಿಯಲ್ಲಾಗಲೀ, ಅಭಿವ್ಯಕ್ತಿಯ ಸ್ವರೂಪದಲ್ಲಾಗಲೀ, ಅನುಸಂಧಾನದಲ್ಲಾಗಲೀ ಅವರು ಯಾವುದನ್ನೂ ಸೂಚ್ಯವಾಗಿ ಹೇಳಲು ಹೋಗುವುದಿಲ್ಲ. ಅವರ ಬರಹಗಳಲ್ಲಿ ಕಾಣುವ ಕಾವ್ಯದಂಥ ಸಾಲುಗಳು ಸಹ ನಿಚ್ಚಳವಾಗಿಯೇ ಎಲ್ಲವನ್ನೂ ಹೇಳುತ್ತವೆ. ಹಾಗೆ ನೋಡಿದರೆ ಸಾಹಿತ್ಯವನ್ನು ಸಂಕೇತಗಳ ಬಂಧನದಿಂದ ಬಿಡಿಸಿರುವವರೂ ಅವರೇ. ಅವರ ಬರಹಗಳಲ್ಲಿ ಅಪರೂಪದ ಎಲ್ಲೂ ಕೇಳದ ರೂಪಕಗಳು ಕಂಡುಬರುತ್ತವೆ. ಆ ರೂಪಕಗಳ ಮೂಲಕ ರವಿಯವರು ಹೇಳಬೇಕು ಎಂದು ಕೊಂಡಿರುವುದನ್ನು ಸ್ಪಷ್ಟವಾಗಿ ಎತ್ತರದ ಧ್ವನಿಯಲ್ಲಿ ಹೇಳುತ್ತಾರೆ. ಈ ಎತ್ತರದ ಧ್ವನಿಯನ್ನು ಸಾಹಿತ್ಯಲೋಕ ಅನುಮಾನದಿಂದ ನೋಡುತ್ತದೆ. ಪಿಸುಮಾತಾಡುವವರ ಬಗ್ಗೆಯೇ ಅದಕ್ಕೆ ಅನುಪಮ ಪ್ರೀತಿ.

ಮತ್ತೊಂದು ರೀತಿಯ ಬರಹವೆಂದರೆ ಅಪರಾಧಿ(ಕ್ರೈಮ್) ಸಂಬಂಧಿತ ಬರಹಗಳು. ರವಿಯವರು ಕ್ರೈಮ್ ರೀಪೊರ್ಟ್‌ರ್ ಆಗಿ ಕಾರ್ಯನಿರ್ವಹಿಸಿದವರು. ಆ ಕಾರಣದಿಂದಲೇ ಅನೇಕ ಅಪರಾಧಿ ಸಂಬಂಧಿತ ಕೃತಿಗಳನ್ನು ಬರೆದಿದ್ದಾರೆ. ಅವುಗಳು ಕ್ರೈಮ್ ಪತ್ತೇದಾರಿ ಕಾದಂಬರಿಯ ಮಾದರಿಗಳಂತಹವೂ. ಕನ್ನಡದಲ್ಲಿ ಪತ್ತೇದಾರಿ ಕಾದಂಬರಿಗಳನ್ನು ಓದಿ ನೋಡಿದರೆ ಅವುಗಳಲ್ಲಿ ಬಹುತೇಕ ಕೃತಿಗಳು ಕೊಲೆಗಾರ ಯಾರು? ಎಂಬ ವರ್ಗಕ್ಕೆ ಸೇರಿದವುಗಳು ಉದಾಹರಣೆಗಾಗಿ ಆರಂಭದಲ್ಲೊಂದು ಕೊಲೆಯಾಗುತ್ತದೆ. ಮತ್ತು ಪುಸ್ತಕವಿಡಿ ಕೊಲೆಗಾರ ಯಾರು ಎಂಬುದರ ಬಗ್ಗೆ ಶೋಧವಿರುತ್ತದೆ. ಇದು ಕುತೂಹಲವನ್ನು ಕಾಯ್ದುಕೊಂಡು ಓದಿಸಿಕೊಂಡು ಹೋಗಲು ಒಂದು ಸಹಕಾರಿ ತಂತ್ರವಾದರೂ ಕೊನೆಗೊಮ್ಮೆ ಲೇಖಕ ಕೊಲೆಗಾರನನ್ನು ತೋರಿಸಿದಾಗ ತುಂಬ ಸಲ ಓದುಗರಿಗೆ ಓದುವ ಸಂದರ್ಭದಲ್ಲಿ ಮೋಸಹೋದ ಅನುಭವವಾಗುತ್ತದೆ. ಯಾಕೆಂದರೆ ಇಂಥವರೇ

ಕೊಲೆಗಾರರು ಎಂದು ಹೇಳಲು ಬಳಸಿದ ತಾರ್ಕಿಕ ನೆಲೆಗಟ್ಟು ಗಟ್ಟಿಯಾಗಿರುವುದಿಲ್ಲ. ಇದಕ್ಕೆ ರವಿಯವರ 'ಹಂತಕೀ ಐ ಲವ್ ಯೂ' ಕೃತಿಯನ್ನು ಹೆಸರಿಸಬಹುದು.

ಒಂದು ಪುಸ್ತಕ ಸಾಹಿತ್ಯವಾಗಬೇಕಾದರೆ ಯಾವುದೇ ಪ್ರಕಾರದ್ದಾಗಲಿ ಅದು ಮನ ಮುಟ್ಟುವಂತಿರಬೇಕು. ಮನಸ್ಸನ್ನು ಸ್ಪರ್ಶಿಸಲಾರದ ಸಾಹಿತ್ಯ ಬರೀ ಕೇವಲ ಒಂದು ಸುಳ್ಳು ವರದಿಯಂತೆ ಓದಿಸಿಕೊಂಡು ಹೋಗಿ ಕೊನೆಗೆ ಮರೆಸುತ್ತದೆ. ಸತ್ತು ಹೋಗುತ್ತದೆ. ಅದಕ್ಕೆ ಪ್ರಮುಖ ಕಾರಣ ಲೇಖಕನ ಅನುಭವದ ಕೊರತೆ. ಕೇವಲ ಕಲ್ಪನೆಯಿಂದಲೇ ಒಂದು ಉತ್ತಮ ಕೃತಿ ಸೃಷ್ಟಿಯಾಗಲಾರದು. ಪತ್ತೇದಾರಿಯಂತಹ ಕ್ಷೇತ್ರದಲ್ಲಿ ಇಂದು ಲೇಖಕನಿಗೆ ಸಾಕಷ್ಟು ಅನುಭವ ಮತ್ತು ಕ್ರೈಮ್‌ಗೆ ಸಂಬಂಧಿಸಿದ ಮಾಹಿತಿಯ ಅಗತ್ಯ ಇದೆ. ಇಂತಹ ಅನುಭವವನ್ನು ಅರಗಿಸಿಕೊಳ್ಳದೇ ದಿಢೀರ್ ಆಗಿ ಪತ್ತೇದಾರಿ ಲೇಖಕನಾಗುವ ಆತುರ ತೋರಿದರೆ ಕಳಪೆ ಸಾಹಿತ್ಯವನ್ನು ಸೃಷ್ಟಿಮಾಡಲು ಅವಕಾಶ ಮಾಡಿದಂತಾಗುತ್ತದೆ.

ಲೇಖಕರಲ್ಲಿ ಇವೆರಡು ವಿಷಯಗಳು ಒಳಗೊಂಡಿದ್ದರೆ ಕನ್ನಡ ಸಾಹಿತ್ಯದಲ್ಲಿ ಪತ್ತೇದಾರಿ ಒಂದೊಳ್ಳೆಯ ಪ್ರಕಾರವಾಗಿ ಸ್ಥಾನವನ್ನು ಪಡೆಯುತ್ತದೆ. ಅಂತಹ ಎಷ್ಟೋ ಕೃತಿಗಳು, ಲೇಖಕರು ಇದ್ದಾರೆ ಓದುಗರು ಅವರನ್ನು ಒಪ್ಪಿ ಸ್ವೀಕರಿಸಿದ್ದಾರೆ. ಆದರೆ ಸಾಹಿತ್ಯ ಲೋಕವೇ ಆ ಕಡೆ ತಿರುಗಿ ನೋಡುವ ಪ್ರಯತ್ನವನ್ನೇ ಮರೆತಂತಿದೆ. ರವಿಯವರ ಬರಹಗಳ ವಿಷಯದಲ್ಲೂ ಆಗಿರುವುದು ಇದೆ. ಯಾವುದೇ ಪ್ರಕಾರಕ್ಕೆ ಸಂಬಂಧಿಸಿದ ವಿಮರ್ಶೆಯಿರಲಿ ಅದು ಕೃತಿಯ ಒಳಗಿನಿಂದ ಹುಟ್ಟಬೇಕು. ಅಲ್ಲದೇ ಈಗಾಗಲೇ ರೂಪಿಸಿಕೊಂಡ ಸಿದ್ಧ ಮಾನದಂಡಗಳ ಸಿದ್ಧಾಂತಗಳ ಸೂತ್ರದಡಿಯಲ್ಲಿ ಕೃತಿಯನ್ನು ತಂದು ನೋಡಿದರೆ ಅದು ಎಷ್ಟು ಸೂಕ್ತ? ಕೃತಿ ರಚನೆಯಾದ ನಂತರ ಅದರಲ್ಲಿನ ವ್ಯಾಕರಣ ದೋಷಗಳನ್ನೂ, ನಿಯಮಗಳನ್ನೂ ಗುರುತಿಸಬೇಕಲ್ಲದೇ ವ್ಯಾಕರಣ ಕೃತಿಯ ನಿಯಮಗಳನ್ನು ಮುಂದಿಟ್ಟುಕೊಂಡು ಕೃತಿ ರಚನೆಗೆ ಕುಳಿತರೆ ಕೃತಿಯೇ ಹುಟ್ಟುವುದಿಲ್ಲ.

ಯಾವ ಮನುಷ್ಯನು ಪರಿಪೂರ್ಣನಲ್ಲವಂತೆ. ಹಾಗಿದ್ದ ಮೇಲೆ ಮನುಷ್ಯ ಸೃಷ್ಟಿಯೂ ಪರಿಪೂರ್ಣವಾಗಿರಲು ಸಾಧ್ಯವೇ? ಅದು ಪರಿಪೂರ್ಣವಾಗಿರಬೇಕು ಅನ್ನುವುದು ಎಷ್ಟು ಸಮಂಜಸ? ಅಲ್ಪ ಸ್ವಲ್ಪ ತಿದ್ದುಪಡಿಗಳ ಎರಡರಲ್ಲೂ ಇರಬಹುದು. ಅವುಗಳನ್ನು ತೀಡಬೇಕು, ಸರಿಪಡಿಸಬೇಕಲ್ಲದೇ, ದೂರವಿಟ್ಟರೆ ಅದು ಹೇಗೆ ತಾನೇ ಬದಲಾಗಲು ಸಾಧ್ಯ. ಮನುಷ್ಯ ಅಪರಿಪೂರ್ಣವೆಂದು ಒಪ್ಪುವುದಾದರೆ, ಆತನ ಸೃಷ್ಟಿ ಪರಿಪೂರ್ಣವಾಗಿರಬೇಕು ಎನ್ನುವುದು ತಪ್ಪು. ಹಾಗೆಯೇ ರವಿಯವರ ವಿಷಯದಲ್ಲಿಯೂ ಸಹ ಅವರೊಬ್ಬ ಪತ್ರಕರ್ತರು, ಪತ್ರಿಕೋದ್ಯಮದ ಒತ್ತಡದ ನಡುವೆ ಅವರದು ಅವಸರದ ಸಾಹಿತ್ಯವೆನಿಸಿದರೂ, ಅದರಲ್ಲಿಯೂ ಪರಿಗಣಿಸಬೇಕಾದ, ಅವಶ್ಯಕವಾದ ಬದುಕಿನ ಮೌಲ್ಯಗಳು, ಮಹತ್ವದ ಅಂಶಗಳು ಅವರ ಬರಹಗಳಲ್ಲಿವೆ. ಅಂತವುಗಳೆಡೆಗೆ ಕಣ್ಣಾಯಿಸುವ ಒಂದು ಸಣ್ಣ ಪ್ರಯತ್ನವಾದರೂ ಮಾಡಬೇಡವೇ?

ಒಟ್ಟಾರೆಯಾಗಿ ರವಿ ಬೆಳಗೆರೆಯವರನ್ನು ಕುರಿತು ಇದುವರೆಗೂ ಬರೆದಿರುವ ಮಾತುಗಳು ಅವರ ಎಲ್ಲ ಬರವಣಿಗೆಯನ್ನು ಒಂದೇ ಎಂದು ತಿಳಿದು ಓದುತ್ತಾ ಹೋದಾಗ ಮನಸ್ಸಿನಲ್ಲಿ ಮೂಡಿದ ಅನಿಸಿಕೆಗಳ, ಪ್ರಶ್ನೆಗಳ ಒಂದು ದಾಖಲೆ ಅಷ್ಟೇ. ಅವರೊಬ್ಬ ಜನಪ್ರಿಯ ಬರಹಗಾರರು. ಜನಪ್ರಿಯ ಬರಹಗಳ ಬಗ್ಗೆ, ಬರಹಗಾರರ ಬಗ್ಗೆ ಕನ್ನಡ ಸಾಹಿತ್ಯ ಲೋಕದಲ್ಲಿ ಲಕ್ಷ್ಯಕ್ಕಿಂತ ನಿರ್ಲಕ್ಷ್ಯವೇ ಎದ್ದು ಕಾಣುತ್ತಿದೆ. ಎಲ್ಲವನ್ನೂ ಪಾಶ್ಚಾತ್ಯದಿಂದಲೇ ಎರವಲು ಪಡೆಯುವ ಕನ್ನಡ ಸಾಹಿತ್ಯ, ಅಲ್ಲಿ ಒಳ್ಳೆಯ

ಸ್ಥಾನ ಪಡೆದ ಜನಪ್ರಿಯ ಸಾಹಿತ್ಯಕ್ಕೆ ಕನ್ನಡದಲ್ಲಿ ಉತ್ತಮ ಸ್ಥಾನವನ್ನು ಕಲ್ಪಿಸಿಕೊಡಲು ಹಿಂದೇಟು ಹಾಕುತ್ತಿದೆ. ಜನಪ್ರಿಯ ಸಾಹಿತ್ಯದ ಅಧ್ಯಯನ ಕನ್ನಡದಲ್ಲಿ ಇಲ್ಲವೆಂಬಷ್ಟು ವಿರಳವಾಗಿ ನಡೆದಿದೆ. ಜನಪ್ರಿಯ ಸಾಹಿತ್ಯದಲ್ಲೂ ಒಳ್ಳೆಯ ಅಂಶಗಳಿವೆ. ಅದಕ್ಕೆ ಆ ಸಾಹಿತ್ಯ ಪ್ರಕಾರಕ್ಕೂ ಮತ್ತು ಅದನ್ನು ಸೃಷ್ಟಿಸಿದ ಲೇಖಕರಿಗೂ ಕನ್ನಡ ಸಾಹಿತ್ಯ ಲೋಕ ಒಂದು ಸ್ಥಾನವನ್ನು ನೀಡಬೇಕಾಗುತ್ತದೆ ಎಂಬುದಷ್ಟೇ ಇಲ್ಲಿಯ, ಈ ಅಧ್ಯಯನದ ಅಭಿಪ್ರಾಯ.

**ಅಡಿ ಟಿಪ್ಪಣಿ**

೧. ಫಸ್ಟ್ ಹಾಫ್, (ಸಂ) ಶರತ್ ಕಲ್ಕೋಡ್, ಪು. ೨೨೭
೨. ಪಾ.ವೆಂ. ಹೇಳಿದ ಕಥೆ, ರವಿ ಬೆಳಗೆರೆ ಪು. ೪
೩. ಫಸ್ಟ್ ಹಾಫ್, (ಸಂ) ಶರತ್ ಕಲ್ಕೋಡ್, ಪು. ೨೨೫
೪. ಓದಿನ ಖುಷಿ ಕೊಡುವ ಕಥೆಗಳು, ಉಲಿಯ ಉಯ್ಯಲೆ, ಜಯಪ್ರಕಾಶ ಬಂಜಗೆರೆ, ಪು. ೧೫೦
೫. ಹೇಳಿಹೋಗು ಕಾರಣ, ರವಿ ಬೆಳಗೆರೆ, ಪು. ೫
೬. ಅದೇ ಪುಸ್ತಕ, ಪು. ೪೪
೭. ಅದೇ ಪುಸ್ತಕ, ಪು. ೫೦
೮. ಅದೇ ಪುಸ್ತಕ, ಪು. ೬೦
೯. ಮಾಂಡೋವಿ, ರವಿ ಬೆಳಗೆರೆ, ಪು. ೧೦೧
೧೦. ಮಾಟಗಾತಿ, ರವಿ ಬೆಳಗೆರೆ, ಪು. ೧೯೯
೧೧. ಅದೇ ಪುಸ್ತಕ, ಪು. ೩೩೨
೧೨. ಸರ್ಪ ಸಂಬಂಧ, ರವಿ ಬೆಳಗೆರೆ, ಪು. ೦೫
೧೩. ಅದೇ ಪುಸ್ತಕ, ಪು. ೩೯೧
೧೪. ಅದೇ ಪುಸ್ತಕ, ಪು. ೩೯೫
೧೫. ಮುನ್ನುಡಿ, ಒಮರ್ಟಾ, ರವಿ ಬೆಳಗೆರೆ, ಪು. iv
೧೬. ಪಾಪಿಗಳ ಲೋಕದಲ್ಲಿ, ರವಿ ಬೆಳಗೆರೆ, ಪು. vi
೧೭. ಮೈಸೂರಿನ ಸೀರಿಯಲ್ ಕಿಲ್ಲರ್ ರವೀಂದ್ರ ಪ್ರಸಾದ್, ರವಿ ಬೆಳಗೆರೆ, ಪು. ೧೮೯
೧೮. ಪ್ರಮೋದ್ ಮಹಾಜನ್ ಹತ್ಯೆ, ರವಿ ಬೆಳಗೆರೆ, ಪು. ೦೧
೧೯. ಕವಿರಾಜಮಾರ್ಗವಲ್ಲ ಇದು ಕಾಮರಾಜಮಾರ್ಗ, ರವಿ ಬೆಳಗೆರೆ, ಪು. viii
೨೦. ಅಮ್ಮ ಸಿಕ್ಕಿದ್ಲು, ರವಿ ಬೆಳಗೆರೆ, ಪು. ೮೯
೨೧. ದಶಕದ ಕನ್ನಡ ಸಾಹಿತ್ಯ, ಸಂ. ಹಳ್ಳಿಕೇರಿ.ಎಫ್.ಟಿ, ರವೀಂದ್ರನಾಥ.ಕೆ, ಪು. ೪೦

೨೨. ಪ್ಯಾಸಾ, ರವಿ ಬೆಳಗೆರೆ, ಪು. ೦೪

೨೩. ಸಂಜಯ, ರವಿ ಬೆಳಗೆರೆ, ಪು. ೧೫

೨೪. ಪುರ್ವೋಕ್ತ, ಸಂ. ಹಳ್ಳಿಕೇರಿ.ಎಫ್.ಟಿ, ರವೀಂದ್ರನಾಥ.ಕೆ, ಪು.೪೩

೨೫. ದಾಖಲು ಸಾಹಿತ್ಯ, ರವೀಂದ್ರನಾಥ.ಕೆ, ಪು. ೯೯

೨೬. ಕನ್ನಡ ಸಾಹಿತ್ಯದಲ್ಲಿ ಆತ್ಮಚರಿತ್ರೆ, ಶರಣಮ್ಮ ಅ. ಗೋರೆಬಾಳ, ಪು. ೧೨

೨೭. ಚಲಂ, ರವಿ ಬೆಳಗೆರೆ, ಪು. viii

೨೮. ಖಾಸ್‌ಬಾತ್ ೯೮, ರವಿ ಬೆಳಗೆರೆ, ಪು. I

೨೯. ಮುನ್ನುಡಿ, ಖಾಸ್‌ಬಾತ್ ೯೬, ರವಿ ಬೆಳಗೆರೆ, ಪು. II, IV, V, VI

೩೦. ಅದೇ ಪುಸ್ತಕ, ಪು. ೮೩

೩೧. ಪ್ರವಾಸ ಸಾಹಿತ್ಯ: ವಿಶ್ವಸಂಸ್ಕೃತಿಗಳು, ಪು. ೦೧

೩೨. ಚಂಪಾಂಕಣ ಸಂ–೧, ಚಂದ್ರಶೇಖರ ಪಾಟೀಲ, ಪು. ೧೬೩

೩೩. ಭಾಷಾಂತರ ಪ್ರವೇಶಿಕೆ ಮಹೇಶ್ವರಪ್ಪ, ಪು. ೩೮

೩೪. ದಶಕದ ಕನ್ನಡ ಸಾಹಿತ್ಯ, (ಸಂ) ಹಳ್ಳಿಕೇರಿ ಎಫ್.ಟಿ. ರವೀಂದ್ರನಾಥ ಕೆ, ಪು. ೧೬೨

೩೫. ಫಸ್ಟ್‌ಹಾಫ್, (ಸಂ) ಶರತ್ ಕಲ್ಕೋಡ್ ಪು. ೨೫

೩೬. ಶತಮಾನದ ಕನ್ನಡ ಸಾಹಿತ್ಯ ಸಂ.೭, ಸಂ. ನಾಯಕ ಜಿ.ಎಚ್. ಪು. ೪೦೭

೩೭. ಸಿಂಚನ ನಾಯಕ ಹಾ.ಮಾ. ಪು. ೧೬

೩೮. ಅದೇ ಪುಸ್ತಕ, ಪು. ೨೪

೩೯. ಪೂರ್ವೋಕ್ತ ಸಂ. ಹಳ್ಳಿಕೇರಿ ಎಫ್.ಟಿ. ರವೀಂದ್ರನಾಥ ಕೆ, ಪು. ೧೦೩

೪೦. ಬಾಟಮ್ ಐಟಮ್–II, ರವಿ ಬೆಳಗೆರೆ, ಪು. ೦೫

೪೧. ಬಾಟಮ್ ಐಟಮ್–II, ರವಿ ಬೆಳಗೆರೆ, ಪು. iv&v

೪೨. ಖಾಸ್‌ಬಾತ್–೨೦೦೫, ರವಿ ಬೆಳಗೆರೆ, ಬೆನ್ನುಡಿ

೪೩. ಖಾಸ್‌ಬಾತ್ ೯೬, ರವಿ ಬೆಳಗೆರೆ, ಪು. ೧೨೨

೪೪. ಖಾಸ್‌ಬಾತ್ ೯೭, ರವಿ ಬೆಳಗೆರೆ, ಪು. ೨೫೧

೪೫. ಲವ್‌ಲವಿಕೆ–I, ರವಿ ಬೆಳಗೆರೆ, ಪು. I

೪೬. ಬಾಟಮ್ ಐಟಮ್–I, ರವಿ ಬೆಳಗೆರೆ, ಪು. ೧೭೬

೪೭. ಲವ್‌ಲವಿಕೆ–I, ರವಿ ಬೆಳಗೆರೆ, ಪು. ೮೩

೪೮. ತೊಂಡುಮೇವು–೦೧, ನಾರಾಯಣ ಕೆ.ವಿ. ಪು. ೧೯೬

## ಅಧ್ಯಾಯ ನಾಲ್ಕು

## ರವಿ ಬೆಳಗೆರೆಯವರ ಬರಹಗಳ ಭಾಷಿಕ ವಿಶ್ಲೇಷಣೆ

ಭಾಷೆ ಎಂದರೆ ಏನು ಎಂಬುದಕ್ಕೆ ಸೂತ್ರಬದ್ಧವಾಗಿ ವ್ಯಾಖ್ಯಾನಿಸುವುದು ಸುಲಭವಲ್ಲ. ಆದರೂ, ಅದನ್ನು ಸೂತ್ರ ರೂಪದಲ್ಲಿ ಹೇಳುವ ಪ್ರಯತ್ನವನ್ನು ಅನೇಕ ಭಾಷಾ ವಿಜ್ಞಾನಿಗಳು ಮಾಡಿದ್ದಾರೆ. ಭಾಷೆಯ ಬಗೆಗಿನ ಗ್ರಹಿಕೆಗಳು ವ್ಯಕ್ತಿ, ಸಮುದಾಯ, ಸಮಾಜ, ಪರಿಸರ ಹೀಗೆ ಹಲವು ವ್ಯಾಪ್ತಿಯೊಳಗೆ ವಿಸ್ತಾರವಾದ ಹರಹನ್ನುಳ್ಳವು ಎಂಬುದು ಸಾಮಾನ್ಯವಾಗಿ ಎಲ್ಲರ ಅರಿವಿನ ವಿಚಾರವಾಗಿದೆ. ಹೀಗಾಗಿ ಪ್ರತಿಯೊಂದು ಸಾಮಾಜಿಕ ಸಂದರ್ಭ ಮತ್ತು ಕಾಲಘಟ್ಟದಲ್ಲಿ ಭಾಷೆಯ ವ್ಯಾಪ್ತಿಯನ್ನು ವಿವರಿಸಿಕೊಳ್ಳುವ ಕಾರ್ಯ ಹಿಂದಿನಿಂದಲೂ ನಡೆಯುತ್ತಲೇ ಇದೆ. ಸಾಮಾಜಿಕ ಮತ್ತು ರಾಜಕೀಯ ಸನ್ನಿವೇಶದ ಕಾರಣಗಳ ಹಿನ್ನೆಲೆಯಲ್ಲಿ ಇಂದು ಎಲ್ಲರ ಗಮನ ಭಾಷೆಯ ಚಿಂತನೆಯೆಡೆಗಿದೆ. ಅದು ಭಾಷಾ ಪಲ್ಲಟಗಳನ್ನು ಕುರಿತ ಚಿಂತನೆ ಆಗಿರಬಹುದು, ಭಾಷಾ ಮಾಧ್ಯಮದ ಸಮಸ್ಯೆಯಾಗಿರಬಹುದು, ವೈಜ್ಞಾನಿಕವಾಗಿ ಭಾಷೆಯನ್ನು ವಿಶ್ಲೇಷಿಸುವ ಚಿಂತನ ಕ್ರಮ ಇರಬಹುದು. ಲೇಖಕನೊಬ್ಬ ತನಗೆ ಅರಿವಿಲ್ಲದೆ ತನ್ನ ಬರಹಗಳ ಮೂಲಕ ಮಾಡುವ ಭಾಷಾ ಪ್ರಯೋಗಗಳಿರಬಹುದು. ಇಂಥ ಪಠ್ಯಗಳನ್ನು ವಿವರಿಸುತ್ತಲೇ ಕಂಡುಕೊಳ್ಳಬಹುದಾದ ಅರಿವಿನ ಮಾದರಿಗಳಿರಬಹುದು. ಇವೆಲ್ಲಾ ವ್ಯವಸ್ಥಿತವಾಗಿ ಅಥವಾ ಅವ್ಯವಸ್ಥಿತವಾಗಿ ನಡೆಯುತ್ತಲೇ ಇರುತ್ತವೆ. ಅದಕ್ಕೆ ಭಾಷೆ ನಿಂತ ನೀರಲ್ಲ ಅದು ಸದಾ ಹರಿಯುವ ಜೀವಜಲ ಎಂದು ಕರೆಯಿಸಿಕೊಂಡಿರುವುದು.

ಭಾಷೆಯ ಬಳಕೆಯ ಬಗೆಗಿನ ಅನೇಕ ವಿಷಯಗಳ ಜ್ಞಾನ, ಕೆಲವು ಸೈದ್ಧಾಂತಿಕ ಸ್ವರೂಪಗಳ ಚರ್ಚೆ, ವ್ಯಾಕರಣ ರಚನೆಯ ಒಳನೋಟಗಳು, ಮಾತಿನಂತೆ ಬರಹ ಮತ್ತು ತಂತ್ರಜ್ಞಾನದಲ್ಲಿ ಕನ್ನಡ, ಭಾಷಾ ತಜ್ಞರು ಮತ್ತು ಮಡಿವಂತಿಂಕೆಯ ಸ್ವರೂಪ, ಶಾಸ್ತ್ರೀಯ ಕನ್ನಡ, ಆಧುನಿಕೋತ್ತರ ಕಾಲದಲ್ಲಿ ತನ್ನನ್ನು ತಾನು ತೆರೆದುಕೊಳ್ಳುವ ಅಗತ್ಯತೆ, ಇಲ್ಲವೇ ಬಗೆ, ಕನ್ನಡ ಭಾಷಾಧ್ಯಯನ ಪರಂಪರೆ ಭಾಷಿಕ ವಿಚಾರಗಳು ಸಮಸ್ಯೆಗಳು ಹೀಗೆ ಮುಂತಾದವುಗಳನ್ನು ಸಾಮಾಜಿಕ ಆಯಾಮದಿಂದ ಚರ್ಚಿಸಲಾಗುತ್ತಿದೆ. ಹೀಗಾಗಿ ಭಾಷೆಯ ಉಪಯೋಗಗಳು ಅನಂತ ಅನೇಕ ಎಂಬುದು ಮನದಟ್ಟಾಗುತ್ತದೆ. ಇಷ್ಟು ಮಹತ್ವಪೂರ್ಣವಾದ ಭಾಷೆಯನ್ನು ಕುರಿತು ಈ ಭಾಷೆಯೆಂಬ ಬೆಳಕು ಜೀವನದ ಉದ್ದಕ್ಕೂ ಬೆಳಗದೆ ಹೋಗಿದ್ದರೆ ಲೋಕವೆಲ್ಲವೂ ಕತ್ತಲಿನಿಂದ ತುಂಬಿ ಹೋಗುತ್ತಿತ್ತು ಎಂದು ಒಂದು ಕಡೆ ದಂಡಿ ಸೊಗಸಾಗಿ ಹೇಳಿದ್ದಾನೆ. ಭಾಷೆ ಇಲ್ಲದಿದ್ದರೆ ಜಗತ್ತಿನಲ್ಲಿ ಪರಸ್ಪರ ವ್ಯವಹಾರವು ಅಸಾಧ್ಯವಾಗುತ್ತಿತ್ತು. ಇಂತಹ ಸಾಧನವಾದ ಭಾಷೆಯ ಬಗ್ಗೆ ಪುರಾತನ ಕಾಲದಿಂದಲೂ ಕವಿಗಳು, ವ್ಯಾಕರಣಕಾರರು, ಅಲಂಕಾರಿಕರು, ಭಾಷಾ ವಿಜ್ಞಾನಿಗಳು ತಮಗೆ ತಿಳಿದ ರೀತಿಯಲ್ಲಿ

ಹೇಳುತ್ತಾ, ದಾಖಲಿಸುತ್ತಾ ಬಂದಿದ್ದಾರೆ. ಆದರೂ, ಭಾಷೆಯ ಬಗೆಗೆ ಹೇಳುವುದು ಉಳಿದಿರುತ್ತದೆ. ಒಂದು ವೇಳೆ ಭಾಷೆಯ ಬಗ್ಗೆ ಮಾತನಾಡುವುದು ನಿಂತಿದೆ ಎಂದು ಯಾರಾದರೂ ಹೇಳಿದರೆ ಅದರರ್ಥ ಆ ಭಾಷೆ ಚಲನೆಯನ್ನೇ ನಿಲ್ಲಿಸಿದೆ ಎಂದು ಅರ್ಥ. ಇಷ್ಟೆಲ್ಲ ಪೂರ್ವ ಪೀಠಿಕೆಯ ಕಾರಣ, ಕನ್ನಡದ ಆದಿ ಕವಿ ಎಂದು ಕರೆಯಿಸಿಕೊಂಡಿರುವ ಪಂಪನಿಂದಲೂ ಪ್ರಸ್ತುತ ದಿನಮಾನದವರೆಗಿನ ಪ್ರತಿಯೊಬ್ಬ ಮನುಷ್ಯ ಬಳಸುವ ಭಾಷೆ ಅವರವರದೇ ಶೈಲಿಯಿಂದ ಕೂಡಿರುತ್ತದೆ. ಮತ್ತು ಅದು ಇಂತಹವರೇ ಬಳಸುವ ಶೈಲಿ ಎಂದು ಗುರುತಿಸುವಲ್ಲಿ ಸಹಾಯಕವಾಗುತ್ತದೆ. ಒಬ್ಬ ಬರಹಗಾರನಿಗೆ ಆತ ರೂಢಿಸಿಕೊಂಡ ಬರವಣಿಗೆಗೆ, ಅದರ ಶೈಲಿಗೆ ಅದರದೇ ಆದ ಗುಣ, ಲಕ್ಷಣ ಮತ್ತು ವಿಶೇಷಣಗಳಿರುವುದು ಕಂಡುಬರುತ್ತದೆ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಾಯದಲ್ಲಿ ರವಿ ಬೆಳಗೆರೆಯವರ ಬರಹಗಳ ಭಾಷೆಯ ವಿಶೇಷತೆಯನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

ಇಂಗ್ಲೀಶಿನ ಬಹುದೊಡ್ಡ ಕಾದಂಬರಿಕಾರ ಹೆನ್ರಿ ಜೇಮ್ಸ್ ಬಗೆಗೆ ಎಲಿಯೆಟ್ ಒಂದು ಮಾತು ಹೇಳುತ್ತಾನೆ. 'ನಮ್ಮ ಕಾಲದಲ್ಲಿ ಈತನೊಬ್ಬನಿಗೆ ಮಾತ್ರ ಅಬ್‌ಸ್ಟ್ರಾಕ್ಟ್ (Abstract) ಆಗಿ ಯಾವ ಅಭಿಪ್ರಾಯಗಳೂ ಹೊಳೆಯುವುದಿಲ್ಲ. ಅವನು ಎಲ್ಲವನ್ನೂ ನಿಜದ ವಸ್ತುಗಳನ್ನಾಗಿಯೇ ಕಾಣುತ್ತಾನೆ' ರವಿ ಬೆಳಗೆರೆಯವರು ಮೈಮರೆತು ಆಧ್ಯಾತ್ಮಿಕವಾದ ತುಡಿತದಲ್ಲಿ ಬರೆಯುವವರಲ್ಲ. ಅವರಿಗೆ ಆತ್ಮದಷ್ಟೇ ದೇಹವೂ ನಿಜ, ಆದರೆ ಜಡವೆಂದು ತಿಳಿಯುವ ಜಗತ್ತು ಇವರ ಬರಹಗಳೊಳಗೆ ಕುಣಿದಾಡಿಕೊಂಡು ಬರುತ್ತದೆ. ಹಾಗೇ ನೋಡಿದರೆ ರವಿ ಬೆಳಗೆರೆಯವರನ್ನು ಎಲ್ಲಿಂದ ಓದಿದರೂ ವಕ್ರ ನೋಟದಿಂದ ಕಂಡ ಸತ್ಯಗಳೇ ಇದಿರಾಗುತ್ತವೆ. ಈ ರವಿ ಲೋಕದಲ್ಲಿ ಸತ್ಯವನ್ನು ಯಾರು ಮರೆಮಾಡುವಂತಿಲ್ಲ. ಇಲ್ಲಿ ಬರುವ ವ್ಯಕ್ತಿಗಳು ಅತಿ ಹಿಗ್ಗಬಲ್ಲವರೂ ಹೌದು; ಅತಿ ಕುಗ್ಗಬಲ್ಲವರೂ ಹೌದು. ಜೊತೆಗೆ ಇವರು ಬಡಪಾಯಿಗಳೂ ಹೌದು. ಈ ಹಿಗ್ಗುವ/ಕುಗ್ಗುವ ನಿರಹಂಕಾರ ಗುಣದಿಂದಾಗಿ ಇವರು ಬಚಾವ್ ಆಗುತ್ತಾರೆ. ಬಫೂನ್‌ಗಿರಿಯೂ ಬಚಾವ್ ಆಗುವ ಒಂದು ಕ್ರಮ. ಸರ್ವನಾಶವಾಗುತ್ತಿರುವ ಇಂದಿನ ಜಗತ್ತಿನಲ್ಲಿ ಸಾಮಾನ್ಯವೆಂದು ತಿಳಿಯುವ ಸರಳ ನರಜೀವಿಗೆ ಪಾರಾಗಬಲ್ಲ ಪುಟಿದು ಆತ್ಮವಿಶ್ವಾಸದಿಂದ ಎದ್ದು ನಿಂತು ಗೆಲ್ಲಬಹುದಾದ ಹಲವು ಉಪಾಯಗಳು, ದಾರಿಗಳು ಇವೆ ಎಂಬುದನ್ನು ರವಿ ಬೆಳಗೆರೆಯವರ ಬರಹಗಳು ತೋರಿಸುತ್ತವೆ.

ಭಾಷೆಯ ಬಗೆಗಿನ ರವಿ ಬೆಳಗೆರೆಯವರ ಮುಖಾಮುಖಿ ಕುತೂಹಲ ಕೆರಳಿಸುವಂಥದ್ದು. ಅವರ ಕಥೆಗಳು, ಕಾದಂಬರಿಗಳು, ಕ್ರೈಮ್ ಬರಹಗಳು, ಜೀವನ ಚರಿತ್ರೆಗಳು, ಪ್ರವಾಸ ಕಥನಗಳು ಹಾಗೂ ಹಾಯ್ ಬೆಂಗಳೂರ್! ಪತ್ರಿಕೆಯ ಲೇಖನಗಳು ಇಲ್ಲೆಲ್ಲಾ ಕಾಣುವುದು ಅವರು ನಿರಂತರವಾಗಿ ಭಾಷೆಯ ಜೊತೆಗೆ ಸೆಣಸಾಟಕ್ಕೆ ತೊಡಗಿರುವುದನ್ನು ಭಾಷೆಗೆ ರೂಢಿಗತವಾದ ಒಂದು ಗುಣ, ಒಂದು ವ್ಯಾಕರಣ ವ್ಯವಸ್ಥೆ ಇರುತ್ತದೆ. ಇದು ಸರ್ವಮಾನ್ಯವಾದ ಒಂದು ಸಾರ್ವತ್ರಿಕ ಗುಣ. ಈ ಸಾರ್ವತ್ರಿಕ ಗುಣವನ್ನು ತಾವು ಮೈಗೂಡಿಸಿಕೊಳ್ಳಬೇಕೆಂದು ಪ್ರತಿಯೊಬ್ಬ ಲೇಖಕರು, ಬರಹಗಾರರು ಹಾತೊರೆದರೆ ರವಿ ಬೆಳಗೆರೆಯವರು ಅಷ್ಟಕ್ಕೆ ಸುಮ್ಮನಾಗುವುದಿಲ್ಲ. ಭಾಷೆಯ ಸಾರ್ವತ್ರಿಕ ಗುಣವನ್ನು ಮೈಗೂಡಿಸಿಕೊಳ್ಳುವುದರ ಜೊತೆ ಜೊತೆಯಲ್ಲೇ ಆ ಸಾರ್ವತ್ರಿಕ ಗುಣವನ್ನು ಒಡೆಯುವ, ಮುರಿಯುವ ಕೆಲಸವನ್ನು ಮಾಡುತ್ತಾರೆ. ಅವರ ಸೃಜನಶೀಲ ಬರಹಗಳಲ್ಲಿನ ಭಾಷೆಯ ಜೊತೆ ಗುದ್ದಾಡುವುದು ಒಂದು ಕಡೆಯಾದರೆ, ಹಾಯ್ ಬೆಂಗಳೂರು! ಪತ್ರಿಕೆಯಲ್ಲಿ ಬಳಕೆಯ ಭಾಷೆಯಿಂದ ಎಲ್ಲ

ಪ್ರಮಾಣಿತ ಭಾಷಾ ವ್ಯವಸ್ಥೆಯನ್ನೇ ಧಿಕ್ಕರಿಸಿದ್ದು ಮತ್ತೊಂದು ಕಡೆ. ಇದರ ಜೊತೆಯಲ್ಲಿ ಸೃಜನೇತರ(ಕ್ರೈಮ್) ಬರಹಗಳಲ್ಲಿಯೂ ಅವರು ಅನೇಕ ಭಾಷಾ ಸಾಧ್ಯತೆಗಳನ್ನು ಕಂಡುಕೊಂಡವರು. ಭಾಷೆಯ ಈ ಅನನ್ಯತೆಯೇ ರವಿಯವರನ್ನು ಕೆಲವು ಸಲ ವಿಕ್ಷಿಪ್ತವಾಗಿ, ವಿಲಕ್ಷಣವಾಗಿ ಮತ್ತು ವಿಶೇಷವಾಗಿ ಕಾಣುವಂತೆ ಮಾಡಿದೆ.

ರವಿ ಬೆಳಗೆರೆಯವರು ಅಚಾನಕ್ಕಾಗಿದ್ದನ್ನು ಹೇಳುವ ಸ್ವಭಾವವುಳ್ಳವರು, ಸದಾ ತಾನು ಭಿನ್ನವಾಗಿಯೇ ಚಿಂತಿಸಬೇಕು, ಭಿನ್ನವಾಗಿಯೇ ಬರೆಯಬೇಕು ಎನ್ನುವ ಚಿಂಲನೆಯಳ್ಳವರು. ಒಬ್ಬ ವ್ಯಕ್ತಿ Different from others ಎಂಬ ಕಟ್ಟೆಚ್ಚರವನ್ನು ಹೊಂದಿರಬೇಕು ಎಂದು ಹೇಳುವ ಅವರು ಅದರಂತೆ ಜೀವಿಸಿದ್ದಾರೆ. ಅವರ ಬರವಣಿಗೆಯನ್ನು ಅದರಂತೆಯೇ ರೂಪಿಸಿ ರೂಢಿಸಿಕೊಂಡಿದ್ದಾರೆ. ಯಾವುದೇ ಭಾಷೆಗೊಂದು ಸರಳತೆ ಹಾಗೂ ಸಾತತ್ಯ ಇರುತ್ತದೆ. ಭಾಷೆಯ ಈ ಗುಣದಿಂದಾಗಿ ಅದರ ಸಾತತ್ಯ ಬಳಕೆಯ ರಚನೆಯಲ್ಲಿ ಮುಂದಾಗುವುದನ್ನು ಊಹಿಸುತ್ತಾ ಹೋಗಬಹುದು. ಭಾಷೆಯ ರಚನೆಯ ಕ್ರಮವೂ ಅದಕ್ಕೆ ಅನುಗುಣವಾಗಿಯೇ ಇರುತ್ತದೆ. ಇದನ್ನೇ ಭಾಷೆಯ ಸರಳ ಲಕ್ಷಣ ಎಂದು ಕರೆಯಲಾಗಿದೆ. ಸಾಮಾನ್ಯ ಜನ ಹಾಗೂ ಸಾಮಾನ್ಯ ಪ್ರತಿಭೆ ಇರುವವರು ಭಾಷೆಯ ಈ ಲಕ್ಷಣವನ್ನೇ ಹೆಚ್ಚು ಹೆಚ್ಚು ಬಳಸುತ್ತ ಹೋಗುತ್ತಾರೆ. ಆದರೆ ನಿಜವಾದ ಸಾಮಾನ್ಯ ಪ್ರತಿಭಾವಂತನಿಗೆ ಭಾಷೆಯ ಈ ಲಕ್ಷಣ ಅಷ್ಟಾಗಿ ರುಚಿಸುವುದಿಲ್ಲ. ಅವನು ಭಾಷೆಯ ವ್ಯವಸ್ಥೆಯನ್ನು, ಅದರ ರಚನಾ ಕ್ರಮವನ್ನು ಮೀರುವ ಕೆಲಸ ಮಾಡುತ್ತಾನೆ. ಆ ಮೂಲಕ ಅಲ್ಲಿ ಚಕಿತಗೊಳಿಸುವ ಪ್ರತಿಭೆಯನ್ನು ಪ್ರದರ್ಶಿಸುತ್ತಾನೆ. ಈ ಚಕಿತಗೊಳಿಸುವ ಗುಣ ರವಿ ಬೆಳಗೆರೆಯವರ ಬರಹಗಳಲ್ಲಿ ಹೆಚ್ಚಾಗಿ ಇರುವುದನ್ನು ಕಾಣಬಹುದು. ಚಕಿತಗೊಳಿಸುವುದರ ವಿಶೇಷವೇನೆಂದು ಅರಿಯುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ ಮತ್ತು ಪ್ರೇರಕವಾಗಿದೆ. ಅವರು ರಿಯಾಲಿಟಿಯಿಂದ ಹಿಡಿದು ರೆಟಾರಿಕ್‌ವರೆಗೆ ದೊರೆಯಬಹುದಾದ ಎಲ್ಲಾ ಸಾಧ್ಯತೆಗಳನ್ನೂ ಇದಕ್ಕಾಗಿ ಬಳಸಿಕೊಳ್ಳುತ್ತಾರೆ. ರವಿಯವರ ಬರಹಗಳು ಬೇರೆಯವರಿಗಿಂತ ಭಿನ್ನವಾಗಿರುವುದು ಇಲ್ಲಿಯೇ.

> 'ಮಾತು ಮತ್ತು ಜಾಣತನ ಯಾವಾಗಲೂ ಮನುಷ್ಯನನ್ನು ನಿಜವಾದ
> ಸ್ಥಿತಿಯಿಂದ ದೂರಕ್ಕೆ ಒಯ್ಯುತ್ತದೆ. ಇದು ಭಾರತೀಯನಾದ ಹೊಸ
> ಮನುಷ್ಯ ಧೈರ್ಯವಾಗಿ ಎದುರಿಸಬೇಕಾದ ಸಮಸ್ಯೆ. ಭಾಷೆಯೊಂದು
> ಮೌಲ್ಯವಾಗುವುದು ಅದು ಸತ್ಯಕ್ಕೆ ಹತ್ತಿರ ಹತ್ತಿರ ಹೋದಾಗ, ಸತ್ಯ
> ದಿಂದ ದೂರ ದೂರ ಹೋಗಿ ತೀರಾ ಸುಂದರವೂ ಪರಿಷ್ಕೃತವೂ
> ಆದಾಗ ಅಲ್ಲ' (ಕಂಡದ್ದು ಕಂಡಹಾಗೆ-ಸಾಹಿತ್ಯ ಹಾಗೂ ಹೊಸ ಮೌಲ್ಯಗಳು)

ಭಾಷೆಯನ್ನು ಸತ್ಯಕ್ಕೆ ಹತ್ತಿರ ತರುವ ಮಾತೇ ಸಾಪೇಕ್ಷವಾದದ್ದು. ಅದೇನೇ ಇರಲಿ. ಸುಂದರವಾದ, ಪರಿಷ್ಕೃತವಾದ ಭಾಷೆಯನ್ನು ಬಿಟ್ಟು ಸತ್ಯಕ್ಕೆ ಹತ್ತಿರವಾಗಲು ರವಿ ಬೆಳಗೆರೆಯವರು ತಮ್ಮ ಬರವಣಿಗೆಯಲ್ಲಿ ಅನೇಕ ಪ್ರಯತ್ನಗಳನ್ನಂತೂ ಮಾಡಿದ್ದಾರೆ. ತಮ್ಮ ತೀಕ್ಷ್ಣ ಮತ್ತು ಸರಳ ಸಂಭಾಷಣೆ, ಕಾವ್ಯಾತ್ಮಕ ಭಾಷೆ, ಪುನಾರಾವೃತ್ತಿಗಳು ಮುಂತಾದ ತಂತ್ರಗಳನ್ನು ಅವರು ಯಥೇಚ್ಚವಾಗಿ ಬಳಸಿಕೊಂಡಿದ್ದಾರೆ.

ಅವರ ಬರಹಗಳು ಸಮಕಾಲೀನ ವಸ್ತುಗಳನ್ನು ಪಡೆದಿರುವುದರಿಂದ ಭಾಷಾ ಮಿಶ್ರಣ ಮತ್ತು ಭಾಷಾ ಪಲ್ಲಟಗಳೂ ಸಹ ಆಯಾ ಪಾತ್ರಗಳ ಸಹಜ ಗುಣ ಸ್ವಭಾವಕ್ಕೆ ತಕ್ಕಂತೆ ಬಳಕೆಯಾಗಿವೆ. ಆದರೆ, ಒಂದಂಶವನ್ನು ಇಲ್ಲಿ ಗಮನಿಸಬೇಕು. ಭಾಷೆಗೆ ಇರಬಹುದಾದ ಒಂದು ತಾತ್ವಿಕ ಬೆಳವಣಿಗೆಯನ್ನು ಅವರು ಏಕಮುಖವಾಗಿ ಬಳಸಲು ತಮ್ಮ ಬರಹಗಳಲ್ಲಿ ನಿರಾಕರಿಸುತ್ತಾರೆ. ಇದು ಮುಖ್ಯವಾಗಿ ಕಂಡುಬರುವುದು ಆಯಾ 'ಪಾತ್ರ ಭಾಷೆ' ಮತ್ತು 'ಸಂದರ್ಭ ಭಾಷೆ'ಗಳಲ್ಲಿ. ಅವರು ತಮ್ಮ ಬರಹಗಳಲ್ಲಿ ಬಳಸಿಕೊಂಡಿರುವುದು ಕನ್ನಡದ ಶಿಷ್ಟ ಮಾತಿನ ಭಾಷೆಯನ್ನು. ಈ ಶಿಷ್ಟ ಮಾತಿನ ಭಾಷೆ ವರ್ತಮಾನದ ಆಧುನಿಕ ಭಾಷೆ ಎಂಬುದನ್ನು ಗಮನಿಸಬೇಕು. ವರ್ತಮಾನದ ಆಧುನಿಕ ಭಾಷೆಗೆ ವಿಚಿತ್ರವಾದ ಎರಡು ಗುಣಗಳಿವೆ. ಒಂದು ಕಡೆ ಆ ಭಾಷೆ ಶಿಷ್ಟವೂ ಹೌದು ಮತ್ತು ಇನ್ನೊಂದು ಕಡೆ ಅದು ಆಧುನಿಕವೂ ಹೌದು. ಪ್ರಮಾಣಿತ ಸ್ವರೂಪದ ಮೂಲಕ ಸಮಾನರೂಪೀ ಅಭಿವ್ಯಕ್ತಿಯನ್ನು ಸಾಧಿಸುತ್ತಲೇ ಆಧುನಿಕತೆಯ ಮೂಲಕ ಇಂಗ್ಲೀಶ್ ಮತ್ತು ತಂತ್ರಜ್ಞಾನ ಹಾಗೂ ನಗರೀಕರಣದ ಸಂವೇದನೆಗೆ ಹತ್ತಿರವಾಗಿರುತ್ತದೆ. ಅದಕ್ಕೆ ತಕ್ಕಂತೆ ಭಾಷೆ ನೆರೇಟಿವ್‌ಗಳಲ್ಲಿ ಮುಂದುವರಿಯುತ್ತ ಸಾಗುತ್ತದೆ. ಬದುಕಿನ ಮೂಲದಿಂದ ಅನುಭವವಾಗುವ ಭಾಷೆ ಸರಳ, ನೇರ ನಿರೂಪಣೆಯಲ್ಲಿರುತ್ತದೆ. ಸಾರ್ವಜನಿಕ ಜೀವನದ ನೆಲೆಯಿಂದ ಬರುವ ಭಾಷೆ ಸನ್ನಿವೇಶಕ್ಕೆ ತಕ್ಕಂತೆ ಸಾಣೆ ಹಿಡಿಸಿಕೊಳ್ಳುತ್ತಿರುತ್ತದೆ. ಮತ್ತು ಅಂತಹ ಭಾಷೆ ಪಾತ್ರಗಳಿಗೂ ಸಾಣೆ ಹಿಡಿಯುತ್ತಿರುತ್ತದೆ.

'ಆಂಡ್ರ್ಯೂ ಕೆನೆಡಿ' ಎಂಬ ಭಾಷಾ ವಿಜ್ಞಾನಿ 'ಕಾಸ್ಟ್ಯೂಮ್ ಸ್ಪೀಚ್' ಎನ್ನುವ ಪರಿಕಲ್ಪನೆಯನ್ನು ಕುರಿತು ಹೇಳಿದ್ದಾನೆ. ಆತನ ಪ್ರಕಾರ ಭಾಷೆ ಅಲ್ಲಿ ಆಭರಣದ ರೀತಿಯಲ್ಲಿ ಕಂಡುಬರುತ್ತದೆ. ತಮ್ಮ ವಾದವನ್ನು ಮಂಡಿಸುವುದಕ್ಕೆ ಮತ್ತು ಭ್ರಮೆಯನ್ನು ಸೃಷ್ಟಿಸುವುದಕ್ಕೆ ಇದನ್ನು ಬಳಸಿಕೊಳ್ಳಲಾಗಿದೆ. ರವಿಯವರು ತಮ್ಮ ಬರರಹಗಳಲ್ಲಿ ಬಳಸಿರುವ ಭಾಷೆಯೂ ಇದೇ ತರಹದ್ದು. ಭಾಷೆಯನ್ನು ಕ್ರಿಯೆಯ ಸಾಧನವನ್ನಾಗಿ ಮತ್ತು ಕ್ರಿಯೆಯ ವಸ್ತುವನ್ನಾಗಿ ಅತ್ಯಂತ ಪ್ರಜ್ಞಾಪೂರ್ವಕವಾಗಿ ತಮ್ಮ ಬರಹಗಳಲ್ಲಿ ಬಳಸಿಕೊಂಡಿದ್ದಾರೆ.

ರವಿಯವರು ಬಳಸಿರುವ ಭಾಷೆ ತಟಸ್ಥವಾದದ್ದು. ಈ ತಟಸ್ಥವಾದ ಭಾಷೆಗೆ ಒಂದು ವಿಶಿಷ್ಟ ಲಕ್ಷಣವಿರುತ್ತದೆ. ಅಲ್ಲಿ ಲೇಖಕ ಭಾಷಾ ಅನ್ವೇಷಣೆಗಿಂತ ವಸ್ತುವಿನ ಅನ್ವೇಷಣೆಗೆ, ಸಂದರ್ಭ ಮತ್ತು ಪಾತ್ರಗಳ ವಿಶ್ಲೇಷಣೆಗೆ ಹೆಚ್ಚು ಗಮನ ಕೊಡುತ್ತಾನೆ. ಭಾಷೆಯ ಮೂಲಕ ಪಾತ್ರವನ್ನು ಕಟ್ಟುವ ಬದಲು, ಸಮಸ್ಯೆಯೇ ಪಾತ್ರವನ್ನು ಭಾಷೆಯ ಮೂಲಕ ಕಟ್ಟುತ್ತ ಹೋಗುತ್ತವೆ. ಇಂಥ ಕಡೆ ವ್ಯಕ್ತಿ ವಿಶಿಷ್ಟ ಭಾಷೆಗಿಂತ ಪ್ರಮಾಣಿತ ಭಾಷೆಯೇ ಹೆಚ್ಚು ಪ್ರಯೋಜನಕಾರಿಯಾದದ್ದು. ಈ ಪ್ರಮಾಣಿತ ಭಾಷೆಯೂ ಸಹ ಸಮಕಾಲೀನವಾದ ಆಧುನಿಕರಣಗೊಂಡ ಭಾಷೆಯಲ್ಲ. ಕಾಲ ಮತ್ತು ಸ್ಥಳಗಳಿಂದ ಕೊಂಚ ದೂರ ನಿಂತ ಭಾಷೆ. ಇಲ್ಲಿ ಭಾಷೆಯ ರಚನಾ ನಿಯಮದಿಂದ ಹಿಡಿದು ಶಬ್ದಗಳ ಆಯ್ಕೆಯವರೆಗೆ ಈ ದೂರವೇ ಲೇಖಕನನ್ನು ನಿಯಂತ್ರಿಸುತ್ತಿರುತ್ತದೆ.

ಒಬ್ಬ ಪ್ರತಿಭಾವಂತ ಬರಹಗಾರನಿಗೆ ತನ್ನ ಸಮಕಾಲೀನ ಸಂದರ್ಭದಲ್ಲಿ ಬೇರೆ ಬೇರೆ ಬರಹಗಾರರು ಮಾಡುವ ಭಾಷಾ ಪ್ರಯೋಗದ ರೀತಿ ಚೆನ್ನಾಗಿ ತಿಳಿದಿರುತ್ತದೆ. ರವಿಯವರು ತಮ್ಮ ಬರಹವನ್ನು ಆರಂಭಿಸುವ ಕಾಲಕ್ಕೆ, ಅವರಿಗಿಂತ ಮುಂಚೆ ಅನೇಕರು ಆಗಿ ಹೋಗಿದ್ದರು. ಮುಖ್ಯವಾಗಿ 'ಲಂಕೇಶ್'ರು ಅಸ್ತಿತ್ವವಾದಿ ಬರಹಗಳಲ್ಲಿ ಭಾಷೆಯನ್ನು ಬಳಸುತ್ತಿದ್ದ ರೀತಿ ಗೊತ್ತಿತ್ತು. ಲಂಕೇಶರು

ಸಂಭಾಷಣೆಯನ್ನೇ ಕಥನವಾಗಿಸಿಬಿಡುತ್ತಿದ್ದರು. ಹಾಗಾಗಿ ಅವರ ಬರಹದ ಭಾಷೆ ತರ್ಕಕ್ಕೆ ಹುಟ್ಟಿದಂತೆ ಕಾಣುತ್ತಿತ್ತು. ಅದಕ್ಕಿಂತ ಭಿನ್ನವಾಗಿ ನಗರೀಕರಣದ ಭಾಷೆಯನ್ನು ಒಂದು ಕ್ಷೇತ್ರಕ್ಕೆ ಅಥವಾ ಒಂದು ಪ್ರದೇಶ ಇಲ್ಲ ಒಂದು ಜನಾಂಗಕ್ಕೆ/ವರ್ಗಕ್ಕೆ ಸೀಮಿತಗೊಳಿಸಿದಂತೆ ಸೆಕ್ಯೂಲರ್ ಆಗಿ ಬಳಸುವ ಸವಾಲು ರವಿ ಬೆಳಗೆರೆಯವರ ಮುಂದಿತ್ತು. ಆಗ ಹೆಚ್ಚು ಮಾನ್ಯತೆ ಪಡೆದವು ಅವರ ಬರಹಗಳು. ತಮ್ಮ ವ್ಯಂಗ್ಯ, ಹಾಸ್ಯ, ಕಾವ್ಯಮಯತೆ, ಪೃಥಕ್ಕರಣೆ, ಕಟಕಿ, ಪ್ರೇಮ, ಲೈಂಗಿಕತೆ, ಆತ್ಮವಿಶ್ವಾಸದ ನುಡಿ, ಎಲ್ಲರ ನೋವು ತನ್ನದೇ ಎನ್ನುವಂತೆ ಬರೆಯುವುದು ಮತ್ತು ಅಚಾನಕತೆಯಿಂದಾಗಿ ಅವು ಲಂಕೇಶ್‌ರಿಗಿಂತ ಭಿನ್ನ ಎನಿಸಿಕೊಂಡವು. ಇಬ್ಬರೂ ಒಳ್ಳೆಯ ಬರಹಗಾರರು ಮತ್ತು ಪತ್ರಕರ್ತರು. ಆದರೆ, ಲಂಕೇಶರು ತಮ್ಮದನ್ನು ತಾವು ಹೇಳಿಕೊಳ್ಳುವುದರ ಮೂಲಕ ಒಂದು ವರ್ಗದ ಓದುಗರನ್ನು ಸೃಷ್ಟಿಸಿಕೊಂಡರೆ, ರವಿ ಬೆಳಗೆರೆಯವರು ತಮ್ಮದನ್ನು ಎಲ್ಲರದೂ ಎಂಬಂತೆ ಹೇಳುವುದರ ಮೂಲಕ ಎಲ್ಲ ವರ್ಗದ, ಎಲ್ಲ ತರಹದ ಓದುಗರನ್ನು ಸೃಷ್ಟಿಸಿಕೊಂಡರು.

ಇದಿಷ್ಟು ಅವಶ್ಯವೆನಿಸಿದ್ದು ರವಿ ಬೆಳಗೆರೆಯವರ ಒಟ್ಟು ಬರಹಗಳ ಭಾಷೆಯ ವಿಶ್ಲೇಷಣೆಗೆ ತೊಡಗಲು ಪ್ರವೇಶಿಕೆಯಾದಿತೆಂದು. ಅದಕ್ಕಾಗಿ ಅವರ ಒಟ್ಟಾರೆ ಬರಹಗಳ ಭಾಷೆಯ ಬಗೆಗೆ ಈ ಪೂರ್ವ ಪೀಠಿಕೆ, ಮುಂದಿನ ವಿಭಾಗ ಕ್ರಮದಲ್ಲಿ ಪ್ರತ್ಯೇಕವಾಗಿ ಆಯಾ ಪ್ರಕಾರದ ಭಾಷೆಯ ವಿಶೇಷತೆಯನ್ನು ಈ ಅಧ್ಯಾಯದಲ್ಲಿ ನೀಡುವ ಸಲುವಾಗಿ ಇಲ್ಲಿ ಪ್ರಸ್ತಾಪಿಸಲಾಗಿದೆ.

**೪.೧. ಕಥೆ, ಕಾದಂಬರಿ, ಜೀವನ ಚರಿತ್ರೆ, ಪ್ರವಾಸ ಕಥನ–ಭಾಷೆ**

ಸಾಹಿತ್ಯ ರಚನೆ ಎಂಬುದು ಭಾಷೆಯಲ್ಲಿಯೇ ಮೈದಾಳುತ್ತದೆ. ಅದು ಜೀವನಾನುಭವಗಳನ್ನು ಅಭಿವ್ಯಕ್ತಿಸುವ ಸಂವಹನ ಮಾಧ್ಯಮ. ಹಾಗಾಗಿ ನಮ್ಮ ಅನೇಕ ಚರ್ಚೆಗಳು, ಸಿದ್ಧಾಂತಗಳು ಮತ್ತು ವ್ಯಾಖ್ಯಾನಗಳು ಭಾಷೆಯ ವಿವಿಧ ನೆಲೆಗಳನ್ನು ಕುರಿತಂತೆ ಇವೆ. ಭಾಷೆಯನ್ನು ನಮ್ಮ ಹಲವು ಚರ್ಚೆಗಳ ಕೇಂದ್ರಕ್ಕೆ ತಂದುಕೊಂಡಿರುವುದು ಇತ್ತೀಚಿನ ದಶಕದ ಒಂದು ಮುಖ್ಯ ಬೆಳವಣಿಗೆಯಾಗಿದೆ. ಆದ್ದರಿಂದ ನಮ್ಮ ಸಾಂಸ್ಕೃತಿಕ ಚರ್ಚೆಗಳು ಅವಶ್ಯವೆಂಬಂತೆ ಭಾಷಿಕ ನೆಲೆಗಳನ್ನು ವ್ಯವಹರಿಸುತ್ತಿರುತ್ತವೆ. ಏಕೆಂದರೆ ನಾವಿಂದು ಭಾಷೆಯನ್ನು ಕೇವಲ ಮಾಧ್ಯಮವೆಂದು ಮಾತ್ರ ತಿಳಿಯುತ್ತಿಲ್ಲ, ಬದಲಾಗಿ ಮನುಷ್ಯರ ವೈಯಕ್ತಿಕ ಮತ್ತು ಸಾಮಾಜಿಕ ವ್ಯಕ್ತಿತ್ವಗಳೆರಡನ್ನು ಒಳಗೊಳ್ಳುವ ನೆಲೆಯಲ್ಲಿ ಭಾಷೆಗೆ ಮಹತ್ವದ ಪಾತ್ರವಿದೆ ಎಂದು ಭಾವಿಸಿದ್ದೇವೆ. ಕಾರಣ ನಮ್ಮ ಎಲ್ಲ ನಿರೂಪಣೆಗಳಿಗೂ ಭಾಷೆಯೇ ಮೊದಲು ಹಾಗೂ ಸದ್ಯಕ್ಕಂತೂ ಭಾಷೆಯೇ ಕೊನೆ.

ಸಾಹಿತ್ಯ ಮತ್ತು ಭಾಷೆ ಎರಡೂ ಒಂದಕ್ಕೊಂದು ಅವಿನಾಭಾವ ಸಂಬಂಧದಿಂದ ಬೆಳೆದುಕೊಂಡು ಬಂದಿವೆ. ಶೈಲಿ ಶಾಸ್ತ್ರಜ್ಞರು ಗುರುತಿಸುವಂತೆ ಸಾಹಿತ್ಯವೆಂದರೆ ಅದರ ಭಾಷೆಯೇ ಆಗಿದೆ. ಕಥೆ, ಕಾದಂಬರಿಗಳಲ್ಲಿನ ಪಾತ್ರಗಳನ್ನು, ಘಟನೆಗಳನ್ನು, ಸನ್ನಿವೇಶಗಳನ್ನು ಓದುಗನ ಅರಿವಿಗೆ ತಂದು ಕೊಡುವುದೇ ಭಾಷೆ. ಕಥೆಯ ರಚನೆಗಾಗಿ ದುಡಿಯುವ ಭಾಷೆ ಕೇವಲ ಶಾಬ್ದಿಕ ರೂಪದ್ದಾಗಿರುವುದಿಲ್ಲ; ಬದಲಾಗಿ ಅದು ಅರ್ಥಪೂರ್ಣ ಘಟಕವಾಗಿರುತ್ತದೆ. ಅಂದರೆ ಕಥೆಯೊಂದರ ಭಾಷಿಕ ವಿಶ್ಲೇಷಣೆ ಎಂಬುದು ಘಟನೆ, ಪಾತ್ರ, ಸನ್ನಿವೇಶ ಮತ್ತು ಸಂದರ್ಭಗಳನ್ನು ಕುರಿತದ್ದೇ ಆಗಿರುತ್ತದೆ.

ಕತೆಗಾರ ತಾನು ಆಯ್ದುಕೊಂಡಿರುವ ವಸ್ತುವಿನ ಕಾಲ, ಘಟನೆ, ನಡೆಯುತ್ತಿರುವ ಸ್ಥಳ ಅಥವಾ ಘಟನೆಯ ಸಂದರ್ಭವನ್ನು ಪಾತ್ರಗಳಿಗೆ ಸಮಂಜಸವಾಗಿ ತಾಳೆಯಾಗುವ ಭಾಷೆಯನ್ನು ದುಡಿಸಿಕೊಳ್ಳಬೇಕಾಗುತ್ತದೆ. ಅಲ್ಲದೇ ಭಾಷೆ ಮತ್ತು ಅದರ ಒಳಪ್ರಭೇದಗಳನ್ನು, ಪದರುಗಳನ್ನು ವಿನಿಯೋಗಿಸುವ ಮೂಲಕ ಭಾಷೆಯಲ್ಲಿ ಸಾಕಷ್ಟು ಏಕರೂಪತೆಯನ್ನು ಕಾಯ್ದುಕೊಳ್ಳಬೇಕಾಗುತ್ತದೆ. ಕಥೆಯೊಳಗಿನ ಪಾತ್ರಗಳ ಸ್ಥಾನ, ಸ್ವಭಾವ, ವರ್ತನೆಗಳ ಅನ್ವಯ ಭಾಷೆ ಬಳಕೆಗೊಳ್ಳುವ ಸಾಧ್ಯತೆಗಳು ಹೆಚ್ಚು. ಹಾಗಿದ್ದ ಮೇಲೆ ಭಾಷೆಯ ಕಥೆಯೊಳಗಿನ ವ್ಯಕ್ತಿಗಳು, ಜೀವನಕ್ರಮ, ಸಾಮರ್ಥ್ಯ ಇವುಗಳನ್ನು ಅವಲಂಭಿಸಿರುತ್ತದೆ. ಆಗ ಗ್ರಾಂಥಿಕ ಹಾಗೂ ಆಡುನುಡಿಗಳ ಸಂಯೋಜನೆಯಲ್ಲಿ ಸಮತೋಲನೆಯನ್ನು ಕಾಯ್ದುಕೊಳ್ಳಬೇಕಾಗುತ್ತದೆ.[೧] ಈ ಹಿನ್ನೆಲೆಯಲ್ಲಿ ರವಿಯವರು ತಮ್ಮ ಬರಹಗಳಲ್ಲಿ ಭಾಷೆಯನ್ನು ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಮೂಲತಃ ರವಿಯವರು ಬಳ್ಳಾರಿಯವರಾಗಿದ್ದರೂ, ತಮ್ಮ ಕೆಲವು ಬರಹಗಳಲ್ಲಿ ಉತ್ತರ ಕರ್ನಾಟಕದ ಭಾಷೆಯನ್ನು ತುಂಬಾ ಲೀಲಾಜಾಲವಾಗಿ ಬಳಸಿಕೊಂಡಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಪಾ.ವೆಂ. ಹೇಳಿದ ಕಥೆ, ಮೈಕು, ವಿತಥ (ಕಥೆಗಳು), ಮಾಂಡೋವಿ, ಮಾಟಗಾತಿ, ಸರ್ಪಸಂಬಂಧ, ದಿ ಗಾಡ್ ಫಾದರ್(ಕಾದಂಬರಿ) ಈ ಕಥೆ, ಕಾದಂಬರಿಗಳ ಜೊತೆಗೆ ಅನೇಕ ಅಂಕಣ ಬರಹಗಳಲ್ಲಿಯೂ ಉತ್ತರ ಕರ್ನಾಟಕದ ಭಾಷೆಯನ್ನು ನೋಡಬಹುದಾಗಿದೆ. ಬಳ್ಳಾರಿಯ ಪ್ರಾದೇಶಿಕ ಭಾಷೆಯನ್ನು ಅಷ್ಟೇ ಸಮಂಜಸವಾಗಿ ಬಳಸಿಕೊಂಡಿರುವುದಕ್ಕೆ ಕೊನೆ, ಹಂತ, ವಂಧ್ಯಾ, ಗಿಡ್ಡಾಂಜನೇಯ ಸ್ವಾಮಿ ಇತ್ಯಾದಿ ಕಥೆಗಳನ್ನು, ಮಾಂಡೋವಿ, ಅರ್ತಿ, ದಿಗಾಡ್ ಫಾದರ್, ಗೋಲಿಬಾರ್ ಇತ್ಯಾದಿ ಕಾದಂಬರಿಗಳನ್ನು ಇದು ಜೀವ ಇದುವೇ ಜೀವನ ಎಂಬ ಬೆಳಗೆರೆ ಕೃಷ್ಣಶಾಸ್ತ್ರಿಗಳ ಜೀವನ ಚರಿತ್ರೆ ಮತ್ತು ಅಂಕಣ ಬರಹಗಳು ಇದಕ್ಕೆ ಸಾಕ್ಷಿಯಾಗುತ್ತದೆ.

ರವಿಯವರ ಬರಹಗಳ ಭಾಷೆಯಲ್ಲಿ ಬಹುತೇಕ ಇಂಗ್ಲೀಶ್ ಪದಗಳು, ವಾಕ್ಯಗಳು, ವ್ಯಾಪಕವಾಗಿ ಬಳಕೆಯಾಗಿವೆ. ಆದರೆ ರವಿಯವರು ಬಳ್ಳಾರಿಯವರಾಗಿದ್ದರೂ ತೆಲುಗು ಭಾಷೆಯ ಪ್ರಭಾವಕ್ಕೆ ಒಳಗಾಗಿಲ್ಲ. ಬಳ್ಳಾರಿ ಆಂಧ್ರ ಪ್ರದೇಶದ ಗಡಿ ಪ್ರದೇಶವಾದ್ದರಿಂದಲೂ ಅಲ್ಲದೆ ಅವರ ಮಾತೃ ಭಾಷೆ ತೆಲುಗು ಆಗಿರುವುದು, ಮಾತೃ ಭಾಷೆಯನ್ನೇ ಅವರು ಪ್ರಥಮ ಭಾಷೆಯಾಗಿ ಕಲಿತಿದ್ದರೂ ಪ್ರಭಾವ ಕಂಡುಬರುವುದಿಲ್ಲ. ಅದರ ಜೊತೆಯಲ್ಲೇ ಇಲ್ಲಿಯ ಜನರ ದೈನಂದಿನ ಜೀವನದಲ್ಲಿ ತೆಲುಗು ಭಾಷೆಯ ಬಳಕೆ ಸರ್ವೇ ಸಾಮಾನ್ಯ. ಇದು ಈ ಭಾಗದ ಸಾಹಿತಿಗಳು ಬಳಸುವ ಭಾಷೆಯಿಂದಲೂ ಇದರ ಪ್ರಭಾವ ಕಾಣಬಹುದು. ಆದರೆ ರವಿಯವರು ಚಲಂ, ಶ್ರೀ ಶ್ರೀ ರಂಥ ತೆಲುಗು ಸಾಹಿತ್ಯಗಳಿಂದ ಪ್ರೇರಣೆ ಮತ್ತು ಪ್ರಭಾವಕ್ಕೆ ಒಳಗಾಗಿದ್ದಾರೆಯೇ ಹೊರತು, ತೆಲುಗು ಭಾಷೆಯ ಪ್ರಭಾವ ಅವರ ಇಡೀ ಬರಹಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ತೀರಾ ವಿರಳವಾಗಿ ಒಂದೆರಡು ಪದ, ವಾಕ್ಯಗಳು ಬಳಕೆಯಾಗಿರುವುದನ್ನು ಬಿಟ್ಟರೆ ತೆಲುಗು ಭಾಷೆಯ ಪ್ರಭಾವ ಹೆಚ್ಚಿನದಾಗೇನು ಕಂಡುಬರುವುದಿಲ್ಲ. ಹೀಗೊಬ್ಬಳು ಸೀತಾದೇವಿ ಕಥೆ ಪೂರ್ತಿಯಾಗಿ ತೆಲುಗು ಪ್ರದೇಶವಾದ ಹೈದರಾಬಾದ್‌ನಲ್ಲಿ ಘಟಿಸುತ್ತದೆಯಾದರೂ, ಇಡೀ ಕಥೆಯಲ್ಲಿ ಎಲ್ಲಿಯೂ ತೆಲುಗು ಪದಗಳು ಅಥವಾ ಭಾಷೆಯ ಪ್ರಭಾವ ಕಾಣುವುದಿಲ್ಲ. ಆದರೆ ಇಂಗ್ಲೀಶ್ ಭಾಷೆಯ ಬಳಕೆ ಈ ಕಥೆಯಲ್ಲಿ ದಟ್ಟವಾಗಿದೆ. 'ಇದು ಜೀವನ ಇದುವೇ ಜೀವನ'ದಲ್ಲಿ ಅಲ್ಪ ಪ್ರಮಾಣದ ತೆಲುಗು ಬಳಕೆಯನ್ನು ಕಾಣುವುದನ್ನು ಬಿಟ್ಟರೆ, ಅವರದು ತೆಲುಗು ಮಾತೃ ಭಾಷೆಯ ಕುಟುಂಬ ಎಂಬಂತೆ

ಎಲ್ಲೂ ಚಿತ್ರಿತವಾಗಿಲ್ಲ. 'ಕತ್ತಲೆ ನೋವು ಮತ್ತು ಹೆಣ' ಕಥೆಯಲ್ಲಿ ಹಿಂದಿ ಭಾಷೆ ಹೇರಳವಾಗಿರುವುದನ್ನು ಕಾಣಬಹುದು. ಹೀಗೆ ಭಾಷಾ ಬಳಕೆಯ ವೈವಿಧ್ಯತೆಯನ್ನು ರವಿಯವರ ಕಥೆಗಳಲ್ಲಿ ನೋಡಬಹುದಾಗಿದೆ.

'ಒಬ್ಬ ಕಥೆಗಾರ ಏನು ಹೇಳಬೇಕೆಂದು ನಿರ್ಧರಿಸುವ ಜೊತೆಯಲ್ಲಿಯೇ ಅದನ್ನು ಹೇಗೆ ಹೇಳಬೇಕೆಂದೂ ನಿರ್ಧರಿಸಬೇಕಾಗುತ್ತದೆ. ಅದು ಸೃಜನಶೀಲತೆಯ ಗುಣ. ಸೃಜನಶೀಲ ಕಥೆಗಾರ ಯಾವಾಗಲೂ ಅನುಭವ ಹಾಗೂ ಅಭಿವ್ಯಕ್ತಿಗಾಗಿ ಹಂಬಲಿಸುತ್ತಿರುತ್ತಾನೆ. ಜೊತೆಗೆ ಕಥೆಗಳ ಕಲಾತ್ಮಕ ಚೌಕಟ್ಟು ಮತ್ತು ಭಾಷಾ ಸಾಧ್ಯತೆಗಳ ಬಗ್ಗೆ ತನ್ನದೇ ಆದ ಕಲ್ಪನೆಗಳನ್ನು ಇರಿಸಿಕೊಂಡಿರುತ್ತಾನೆ. ಹೀಗಾಗಿ ಭಾಷೆಯ ಕಲಾತ್ಮಕ ಉಪಯೋಗ' ಕಥೆಗಾರ ಆಯ್ದುಕೊಂಡ ವಸ್ತುವಿನಲ್ಲಿಯೇ ಸಾರ್ಥಕತೆಯನ್ನು ಪಡೆದುಕೊಳ್ಳಬೇಕಾಗುತ್ತದೆ.[೨] ಅದರಂತೆಯೇ ಒಂದು ಭಾಷೆ ಆ ಕಥಾವಸ್ತುವಿನೊಂದಿಗೆ ಗಾಢವಾದ ಸಂಬಂಧವನ್ನು ಹೊಂದಿರುತ್ತದೆ. ರವಿಯವರು ತಮ್ಮ ಬರಹಗಳಲ್ಲಿಯ ಭಾಷೆ ಬಳಕೆಯಲ್ಲಿ ಸೃಜನಶೀಲತೆಯನ್ನು ಮೆರೆದಿದ್ದಾರೆ. ಆ ಒಟ್ಟು ಬರಹಗಳಲ್ಲಿನ ಭಾಷೆಯನ್ನು ಈ ಮುಂದಿನಂತೆ ವಿಶ್ಲೇಷಿಸಬಹುದು.

ರವಿ ಬೆಳಗೆರೆಯವರು ಪ್ರಥಮ ಭಾಷೆಯಾಗಿ ಓದಿದ್ದು ತೆಲುಗು. ದ್ವಿತೀಯ ಭಾಷೆಯಾಗಿ ಕಲಿತದ್ದು ಹಿಂದಿಯನ್ನು. ಕನ್ನಡವೇನಿದ್ದರೂ ಅವರು ಆಸಕ್ತಿಯಿಂದ ಕಲಿತದ್ದು. ಅವರ ಸ್ನಾತಕೋತ್ತರ ಪದವಿಯನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ಪತ್ರಿಕೋದ್ಯಮದ ವೃತ್ತಿ ಜೀವನ ಕಳೆದದ್ದು ಹುಬ್ಬಳ್ಳಿಯಲ್ಲಿ. ಇಲ್ಲಿಯ 'ಸಂಯುಕ್ತ ಕರ್ನಾಟಕ' ಮತ್ತು 'ಕಸ್ತೂರಿ' ಪತ್ರಿಕೆಗಳಲ್ಲಿ ಕೆಲವು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದರಿಂದ ಸಾಮಾನ್ಯವಾಗಿ ಉತ್ತರ ಕರ್ನಾಟಕದ ಭಾಷೆಯ ಪ್ರಭಾವ ಅವರ ಕೆಲವು ಕಥೆ, ಕಾದಂಬರಿಗಳ ಮೇಲೆ ಆಗಿದೆ. ಇವು ಪ್ರಾದೇಶಿಕವಾಗಿ ಉತ್ತರ ಕರ್ನಾಟಕಕ್ಕೆ ಸಂಬಂಧಿಸಿರುವುದನ್ನು ಇಲ್ಲಿ ಗಮನಿಸಬಹುದು. ರವಿಯವರ ಪ್ರಮುಖ ಕಥೆ ಪಾ.ವೆಂ. ಹೇಳಿದ ಕಥೆ, ಇದರಲ್ಲಿ ಅವರು ಉತ್ತರ ಕರ್ನಾಟಕದ ಭಾಷೆಯನ್ನೇ ಬಳಸಿಕೊಂಡಿದ್ದಾರೆ. ಇಡೀ ಕಥೆ ನಡೆಯುವುದು ಹುಬ್ಬಳ್ಳಿಯಲ್ಲಿ. ಹೀಗಾಗಿ ಆ ಪ್ರಾದೇಶಿಕತೆಯ ಭಾಷಾ ಶೈಲಿ ಈ ಕಥೆಗೆ ಮತ್ತಷ್ಟು ಮೆರುಗನ್ನು ತುಂಬಿದೆ. ಕಥೆಯಲ್ಲಿ ಬರುವ ಪಾತ್ರಗಳು ಆಡುವ ಸಂಭಾಷಣೆ ರೂಪದ ಮಾತುಗಳು ಪ್ರಾದೇಶಿಕತೆಯಿಂದ ಕೂಡಿದ್ದರೆ, ಸಂಭಾಷಣೆಗೆ ಪೂರಕವಾಗಿ ಕಥೆಗಾರ ಬಳಸಿರುವ ಭಾಷೆ ಗ್ರಾಂಥಿಕ ರೂಪದ್ದಾಗಿದೆ. ಕಥಾನಾಯಕಿ ಅಂಬುಜಾ ತನ್ನ ಗಂಡನ ಜೊತೆ ಮಾತನಾಡುವ ಭಾಷಾ ಶೈಲಿ ಹೀಗಿದೆ.

'ಏನಾಗ್ಯಾದ... ಬಿಚ್ಚಿ ಹೇಳ್ರಿ... ಮನಸೀಗೆ ಹೌರಗ ಅನ್ನಸ್ತದ' ಅಂದಳು.

'ಆಫೀಸಿನ್ಯಾಗ ಅನಾಹುತ ಆಗ್ಯದ' ಮೇಲುದನಿಯಲ್ಲಿ ಹೇಳಿದ.

'ಏನಾಗ್ಯಾದ?' ಅವಳ ದನಿಯಲ್ಲಿ ಕಾತರವಿತ್ತು.

'ಸಸ್ಪೆಂಡು ಮಾಡ್ಯಾರ!' ಅಂದವನೇ ಆಸರೆ ತಪ್ಪಿದವನಂತೆ ಅವಳ ಮಡಿಲಲ್ಲಿ ವಾಲಿಬಿಟ್ಟ.[೩]

ಈ ಸಂಭಾಷಣೆಯಲ್ಲಿ ಕಂಡುಬರುವ ಭಾಷೆಯನ್ನು ಗ್ರಾಂಥಿಕ ಕನ್ನಡ ಭಾಷೆಯೊಂದಿಗೆ ಹೋಲಿಕೆ ಮಾಡಿ ನೋಡಿದಾಗ ಆ ಭಾಷೆಯ ವಿಶೇಷತೆಯನ್ನು ಅರಿಯಬಹುದು. ಸಾಮಾನ್ಯವಾಗಿ ಉತ್ತರ ಕರ್ನಾಟಕದ ಭಾಷೆಯ ಪದದಲ್ಲಿಯ 'ಅ' ಅಥವಾ 'ಆ' ಕಾರಕ್ಕೆ 'ಯ' ಕಾರವು

ಒತ್ತಕ್ಷರವಾಗಿ/ದ್ವಿತ್ವವಾಗಿ ಬಳಕೆಯಾಗಿರುವುದನ್ನು ಈ ಮೇಲಿನ ಸಂಭಾಷಣೆಯಲ್ಲಿರುವ ಪದಗಳ ಮೂಲಕ ತಿಳಿಯುತ್ತದೆ.

| **ಗ್ರಾಂಥಿಕ ಭಾಷೆ** | **ಉತ್ತರ ಕರ್ನಾಟಕ ಭಾಷೆ.** |
|---|---|
| ಹಚ್ಚಿಕೊಂಡು | ಹಚ್ಚಿಕ್ಯಂಡು |
| ಹೇಗಿದ್ದರೂ | ಹ್ಯಾಗಿದ್ರೂ |
| ಏನಾಗಿದೆ | ಏನಾಗ್ಯಾದ |
| ಮಾಡಿದ್ದಾರೆ | ಮಾಡ್ಯಾರ |
| ಆಫೀಸ್‌ನಲ್ಲಿ | ಆಫೀಸ್‌ನ್ಯಾಗ |
| ಬೇರೆ | ಬ್ಯಾರೆ |
| ಆಗಿದೆ | ಆಗ್ಯಾರ |

ಗ್ರಾಂಥಿಕ ಕನ್ನಡದ ಪದಗಳಲ್ಲಿಯ ಅ, ಆ, ಇ, ಏ, ಓ ಕಾರಗಳು ಉತ್ತರ ಕರ್ನಾಟಕದ ಭಾಷೆಯಲ್ಲಿ 'ಅ' ಅಥವಾ 'ಆ' ಕಾರವಾಗಿ ಬಳಕೆಯಾಗಿರುವುದರೊಂದಿಗೆ 'ಯ' ಕಾರವನ್ನು ಒತ್ತಕ್ಷರವನ್ನಾಗಿ ಪಡೆಯುವ ಪ್ರಕ್ರಿಯೆ ಇಲ್ಲಿ ನಡೆದಿರುವುದನ್ನು ಕಾಣಬಹುದು. ಇನ್ನೂ 'ಹಗುರ' ಎಂಬ ಗ್ರಾಂಥಿಕ ಕನ್ನಡ ಪದ ಉತ್ತರ ಕರ್ನಾಟಕ ಭಾಷೆಯಲ್ಲಿ 'ಹೌರಗ' ಎಂಬುದಾಗಿ ಬಳಕೆಯಾಗಿರುವುದು ಈ ಕಥೆಯಿಂದ ತಿಳಿದು ಬರುತ್ತದೆ.

ಉತ್ತರ ಕರ್ನಾಟಕದ ಭಾಷೆ ರವಿಯವರ 'ಮೈಕು' ಕಥೆಯಲ್ಲಿ ಹೆರಳವಾಗಿ ಬಳಕೆಯಾಗಿದೆ. ಕಥೆಯ ಕೇಂದ್ರ ಪಾತ್ರ ವೀರ ಸಂಗಣ್ಣ ನಾಗಪ್ಪ ಹೂಗಾರ ಎಂಬ ಹೆಸರೇ ಉತ್ತರ ಕರ್ನಾಟಕದ ವ್ಯಕ್ತಿಯನ್ನು ಪ್ರತಿನಿಧಿಸುತ್ತದೆ. ಹುಬ್ಬಳ್ಳಿಯಲ್ಲಿಯೇ ಇಡೀ ಕಥೆ ಘಟಿಸುವುದರಿಂದ ಅಲ್ಲಿಯ ಭಾಷೆಯ ಸೊಗಸು ಇಲ್ಲಿ ಅಕ್ಷರವಾಗಿ ರೂಪುಗೊಂಡಿದೆ. 'ಪಾ.ವೆಂ. ಹೇಳಿದ ಕಥೆ'ಯಂತೆಯೇ ಇಲ್ಲಿಯೂ ಕಥೆಯ ಪಾತ್ರ ಮಾತನಾಡುವ ಸಂಭಾಷಣೆಯಲ್ಲಿ ಪ್ರಾದೇಶಿಕ ಭಾಷೆ ಬಳಕೆಯಾಗಿದೆಯೇ ಹೊರತು ಕಥೆಗಾರ ನಿರೂಪಿಸುವ ಗ್ರಾಂಥಿಕ ಭಾಷೆಯಲ್ಲಿ ಅಲ್ಲ. ಇದು ರವಿಯವರ ಎಲ್ಲಾ ಕಥೆಗಳಿಗೂ ಅನ್ವಯಿಸುತ್ತದೆ. ಆದರೆ ಭಾಷೆಯಲ್ಲಿ ಅವರು ಕ್ಲಿಷ್ಟ ಪದಗಳ ಬಳಕೆಯಿಂದ ಭಾಷಾ ಪಾಂಡಿತ್ಯವನ್ನು ಎಲ್ಲೂ ತೋರುವುದಿಲ್ಲ. ಸರ್ವೆ ಸಾಮಾನ್ಯ ಭಾಷೆಯನ್ನು ಸರಳವಾಗಿ ಪ್ರಸ್ತುತಪಡಿಸುತ್ತಾ ಸಾಗುತ್ತಾರೆ. ರವಿಯವರ ಕಥೆಗಳಲ್ಲಿ/ಬರಹಗಳಲ್ಲಿ ಉತ್ತರ ಕರ್ನಾಟಕದ ಭಾಷೆಯೂ ಅಲ್ಲದ, ಬಳ್ಳಾರಿ ಕನ್ನಡವೂ ಅಲ್ಲದ ಗ್ರಾಂಥಿಕ ಕನ್ನಡವೇ ನಿರೂಪಣೆ ಭಾಷೆ (ಪಾತ್ರಗಳು ಸಂಭಾಷಿಸುವ ಭಾಷೆಗೆ ಪೂರಕವಾಗಿ ಕಥೆಗಾರ ಬಳಸುವ ಭಾಷೆ)ಯಾಗಿ ಬಳಕೆಯಾಗಿದೆ. ಬಳ್ಳಾರಿ ಪರಿಸರದವರೇ ಆದ 'ಕುಂ.ವೀರಭದ್ರಪ್ಪ'ನವರೂ ಕಥೆಗಾರರು, ಕಥೆಯ ಪಾತ್ರಗಳು ಸಂಭಾಷಿಸುವ ಭಾಷೆ ಹಾಗೂ ಕಥೆಯ ನಿರೂಪಣೆಯ ಭಾಷೆ ಇವೆರಡನ್ನೂ ಒಂದೇ ಭಾಷೆಯನ್ನಾಗಿ ಬಳಕೆ ಮಾಡುವುದನ್ನೂ ಗಮನಿಸಬಹುದು. ಸಾಮಾನ್ಯವಾಗಿ ಇಂತಹ ಕಥೆಗಳು ಪ್ರಾದೇಶಿಕ ಅಥವಾ ಗ್ರಾಮೀಣತೆಯ ಸೊಗಡಿನಿಂದ ಕೂಡಿರುತ್ತವೆ.

ರವಿಯವರು ಕಥೆಯ ನಿರೂಪಣೆಗೆ ಗ್ರಾಂಥಿಕ ಕನ್ನಡವನ್ನು ಬಳಸಿದರೂ ಅದು ಅವರ ಬರವಣಿಗೆಯಲ್ಲಿ ಇಳಿದ ಕೂಡಲೇ ವಿಶಿಷ್ಟ ಕನ್ನಡವಾಗಿ ಬಳಕೆಯಾಗುತ್ತದೆ. ಏಕೆಂದರೆ ಇವರ ಬಹುತೇಕ ಬರಹಗಳಲ್ಲಿ ಇಂಗ್ಲೀಶ್, ಉರ್ದು, ತೆಲುಗು, ಹಿಂದಿ ಪದಗಳು, ವಾಕ್ಯಗಳು ಸಂಭಾಷಣೆ ಮತ್ತು ನಿರೂಪಣೆಯಲ್ಲಿಯೂ ಬಳಕೆಯಾಗಿವೆ. 'ಮೈಕು' ಕಥೆ ಉತ್ತರ ಕರ್ನಾಟಕದ ಭಾಷೆಯನ್ನು ಒಳಗೊಂಡಿದ್ದರೂ ಇಂಗ್ಲೀಶ್‌ನಿಂದ ಬಿಡುಗಡೆ ಹೊಂದಿಲ್ಲ. ಇಲ್ಲಿ ಇಂಗ್ಲೀಶ್‌ನ ಅನೇಕ ಪದಗಳು ಬಳಕೆಯಾಗಿವೆ. ಹಾಗೆ ನೋಡಿದರೆ ಈ ಕಥೆಯ ತಲೆ ಬರಹವೇ ಒಂದು ಇಂಗ್ಲಿಶ್ ಪದ. ಪಾರ್ಕ್, ಬಸ್ಸ್ಟ್ಯಾಂಡ್, ಅನೌನ್ಸ್‌ಮೆಂಟ್, ಕಂಟ್ರೋಲ್ ರೂಂ. ವಾಟ್ ಈಸ್ ಲೈಫ್, ಷೋಕಾಸ್, ಎನ್‌ಕ್ವೈರಿ, ಡ್ಯೂಟಿ ಇತ್ಯಾದಿ ಇಂಗ್ಲೀಶ್ ಪದಗಳ ಬಳಕೆ ಈ ಕಥೆಯಲ್ಲಿದೆ. ಅಲ್ಲದೆ ನಿರೂಪಣೆಯು ನುಡಿ ಬೆರೆಕೆಯಿಂದ ಮುಕ್ತವಾಗಿಲ್ಲವೆಂಬುದು ಮುಂದಿನ ನಿರೂಪಣೆಯ ಮೂಲಕ ಕಂಡುಬರುತ್ತದೆ.

'ಈ ಎಲ್ಲಾ ಹುಚ್ಚಾಟ ಸಹಿಸಲು ಸಾಧ್ಯವೇ ಇಲ್ಲವೆಂದು ನಿರ್ಧರಿಸಿದ ಅಧಿಕಾರಿಗಳು ವೀರ ಸಂಗಪ್ಪನಿಗೊಂದು ಮೆಮೋ ಕೊಟ್ಟರು. ಅದಕ್ಕೆ ಉತ್ತರ ಬರಲಿಲ್ಲ. ಷೋಕಾಸ್ ನೋಟೀಸು ಕೊಟ್ಟರು. ಅದನ್ನೂ ವೀರ ಸಂಗಪ್ಪ ಓದಲೂ ಇಲ್ಲ. ಎನ್‌ಕ್ವೈರಿಗೆ ಕರೆದರು; ಅವನು ಬರಲಿಲ್ಲ. ಆದರೆ ಒಂದು ದಿನ ಸಂಜೆ ಡ್ಯೂಟಿ ಮುಗಿಸಿ ಹೋಗುವ ಮುನ್ನ ಕಂಟ್ರೋಲರ್ ಸಾಹೇಬರ ಮುಂದೆ ನಿಂತು...'[೪] 'ಕಂಟ್ರೋಲ್ ರೂಮಿನ ಮೈಕಿಗೂ, ತಾಡ್ ಸ್ಪೀಕರಿಗೂ ಕನೆಕ್ಷನ್ ತಪ್ಪಿಸಲಾಗಿತ್ತು ಎಂಬ ಸತ್ಯ ಅರ್ಥವಾದ ಅನಂತರ ವೀರಸಂಗಪ್ಪ ಬಸ್ಸ್ಟ್ಯಾಂಡಿಗೆ ಹೋಗಲಿಲ್ಲ. ಪಾರ್ಕಿನಲ್ಲಿ ಕುಳಿತು ಅವನಾಡುವ ಮಾತುಗಳು ಜನತೆಗೆ ಕೇಳಿಸಲಿಲ್ಲ.[೫]

ಉತ್ತರ ಕರ್ನಾಟಕ ಭಾಷೆಯನ್ನು ಒಳಗೊಂಡ ಮತ್ತೊಂದು ಕಥೆಯೆಂದರೆ 'ವಿತಥ'. ಕಥಾನಾಯಕಿ ಅನಸೂಯಾಳ ಗಂಡ ಅಜ್ಜಿಯ ತಂದೆ ಹಾಸಿಗೆ ಹಿಡಿದಿದ್ದು, ಅವನು ಬಡಬಡಿಸುವ ರೀತಿಯನ್ನು ಗಮನಿಸಬಹುದು. 'ಅನಸೀ ಬಾರೇ... ಉಚ್ಚಿ ಹೊಯ್ಕಂಡೀನೀ, ಎತ್ತು ಬಾರೇ, ಬೆನ್ನ ಬುಡಕ ನೀರು ಹೋಗ್ಯಾವೆ... ಸಿಪ್ಪೀ ಸುಲೀತದ ಸಿಪ್ಪೀ! ನಾಗರ ಹಾಂವಿನ ಸಿಪ್ಪೀ ಹಾಂಗ ಮೈಯ್ಯೆಲ್ಲಾ ಸುಲ್ದು ಹೋಗ್ತದ ಎತ್ತು ಬಾರೇ! ಇದ್ದಕ್ಕಿದ್ದಂತೆ ಮುದುಕ ವದರ ತೊಡಗಿದ.'[೬] ಈ ಸಂಭಾಷಣೆಯಲ್ಲಿನ ಪದಗಳನ್ನು ಗ್ರಾಂಥಿಕ ಪದಗಳೊಂದಿಗೆ ಹೋಲಿಕೆ ಮಾಡಿ ನೋಡಿದಾಗ ವ್ಯತ್ಯಾಸ ತಿಳಿಯುತ್ತದೆ. ಉತ್ತರ ಕರ್ನಾಟಕದಲ್ಲಿನ 'ಇ' ಕಾರಾಂತ್ಯ ಬಳಕೆಯಾದರೆ, ಗ್ರಾಂಥಿಕ ಕನ್ನಡದಲ್ಲಿ 'ಎ' ಕಾರಾಂತ್ಯ ಇರುವುದನ್ನು ಕಾಣಬಹುದು. ಗ್ರಾಂಥಿಕ ಕನ್ನಡದ 'ಎ' ಕಾರಾಂತ್ಯ ಇಲ್ಲಿ 'ಇ' ಕಾರಾಂತ್ಯವಾಗಿರುವುದನ್ನು ಈ ಸಂಭಾಷಣೆಯಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಗ್ರಾಂಥಿಕ ಕನ್ನಡದ ಸಿಪ್ಪೆ, ಉಚ್ಚೆ, ಮನೆ, ಮುಂತಾದ ಪದಗಳು, ಉತ್ತರ ಕರ್ನಾಟಕದ ಪ್ರಾದೇಶಿಕ ಬಳಕೆಯಲ್ಲಿ ಸಿಪ್ಪಿ, ಉಚ್ಚಿ, ಮನಿ ಪದಗಳಾಗಿ ಪರಿವರ್ತಿತವಾಗಿವೆ. ಅದರಂತೆಯೇ ಗ್ರಾಂಥಿಕ ಕನ್ನಡದ ಅವನು, ಇವನು ಎಂಬ ಸರ್ವನಾಮಗಳು ಇಲ್ಲಿ ಅಂವ, ಇಂವ ಎಂಬುದಾಗಿ 'ನಾಗರಹಾವು' ಎಂಬ ಪದ 'ನಾಗ್ರಹಾಂವು' ಎಂದಾಗಿರುವುದನ್ನು ಗಮನಿಸಬಹುದು.

ಉತ್ತರ ಕರ್ನಾಟಕದ ಭಾಷೆಯನ್ನು ಒಳಗೊಂಡು ಮತ್ತೊಂದು ಕಥೆ 'ದಾರಿ' ಹೋಟೆಲು ಕಾರ್ಮಿಕರ ಶೋಷಣೆಯನ್ನೊಳಗೊಂಡ ಈ ಕಥೆ ಹುಬ್ಬಳ್ಳಿಯ ಹೋಟಲೊಂದರಲ್ಲಿ ನಡೆಯುವುದರಿಂದ ಅಲ್ಲಿನ ಭಾಷೆ ಸಹಜವಾಗಿ ಕಥೆಯಲ್ಲಿ ಅಕ್ಷರ ರೂಪ ಪಡೆದಿದೆ. 'ಲೇ ತಮ್ಮಗೋಳ್ರಾ... ಬ್ಯಾರೆ

ಏನೂ ಕೆಲ್ಸ ಇಲ್ಲಾಗ ಮಾತಾಡೀರಂತೆ! ಹೀಂಗ ಗಿರಾಕಿ ಬರೂ ಹೊತ್ನ್ಯಾಗ ಮಾತಾಡಿಕೋತ ನಿಂತ್ರ ಕೆಲಸ ಆಗೂದಿಲ್ಲ. ನಡ್ರಿ ನಡ್ರಿ ಕೆಲಸ ನೋಡ್ರಿ’ ಎಂದು ಅಗಲ ಮೀಸೆಯವನು ಗದರಿದಾಗ ನಾವು ಗೊಣಗುತ್ತಾ ಚದುರಿದ್ದೆವು. ರಾತ್ರಿ ಕಬಡ್ಡಿ ಮುಗಿದ ಮೇಲೆ ಎಲೆ ತಿನ್ನಲು ಹೋದಾಗ ಶಂಕ್ರು ಅಂದಿದ್ದ.

‘ಮೀಸಿ ಬಿಟ್ಕೊಂಡು ಗದರಿಸ್ತಿದ್ನಲ್ಲ? ಆ ಮಿಂಡ್ರಿಗ್ಹುಟ್ಟಿದೋನೆಸ್ರು ಪಟ್ಟಣ ಶೆಟ್ಟೀ ಅಂತ. ಮದ್ಲು ಇಲ್ಲೇ ಸಪ್ಲೈಯರಾಗಿದ್ದ. ಮದ್ವಿ ಆದ್ಮ್ಯಾಲ ಮ್ಯಾನೇಜರಾಗ್ಯಾನ. ಅವನ್ಹೆಂಡ್ತಿ ಮತ್ತು ನಮ್ ಸಾವ್ಕಾರ ‘ಜಾಯಿಂಟ್!’ ತನ್ನ ಎರಡೂ ಕೈ ತೋರು ಬೆರಳುಗಳನ್ನು ಕೊಕ್ಕೆಯಂತೆ ಮಾಡಿ ತೋರಿಸಿದ್ದ ಶಂಕ್ರು’[೭] ದಾರಿ ಕಥೆಯ ಸಂಭಾಷಣೆಯು ಸಂಪೂರ್ಣವಾಗಿ ಉತ್ತರ ಕರ್ನಾಟಕದ ಭಾಷೆಯೇ ಆಗಿದೆ. ಈ ಹಿಂದಿನ ಕಥೆಗಳ ಸಂಭಾಷಣೆಯಲ್ಲಿ ಮಾಡಿದ ಭಾಷೆಯ ಬಗೆಗಿನ ಚರ್ಚೆಯ ಅಂಶಗಳು ‘ದಾರಿ’ ಕಥೆಯ ಭಾಷಿಕ ಅಂಶಕ್ಕೂ ಅನ್ವಯಿಸುತ್ತವೆ.

ಮೂಲತಃ ಬಳ್ಳಾರಿಯವರೇ ಆದ ರವಿ ಬೆಳಗರೆಯವರು, ತಮ್ಮ ಕಥೆಗಳಲ್ಲಿ ಬಳ್ಳಾರಿ ಪರಿಸರದ ಪ್ರಾದೇಶಿಕ ಭಾಷೆಯನ್ನು ಬಳಸಿದ್ದಾರೆ. ಮುಖ್ಯವಾಗಿ ಹೆಸರಿಸುವಂತಹವು. ವಂಧ್ಯಾ, ಹಂತ, ವೇಷಗಳು, ನೆರಳು, ಗಿಡ್ಡಾಂಜನೇಯ ಸ್ವಾಮಿ, ಕೊನೆ ಈ ಕಥೆಗಳಲ್ಲಿ ಬರುವ ಪಾತ್ರಗಳ ಸಂಭಾಷಣೆಯಲ್ಲಿ ಬಳ್ಳಾರಿ ಪರಿಸರದ ಪ್ರಭಾವವನ್ನು ಕಾಣಬಹುದು. ಗಿಡ್ಡಾಂಜನೇಯ ಸ್ವಾಮಿ ಬಳ್ಳಾರಿ ನಗರದ ಕಥೆಯಾದ್ದರಿಂದ ಅಲ್ಲಿನ ಸಂಭಾಷಣೆ ಬಳ್ಳಾರಿಯ ಭಾಷೆಯಲ್ಲಿಯೇ ರಚಿತವಾಗಿವೆ.

ಜೋಗಪ್ಪ ಜೋಗತಿಯರ ಕರಾಳ ಬದುಕನ್ನು ಚಿತ್ರಿಸುವ ಕಥೆ ‘ಹಂತ’. ಇಡೀ ಕಥೆ ಘಟಿಸುವುದು ಬಳ್ಳಾರಿ ಜಿಲ್ಲೆಯ ಹೊಸಪೇಟೆ ಹತ್ತಿರದ ಹುಲಿಗಿಯಲ್ಲಿ. ಆ ಕಾರಣ ಬಳ್ಳಾರಿ ಪರಿಸರದ ಭಾಷೆ ಇಲ್ಲಿ ಸಹಜವಾಗಿ ಬಂದಿದೆ. ಕಥೆಯಲ್ಲಿನ ಪಾತ್ರಗಳು ಆಡುವ ಮಾತನ್ನು ಗಮನಿಸಿದಾಗ ಬಳ್ಳಾರಿ ಭಾಷೆಯ ವೈಶಿಷ್ಟ್ಯತೆ ಕಂಡುಬರುತ್ತದೆ.

‘ಪ್ಚ್... ಪ್ಚ್... ಪಾಪ ಜೋಗಮ್ಮನ್ನ ಕೊಂದಾಕಿ ಬಿಟ್ಟಾರಲೇ ಕಳ್ರು! ಅಲ್ಲೋ ಯಪ್ಪಾ, ಈ ದಾರ್ರ್ಯಾಗ್ ಯಾಕ್ ಬಂದಿದ್ದೀಯಾದೀತು? ಇಲ್ಲಿ ಕಳ್ರ ಕಾಟ ಐತೆಂತ ಗೊತ್ತಿಲೇನಪ್ಪಾ? ಓಗ್ಲಿ ಬಿಡು ಎದ್ದೇಳು. ಸತ್ತೋದಾಕಿ ಪುಣ್ಯಾತಗಿತ್ತಿ. ಆ ಏಳುಗುಡ್ಡದ ಯಲ್ಲಮ್ಮನ್ನೇ ಸ್ವಂತ ಮಗ ಪರಶಿರಾಮ ಕಡ್ಡಾಕ್ದಿ ಬುಟ್ನಂತೆ! ನಮ್ಮಂತಾ ಮನಿಶಾರ್ದೇನೈತೆ? ಏಳು ಏಳು.. ಪಾಪ ಮಗಳಿನ್ನಾ ಸಣ್ಣಾಕಿ ಅದಾಳಾ, ಆಯಮ್ಮನ್ನೇ ಬೇಸು ಜ್ವಾಪಾನ ಮಾಡು, ಏಳು! ಎಂದನೊಬ್ಬ. ಫಕೀರಪ್ಪ ಅಳುತ್ತಲೇ ಇದ್ದ.’[೮]

‘ನೋಡು ಯೆಂಕ್ಟ, ನನ ಮಗಳಂತ ನಾನೇನು ಹೇಳಿಕ್ಯಾಂಬಾದಿಲ್ಲ. ನನ್ಹೆಂಡ್ತಿ ಸತ್ತಾಗ ಈಕಿ ಆರು ವರಸದಾಕಿ, ಆವಾಗಿಂದ ಜೋಪಾನ ಮಾಡಿಕ್ಯಂತ ಬಂದೀನಿ. ಇಲ್ಲೇ ವುಲಿಗ್ಯಾಗೆ ಬಾಳೇವು ಮಾಡಿದ್ರ ಸೈತ ಕೆಟ್ಟಲ್ಲ. ಭಾಳ ಶೀಲವಂತೆ ಉಡುಗಿ, ಬರಾ ತಿಂಗಳ ಜಾತ್ರ್ಯಾಗ ಎಂಗಾರ ಮಾಡಿ ಮುತ್ತು ಕಟ್ಟಿಸಾಣ ಅಂತ ಅದೀನಿ. ಇನ್ನ ಅದಾದ ಮೇಲೆ ಎಂಗಿದ್ರೇನಂತೆ? ನಿನಗ್ಯಾರರ ಛಲೋ ಮನಿಷಾ ಗೊತ್ತಿದ್ರ ನೋಡು, ರೊಕ್ಕಸ್ತ ಆಗಿರ್ಬೇಕು, ಜಾತ್ರಿಗೆ ಬಂದು ಬಿಡ್ಲಿ, ಎಲ್ಡು ನೈಲಾನ ಸೀರಿ ಇನ್ನೂರು ರೂಪಾಯಿ ಕೊಟ್ಟು ಅದ್ನೈದು ದಿನ ಇಲ್ಲೇ ಇದ್ದು ಓಗ್ಲಿ. ರೊಕ್ಕ ಮಾತ್ರ ಮೊದಲಾ ಕೊಡಬೇಕು.’[೯]

ಮೇಲಿನ ಸಂಭಾಷಣೆಯಲ್ಲಿರುವ ಕೆಲವು ಪದಗಳು ಉತ್ತರ ಕರ್ನಾಟಕದ ಭಾಷೆಯಂತೆ ಧ್ವನಿಸಿದರೂ, ಆ ಭಾಷೆಗಿಂತ ಬಳ್ಳಾರಿ ಭಾಷೆ ತುಂಬ ವಿಭಿನ್ನವಾಗಿದೆ. ಬಳ್ಳಾರಿಯ ಭಾಷೆಯಲ್ಲಿ ಕಂಡುಬರುವ ಮೊದಲ ಲಕ್ಷಣವೇ ಅಲ್ಪ ಪ್ರಾಣ-ಮಹಾಪ್ರಾಣಗಳ ಬಳಕೆ. ಬಳ್ಳಾರಿ ಪರಿಸರದ ದೈನಂದಿನ ಜನಜೀವನದಲ್ಲಿ ಮಾತಾಡುವಾಗ ಮಹಾಪ್ರಾಣಗಳ ಬಳಕೆ ತುಂಬಾ ವಿರಳ ಎಂಬುದನ್ನು 'ಹಂತ' ಕಥೆಯಲ್ಲಿನ ಸಂಭಾಷಣೆಯ ಮೂಲಕ ಗುರುತಿಸಬಹುದು.

ಐತಿ, ಬೇಸು, ಹೇಳಿಕ್ಯಾಂಬಾದಿಲ್ಲ, ರೊಕ್ಕ ಸೈತ ಎಂಗಾರ ಮುಂತಾದ ಬಳ್ಳಾರಿ ಪ್ರದೇಶದ ಕೆಲವು ವಿಶಿಷ್ಟ ಪದಗಳು 'ಹಂತ' ಕಥೆಯಲ್ಲಿ ಕಂಡುಬರುತ್ತವೆ. ಕಥೆಯ ವಸ್ತುವೇ ಬಳ್ಳಾರಿ ಪ್ರದೇಶವಾದ್ದರಿಂದ ಅನೇಕ ಪದಗಳು ಕಥೆಯಲ್ಲಿ ಮಿಳಿತವಾಗಿವೆ. ಬಳ್ಳಾರಿ ಪರಿಸರದ ಭಾಷೆಯನ್ನೊಳಗೊಂಡ ಮತ್ತೊಂದು ಕಥೆಯೆಂದರೆ 'ಗಿಡ್ಡಾಂಜನೇಯ ಸ್ವಾಮಿ'.

ತೋರಿಸಿಕೊಂಡು ಬರಾದು ಆಮ್ಯಾಲಿನ ಮಾತು. ಮೊದಲು ಮನ್ಯಾಗಿನ ಪರಿಸ್ಥಿತಿ ಹೇಳು. ಮದ್ವಿ ಬಂದು ಎಂಟಾದವು ವರ್ಷ. ಒಂದ್ಕಡೆ ಜಾತ್ರಿ, ಒಂದು ಪರಿಸೆ, ಒಂದು ದೇವರು, ಒಂದು ತಿರುಗಾಟ-ಎಲ್ಲಿಗನ್ನ ಕರ್ಕಂಡು ಓದಿಗ್ಯಾ? ಇದ್ದಷ್ಟು ದಿವಸ ನಿಮ್ಮಜ್ಜಿಗೆ ಮಾಡಿದೆ ಸೇವೆ, ಸತ್ಲಲ್ಲಾ ಶಿವನೇ ಅಂತ ಉಸುರು ಬಿಡಂಬದರೊಳಗಾಗಿ ನಿಮ್ಮಪ್ಪಂಬಾತ ತೀರಿಕೊಂಡ. ಆಯ್ತು ಬಿಡೂ, ಅವರವರ ಪುಣ್ಯ. ಒರಿಸಿಕ್ಕೊಂಡು ಒಂದಷ್ಟು ದಿನ ಇರ್ತಾರ. ಸಂಜೀ ಮುಗುದ ಮ್ಯಾಲೆ ಹೋಗ್ತಾರ. ಹೋಗ್ಲಿ ಇವಾಗ ನೋಡು ಸೋಲು ಕುಂತು, ಉಂಡು, ಅಡ್ಡಾಡಿ ಸುಖ ಪಡಾ ಕಾಲ. ನನ್ ತಾಯಿ ಅಂಬೋಳು ಜತೀಗಿದ್ರೆ ನನಿಗೂ ಕೆಲಸ ಕಡಿಮೆ. ಕೇಳಿದ್ದು ಮಾಡಿಹಾಕ್ತಾಳ. ಉಂಡು, ಸೊಲ್ಪ ಮೈ ಬಿಟ್ರೆ ನನಗೂ ಆಗದೆ ಇರ್ತದಾ ಮಕ್ಕಳೂ? ಮಾತೆತ್ತಿದ್ರೆ ಡಾಕ್ಟ್ರಿಗೆ ತೋರಿಸಿಕಂಡು ಬಾ. ಅವರಿಗೆ ತೋರಿಸಿಕಂಡು ಬಾ ಅಂತೀದಿ. ನೀನು ಯಾವತ್ತನ್ನ ಸನೇಕ ಬಂದು, ಒಂದು ರಾತ್ರಿ, ಒಂದು ಮಧ್ಯಾಹ್ನ ಇಂಥದ್ದು ಬೇಕು ಅಂತ ಕೈ ಚಾಚೀಯಾ? ಮೈ ಮಡಿಚೀಯಾ? ನಿನಿಗೆ ನಿಂದೇವಲ್ಲರಿ. ನನ್ಮಾತು ಕೇಳು, ಅಮ್ಮ ಇಲ್ಲಿ ಇವಾಗಿರೋ ಹಂಗೇ ಇರ್ಲಿ. ನಾಳೆ ನನಿಗೂ ಮಕ್ಕಳಾಗತಾವೆ. ಆಗದಂಗಿರ್ತಾವಾ? ಇದ್ದು ನೋಡಿಕ್ಕಂತಾಳೆ... ನೀನು ಸುಮ್ನೆ ತರಕಾರು ತೆಗೀಬ್ಯಾಡ ನಡೀ. ನಾನು ದೇವರಿಗೆ ಸಣದು ಬರ್ತೀನಿ' ಅಂದಿದ್ದಳು.'[೧೦] ಈ ಸಂಭಾಷಣೆಯಲ್ಲಿಯೂ ಸಹ ಮಹಾಪ್ರಾಣದ ಬದಲಾಗಿ ಅಲ್ಪಪ್ರಾಣ ಬಳಸಿರುವುದನ್ನು ಕಾಣುತ್ತೇವೆ. ಗ್ರಾಂಥಿಕ ಕನ್ನಡದ ಅನೇಕ ಪದಗಳು ಬಳ್ಳಾರಿ ಪರಿಸರದಲ್ಲಿ ವಿಭಿನ್ನ ರೀತಿಯ ರೂಪಾಂತರ ಹೊಂದಿರುವುದನ್ನು ಗಿಡ್ಡಾಂಜನೇಯ ಸ್ವಾಮಿ ಕಥೆಯ ಮೂಲಕ ಕಂಡುಕೊಳ್ಳಬಹುದು.

**ಗ್ರಾಂಥಿಕ ಕನ್ನಡ :** ಮದುವೆ, ಸಂಜೆ, ಸ್ವಲ್ಪ, ಎನ್ನುವವಳು/ನು ಜೊತೆಯಲ್ಲಿದ್ದರೆ ಯಾವತ್ತಾದರೂ, ಸನಿಹಕ್ಕೆ, ದೋಚಿದ್ದೀಯಾ, ನಮಿಸು, ಅವನೇನು ಮುಂತಾದವು.

**ಬಳ್ಳಾರಿ ಕನ್ನಡ :** ಮದ್ವಿ, ಸಂಜಿ, ಸೋಲುಪ/ಸೊಲ್ಪ, ಅಂಬೋಳು/ನು, ಜತೀಗಿದ್ರೆ, ಯಾವತ್ತನ, ಸನೇಕ, ಸಣದು, ಆತೇನು ಮುಂತಾದವು.

ವಂಧ್ಯಾ, ವೇಷಗಳು, ನೆರಳು, ಸ್ವಲ್ಪ ಮಟ್ಟಿಗೆ, ಕೊನೆ ಇವೆಲ್ಲ ಕಥೆಗಳಲ್ಲಿ ಬಳ್ಳಾರಿ ಪರಿಸರದ ಭಾಷೆಯನ್ನೇ ಬಳಸಿಕೊಳ್ಳಲಾಗಿದೆ. ಗ್ರಾಂಥಿಕ ಕನ್ನಡ ಬಳ್ಳಾರಿಗರ ಭಾಷೆಯಲ್ಲಿ ಉಂಟಾಗುವ ಬೇರೊಂದು ತರಹದ ಉಚ್ಚಾರಣೆಯ ಪದಗಳನ್ನು ಅಂದರೆ ಪ್ರಾದೇಶಿಕತೆಯನ್ನು ರವಿಯವರು

ತಮ್ಮ ಕಥೆಗಳಲ್ಲಿ ತುಂಬಾ ನೈಜವಾಗಿ ತಂದಿದ್ದಾರೆ. ಇದನ್ನು ಅವರ ಅಂಕಣ ಬರಹಗಳಲ್ಲಿಯೂ (ಖಾಸ್‌ಬಾತ್ ಮತ್ತು ಬಾಟಮ್‌ಐಟಮ್) ಕಾಣಬಹುದು. ಅದನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

ರವಿಯವರ ಕಥೆಗಳಲ್ಲಿ ಗಮನ ಸೆಳೆಯುವ ಪ್ರಮುಖ ಅಂಶವೆಂದರೆ ಇಂಗ್ಲೀಶ್ ಭಾಷೆಯ ಯಥೇಚ್ಛವಾದ ಬಳಕೆ. ಅವರ ಅನೇಕ ಬರಹಗಳಲ್ಲಿ ಇಂಗ್ಲೀಶ್ ಪದಗಳು ಮತ್ತು ವಾಕ್ಯಗಳು ಬಳಸಿರುವುದನ್ನೂ ಕಾಣಬಹುದು. ಒಂದು ರೀತಿಯಲ್ಲಿ ಅದು ಅವರ ಬರವಣಿಗೆಯ ವಿಶೇಷತೆ (Style) ಎಂದು ಹೇಳಬಹುದು. ಓದುಗರನ್ನು ಹಿಡಿದಿಡಲು ರವಿಯವರು ಈ ರೀತಿಯ ತಂತ್ರವನ್ನು ರೂಢಿಸಿಕೊಂಡಿರಬಹುದು. ಏಕೆಂದರೆ ಅವರು ಬಳಸುವ ಅನ್ಯಭಾಷಾ ಪದಗಳು ಕ್ಲಿಷ್ಟವಾದವೇನೂ ಅಲ್ಲ. ಸಾಮಾಜಿಕ ವಲಯದಲ್ಲಿ ಅತ್ಯಂತ ಹೆಚ್ಚು ಬಳಕೆಯಿರುವಂತವು. ಇನ್ನೂ ಸರಳವಾಗಿ ಹೇಳುವುದಾದರೆ ಜನ ಸಾಮಾನ್ಯರು ಬಳಸುವ ಪದಗಳನ್ನೇ ಅವರು ತಮ್ಮ ಬರಹಗಳಲ್ಲಿ ತರುತ್ತಾರೆ. ಸಾಮಾನ್ಯವಾಗಿ ಅವರ ಬರಹ ಆಡುಮಾತಿನ ರೂಪದಲ್ಲೇ ಇರುವುದರಿಂದ ಆ ಬರಹಗಳನ್ನು ಓದಿದ ಅನುಭವಕ್ಕಿಂತ ಹೆಚ್ಚಾಗಿ ಯಾರದೊ ಸಂಭಾಷಣೆಯನ್ನು ಶ್ರದ್ಧೆಯಿಂದ ಕೇಳಿಸಿಕೊಳ್ಳುತ್ತಿರುವಂತೆ ಭಾಸವಾಗುತ್ತದೆ. ಇದರಿಂದ ಓದುಗರು ಅವರ ಬರವಣಿಗೆಯೆಡೆಗೆ ಆಕರ್ಷಿಸಿತರಾಗುತ್ತಾರೆ. ಈ ಒಂದು ತಂತ್ರ ರವಿಯವರ ಬರಹಕ್ಕೆ ಸಹಜವಾಗಿಯೇ ವಿಶೇಷತೆಯನ್ನು ಒದಗಿಸಿಕೊಟ್ಟಿದೆ. ಆದರೆ ರವಿಯವರು ಕಥೆಗಳಲ್ಲಿ ಇಂಗ್ಲೀಶನ್ನು ಬಳಸುವಾಗ ತುಂಬಾ ಎಚ್ಚರಿಕೆ ವಹಿಸಿದ್ದಾರೆ. ಏಕೆಂದರೆ ಸಾಹಿತ್ಯದ ಭಾಷೆಗೆ ಒಂದು ಲಕ್ಷಣವಿರುತ್ತದೆ(ಆಯ್ಕೆ ಮಾಡಿಕೊಂಡಿರುವ ವಸ್ತುವಿಗೆ ಅನುಗುಣವಾಗಿ). ಒಂದು ವಸ್ತು ಯಥೇಚ್ಚವಾಗಿ ಇಂಗ್ಲೀಶ್ ಭಾಷೆಯನ್ನು ಬಯಸಬಹುದು, ಇನ್ನೊಂದು ಬಯಸದೆ ಇರಬಹುದು. ಇಲ್ಲಿ ವಿತಥ, ವಂಧ್ಯಾ, ಹಂತ, ಭ್ರೂಣ ಸಂಭಾಷಣೆ, ಮೀನಾರುಗಳ ಊರಿನಲ್ಲಿ ಅವರು, ನೆರಳು ಕಥೆಗಳೆಲ್ಲವೂ ಇಂಗ್ಲೀಶ್‌ನಿಂದ ಮುಕ್ತವಾಗಿವೆ. ವಸ್ತುವಿಗೆ ಅನುಸಾರವಾಗಿ ಇಂಗ್ಲೀಶ್ ಭಾಷೆಯನ್ನು ತಂದಿದ್ದಾರೆ. ಈ ಹಿಂದೆ ಹೇಳಿದಂತೆ ಇದು ಅವರ ವಿಶಿಷ್ಟ ಶೈಲಿ(Style)ಯೂ ಹೌದು. ಜೊತೆಗೆ ಪತ್ರಿಕೋದ್ಯಮದಲ್ಲಿ ಮಿಶ್ರ ಭಾಷೆಯನ್ನು ತರುವುದರ ಮುಖ್ಯ ಉದ್ದೇಶ ಓದುಗರನ್ನು ಆಕರ್ಷಕವಾಗಿ ಮತ್ತು ನೇರವಾಗಿ ತಲಪುವುದು. ಹೀಗಾಗಿ ಇಂಗ್ಲೀಶ್ ಮಿಶ್ರಿತ ಪ್ರಾದೇಶಿಕ ಭಾಷೆ ಪತ್ರಿಕಾ ಬರವಣಿಗೆಯಲ್ಲಿ ಸಾಮಾನ್ಯ. ಒಟ್ಟಿನಲ್ಲಿ ಅದು ಓದುಗರ ಮನಸ್ಸಿಗೆ ಮುಟ್ಟಬೇಕು. ಈ ವಿಶಿಷ್ಟ ಶೈಲಿಗೆ ಅವರ ವೃತ್ತಿಯೂ ಪರೋಕ್ಷವಾಗಿ ಪ್ರಭಾವ ಬೀರಿರಬಹುದು.

ಕುಹು ಕುಹರ, ವೇಷಗಳು, ಪಾ.ವೆಂ. ಹೇಳಿದ ಕಥೆ, ಆಕ್ರಮಣ, ಮಸೀದಿ ಬಿದ್ದ ಮೂರನೇ ದಿನ, ಕಥೆಗಳಲ್ಲಿ ಅಲ್ಪ ಮಟ್ಟಿಗಿನ ಇಂಗ್ಲೀಶ್ ಭಾಷೆಯ ಪದಗಳು ಬಳಕೆಯಾಗಿವೆಯಾದರೂ ವಿರಳವೇ. ಶಾಲಿನಿ, ಕೊನೆ, ಹೀಗೊಬ್ಬಳು ಸೀತಾದೇವಿ, ಬದುಕೊಂಡು ಸತತ ಅಭ್ಯಾಸ ಬರುವನೇನೇ ಸಖಿ ಚೆಲುವ, ದಾರಿ ಮುಂತಾದ ಕಥೆಗಳಲ್ಲಿ ಇಂಗ್ಲೀಶ್‌ನ ದಟ್ಟ ಪ್ರಭಾವವನ್ನು ಕಾಣಬಹುದು.

'ರಾತ್ರಿ ಪಕ್ಕಕ್ಕೆ ಮಲಗಿ ಬಿಕ್ಕಿದ ಶಾಲಿಗೆ `I am sorry' ನಾಚಿಕೆಯಿಂದ ಹೇಳಿದ್ದೆ at least let me adjust..' ಬಿಕ್ಕುತ್ತಲೇ ಹೇಳಿದ ಶಾಲಿನಿಗೆ 'Only you can understand and adjust' ಎಂದು ಹೇಳಿದೆ ಶಾಲಿನಿ ಕಥೆಯ ಈ ಸಂಭಾಷಣೆಯಲ್ಲಿ ಇನ್ನು ಹೆಚ್ಚಿನ ಇಂಗ್ಲೀಶ್ ಪದಗಳು ಕಂಡುಬರುತ್ತವೆ. Inspire, intrest, Resistance, Taste, Free, Expect, Exam, fix ಮುಂತಾದ ಪದಗಳು ಕಥೆಯುದ್ದಕ್ಕೂ ಬರುತ್ತವೆ. ಕಥೆಯಲ್ಲಿ ಈ ಪದಗಳನ್ನು ಇಂಗ್ಲೀಶ್‌ನಲ್ಲಿಯೆ ಬಳಸಲಾಗಿದೆ.

ಇವುಗಳಿಗೆ ಪರ್ಯಾಯ ಕನ್ನಡ ಪದಗಳಿದಾಗ್ಯೂ, ಬಳಸಬಹುದಾದ ಎಲ್ಲಾ ಸಾಧ್ಯತೆಗಳಿದ್ದಾಗ್ಯೂ ಆ ಪ್ರಯತ್ನವನ್ನು ರವಿ ಬೆಳಗೆರೆಯವರು ಮಾಡಿಲ್ಲ. ಯಾಕೆಂದರೆ ಅಲ್ಲಿ ಅವರು ವಿಶೇಷವಾದ 'ಎಫೆಕ್ಟ್' ಕೊಡುವುದಕ್ಕಾಗಿ ಹಾಗೆಯೇ ಬಳಸುತ್ತಾರೆ. ಬಹುಶಃ ಇದನ್ನು ಅವರ ಬರಹಗಾರಿಕೆಯ ತಂತ್ರವೆಂದು ಹೇಳಬಹುದು.

'ಕೊನೆ' ಕಥೆಯಲ್ಲಿಯೂ ವ್ಯಾಪಕವಾಗಿ ಇಂಗ್ಲೀಶ್ ಬಳಕೆ ಮಾಡಲಾಗಿದೆ. ಇದರಲ್ಲಿ ಲೇಖಕರೇ ಒಂದು ಪಾತ್ರವಾಗಿ ಬರುವುದು ಮತ್ತೊಂದು ವಿಶೇಷ. ಅದಕ್ಕಾಗಿ ರವಿ ಬೆಳಗೆರೆ ಹಾಗೂ ಜೋಸೆಫೀನ್ ನಡುವಿನ ಸಂಭಾಷಣೆಯನ್ನು ಗಮನಿಸಬಹುದು.

'ವಿಲ್‌ಯು ಪ್ಲೀಸ್ ಕಾಲ್ ಮಿಸ್ ಜೋಸೆಫೀನ್?' ಅಂದುಬಿಟ್ಟೆ.

'ಸ್ಪೀಕಿಂಗ್!' ಅಂದಳು.

'ನಾನು ಬೆಳಗೆರೆ... ಇವತ್ತು ರಾತ್ರಿ ನನ್ನ ಮನೇಲಿ ಒಂದು ಪಾರ್ಟಿ ಇಟ್ಕೊಂಡಿದೀನಿ, ನನ್ನ ರೈಟರ್ ಫ್ರೆಂಡ್ ಬಂದಿದಾರೆ. ಅಶೋಕ್ ಅಂತ. ಗುಡ್‌ಪೊಯಟ್. ನೀವು ನಮ್ಜೊತೆ ಜಾಯಿನ್ ಆದ್ರೆ ತುಂಬ ಸಂತೋಷವಾಗುತ್ತೆ. ಎಷ್ಟೊಂದು ನಿರರ್ಗಳವಾಗಿ ಧೈರ್ಯವಾಗಿ ಮಾತಾಡಿ ಬಿಟ್ರೆ ಅಂದ್ರೆ...

'ಓಹ್ ಸರ್ಟನ್ಲಿ ಮಿ. ಗೆರೆ. ಖಂಡಿತಾ ಬರ್ತೀನಿ. ಊಟಕ್ಕೇನು ಮಾಡ್ತೀರಿ? ಬೇಕಾದ್ರೆ ನನ್ನ ಮನೇಲಿ ಅಡುಗೆ ಮಾಡಿಕೊಂಡು ಬರ್ತಿನಿ. ಲೆಟ್ಸ್ ಹ್ಯಾವ್ ಎ ನೈಸ್ ಟೈಂ...' ಅಂದಳು ಜೋಸೆಫೀನ್[೧೧] ಈ ಸಂಭಾಷಣೆ ಸಂದರ್ಭ ಇನ್ನೊಂದಿಷ್ಟು ಉದಾಹರಣೆಯನ್ನು ಈ ಕಥೆಯಿಂದ ನೋಡುವುದಾದರೆ

'ಮಿ. ಗೆರೆ... ವಿಲ್‌ಯು ಆಸ್ಕ್ ಯುವರ್ ಗೆಸ್ಟ್ ಟು ಬಿಹೇವ್...' ಅನ್ನುವಷ್ಟರಲ್ಲಿ ಜೋಸೆಫೀನ್‌ಳ ಕೊರಳಸೆರೆಯುಬ್ಬಿ ಬಂದಿದ್ದವು.' 'ನಿಮ್ಮನೇಲಿ ಮಿರ್ಜಾ ಗಾಲಿಬನ ಗಜಲಗಳ ಒಳ್ಳೆ ಕಲೆಕ್ಷನ್ನಿದೆ. ಐ ಲವ್ ಟು ಲಿಸನ್'.

ಹೀಗೆ ಕಥೆಯುದ್ದಕ್ಕೂ ಇಂಗ್ಲೀಶ್ ಪದಗಳು ವಾಕ್ಯಗಳು ಕೊನೆ ಕಥೆಯಲ್ಲಿ ಕಂಡುಬರುತ್ತವೆ. ಆಧುನೀಕರಣಗೊಂಡ ನಗರ ಪ್ರದೇಶದಲ್ಲಿ ಘಟಿಸುವ ಪ್ರೇಮಕತೆಯಾದ್ದರಿಂದ, ಸಹಜವಾಗಿಯೇ ಈ ಕಥೆಯಲ್ಲಿ ಇಂಗ್ಲೀಶ್ ಸ್ಥಾನ ಪಡೆದುಕೊಂಡಿದೆ. ಜೊತೆಗೆ ಕಥೆಯಲ್ಲಿ ಅಜಯಕುಮಾರ್ ಪಾಟೀಲ್‌ನ ಪಾತ್ರದ ಮೂಲಕ ಬಳ್ಳಾರಿಯ ಭಾಷೆಯನ್ನೂ ಬಳಸಿದ್ದಾರೆ ಕಥೆಗಾರರು.

ಕಾಲೇಜು ಕ್ಯಾಂಪಸ್ಸಿನ ಹುಡುಗಿಯೊಬ್ಬಳ ಪ್ರೇಮದ ಪರಿಯನ್ನು ನಿರೂಪಿಸುವ ಕಥೆ ಹೀಗೊಬ್ಬಳು ಸೀತಾದೇವಿ. ಇಲ್ಲಿಯೂ ಯಥೇಚ್ಚವಾಗಿ ಇಂಗ್ಲೀಶ್ ಭಾಷೆಯನ್ನು ಬಳಸಿರುವುದು ಕಂಡುಬರುತ್ತದೆ. ಕಥೆಯಲ್ಲಿನ ಕೆಲವು ಉದಾಹರಣೆಗಳನ್ನು ಗಮನಿಸುವುದರ ಮೂಲಕ ಅದರ ಮನದಟ್ಟು ಮಾಡಿಕೊಳ್ಳಬಹುದು.

'ಅಪರ್ಣಾ.. ವಾಟ್ಸ್ ರಾಂಗ್ ವಿಥ್ ಯೂ?' ಎಂದು ಹೌಹಾರಿದವಳೇ ನನ್ನ ಬಗ್ಗೆ ಅವಳು ವಹಿಸತೊಡಗಿದ ಕಾಳಜಿ ಕಂಡು ಆ ಜ್ವರದಲ್ಲೂ ನಗೆಯುಕ್ಕಿತು'.

'ಹೀ ಈಸ್ ಎ ಟಿಮಿಡ್ ರ್‍ಯಾಸ್ಕೆಲ್. ಅಪರ್ಣಾ' ಧೈರ್ಯವಿಲ್ಲದೋರು ಪ್ರೀತಿಸಬಾರ್ದು ಕಣೇ!' ಇತ್ಯಾದಿ.

'ಬರುವನೇನೆ ಸಖಿ ಚೆಲುವ..' ಕಥೆಯು ಕಾಲೇಜು ಆವರಣದಲ್ಲಿ ನಡೆಯುವ ಪ್ರೇಮವನ್ನಾಧರಿಸಿದ ಕಥೆಯಾಗಿದೆ. ಆಧುನೀಕರಣದ ಪ್ರಭಾವ ಮತ್ತು 'Love' ಎನ್ನುವ ಪರಿಭಾಷೆಯ ಜೊತೆಯಲ್ಲೇ ಅನೇಕ ರೀತಿಯ ಆಚರಣೆ ಸೆಲೆಬ್ರಿಷನ್ಸ್, ಭಾಷೆಯೂ ಬಳುವಳಿಗಳಂತೆ ಬಂದು ಕನ್ನಡದಲ್ಲಷ್ಟೇ ಅಲ್ಲ ಭಾರತೀಯ ಎಲ್ಲ ಭಾಷೆಗಳಲ್ಲೂ ಸೇರಿವೆ. ಯಾವ ಮಟ್ಟಿಗೆಂದರೆ ಕನ್ನಡದ ಪ್ರೀತಿ, ಪ್ರೇಮ, ವಾತ್ಸಲ್ಯ, ಮಮಕಾರ ಒಳಗೊಳ್ಳಬೇಕಾದ 'Love' ಸಿಮೀತವಾಗಿ ಇಂದು ಬಳಕೆಯಾಗುತ್ತಿದೆ. ಇದೊಂದೆ ಅಲ್ಲ ಇದೇ ರೀತಿ ಎಷ್ಟೊ ಪದಗಳು ತಾವು ಬರುವುದಲ್ಲದೇ ಜೊತೆಗೆ ತಮ್ಮಲ್ಲಿರುವುದನ್ನೆಲ್ಲ ತಂದಿವೆ. ಇದರಲ್ಲಿಯೂ ಸಹ ಸಹಜವಾಗಿಯೇ ಇಂಗ್ಲೀಶ್ ಭಾಷೆ ಮೂಡಿಬಂದಿದೆ. ತೀರಾ ಇತ್ತೀಚಿಗೆ ಬರೆದ ಕಥೆಯಾಗಿರುವುದರಿಂದ ಬೇರೆ ಯಾವ ಕಥೆಗಳಲ್ಲಿಯೂ ಕಾಣಬರದ ಕೆಲವು ಆಧುನಿಕವಾದ(ಕಥೆಯ ಬರೆದ ಕಾಲ ಪರಿಗಣನೆಯಿಂದ) ವಿಶಿಷ್ಟ ಪದಗಳನ್ನು ಬಳಸಲಾಗಿದೆ. ಅವುಗಳೆಂದರೆ ಮೊಬೈಲ್, ಸಿಮ್ ಕಾರ್ಡ್, ಟಾರ್ಚ್, ಮೊಬೈಲ್ ಫೋನ್, ಸಿಗ್ನಲ್ ಇತ್ಯಾದಿ ಪದಗಳು ಕಾಣಿಸಿಕೊಳ್ಳುತ್ತವೆ. ಇವೆಲ್ಲವು ಒಂದೇ ವಸ್ತುವಿಗೆ ಸಂಬಂಧಿಸಿದ ಪದಗಳೆಂಬುದು ವಿಶೇಷ. 'ದಾರಿ', 'ಬದುಕೊಂದು ಸತತ ಅಭ್ಯಾಸ' ಕಥೆಗಳೂ ಇಂಗ್ಲಿಶಿನಿಂದ ಮುಕ್ತವಾಗಿಲ್ಲ. ಇಲ್ಲಿಯೂ ಆರಂಭದಿಂದ ಕೊನೆಯವರೆಗೆ ಇಂಗ್ಲೀಶ್ ಕಾಣಿಸಿಕೊಳ್ಳುತ್ತದೆ.

ಭಾಷೆಯ ದೃಷ್ಟಿಯಿಂದ 'ಕತ್ತಲೆ ನೋವು ಮತ್ತು ಹೆಣ' ಕಥೆ ಉಳಿದೆಲ್ಲ ಕಥೆಗಳಿಗಿಂತಲೂ ವಿಭಿನ್ನವಾಗಿದೆ. ಈ ಕಥೆಯಲ್ಲಿ ಬಳ್ಳಾರಿ ಕನ್ನಡದ ಜೊತೆಗೆ ಹಿಂದಿ, ಇಂಗ್ಲಿಶ್ ಭಾಷೆಯೂ ಬಳಕೆಯಾಗಿದೆ. ಕಥೆ ಘಟಿಸುವುದು ಬಳ್ಳಾರಿಯಲ್ಲೇ. ಭಾಷೆಯೂ ಬಳ್ಳಾರಿಯದೆ. ಬಡಮುಸ್ಲಿಂ ಪೇದೆಯೊಬ್ಬನ ಕುಟುಂಬದ ತಲ್ಲಣಗಳೂ ಈ ಕಥೆಯ ವಸ್ತು. ಆದ್ದರಿಂದ ಸಹಜವಾಗಿಯೇ ಹಿಂದಿ ಭಾಷೆ ನುಸುಳಿದೆ.

ಬಳ್ಳಾರಿ ಗಡಿ ಭಾಗವಾದ್ದರಿಂದ, ಬಳ್ಳಾರಿ ಪರಿಸರದಲ್ಲಿ 'ತೆಲುಗು' ಭಾಷೆಯ ಪ್ರಭಾವ ತುಂಬ ಕಂಡುಬಂದರೂ, ರವಿಯವರ ಬರಹಗಳಲ್ಲಿ ತೆಲುಗು ಭಾಷೆಯ ಪ್ರಭಾವ ಇದ್ದರೂ ಅದು ಇಂಗ್ಲೀಶ್‌ನಷ್ಟಲ್ಲದೇ ವಿರಳವೆಂದು ಹೇಳಬಹುದು. ಕಥೆಗಳಷ್ಟೆ ಅಲ್ಲ ಒಟ್ಟಾರೆ ಬರಹಗಳನ್ನೊಳಗೊಂಡು. 'ಮೀನಾರುಗಳ ಊರಿನಲ್ಲಿ ಅವರು' ಕಥೆಯಲ್ಲಿ 'ವೆನ್ನೆಲ', ಪರಾಯಿ ಪದಗಳು ಬಳಕೆಯಾಗಿದ್ದು ಮತ್ತು ಅಲ್ಲೊಂದು ಇಲ್ಲೊಂದು ಪದಗಳಷ್ಟೇ ಕಂಡು ಬರುತ್ತವೆ. ಸ್ವಲ್ಪ ಹೆಚ್ಚಿನದಾಗಿ ಕಂಡುಬರುವುದೆಂದರೆ ಬೆಳಗೆರೆ ಕೃಷ್ಣಶಾಸ್ತ್ರಿಗಳ ಜೀವನ ಕಥನ 'ಇದು ಜೀವ ಇದುವೇ ಜೀವನ'ದಲ್ಲಿ. ಅದು ಬಿಟ್ಟರೆ ವಿರಳವೇ ಎಂದು ಹೇಳಬಹುದು.

ಪಾತ್ರಗಳ ಸಂಭಾಷಣೆಯಲ್ಲಿ ವೈವಿಧ್ಯಮಯ ಭಾಷೆ ಕಂಡುಬಂದರೂ ನಿರೂಪಣಾ ಭಾಷೆ ಮಾತ್ರ ಪ್ರಮಾಣಿತ ಕನ್ನಡವೇ. ಹೀಗೆ ರವಿಯವರು ತಮ್ಮ ಕಥೆಯಲ್ಲಿ ಬಳಸಿರುವ ಭಾಷೆಯ ಬಗೆಗೆ ವಿವರಣೆ ನೀಡಬಹುದು. ಅನುಭವ, ಅನಿಸಿಕೆಗಳನ್ನು ಭಾಷೆಯಲ್ಲಿ ಮೂರ್ತಗೊಳಿಸುವುದು ಸಾಹಿತ್ಯದ ಜವಾಬ್ದಾರಿಗಳಲ್ಲಿ ಒಂದು. ಪ್ರತಿಯೊಬ್ಬ ಲೇಖಕ. ಬರಹಗಾರ, ಕಥೆಗಾರ ತನ್ನದೇ ಆದ ವಿಶಿಷ್ಟ ಪ್ರತಿಷ್ಠೆ, ಶೈಲಿ, ಅನುಭವಗಳನ್ನು ಹೊಂದಿರುವುದರಿಂದ ತಾನು ಹೇಳ ಹೊರಟಿರುವ ವಸ್ತು, ಭಾಷೆಗೆ ಸಂಬಂಧಿಸಿದಂತೆ ತೋರುವ ಸಂವೇದನೆ ಇತರ ಬರಹಗಾರರಿಗಿಂತ ಭಿನ್ನವಾಗಿರುತ್ತದೆ. ಇಂತಹ ಭಿನ್ನತೆ, ವಿಶೇಷತೆಯನ್ನು ರವಿ ಬೆಳಗೆರೆಯವರ ಕಥೆಗಳಲ್ಲಿ ಕಾಣಬಹುದು. ಆದರೆ

ಇನ್ನಷ್ಟು ಕಥೆಗಳನ್ನು, ಭಾಷಾ ಪ್ರಯೋಗಗಳ ನಿರೀಕ್ಷೆಗೆ ಅವಕಾಶವನ್ನು ನೀಡಿ, ಅವರು ಮಾತ್ರ ಕಥೆ ಬರೆಯುವುದನ್ನು ನಿಲ್ಲಿಸಿದ್ದಾರೆ ಎಂಬುದೇ(ಅವರ) ಓದುಗರ ಅಸಹನೀಯ ಸಂಗತಿ.

**೪.೨. ಅನುವಾದಗಳು–ಭಾಷೆ**

ಜಗತ್ತಿನಲ್ಲಿ ಒಂದು ಭಾಷೆ ಮತ್ತು ಸಾಹಿತ್ಯ ಎಷ್ಟು ಪ್ರಾಚೀನವಾಗಿರುತ್ತದೆಯೋ ಅಲ್ಲಿ ಅನುವಾದವೂ ಅಷ್ಟೇ ಪುರಾತನದ್ದಾಗಿರುತ್ತದೆ. ಅಲ್ಲದೆ ಯಾವುದೇ ಸಾಹಿತ್ಯ ಪ್ರಕಾರಕ್ಕಿರುವ ಗೌರವ ಅನುವಾದಕ್ಕೂ ಇದ್ದೇ ಇರುತ್ತದೆ. ಜಗತ್ತಿನಾದ್ಯಂತ ಅನುವಾದವೆಂಬ ಪ್ರಕ್ರಿಯೆ ತನ್ನ ಪಾಡಿಗೆ ತಾನು ನಡೆಯುತ್ತಾ ಸಾಗುತ್ತಿರುವಂತೆ, ಅನುವಾದದ ಸಿದ್ಧಾಂತಗಳನ್ನು ರೂಪಿಸುವ ಕೆಲಸಗಳೂ ತಮ್ಮ ಪಾಡಿಗೆ ತಾವು ನಡೆಯುತ್ತಲೇ ಇರುತ್ತವೆ. ಇವೆರಡೂ ಆಗಾಗ ಎದುರುಗೊಳ್ಳಬಹುದು. ಆದರೆ ಒಂದು ಮತ್ತೊಂದನ್ನು ಅನುಸರಿಸುವ ಸಂಭವ ಕಡಿಮೆ. ಈ ವಿವರಣೆಗೂ ಅನುವಾದದ ಭಾಷೆಯಾಗಿ ಕನ್ನಡಕ್ಕೂ ಏನು ಸಂಬಂಧವೆಂಬ ಪ್ರಶ್ನೆ ಏಳುವುದು ಸಹಜ.

ಬಹುಭಾಷಿಕತೆ ಭಾರತೀಯರ ಸಾಮಾನ್ಯ ಲಕ್ಷಣ. ಹೀಗಾಗಿ ಅನುವಾದ ಸ್ಥೂಲ ಅರ್ಥದಲ್ಲಿ ಎಲ್ಲರ ದೈನಂದಿನ ವ್ಯವಹಾರದಲ್ಲೂ ನಡೆಯುವ ಪ್ರಕ್ರಿಯೆ. ಕನ್ನಡಿಗರೊಬ್ಬರು ಇತರೆ ಭಾಷೆಯವರ(ಯಾವುದಾದರೂ) ಮಾತುಗಳನ್ನು ಕೇಳಿಸಿಕೊಂಡು ಅರ್ಥಮಾಡಿಕೊಂಡರೆಂದರೆ ಅಲ್ಲಿ ಆ ಭಾಷೆಯಿಂದ ಕನ್ನಡಕ್ಕೆ ಅನುವಾದ ನಡೆದಿದೆ ಎಂತಲೇ ಅರ್ಥ. ಭಾಷೆಗೂ ಮತ್ತು ಅದನ್ನು ಬಳಸುವ ಜನರ ಸಂಸ್ಕೃತಿಗೂ ನಿಕಟವಾದ ಸಂಬಂಧವಿರುತ್ತದೆ. ಒಂದು ಸಂಸ್ಕೃತಿಯ ತನ್ನ ಜನರಿಗೆ ಒದಗಿಸುವ ಗ್ರಹಿಕೆಯ ವಿಧಾನಗಳಿಗೆ ಅನುಸಾರವಾಗಿ ಅಲ್ಲಿನ ಜನರ ಭಾಷೆ ರೂಪುಗೊಂಡಿರುತ್ತದೆ. ಈ ಗ್ರಹಿಕೆಯ ವಿಧಾನ ಮತ್ತೊಂದು ಸಂಸ್ಕೃತಿಯಲ್ಲಿ ಬೇರೆಯೇ ಆಗಿರುತ್ತದೆ. ಹೀಗಾಗಿ ಅನುವಾದ ಹಲವು ವೇಳೆ ಅಸಾಧ್ಯ ಎನಿಸುವುದಾದರೂ ಅದು ಅನಿವಾರ್ಯ.

ಅನುವಾದದಲ್ಲಿ ಭಾಷೆ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಅದರಲ್ಲೂ ವ್ಯಾಕರಣ ವಿಷಯದಲ್ಲಿ ತುಂಬ ಜಟಿಲವಾದ ಸಮಸ್ಯೆಗಳು ಎದುರಾಗುತ್ತದೆ. ಎಂದರೆ ಭಾಷೆ(ವ್ಯಾಕರಣ ನಿಯಮಕ್ಕೆ ಸಂಬಂಧಿಸಿದಂತೆ) ವಾಕ್ಯ ಒಂದು ಕಟ್ಟುನಿಟ್ಟಾದ ರಚನೆ. ಪದಗಳ ಮಧ್ಯೆ ರೂಪಗೊಳ್ಳುವ ವಿಶೇಷ ಸಂಬಂಧವನ್ನು ವಾಕ್ಯಾತ್ಮಕ ಸಂಬಂಧ ಎನ್ನುತ್ತೇವೆ. ಈ ಸಂಬಂಧದ ನಿಯಮಗಳೂ ಸಹ ಭಾಷೆಗೆ ವಿಶಿಷ್ಟವಾದವು. ಕನ್ನಡ ಮತ್ತು ಇಂಗ್ಲೀಶ್‌ಗೆ ಸಂಬಂಧಿಸಿದಂತೆ ಕೆಲವು ಉದಾಹರಣೆಗಳು ಎಂದರೆ, ಕನ್ನಡದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಮವಾಕ್ಯಗಳು ಬಳಕೆಯಾಗುತ್ತವೆ. ಈ ವಾಕ್ಯಗಳಲ್ಲಿ ಎರಡು ನಾಮಪದಗಳನ್ನು, ನಾಮಪದರೂಪಿ ರಚನೆಗಳನ್ನು ಸುಮ್ಮನೆ ಅಕ್ಕ ಪಕ್ಕದಲ್ಲಿ ಇಟ್ಟು ವಾಕ್ಯ ರಚಿಸುತ್ತೇವೆ. ಕ್ರಿಯಾಪದವೆಂಬುದು ಇಂಥಹ ವಾಕ್ಯಗಳಲ್ಲಿ ಇರುವುದಿಲ್ಲ. ಇದ್ದರೂ ಗೋಚರಿಸದು. ಅದು ಬೆಕ್ಕು, ಅದು ಬೇವಿನಗಿಡ, ಅಂಬ್ರ ಒಳ್ಳೆಯ ಹುಡುಗ ಇತ್ಯಾದಿ ಈ ರೀತಿಯ ವಿವರಣಾತ್ಮಕ ವಾಕ್ಯಗಳನ್ನು ನಿತ್ಯವೂ ಬಳಸುತ್ತೇವೆ. ಇಂಗ್ಲೀಶ್‌ನಲ್ಲಿ ಇಂಥವುಗಳ ರಚನೆಗಳು ಅಸಾಧ್ಯ. ಇಂಥ ಸಮಸ್ಯೆಗಳಿಂದಾಗಿ ವಾಕ್ಯ ರಚನೆ ನಿಯಮಗಳ ಇಕ್ಕಟ್ಟು ಸಹ ಪೂರ್ಣಪ್ರಮಾಣದ ಅನುವಾದಕ್ಕೆ ಅವಕಾಶ ನೀಡುವುದಿಲ್ಲ. ಹಾಗೂ ಭಾಷೆಯಿಂದ ಭಾಷೆಗೆ ಈ ಸಮಸ್ಯೆಯ ಪ್ರಮಾಣ ವ್ಯತ್ಯಾಸವಾಗುತ್ತದೆ.

ಹೀಗಾಗಿ ಅನುವಾದವು ಒಂದು ಯಾಂತ್ರಿಕ ಕ್ರಿಯೆಯಲ್ಲ. ಕನ್ನಡದಲ್ಲಿ ಉಚಿತವಾದ ನುಡಿಗಟ್ಟುಗಳನ್ನು ರೂಪಿಸುವ ಕೆಲಸ, ಹೊಸ ಸಾಮಾಜಿಕ ಸಂದರ್ಭಕ್ಕೆ ಭಾಷೆಯನ್ನು ಸರಿಹೊಂದಿಸುವ

ಕೆಲಸ, ಭಾಷೆಯ ಮೂಲಭೂತ ಲಕ್ಷಣಕ್ಕೆ ಅನುಸಾರವಾಗಿ ಮತ್ತೊಂದು ಭಾಷಾ ಸಂದರ್ಭದ ರಚನೆಗಳನ್ನು ಅಳವಡಿಸುವ ಕೆಲಸ ನಡೆಯಬೇಕಾದ ಅವಶ್ಯವಿದೆ. ಈ ಕಾರಣಗಳಿಂದ ಅನುವಾದ ಸಾಂಸ್ಕೃತಿಕವಾಗಿ ಅತ್ಯಂತ ಜವಾಬ್ದಾರಿಯ ಕೆಲಸವನ್ನು ತನ್ನ ಹೆಗಲ ಮೇಲಿಟ್ಟುಕೊಂಡಿದೆ.

ಇಂತಹ ಜವಾಬ್ದಾರಿಯುತ ಕಾರ್ಯ ಅನುವಾದ ಪ್ರಕ್ರಿಯೆಯದು. ಈ ಅನುವಾದದ ಭಾಷೆ ರವಿ ಬೆಳಗೆರೆಯವರ ಬರಹಗಳಲ್ಲಿ ರೂಪುಗೊಂಡಿರುವುದನ್ನು ಗಮನಿಸಬೇಕಾದರೆ, ಮುಖ್ಯವಾಗಿ ಹಿಂದಿನ ಅಧ್ಯಾಯದಲ್ಲಿ(ಅನುವಾದಕ್ಕೆ ಸಂಬಂಧಿಸಿದ ಭಾಗದಲ್ಲಿ) ಪ್ರಸ್ತಾಪಿಸಿದಂತೆ ಅವರ ಬರಹಗಳನ್ನು ಎರಡು ವಿಧದಲ್ಲಿ ನೋಡಬೇಕು. ಅವು ಸೃಜನ ಮತ್ತು ಸೃಜನೇತರ ಎಂದು ಸೃಜನ ಭಾಗದಲ್ಲಿ ಕಾದಂಬರಿಗಳು ಬಂದರೆ. ದೇಶ, ಯುದ್ಧ, ಭಯೋತ್ಪಾದನೆ, ಇತಿಹಾಸಕ್ಕೆ ಸಂಬಂಧಿಸಿದವು ಸೃಜನೇತರ ಭಾಗಕ್ಕೆ ಒಳಪಡುತ್ತವೆ. ಅನುವಾದವೇ ಒಂದು ಸೃಜನ ಕ್ರಿಯೆಯಾದರೂ ಈ ವಿಂಗಡನೆ ಅಧ್ಯಯನದ ಅನುಕೂಲಕ್ಕಾಗಿ ಎಂಬುದು ಸಹ ಗಮನೀಯ ಅಂಶವೇ.

ಕಾದಂಬರಿಗಳು ಸೃಜನಶೀಲ ವಿಧದಲ್ಲಿ ಬರುತ್ತವೆ. ಅವುಗಳಲ್ಲಿ ಮಾಂಡೋವಿ, ದಿ ಗಾಡ್ ಫಾದರ್, ದಿ ಕಂಪೆನಿ ಆಫ್ ವಿಮೇನ್ ಹೆಸರಿಸುವಂತಹವು. ಅವು ಸ್ವತಂತ್ರ ಕೃತಿಗಳೆಂಬಂತೆ ಕಾಣುತ್ತವೆ. ಇಲ್ಲಿಯ ದೇಶಿಯತೆ ನಮ್ಮವೇ ಎಂಬಂತೆ ಕನ್ನಡಕ್ಕೆ ಬಂದಿವೆ. ಬಳ್ಳಾರಿ ಧಾರವಾಡ ಪರಿಸರದ ಭಾಷೆಯನ್ನು ಒಳಗೊಂಡಿವೆ. 'ಅದ್ರಾಗ ಮುಚ್ಚಿದಾದೇನೈತೆ ತಮ್ಮಾ... ಒಂದ್ಸಲ ಕೆಟ್ಟೆಸರು ಬಂದ್ಮ್ಯಾಲೆ ಅದು ಓಗಾದಲ್ಲ. ಸಿರಿಗೇರ್‍ಯಾಗಿನ ಮಂದೆಲ್ಲ ನನ್ನ ಅಂಡೇವು ಕಳ್ಳತನ ಮಾಡಿದೋನೆ ಅಂದ್ರು. ಊರು ಬಿಟ್ಟು ಓಡ್ಯೋದೆ. ಒಂದಲ್ಲ ಎಲ್ಡಲ್ಲ... ಊರೂರು ತಿರುಗಿದೆ. ಈ ಉಡ್ಗಿ ಅಮ್ಮನ್ನ ಮಾಡಿಕ್ಯಂಡೆ. ಗೋವ್ಯಾಗಿದ್ದೆ. ಈ ಉಡಿಗಿ ಉಟ್ಟುತ್ಲೂ ಅವರಮ್ಮ ಸತ್ಲು. ಹೆಂಡತೀನ ಕೊಂದೇನೇ ಅಂದ್ರು ಮಂದಿ. ನಾನೇನು ಕಿವ್ಯಾಗಾಕ್ಯಂಬ್ಲಿಲ್ಲ. ಅವಳ ಅವಿಸ್ಯ ಮುಗದಿತ್ತು ಸತ್ಲು. ಈ ಉಡುಗೀನ ಕಣ್ಣಾಗಿಟಗಂಡು ಜ್ವಾಪಾನ ಮಾಡಿದೆ. ಸಣ್ಣ ಕಲಸಿನ್ಯಾಗ ಪಷ್ಟು ಬಂದ್ಲು ಅಂದಾಗ ಇನ್ನಾ ಬೇಸು ಓದ್ಸಿ ದೊಡ್ಡೊಳ್ನ ಮಾಡಬೇಕಂದಕಂಡೆ. ಅಲ್ಲಿ ಅಲ್ಲಿ ಗೋವ್ಯಾಗೆ ಕರಿಮಾರಿ ರೋಗ ಉಟ್ಟಿಕ್ಯಂತಲ್ಲ? ಮತ್ತೆ ಅಲ್ಲೀಲಿದ್ದ ಮನೆ ಕಿತ್ತಕೊಂಡು ಈ ಊರಿಗೆ ಬಂದೆ. ನಾನು ಕುಂತು ಉಂಡೋನಲ್ಲ ತಮ್ಮಾ, ಅಗಲೂ ರಾತ್ರಿ ದುಡಿದೀನಿ ಕೈಯ್ಯಾಗೆ ರವಟು ರೊಕ್ಕ ಮಾಡಿಕ್ಯಂಡೀನಿ. ಇಲ್ಲಿ ಬಂದು ಈ ಆಳುಬಿದ್ಮನೆ ತಗಂಡು ಬೇಸಾಗಿ ಕಟ್ಸಿ ಬಾಳೇವು ಮಾಡಿಕ್ಯಂಡದೀನಿ. ಮಂದಿ ಸುಮ್ನಿದ್ರೆನು? ಕೋಟಾ ನೋಟು ಮಾಡಿ ರೊಕ್ಕ ಮಾಡಿದೋನೇ ಅಂದ್ರು. ನಾನೇನು ಕಿವ್ಯಾಗಾಕ್ಯಂಬ್ಲಿಲ್ಲ. ಮಂದಿಗೇನಂತೆ ಅಂಬ್ತಾರೆ ಇವಾಗ ನೋಡು ನಿಮ್ಮಮ್ಮ ಯಾರ ಕೂಡ ಇದ್ಲೋ, ಏನು ಮಾಡಿದ್ಲೋ.. ನೀನುಟ್ಟಿದೆ. ಬಾಯಿಗೊಂದು ಮಾತು ಅಂಬ್ಲಿಲೇನು? ಅಂದ್ರು, ಇಲ್ಲಿ ನನಿಗೇನಪ್ಪಾ... ನನ ಮಗಳಂಬಾಕಿ ಬೇಸು ಓದಿಕ್ಯಂಡು ದೊಡ್ಡ ಮಣಿಶ್ಯಳಾಗಿ ಒಳ್ಳೇ ಮನತನಸ್ತರ ಕೈ ಇಡುದು ಸುಕವಾಗಿರಬೇಕು. ಸಣ್ಣ ಸೂಳೇಮಕ್ಳು ಸವಾಸ ನಮಗೆ ಬ್ಯಾಡ ನಾನೇಳಾದು ತಿಳೀತೇನು ತಮ್ಮಾ...?'[೧] ಹೀಗೆ ಮಾಂಡೋವಿ ಕಾದಂಬರಿಯಲ್ಲಿ ಬಳ್ಳಾರಿ ಪರಿಸರದ ಭಾಷೆಯನ್ನು ಗುರುತಿಸಬಹುದು. ಇಲ್ಲಿ ಅನುವಾದವೆಂದು ಗುರುತಿಸಲು ಯಾವುದೇ ಅವಕಾಶವಿಲ್ಲ. ಮೂಲತಃ ಇದು ಸ್ಪ್ಯಾನಿಶ್ ಬರಹಗಾರನ ಕೃತಿ ಇಂಗ್ಲೀಶ್‌ನಿಂದ ಕನ್ನಡಕ್ಕೆ ಬಂದಿದೆ. ರವಿ ಬೆಳಗೆರೆಯವರು ಅದನ್ನು ಕನ್ನಡಕ್ಕೆ ತಂದಿದ್ದಾರೆ, ಕನ್ನಡದ್ದನ್ನಾಗಿಸಿದ್ದಾರೆ.

ಮತ್ತೊಂದು ಕಾದಂಬರಿಯನ್ನು ನೋಡುವುದಾದರೆ ಅಲ್ಲಿಯೂ ಈ ರೀತಿಯ ಭಾಷಿಕ ಅಂಶಗಳನ್ನು ಗುರುತಿಸಬಹುದು. ದಿ ಗಾಡ್ ಫಾದರ್ ಕ್ರೈಮ್ ಜಗತ್ತಿನ ವಿಷಯಾಧಾರಿತ ಕಾದಂಬರಿ. ಈ ಕಾದಂಬರಿಯ ವಸ್ತುವೇ ಅಂತಹದ್ದು ದೂರದಿಂದ ನೋಡಿದರೆ, ಭೂಗತ ಜಗತ್ತಿನ ಆಗು ಹೋಗುಗಳಂತಿರುವ ಕಾದಂಬರಿ ಎಂದು ಅನ್ನಿಸುತ್ತದೆ. ಆದರೆ ಅದರಲ್ಲಿ ಚಿನ್ನಮಾದಿರೆಡ್ಡಿಯ ಕುಟುಂಬ ಎಂತವರನ್ನು ಸೆಳೆಯದೆ ಇರಲಾರದು. ಅಂತ ಕೃತಿಯಲ್ಲಿನ ಭಾಷಿಕ ಅಂಶಗಳನ್ನು ನೋಡುವುದಾದರೆ, 'ಹಾಗಾದರೆ ನನ್ನ ಮನೇತಂಕಾ ಯಾಕೆ ಬಂದೆ? ಇಷ್ಟೆಲ್ಲ ತಾಕತ್ತು, ಲಾಭ ಇರೋವಾಗ ನನ್ನ ಅವಶ್ಯಕತೆ ಏನಿದೆ ಅನ್ನಿಸ್ತು? ಮೆಲುದನಿಯಲ್ಲೇ ಕೇಳಿದರು ಗಾಡ್ ಫಾದರ್.

ನಂಗೆ Cash ಬೇಕು. ನೂರು ಐವತ್ತು ಕೋಟಿ .ರೂಪಾಯಿ! ಇನ್ವೆಸ್ಟ್ ಮಾಡದೆ ಶುರು ಮಾಡುವಂಥ ದಂಧೆ ಅಲ್ಲ ಇದು. ಅದು ಮೊದಲನೇ ನೆಸೆಸಿಟಿ. ಎರಡನೇದು ನಂಗೆ ಪ್ರೊಟೆಕ್ಷನ್ ಬೇಕು. ಪಾಲಿಟಿಕ್ಸು, ಪೊಲೀಸು, ಕೋರ್ಟು ಮೂರು ಗೊತ್ತಿರೊ ಮನುಷ್ಯ ಮೂರು ಕಡೆ ವ್ಯವಹಾರ ಕುದುರಿಸೋ ತಾಕತ್ತಿರೋ ಮನುಷ್ಯ ಬೇಕು. ಏನೇ ಎಚ್ಚರಿಕೆಯಿಂದ ತರ್ತೀನಿ ಅಂದುಕೊಂಡ್ರೂ, ಮಹಾರಾಷ್ಟ್ರ ದಾಟಿ ಬರುವಾಗ ಇವತ್ತಲ್ಲ ನಾಳೆ ನನ್ನ ಹುಡುಗರು ಸಿಕ್ಕಿಬಿದ್ದೇ ಬೀಳ್ತಾರೆ. Of course ಹಾಗೆ ಸಿಕ್ಕಿಬೀಳೋರು ಕೂಡ ಮೊದಲು ಯಾವುದೇ ಕೇಸಿನಲ್ಲಿ ಇಲ್ದಿರೋ white ಜನಾನೇ ಇರ್‍ತಾರೆ. ಅದನ್ನ ನಾನು ನೋಡ್ಕೋತಿನಿ ಹಾಗೆ ಮೊದಲನೇ ಸಲ ಸಿಕ್ಕಿ ಬೀಳೋರಿಗೆ ಕೋರ್ಟು ಒಂದೆರಡು ವರ್ಷದ ಶಿಕ್ಷೆ ಕೊಟ್ಟು ಸುಮ್ಮನಾಗುತ್ತೆ. ಬರೀ ಒಂದೆರಡು ವರ್ಷ ಶಿಕ್ಷೆ ಅನುಭವಿಸಿ ಈಚೆ ಬರೋದು ಅಂತಾದರೆ ಯಾವನೂ ಬಾಯಿ ಬಿಡಲ್ಲ. ಆದ್ರೆ ಕೋರ್ಟು ತಲೆಕೆಟ್ಟು ಏಳೋ ಹತ್ತೋ ವರ್ಷ ಒಳಗಿರು ಅಂದುಬಿಟ್ರೆ ಹ್ಯಾಗೆ ಹೇಳೋದು? ನಮಗ್ಗೊತ್ತಲ್ಲ? ಮನುಷ್ಯನ ನಿಯತ್ತು ಯಾವತ್ತಿಗೂ ಪರಮನೆಂಟ್ ಅಲ್ಲ. ಅವರೇನಾದರೂ ಬಾಯಿ ಬಿಟ್ಟು ಬಿಟ್ಟೆ ಇಡೀ ದಂಧೆ ಕೊಲ್ಯಾಪ್ಸ್ ಆಗಿ ಹೋಗುತ್ತೆ. ದೊಡ್ಡವರೇ, ನಂಗೊತ್ತು ಬೆಂಗಳೂರಲ್ಲಿ, ಕರ್ನಾಟಕದಲ್ಲಿ ನಿಮ್ಮಷ್ಟೆ ಚೆನ್ನಾಗಿ ಕೋರ್ಟುಗಳನ್ನು, ಪೊಲೀಸನೋರನ್ನು handle ಮಾಡೋ ಮನುಷ್ಯ ಇನ್ನೊಬ್ಬನಿಲ್ಲ. ಅದಕ್ಕೆ ಬಂದೆ... ಅಂದ ಕಿರೀಟಿ. ದನಿಯೊಳಗೆ ಕಂಚು–ಕಚು ತಾಕಿದಂಥ ಸ್ಪಷ್ಟತೆ. ಆದರೆ ಡಾನ್ ಚಿನ್ನಮಾಡಿ ರೆಡ್ಡಿ ಅವನ ಹೊಗಳಿಕೆಯನ್ನು ಕಿವಿಯ ಸಮೀಪಕ್ಕೂ ಬಿಟ್ಟು ಕೊಳ್ಳಲಿಲ್ಲ.'[೧೩]

ರವಿಯವರ ಪಾಪಿಗಳ ಲೋಕದಲ್ಲಿ, ಭೀಮಾತೀರದ ಹಂತಕರು ಮತ್ತು ಇತರ ಭೂಗತ ಲೋಕದ ವಿಷಯವನ್ನೊಳಗೊಂಡ ಕೃತಿಗಳನ್ನು ಓದಿದವರಿಗೆ ಗಾಡ್ ಫಾದರ್ ಒಂದು ಅನುವಾದ ಕೃತಿ ಎಂದು ಅನಿಸುವುದೇ ಇಲ್ಲ. ಇದರಲ್ಲಿ ಬಳಸುವ ಅನ್ಯದೇಶಿ ಪದಗಳು ಅವನ್ನು ಮತ್ತಷ್ಟು ದೃಢಪಡಿಸುತ್ತವೆ. ಅನುವಾದದಲ್ಲಿ ಇತರೆ ಭಾಷೆಯ ಪದ ಬಳಕೆ ಇರಬಾರದು ಎಂದೇನೂ ಇಲ್ಲ. ಆ ಪದಗಳಿಗೆ ಕನ್ನಡದಲ್ಲಿ ಪದವಿದ್ದು, ಅದು ಜನ ಸಾಮಾನ್ಯರಲ್ಲಿ ಬಳಕೆಯಿದ್ದು, ಮೂಲ ಪದದ ಅರ್ಥವನ್ನು ಪ್ರತಿನಿಧಿಸುವಂತಿದ್ದಾಗಲೂ ಬಳಸಿದರೆ, ಅದು ಸಹಜವಾಗಿಯೇ ಅನುವಾದ ಎಂದು ಅನ್ನಿಸುವುದಿಲ್ಲವೇನೋ?

ಒಟ್ಟಾರೆಯಾಗಿ ಸೃಜನಶೀಲ ಕೃತಿಗಳ ಅನುವಾದದಲ್ಲಿ ಪ್ರಾದೇಶಿಕ ಭಾಷೆಯ ಬಳಕೆಯನ್ನು ಕಾಣಬಹುದು. ಅಲ್ಲಿ ಲೇಖಕ, ಅದನ್ನು ಕನ್ನಡದ ನೆಲದಿಂದಲೇ ಪರಿಚಯಿಸುವ ದರ್ದು ಇರುತ್ತದೆ. ಅದೇ ಸೃಜನೇತರವಾದರೆ ಅದನ್ನು ಅಲ್ಲಿ ಅಂಥಹ ಅವಕಾಶವಿರುವುದಿಲ್ಲ. ಆ ಕಾರಣದಿಂದ

ಸೃಜನಶೀಲ ಅಥವಾ ಕೃತಿಗಳಲ್ಲಿ ಪ್ರಾದೇಶಿಕ ಮತ್ತು ಅದನ್ನು ನಿರ್ವಹಿಸುವ ನಿರೂಪಣೆ ಗ್ರಾಂಥಿಕ ಭಾಷೆಯನ್ನು ಕಾಣಬಹುದು ಎಂದು ಹೇಳಬಹುದು.

ಅದೇ ರೀತಿ ಸೃಜನೇತರ ಕೃತಿಗಳನ್ನು ನೋಡುವುದಾರೆ, ಆಮೇಲೆ ಬಂತು ಗ್ರೀಷ್ಮ. ಅದು ನಾವು ಹಿಂದೆಂದೂ ಕಂಡಿರದಂಥ ಕಡು ಬೇಸಿಗೆ. ಬಿಸಿಲು ವಿಪರೀತ ಪ್ರಖರವಾಗಿತ್ತು. ತೊಯ್ದು ಬಟ್ಟೆಯನ್ನು ತಲೆಯ ಮೇಲೆ ಹಾಕಿಕೊಳ್ಳದಿದ್ದರೆ ಉಸಿರಾಡುವುದೂ ಕಷ್ಟ. ಬೆವೆತ ದೇಹಗಳಿಗೆ ಬಂದು ಬಡಿಯುತ್ತಿದ್ದ ಬಿಸಿಗಾಳಿ, ತನ್ನೊಂದಿಗೆ ಮರಳಿನ ಕಣಗಳನ್ನು ತಂದು ಮತ್ತೆ ಮೈಯೆಲ್ಲ ಚುರುಗುಡುವಂತೆ ಮಾಡುತ್ತಿತ್ತು. ಮೇ ತಿಂಗಳು ಬರುವುದರೊಂದಿಗೆ ಬಿಸಿಲು ಮತ್ತೂ ಪ್ರಖರವಾಯಿತು. ಚಿಗಿತ ಎಲೆಗಳು ಬಿಸಿಲಿನ ಹೊಡೆತಕ್ಕೆ ಮರಗಳಲ್ಲೇ ಮುರುಟಿ ಹೋದವು. ಹಕ್ಕಿಗಳು ಕೂತಕೂತಲ್ಲೇ ಬಾಯಾರಿ ಗಂಟಲೊಣಗಿ ಕೂಗಲು ಆಗದೆ ಬಿದ್ದು ಸಾಯುತ್ತಿದ್ದರೆ, ನಾಯಿಗಳು ನಿಸ್ಸಹಾಯಕವಾಗಿ ಬೀದಿಗಳಲ್ಲಿ ಅಲೆಯುತ್ತಿದ್ದವು.'[೧೪] ದಂಗೆಯ ದಿನಗಳು ಕೃತಿಯ ಈ ಬರಹವನ್ನು ನೋಡಿದರೆ, ಅನುವಾದವೆನ್ನುವುದಲ್ಲಿ ಯಾವ ಪುರಾವೆಯೂ ಇಲ್ಲ. ಭಾಷಿಕವಾಗಿ ಗಮನಿಸಿದಾಗಲೂ ಗುರುತಿಸಲು ಕಷ್ಟವೆನಿಸುತ್ತದೆ. ಇದರಲ್ಲಿ ಗ್ರಾಂಥಿಕ ಭಾಷೆ ಬಳಕೆಯಾಗಿರುವುದನ್ನು ಕಾಣಬಹುದು.

'ಬಹುಶಃ ಅದು ಮಹಾರಾಷ್ಟ್ರದ ಹೋಳ್ಕರ್ ಮಹಾರಾಜನ ಆಡಳಿತವಿದ್ದ ಒಂದು ಗ್ರಾಮ. ಅಲ್ಲಿ ಹುಟ್ಟಿದವನು ನಾನು. ತಂದೆ ತಾಯಿಯ ಹೆಸರುಗಳೇ ನನಗೆ ಸರಿಯಾಗಿ ಗೊತ್ತಿಲ್ಲ. ಚಿಕ್ಕಂದಿನಲ್ಲಿ ನನ್ನ ಕೊರಳಲ್ಲಿ ಸರ, ಕಿವಿಗೆ ಹತ್ತ ಕಡಕು, ಕಾಲಿಗೆ ಕಡಗ, ಗೊಲುಸುಗಳೆಲ್ಲ ಇರುತ್ತಿದ್ದುದರಿಂದ ಬಹುಶಃ ನನ್ನ ತಂದೆ ತಾಯಿ ಶ್ರೀಮಂತರಿದ್ದಿರಬೇಕು ಅಂದುಕೊಳ್ಳುತ್ತೇನೆ. ನನ್ನನ್ನು ನೋಡಿಕೊಳ್ಳಲೆಂದೇ ನೌಕರರಿದ್ದರು. ನನ್ನ ತಾಯಿ ತುಂಬ ಬೆಳ್ಳಗೆ ಎತ್ತರಕ್ಕಿದ್ದ ಹೆಣ್ಣು ಮಗಳು. ಒಬ್ಬ ಮುದುಕಿ ನನ್ನನ್ನು ಸದಾ ನೋಡಿಕೊಳ್ಳುವ ನೌಕಾರಾನಿ ಇದ್ದಳು. ಒಬ್ಬ ಮುದ್ದಾದ ತಂಗಿ ಇದ್ದ ನೆನಪು. ಅಷ್ಟು ಬಿಟ್ಟರೆ ಮತ್ಯಾವುದೇ ವಿವರಗಳು ನನ್ನ ಮನೆತನಕ್ಕೆ ಸಂಬಂಧಿಸಿಂದತೆ ನನಗೆ ನೆನಪಿಲ್ಲ. ಹಾಂ. ನನ್ನನ್ನು ನೋಡಿಕೊಳ್ಳುತ್ತಿದ್ದ ನೌಕಾರಾನಿಯ ಹೆಸರು ಚಂಪಾ ಅದೊಂದು ಹೆಸರು ಯಾಕೆ ನೆನಪಿದೆಯೋ ನೋಡಿ? ಅಂತೂ ಇದೆ'.[೧೫] ಇದು ಮೆಡೋಸ್ ಟೇಲರ್ ಅವರ ಕೃತಿಯಾಧಾರಿತ ರೇಷ್ಮೆ ರುಮಾಲುವಿನ ಒಂದು ಭಾಗ. ಅಲ್ಪ ಪ್ರಮಾಣದಲ್ಲಿ ಉತ್ತರ ಕರ್ನಾಟಕದ ಭಾಷೆಯನ್ನು ಹೊಲುತ್ತದೆಯಾದರೂ ನಿಕರವಾಗಿ ಪ್ರಾದೇಶಿಕ ಹಿನ್ನೆಲೆಯಲ್ಲಿ ಭಾಷಿಕ ಅಂಶಗಳನ್ನು ಗುರುತಿಸಲು ಅವಕಾಶವಿಲ್ಲ. ಇದೇ ಮೂಲ ಕೃತಿಯನ್ನು ಶಂಕರನಾರಾಯಣರಾವ್ ಅವರು ಅನುವಾದ ಮಾಡಿದ್ದಾರೆ. ಅದರಲ್ಲಿ ಅದೇ ಭಾಗವನ್ನು ಗಮನಿಸುವುದಾದರೆ 'ಈಚೀಚಿನವರೆಗೂ ನನಗೆ ನಾನು ಹುಟ್ಟಿದ ಹಳ್ಳಿ ಹೋಳ್ಕರ್‌ನ ಇಂದೋರ್ ರಾಜ್ಯದಲ್ಲಿತ್ತು ಅನ್ನುವದು ಹೊರತು ನನ್ನ ಸಣ್ಣ ವಯಸ್ಸಿನ ವಿಚಾರ ಏನೇನೂ ನೆನಪಿರಲಿಲ್ಲ. ತಂದೆ ತಾಯಿ ಯಾರೋ ಗೊತ್ತಿಲ್ಲ. ಆದರೆ ಅವರು ಸ್ಥಿತಿವಂತರು ಅಂತ ಕಾಣುತ್ತೆ ನನ್ನ ಮೈ ಮೇಲೆ ಚಿನ್ನ ಬೆಳ್ಳಿ ಆಭರಣಗಳು ಇದ್ದದ್ದು, ಜವಾನರಿದ್ದುದ್ದು ಸ್ವಲ್ಪ ನೆನಪಿದೆ. ಎತ್ತರವಾಗಿದ್ದು ನೋಡೋಕ್ಕೆ ಚೆನ್ನಾಗಿದ್ದ ಒಬ್ಬ ಹೆಂಗಸಿನ ಜ್ಞಾಪಕವೂ ಮಸುಕು ಮಸುಕಾಗಿ ಇದೆ. ಹಾಗೆ ಒಬ್ಬಳು ವಯಸ್ಸಾದ ಹೆಂಗಸಿನ ನೆನಪೂ ಇದೆ. ಅವಳು ಯಾವಾಗಲೂ ನನ್ನ ಜೊತೆ ಇರ್ತಿದ್ದಳು. ಬಹುಶಃ ಅವಳು ದಾರಿ ಇರಬೇಕು. ಆಮೇಲೆ ನನಗೊಬ್ಬಳು ಪುಟ್ಟ ತಂಗಿ ಇದ್ದಳು. ಅವಳ ಮೇಲೆ ನನಗೆ ಪಂಚಪ್ರಾಣ. ನಾನು ಮುಂದೆ ಹೇಳುವ ಘಟನೆಯವರೆಗಿನ ಯಾವ ವಿಚಾರವೂ ನನಗೆ ಮನಸ್ಸಿನಲ್ಲಿ

ಉಳಿದಿಲ್ಲ. ಆ ಘಟನೆ ಮಾತ್ರ ಅಚ್ಚೊತ್ತಿದ ಹಾಗಿದೆ'.೧೬ ಇವೆರಡರ ಅನುವಾದದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಕಾಣುವುದಾದರೂ ಅರ್ಥದಲ್ಲಿ ಅಂಥದೇನು ಇಲ್ಲ. ಆದರೆ ಅದು ಇಲ್ಲಿ ಅಪ್ರಸ್ತುತ. ಭಾಷಿಕವಾಗಿ ಗುರುತಿಸುವ ಅಂಶಗಳು ಯಾವ ಭಾಗದಲ್ಲೂ ಕಾಣಬರುವುದಿಲ್ಲ. ಅವುಗಳನ್ನು ಗ್ರಾಂಥಿಕ ರೂಪದಲ್ಲಿ ತಂದಿರುವುದರಿಂದ ಭಾಷಿಕ ವೈಶಿಷ್ಟ್ಯವನ್ನು ತೋರುವುದಕ್ಕೆ ಹೆಚ್ಚಿನ ಅವಕಾಶವೇನೂ ಇಲ್ಲವೆನಿಸುತ್ತದೆ. ಅದಕ್ಕೆ ಬಹುಶಃ ಇದರ ವಿಷಯ, ವಸ್ತುಗಳೇ ಕಾರಣವಿರಬಹುದು.

ಒಟ್ಟಾರೆ ರವಿಯವರ ಅನುವಾದಗಳ ಭಾಷೆಗೆ ಸಂಬಂಧಿಸಿದಂತೆ ಹೇಳುವುದಾದರೆ ಕಾದಂಬರಿಗಳಲ್ಲಿ ಪ್ರಾದೇಶಿಕ ಭಾಷಾ ವೈಶಿಷ್ಟ್ಯವನ್ನು ಗುರುತಿಸಬಹುದು. ಆದರೆ ಅದೇ ಸೃಜನೇತರ ಕೃತಿಗಳ ಅನುವಾದದಲ್ಲಿ ಗ್ರಾಂಥಿಕ ಭಾಷೆಯನ್ನು ಕಾಣಬಹುದು. ಅಲ್ಲಿ ಇತರ ಭಾಷೆಯ ಬಳಕೆಯು ಕಂಡುಬರುತ್ತದೆ. ಹೆಚ್ಚಿನದಾಗಿ ಇಂಗ್ಲೀಶ್ ಭಾಷೆಯಲ್ಲದ್ದ ಕೃತಿಗಳನ್ನು ಅನುವಾದಿಸಿದ್ದಾರೆ. ಅವುಗಳಲ್ಲೆ ಕೆಲವು ಸಂಭಾಷಣೆ ರೂಪದಲ್ಲಿದರೂ, ಗ್ರಾಂಥಿಕ ಭಾಷೆಯನ್ನು ಬಳಸಿದ್ದಾರೆ. ಹಾಗಾಗಿ ಸೃಜನಶೀಲ ಭಾಗದಲ್ಲಿ ಭಾಷಿಕ ಅಂಶಗಳನ್ನು ಗುರಿತಿಸುವ ಹಾಗೆ ಅನುವಾದಗಳಲ್ಲಿ ಭಾಷಿಕವಾಗಿ ಅಂತಹ ವೈಶಿಷ್ಟ್ಯವೇನು ಕಂಡುಬರುವುದಿಲ್ಲ ಎಂದು ಹೇಳಬಹುದು.

**ರವಿ ಬೆಳಗೆರೆಯವರ ಬರಹದಲ್ಲಿ ಪ್ರಾದೇಶಿಕತೆ**

ಭಾಷೆ ಮತ್ತು ಅದರ ಬಳಕೆಯನ್ನು ಕುರಿತಂತೆ ಕುತೂಹಲಕವಾದ ಪ್ರಶ್ನೆಗಳು ಹುಟ್ಟು ಹಾಕುವ ಅನೇಕ ವಿಷಯಗಳಿವೆ. ಅಂತೆಯೇ ಭಾಷೆ ಮತ್ತು ಸಾಹಿತ್ಯಗಳ ನಡುವೆ ಇರುವ ಸಂಬಂಧವೂ ಪ್ರಾಚೀನವಾದುದು. ಭಾಷೆಯು ಮನುಷ್ಯರ ಒಂದು ವಿಶೇಷ ಸಾಮರ್ಥ್ಯವೆಂದು ತಿಳಿದು ಅದರ ಸ್ವರೂಪವನ್ನು ಅರಿಯಲು ತೊಡಗಿದ್ದಕ್ಕೆ ಸಾವಿರಾರು ವರ್ಷಗಳ ಚರಿತ್ರೆಯಿದೆ. ಆದರೆ ಈಗ ಉಪಭಾಷೆಗಳನ್ನು ನೋಡುವ ಕ್ರಮ ಬೇರೆಯಾಗಿದೆ. ಉಪಭಾಷೆಗಳನ್ನು ಅನುಬಂಧಗಳೆಂದು ನೋಡುವ ಬದಲು ಅವು ಭಾಷೆಯ ವಿಭಿನ್ನ ಅವಸ್ಥೆಗಳನ್ನು ಪ್ರತಿನಿಧಿಸುತ್ತವೆಯೆಂದು, ಅಲ್ಲದೇ ಒಂದು ಭಾಷಿಕ ಸಮುದಾಯ ಮತ್ತು ಪ್ರಾದೇಶಿಕ ಚಹರೆಗಳನ್ನು ಹೊಂದಿರುತ್ತವೆ ಎಂಬುದು ತಿಳಿದಿರುವಂತಹದ್ದು. ಆ ಒಂದು ಹಿನ್ನೆಲೆಯಿಂದ ರವಿ ಬೆಳಗೆರೆಯವರ ಬರಹಗಳಲ್ಲಿ ಭಾಷೆಯಲ್ಲಿ ಪ್ರಾದೇಶಿಕತೆಯನ್ನು ಗುರುತಿಸಬಹುದು. ಅನೇಕ ಬರಹಗಳಲ್ಲಿ ಅವರು ಕಂಡ ಊರು, ದೇಶ, ಭೌಗೋಳಿಕ ವಿವರಗಳು ಬೇರೆ ಬೇರೆ ವ್ಯಕ್ತಿಗಳು, ಘಟನೆಗಳನ್ನು ಪ್ರಾದೇಶಿಕ ಸೊಗಡಿನೊಂದಿಗೆ ವಿವರಿಸುತ್ತಾರೆ.

ಭಾಷೆ ಅನೇಕ ಉಪಭಾಷಾ ಪ್ರಭೇದಗಳನ್ನು ಒಳಗೊಂಡಿದೆ. ಹಲವು ವ್ಯಕ್ತಿಗಳಿಂದ ಕೆಲವು ಭಾಷಾ ವೈಶಿಷ್ಟ್ಯಗಳನ್ನು ಬೆಳೆಸಿಕೊಂಡು ನಿರ್ದಿಷ್ಟ ಪ್ರದೇಶ, ಸಾಮಾಜಿಕ ಪರಿಸರದಲ್ಲಿ ಬಳಸಲ್ಪಡುವ ಭಾಷೆಯನ್ನು ಸಾಮಾನ್ಯವಾಗಿ ಪ್ರಭೇದ ಭಾಷೆಯೆಂದು ಕರೆಯುತ್ತಾರೆ. ಇಂತಹ ವೈಶಿಷ್ಟ್ಯಗಳು ಹೆಚ್ಚಿರುವ ಒಂದೇ ಭಾಷೆಯಲ್ಲಿರುವ ಪ್ರಭೇದಗಳ ಗುಂಪನ್ನು ಉಪಭಾಷೆ ಎನ್ನುತ್ತಾರೆ. ಪ್ರಭೇದ ಭಾಷೆಯು ಒಂದು ಗ್ರಾಮ ಅಥವಾ ತಾಲೂಕು ಅತಿ ಹೆಚ್ಚು ಎಂದರೆ ಒಂದು ಜಿಲ್ಲೆಗೆ ಸೀಮಿತವಾಗಿರುತ್ತದೆ. ಆ ಒಂದು ದೃಷ್ಟಿಯಿಂದ ರವಿ ಬೆಳಗೆರೆಯವರ ಬರಹಗಳನ್ನು ಗಮನಿಸಿದಾಗ ಕಲಬುರ್ಗಿ, ಬಳ್ಳಾರಿ ಮತ್ತು ಕೊಡಗು ಜಿಲ್ಲೆಯ ಪ್ರಾದೇಶಿಕ ಉಪಭಾಷೆಗಳನ್ನು ಗುರುತಿಸಬಹುದು. ಅವುಗಳೆಂದರೆ

'ಆ ಮ್ಯಾಲ ಉಣ್ಣುವಂತೆ ಸುಮ್ನಿರಲೇ ಚಂದ್ಯಾ'

'ಏ ಹೊಲಿ ಸೂಳೀಮಗನ'

'ಬರ್‍ರಿ ಸಿದ್ದಪ್ಪ ಸಾವ್ಕಾರ್‍ರ'

'ಯಾಕಪಾ ಭೇರಮನ್ನ! ಬಡವರ ಮನಿ ಈಗ ನೆನಪಾತೇನು?'

'ಇಲ್ಲಿ ಬ್ಯಾಡ. ನಿನ್ನ ಆಳು ಮಗ ಯಲ್ಲಪ್ಪಗೂ ಕರಕೋ, ನಾಕೂ ಮಂದಿ ನಿಮ್ಮ ಹೊಲದಾಗ ಕೂತು ಮಾತಾಡೂಣು'

'ಜೀವಾ ಕೊಡತೇನ್ರಿ ಧಣೇರ!'

'ಒಬ್ಬ ಮನಿಶಾನ್ನ ಸಾಯ ಹೊಡದರ ಏಳೇ ತಿಂಗಳದಾಗ ಜೈಲಿಂದ ಹೊರಗ ಬಂದು ಬಿಡಬೌದು... ಹೌದಿಲ್ರೀ?'

'ಇದರಾಗ ನನಗೇನೂ ಪಾಯ್ದೆ ಇಲ್ಲ'

'ನಿನ್ನ ಹೊಲದ ಕಡಿಯಿಂದ ಸರಹೊತ್ತಿನ್ಯಾಗ ಬಂದೂಕಿನ ಗೋಳಿ ಹೊಡದ ಶಬ್ದ ಕೇಳುಸ್ತಾವಲ್ಲ ಸಿದ್ದಪ್ಪ?'

'ನೋಡೂ ನಿಂಗಪ್ಪ ನಿನ್ನ ತಂದೀನ ಕೊಂದಾನ. ಸುಮ್ಮನೆ ಕೂತರೆ ನಿನಗೂ ತೆಗೀತಾನ. ನಿನ್ನ ತಮ್ಮನೂ ತೆಗೀತಾನ...!'

'ಎಲ್ಲೀ ಮಟ ಓಡ್ತೀಯಲೇ ಹಡಸಿ ಮಗನೇ'

'ಕ್ಷಮಾ ಮಾಡಬೇಕು ಸಾಹೇಬರ'

ಮೇಲಿನ ಈ ಎಲ್ಲಾ ಉದಾಹರಣೆಗಳು ಕಲಬುರ್ಗಿ ಜಿಲ್ಲೆಯ ಅಫ್ಜಲಪುರ ತಾಲೂಕಿನ ಪ್ರಾದೇಶಿಕ ಉಪಭಾಷೆಯಾಗಿದೆ. ರವಿ ಬೆಳಗೆರೆಯವರು ತಮ್ಮ ಭೀಮಾತೀರದ ಹಂತಕರು ಕೃತಿಯಲ್ಲಿನ ಭೌಗೋಳಿಕ ಪರಿಸರ, ಘಟನೆ, ವ್ಯಕ್ತಿ, ವಿಷಯವನ್ನು ನಿರೂಪಿಸುವಾಗ ಪ್ರಮಾಣಿಕ ರೂಪವನ್ನು ಬಳಸಿದರೆ ಅಲ್ಲಿ ಬರುವ ಪಾತ್ರಗಳ ಸಂವಹನ ಮತ್ತು ತಮ್ಮನ್ನು ತಾವು ತೆರೆದುಕೊಳ್ಳುವುದು ಪ್ರಾದೇಶಿಕ ಭಾಷೆಯ ಮೂಲಕವೇ. ಅದರಂತೆ ಬಳ್ಳಾರಿ ಪರಿಸರದ ಒಳನುಡಿಗಳನ್ನು ಅವರ ಕೃತಿಗಳಲ್ಲಿ ನೋಡುವುದಾದರೆ.

'ಎದ್ದೇಳ್ರಿ... ನಿಮ್ಮ ಕೋಣೆಗೆ ಹೋಗಿ ಮಲಕ್ಕೊಳ್ಳಿ'

'ಸರಿಯಾದ್ದನ್ನೇ ಮಾಡ್ದ. ಎಲ್ಲಾ ಹೆಳ್ಕೊಂಡಿದ್ರೆ ನೀವು ಹಾಗೆ ಅವನನ್ನ ಹಚ್ಕೋತಾ ಇದ್ರಾ?'

'ಫೈಸಲು ಮಾಡಿಕ್ಯಂಡೇ ಬಾ. ಬೇಕಾದ್ರೆ ಆ ಕರೇ ಮುಖದ ಜೇಕಬ್ಬಿಗ್ಹೇಳಿ ಇನ್ನೊಂದು ಬಾಟ್ಲಿ ತರಿಸಿಡ್ತೀನಿ, ಮನೀಗೆ ಬಾ'

'ಸೀತವ್ವ ರೊಕ್ಕ ಕೊಡಾದು ಕಡಿಮಿರಭೌದ... ಬಡ್ಡಿ ಜಾಸ್ತಿಯಿರಭೌದು ಆದ್ರೆ ಮನಿಗೋದವರ್‍ನ ಬಾಯ್ತುಂಬ ಮಾತಾಡುಸ್ತಾಳ, ಮರ್‍ವಾದಿಲಿದ್ದ ಕಳುಸ್ತಾಳ'

'ಅದ್ರಾಗ ಮುಚ್ಚಿಡಾದೇನೈತೆ ತಮ್ಮಾ... ಒಂದ್ಸಲ ಕೆದ್ಯಾಸುರು ಬಂದ್ಯಾಲೆ ಅದು ಓಟ್ಟೆಗಾವಲ್ಲ.

ಸಿರಿಗೇರ್ಯಾಗಿನ ಮಂದೆಲ್ಲ ನನ್ನ ಅಂಡೇವು ಕಳ್ಳತನ ಮಾಡಿದೋನೇ ಅಂದ್ರು, ಊರು ಬಿಟ್ಟು ಓಡ್ಯೋದೆ. ಒಂದಲ್ಲ ಎಲ್ಡಲ್ಲ... ಊರೂರು ತಿರುಗಿದೆ'

'ಅಗಲೂ ರಾತ್ರಿ ದುಡಿದೀನಿ. ಕೈಯಾಗೆ ರವಟು ರೊಕ್ಕ ಮಾಡಿಕ್ಯಂಡೀನಿ'

'ಕೋಟಾ ನೋಟು ಮಾಡಿ ರೊಕ್ಕ ಮಾಡಿದೋನೇ ಅಂದ್ರು. ನಾನೇನು ಕಿವ್ಯಾಗಾಕ್ಯಂಬ್ಲಿಲ್ಲ ಮಂದಿಗೇನಂತೆ ಅಂಬ್ತಾರೆ'

'ನನಿಗೇನಪ್ಪಾ...ನನ ಮಗಳಂಬಾಕಿ ಬೇಸು ಓದಿಕ್ಯಂಡು ದೋಚ ಮಣಿಶ್ಯಾಳಾಗಿ ಒಳ್ಳೇ ಮನತನಸ್ತಾರ ಕೈ ಇಡುದು ಸುಕವಾಗಿರಬೇಕು ಸಣ್ಣ ಸೂಳೇಮಕ್ಳ ಸವಾಸ ನಮಿಗೆ ಬ್ಯಾಡ'

'ಲೇ... ಕತ್ಯಂತೋನೆ... ಮೊಳಕಾಲ ಮ್ಯಾಗ ಉಚ್ಚೆ ಒಯ್ಕಂಬಾ ಎಂಗುಸುರು... ಅವರೇನು ನಿರ್ಧಾರ ಮಾಡ್ತಾರಲೇ? ನಿರ್ಧಾರ ಮಾಡೋರು ಗಂಡುಸುರು ನಾವು'

'ಇಗ... ನನ್ನ ತಡವಬ್ಯಾಡಾ ಮತ್ತೆ ಯಾದುಕ್ಕೂ ಹೇಸಾ ಸೂಳೇಮಗ ಅಲ್ಲ ನಾನು'

'ಇಲ್ಲೇ ತಿವ್ದು ಎಣಾ ಮಲಗಿಸಿ ಬಿಡ್ತಿನಿ ನೋಡಿಕ್ಯಾ!' ಮಾಂಕೋವಿ

ಮುಂತಾದವುಗಳು. ಮೂಲತಃಹ ಬಳ್ಳಾರಿಯವರೇ ಆದ ರವಿ ಬೆಳಗೆರೆಯವರ ಅನೇಕ ಕೃತಿಗಳಲ್ಲಿ ಮತ್ತು ಅಂಕಣ ಬರಹಗಳಲ್ಲಿ ಬಳ್ಳಾರಿ ಪರಿಸರದ ಒಳನುಡಿ ಬಳಕೆಯಾಗಿರುವುದನ್ನು ಕಾಣಬಹುದು. ಇಲ್ಲಿ ಉದಾಹರಣೆಗಾಗಿ ನೋಡಿರುವುದು ಅವರ ಮಾಂಡೋವಿ ಕಾದಂಬರಿಯಿಂದ. ಜೊತೆಗೆ ಏಮ್ರಾ ಇಕ್ಕಡ? ಏಮೀ ಲೇದಪ್ಪಾ ಮೇಮುಚೇಸಿನ ಅಪರಾಧಾನಿಕಿ ನೀ ಕಾಳ್ಳ ಪಟ್ಟುಕುನಿ ನೀ ಕ್ಷಮಾಪಣ ಅಡುಗುದಾಮನಿ ವಸ್ತಮಿ? 'ನಾಕಾಳ್ಳು ಪಟ್ಟುಕುಂಟೇ ಅದೇ ಕಾಳ್ಳತೋ ಎಗ್ಗರಿಸಿ ತನ್ನಿ ಕಿಂದಿಕಿ ವೇಸ್ತಾನು!(ಏನೋ ಈ ಕಡೆ? ಏನು ಇಲ್ಲಪ್ಪ ನಾವು ಮಾಡಿದ ಅಪರಾದಕ್ಕೆ ನಿಮ್ಮ ಕಾಲುಹಿಡಿದು ಕ್ಷಮಾಪಣೆ ಕೇಳೋಣವೆಂದು ಬಂದೆವು? ನನ್ನ ಕಾಲುಹಿಡಿದುಕೊಂಡರೆ ಅದೇ ಕಾಲದಿಂದ ಒದ್ದು ಕೆಡವುತ್ತೇನೆ!) ಎಂಬ ತೆಲುಗು ಭಾಷೆ ಬಳಕೆಯನ್ನು ಇದು ಜೀವ ಇದುವೇ ಜೀವನ ಕೃತಿಯಲ್ಲಿ ನೋಡಬಹುದು. ಈ ಒಳನುಡಿಗಳಿಂದ ಓದುಗರು ವಸ್ತುಸ್ಥಿತಿಯನ್ನು ಸಮೀಪಿಸಿದ ಅನುಭವವಾಗುತ್ತದಲ್ಲದೆ ವಿಷಯಕ್ಕೆ ಹೆಚ್ಚಿನ ಮಹತ್ವವನ್ನು ತಂದುಕೊಂಡುತ್ತವೆ. ಇನ್ನೂ ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ ಹಿಮಾಗ್ನಿ ಕಾದಂಬರಿಯಲ್ಲಿ ಬಳಸಿರುವ ಕೊಡವ ಭಾಷೆಯನ್ನು ಗಮನಿಸುವುದಾದರೆ,

'Look, 'ರವೀಂದ್ರ, ನಾನ್ ಮದುವೆ ಆಪಲೆ ನಿನ್ನ, ಆಚೆಂಗಿ

ಹಿಮ ನಾ ನಾಡಮೋವ, ನಾನ್ ಜಾತಿಲ್ ಏನೇ ಆಯಿತಿಕ್ಕು.

ಅಚೆಂಗಿ ಕೊಡವನೇ ಮಂಗಲ ಆಯಿತಿಕ್ಕು. ನಾಡ ಪೊಟ್ಟೆಲಿ

ಪುಟ್ಟಿನವ ಮಾಚಿಮಾಡ ಹಿಮವಂತ.

ಎದೇ ಕಾರಣತ್ತೂ ನಿನ್ನ ಭಾರತಕ್ಕೆ ಪೋಪಲು ಬುಡುಲೆ, ಶರಣಾಗತ ನಾಪಲೂ ಬುಡುಲೆ. ಆಯಿಂಗ ಕೊಲ್ಲೋದು ಬುಟ್ಟು ನಾನೇ ಈ ಕೆಲ್ಸ ಮಾಡು'

'ನಾಳೇನೇ ಪೋಪಿ, ಕಾರ್ಲೋಸ್ ಮಾಥೂರ್ ನಾಕು ಅಪರಿಚಿತ ಏನಲ್ಲ'

'ನೀಡ ಪರ ಅಣ್ಣೋಕು ಬಂದವಳು ನಾನು. ಆಚೆಂಗಿ, ಭೇಟಿಯಾಯ್ತೇ ಪೋಪ'

'ಇಚ್ಚಕ್ ದಿನ ಇಚ್ಚಕ್ ವರ್ಷ ನೀನ್ ಎನ್ನ ಮಾಡಿಯಂಡು ಇಂಜಿಯಾ ನಾಕ್ ಗೊತ್ತಿಲ್ಲೇ ಅಂತ ಗ್ಯಾನ ಮಾಡಿಯುಂಡು ಉಳ್ಳಿಯಾ?'

ಆಚಂಗಿ ನಾನು ಒಕ್ಕೇ ಒಕ್ಕ ಸಾರಿ ಕಟ್ಟಿಂಡಿಲ್ಲೆ, ಅಣ್ಣಿರಲಿಲ್ಲೆ.'

**ಕಾದಂರಬರಿ, ಪ್ರವಾಸ ಮತ್ತು ಜೀವನ ಕಥನಗಳು**

ಕಾದಂಬರಿಗೆ ಸಂಬಂಧಿಸಿದಂತೆ ಅವರ ಬರಹಗಳನ್ನು ಗಮನಿಸಿದಾಗ ಅದು ಅಂಕಣ ಬರಹಗಳಿಗಿಂತ ಭಿನ್ನವಾಗಿರುವುದನ್ನು ಕಂಡುಬರುತ್ತದೆ. ಕಾದಂಬರಿಯ ವಸ್ತುವಿನ ಪರಿಸರದ ಭಾಷೆ, ಅನ್ಯಭಾಷೆ ಬಳಕೆಯನ್ನು ಗುರುತಿಸಬಹುದು. ಅನ್ಯ ಭಾಷೆಗೆ ಸಂಬಂಧಿಸಿ ಅಂಕಣ ಬರಹದಷ್ಟು ಇಲ್ಲಿ ಗುರುತಿಸಿಕೊಳ್ಳಲು ಸಾಧ್ಯವಿಲ್ಲ. ಇಲ್ಲಿ ರವಿ ಬೆಳಗೆರೆಯವರ ಕಾದಂಬರಿಗಳಲ್ಲಿ ಗುರುತಿಸಿಕೊಂಡ ಕೆಲವಾರು ಅಂಶಗಳನ್ನು ಈ ಮುಂದೆ ನೋಡಬಹುದು.

'ಯಾಕಾಗಬಾರದು, ಆತ ಜನ್ಮತಃ ಯೋಧನಂಥವನು'.

'ಅಕ್ಷರಧಾಮದಲ್ಲಿ ಅಪಾಂಗಳಾದ ಹುಡುಗಿ ಸಲ್ಲಿಸಬೇಕಾದ ಋಣ'

'ಕಾರ್ಲೋಸ್ ಒಂದು ವಿಷಯದಲ್ಲಿ ಮುಗುಮ್ಮಾಗಿ ಮಾತನಾಡುತ್ತಿದ್ದಾನೆ'

'ಅವನಿಗೆ ಎಂಬತ್ತೈದಿದ್ದಾವಾ ವರ್ಷ? ವೃದ್ಧ ಕಂಪ್ಯೂಟರ್'

'ಕುರ್ಚಿಯ ತುಂಬ ಕುಳಿತಿದ್ದ ಶಿವರಾಜಪ್ಪನೆಂಬ ಪದಾರ್ಥವನ್ನು ನೋಡಿ ನಿಜಕ್ಕೂ ಹೌಹಾರಿದ್ದ'

'ಮೊಳಕೈ ಮೂಳೆಯಲ್ಲಿ ಗುಮ್ಮಿಕೊಂದು ಬಿಡುತ್ತಾರೆ'

'ಚಲಪತಿಗಾಗಿ ಕೂಡ್ಲಿಗಿಯಿಂದ ತರಿಸಿದ 'ಪಿಟೀಲೊಂದನ್ನು ಆಯ್ಕೆ ಮಾಡಿದ್ದ'

'ಬೆಳಿಗ್ಗೆ ಏಳು ಮುಕ್ಕಾಲಿಗೊಮ್ಮೆ ಮಧ್ಯಾಹ್ನ ಹನ್ನೆರಡಕ್ಕೊಮ್ಮೆ ಮತ್ತೆ ಮೂರಕ್ಕೊಮ್ಮೆ ಸಂಜೆ ಆರಕ್ಕೊಮ್ಮೆ ಅವನಿಗೆ ಮಾಂಡೋವಿಯ ದೂರದರ್ಶನ'

'ಪ್ರೇಮವೂ ಸಾರ್ವತ್ರಿಕವೆಂಬುದೂ, ಭಗ್ನ ಪ್ರಣಯವು ಸಾಂಕ್ರಾಮಿಕವಾದುದೆಂಬುದು ಅವಳ ವಿಚಿತ್ರ ನಂಬಿಕೆಗಳಲ್ಲೊಂದಾಗಿತು ಮುಂತಾದವುಗಳು.

ಮೇಲಿನ ವಾಕ್ಯಗಳಲ್ಲಿ ಅಪಾಂಗಳಾದ, ಮುಗುಮ್ಮಾಗಿ, ವೃದ್ಧ ಕಂಪ್ಯೂಟರ್, ಪದಾರ್ಥ, ಗುಮ್ಮಿ, ಪಿಟೀಲೊಂದು, ದೂರದರ್ಶನ, ಸಾಂಕ್ರಾಮಿಕ ಮುಂತಾದ ಈ ರೀತಿಯ ಎಲ್ಲ ಪದಗಳನ್ನು ಒಂದು ವಿಶೇಷವಾದ ಅರ್ಥವನ್ನು ತರಲು ಬಳಸಿದ್ದಾರೆ. ಒಂದು ಸ್ಥಾನದಲ್ಲಿ ಈ ಮೊದಲೇ ಇದ್ದ ಶಬ್ದಕ್ಕೆ ಅರ್ಥವನ್ನು ನಿಭಾಯಿಸುವ ಶಕ್ತಿಯ ಕೊರತೆಯಿಂದಾಗಿ ಇಂತಹ ವಿಶೇಷ ಪದ ಪ್ರಯೋಗದ ಸಾಧ್ಯತೆಗಳಾಗುತ್ತವೆ. 'ಅಪಾಂಗಳು' 'ಅಂಗವಿಕಲಳು' ಎಂದು ಹೇಳುವುದಕ್ಕೆ ಬದಲಾಗಿ ಅಪಾಂಗಳು ಎಂದಿರುವುದು, ಮುಗುಮ್ಮಾಗಿ ಎಂದರೆ ಮುಗ್ಧತೆ, ಮಗು, ಅಮಾಯಕತೆಯ ನಟನೆ ಎಂಬಂಥ ಅರ್ಥಗಳು ಇರುವುದು. ಆದರೆ ಇಲ್ಲಿ ಅಮಾಯಕತೆಯ ನಟನೆಗೆ ಹೇಳಿರುವಂತಹದ್ದು 'ವೃದ್ಧ ಕಂಪ್ಯೂಟರ್' ಎಂದರೆ ಇಲ್ಲಿ ವ್ಯಕ್ತಿಯನ್ನು ಒಂದು ಯಂತ್ರಕ್ಕೆ ಹೋಲಿಸುವ ಮೂಲಕ ಆ ಯಂತ್ರದ ಶಕ್ತಿ ಈ ವ್ಯಕ್ತಿಯನ್ನು ಪ್ರತಿನಿಧಿಸುವಂತೆ ಮಾಡುವುದಕ್ಕೆ ಬಳಸಿರುವುದು. 'ಪದಾರ್ಥ'ವೆಂದರೆ ಸ್ಥಿತಿಯನ್ನು ಪ್ರತಿನಿಧಿಕರಿಸಿರುವಂತಹದು. 'ಪಿಟೀಲು' ಎಂದು ಕರೆದಿರುವುದು. 'ದೂರದರ್ಶನ' ಎಂದರೆ ಪದದ

ಅರ್ಥವೇ ಸೂಚಿಸುವಂತೆ ಹಿಂದೆ ಗುರುತಿಸಿದ ಸಮಯದಲ್ಲಿ ದೂರದಿಂದ ದರ್ಶನ ಎಂಬರ್ಥದಲ್ಲಿ ಬಂದಿರುವಂತದ್ದು. ಅವರ ಬರವಣಿಗೆಯಲ್ಲಿ ಇಂತಹ ಅನೇಕ ರೀತಿಯ ಪ್ರಯೋಗಗಳನ್ನು ಗುರುತಿಸಬಹುದಾಗಿದೆ.

ಈ ಎಲ್ಲ ಪದಗಳು ಹೇಳಬೇಕಾದದ್ದನ್ನು ವಿಶೇಷವಾಗಿ ಪರಿಣಾಮ ಬೀರುವಂತೆ ಹೇಳಲು ಪ್ರಯತ್ನಿಸಿದ ಫಲದಿಂದ ಬಳಕೆಯಾದವುಗಳು. ಅರ್ಥದ ಬದಲಾಗಿ ಅರ್ಥಗಳು ಬಂದಿವೆ. ಹೋಲಿಕೆಗಳಿವೆ, ಹೊಸ ಅರ್ಥಗಳಿವೆ. ಇದೆಲ್ಲವು ರವಿ ಬೆಳಗೆರೆಯವರ ಸೃಜನಾತ್ಮಕ ಭಾಷಾ ಶೈಲಿ ವಿಶೇಷತೆ ಎಂದು ಹೇಳಬೇಕಾಗುತ್ತದೆ.

**೪.೩. ಅಂಕಣ ಮತ್ತು ಪತ್ರ ಸಾಹಿತ್ಯ ಭಾಷೆ**

ಕನ್ನಡ ಭಾಷೆ ಅಚ್ಚಳಿಯದೇ ಉಳಿದುಕೊಂಡು ಬಂದಿದೆ. ಅಂದು ಬರೀ ಸರಕಾರಿ ದಾಖಲೆಗಳಲ್ಲಿ ಅಲ್ಲವಾದರೂ, ಜನತೆಯ ಬಾಯಿಯಲ್ಲಿ ಆಡು ಭಾಷೆಯಾಗಿ ತನ್ನ ಜಿಗುಟುತನ ಕಾಪಾಡಿಕೊಂಡು ಬಂದ ಕನ್ನಡ, ಅವಕಾಶ ಸಿಕ್ಕಿದೇ ತಡ ಪೂರ್ಣ ಸ್ವತಂತ್ರ ಶಕ್ತಿಯುತ ಭಾಷೆಯಾಗಿ ಪುಟಿದೆದ್ದು, ಇಂದು ತನ್ನ ಶ್ರೀಮಂತಿಕೆಯನ್ನು ಮೆರೆಯುತ್ತಿದೆ. ಶತಮಾನಗಳ ಕಾಲ ಪರನಾಡುಗಳ ಆಶ್ರಯ ಹಾಗೂ ಪ್ರಭಾವದಲ್ಲಿ ಬೆಳೆದ ಕಾರಣ ಆಡು ಭಾಷೆಯಲ್ಲಿ ವೈವಿಧ್ಯ ಉಳಿದಿದೆ. ಮೊದಲು ಪೇಶ್ವೆ ದರಬಾರಿನ ಭಾಗವಾಗಿದ್ದ ಧಾರವಾಡ, ಬೆಳಗಾವಿ, ಕಾರವಾರ ಹಾಗೂ ವಿಜಯಪುರ ಜಿಲ್ಲೆಗಳ ಕನ್ನಡ ಧ್ವನಿ, ತಮ್ಮದು ಮಾತ್ರ ಶುದ್ಧ ಕನ್ನಡ ಎಂದು ಇಂದಿಗೂ ಭಾವಿಸುತ್ತಿರುವ ಮೈಸೂರಿಗರ ಕನ್ನಡಕ್ಕಿಂತ ಭಿನ್ನವಾಗಿದೆ. ನಿಜಾಮನ ಆಳ್ವಿಕೆಗೆ ಸೇರಿ ಹೋಗಿದ್ದ ಕಲಬುರ್ಗಿ, ರಾಯಚೂರು, ಬೀದರ ಮತ್ತು ಯಾದಗಿರಿ ಜಿಲ್ಲೆಗಳ ಕನ್ನಡ ಉಳಿದ ಕನ್ನಡಿಗರಿಗೆ ಇಂಪಾಗಿ ಕೇಳದಿದ್ದರೂ ಅದರಲ್ಲಿ ಮಣ್ಣಿನ ವಾಸನೆ ಅಚ್ಚಳಿಯದೇ ಉಳಿದಿದೆ. ಅದರಲ್ಲಿನ ಗಡಸು ಅದಕ್ಕೆ ಗಂಡು ಭಾಷೆಯ ಸತ್ವವನ್ನು ಒದಗಿಸಿದೆ.

ಏಕತಂತ್ರ ಕರ್ನಾಟಕದ ಬೀಜ ಮೊಳೆತುದು ಉತ್ತರ ಕರ್ನಾಟಕದಲ್ಲಿ. ಆಗಿನ ಕನ್ನಡ ಭಾಷಾ ಪ್ರದೇಶಗಳಲ್ಲಿ ಪತ್ರಿಕೆಗಳು ಹೆಚ್ಚು ಕಡಿಮೆ ಏಕಕಾಲಕ್ಕೆ ಆರಂಭವಾದವು. ಇನ್ನೂ ಪತ್ರಿಕೋದ್ಯಮ ಎಂದರೆ ಏನು? ಪತ್ರಿಕೋದ್ಯಮಿ ಎಂದರೆ ಯಾರು? ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಂಡರೆ ಈ ಬೃಹತ್ ಉದ್ಯಮ ವಿಶಾಲ ನೋಟ, ವಿಶಾಲ ಅರ್ಥ ಹಾಗೂ ಅದರ ವಿಶಾಲ ವ್ಯಾಪ್ತಿ ಅರಿವಾಗುತ್ತದೆ. ಅದರ ಪ್ರಭಾವ ವಲಯವೂ ದೊಡ್ಡದು. ಆರಂಭದ ಇತಿಹಾಸದ ಪುಟಗಳ ಮೇಲೆ ಕಣ್ಣಾಡಿಸಿದರೆ ಪತ್ರಿಕಾ ಪ್ರಕಟಣೆ ಯಾವತ್ತೂ ಒಂದು ಉದ್ದಿಮೆಯಾಗಿರಲಿಲ್ಲ ಎಂಬ ಸ್ಪಷ್ಟ ತಿಳುವಳಿಕೆ ಮೂಡುತ್ತದೆ. ಪತ್ರಿಕೋದ್ಯಮ ಇಂದಿನ ಬೆಳವಣಿಗೆಯ ಯುಗದಲ್ಲಿ ವೃತ್ತಿ ಪ್ರಧಾನವಾದ, ಹಣಗಳಿಸುವ ಒಂದು ಸಾರ್ವಜನಿಕ ಮಾಧ್ಯಮ. ಪತ್ರಿಕೋದ್ಯಮ ಎನ್ನುವುದು ಅದರ ಸಮಗ್ರತೆಯ ಸಂಕ್ಷಿಪ್ತ ರೂಪ. ಇನ್ನು ಪತ್ರಿಕೋದ್ಯಮಿ ಎಂದರೆ? ಪತ್ರಕರ್ತರನ್ನೇ ಪತ್ರಿಕೋದ್ಯಮಿಗಳೆಂದು ಕರೆಯುವ ಪುರಾತನ ಪರಿಪಾಠ ಪತ್ರಿಕೋದ್ಯಮದಲ್ಲಿ ಪತ್ರಕರ್ತ ಅತಿ ಮಹತ್ವದ ಅಂಗವಾದರೂ ಅವನೇ ಎಲ್ಲವೂ ಅಲ್ಲ. ಆದರೆ ಉದ್ಯಮದ ಸರ್ವೋತ್ತಮ ಪ್ರತಿನಿಧಿ ಎಂದು ಕರೆಯಿಸಿಕೊಳ್ಳುವ ಯೋಗ್ಯತೆಯುಳ್ಳವನಂತೂ ಹೌದು. ಬಂಡವಾಳ ಹೂಡಿಕೆ, ಆಡಳಿತ ಕೌಶಲ್ಯ, ತರಬೇತಿ, ಉತ್ಪಾದನೆ, ಮಾರಾಟ, ಅಭಿವೃದ್ಧಿಗೆ ಬೇಕಾದ ಸರಕನ್ನು ಸಿದ್ದಪಡಿಸಿಕೊಡುವವನ ಹೆಸರು ಮುಂದೆ ಬಂದರೆ

ಅದು ಸಹಜ. ಆದುದರಿಂದ ಪತ್ರಕರ್ತನನ್ನು ಸಮಾಜ ಪತ್ರಿಕೋದ್ಯಮಿ ಎಂದೇ ಗೌರವಿಸುತ್ತದೆ. ಆದರೆ ನಿಜವಾದ ಅರ್ಥದಲ್ಲಿ ಅವನು ಪತ್ರಕರ್ತ, ಇಲ್ಲವೇ ಪತ್ರಿಕೋದ್ಯೋಗಿ.

ಪ್ರತಿಯೊಬ್ಬ ಪತ್ರಕರ್ತನಿಗೆ ಒಂದು ಕನಸು ಇರುತ್ತದೆ. ಒಂದು ಮಹತ್ವಾಕಾಂಕ್ಷೆ ಇರುತ್ತದೆ. ತಾನು ಕೆಲಸ ಮಾಡುವ ಪತ್ರಿಕೆಯ ಸಂಪಾದಕನಾಗಬೇಕು. ಕೆಲಸದ ಅನುಭವದಿಂದ ಹೊಸ ಹೊಸ ವಿಚಾರಗಳು ಅವನಲ್ಲಿ ಸ್ಫುರಿಸುತ್ತವೆ. ತನ್ನ ಪತ್ರಿಕೆಯನ್ನು ಈಗಿರುವುದಕ್ಕಿಂತ ಹೆಚ್ಚು ಚೆನ್ನಾಗಿ ರೂಪಿಸಬೇಕು. ಅದರ ವಾಚನ ಮೌಲ್ಯ ಹೆಚ್ಚಿಸಬೇಕು. ಹೊಸ ಹೊಸ ಪ್ರಯೋಗಗಳನ್ನು ಮಾಡಬೇಕು ಎನ್ನುವ ಅಭಿಲಾಷೆಯಿಂದ ಅವನಲ್ಲಿ ಮಹತ್ವಾಕಾಂಕ್ಷೆ ಮೊಳಕೆಯೊಡೆಯುತ್ತದೆ. ಆದರೆ ಇಲ್ಲಿ ಇದೆಲ್ಲವೂ ಸಾಧ್ಯವಾಗದೇ ಹೋದರೆ ತನ್ನದೇ ಆದ ಆದರ್ಶವನ್ನು ಚಿತ್ರಿಸುವ ಪತ್ರಿಕೆಯನ್ನು ಆರಂಭಿಸುತ್ತಾನೆ. ಲಂಕೇಶ್ ಮತ್ತು ರವಿ ಬೆಳಗೆರೆ ಮಾಡಿದ್ದು ಅದನ್ನೇ. ಇಷ್ಟು ಸುದೀರ್ಘ ಪೀಠಿಕೆಯ ಕಾರಣವಿಷ್ಟೇ. ರವಿ ಬೆಳಗೆರೆಯವರು ಪತ್ರಕರ್ತರು ಮತ್ತು ಸಂಪಾದಕರು ಎಂಬುದು ಈಗಾಗಲೇ ತಿಳಿದ ವಿಷಯ. ಅವರ ಪತ್ರಿಕೆಯ ಬರವಣಿಗೆ, ಅವಶ್ಯಕತೆ, ಅನಿವಾರ್ಯತೆಗಳು ಮತ್ತು ಭಾಷೆ, ಸಾಹಿತ್ಯ ಬರಹಗಳ ಮೇಲೆ ಪ್ರಭಾವ ಬೀರಿರುವುದನ್ನು ಗಮನಿಸುವಾಗ ಈ ಹಿನ್ನೆಲೆಯ ಮಾಹಿತಿ ಅವಶ್ಯವೆನಿಸಿ ಪ್ರಸ್ತಾಪಿಸಬೇಕಾಯಿತು. ಅದರಂತೆಯೆ ತಲೆಬರಹ ಮತ್ತು ಅಂಕಣ ಬರಹದ ಸ್ವರೂಪವನ್ನು ಅರಿಯಲು ಸಹಾಯಕವಾಯಿತು. ಇದರ ಜೊತೆಗೆ ತಲೆ ಬರಹ, ಅಂಕಣ ಬರಹ, ಪತ್ರಿಕಾ ಭಾಷೆಯ ವೈಶಿಷ್ಟ, ಪತ್ರಿಕಾ ಭಾಷೆಯಲ್ಲಿ ಸರಳ ವಾಕ್ಯಗಳ ಪಾತ್ರ, ಪತ್ರಿಕಾ ಭಾಷೆಯಲ್ಲಿ ಶಬ್ದಗಳ ಸರಿಯಾದ ಬಳಕೆ, ಕನ್ನಡ ಭಾಷೆಯಲ್ಲಿ ಹೊಸ ಪದಗಳ ಸೃಷ್ಟಿ. ಇತ್ಯಾದಿ ಅಂಶಗಳು ಪತ್ರಿಕೆಯ ಅಗತ್ಯ ಅಂಶಗಳು. ಅವು ರವಿಯವರ ಸಾಹಿತ್ಯ ಬರವಣಿಗೆಯಲ್ಲಿ ಬೀರಿರುವ ಪ್ರಭಾವಗಳನ್ನು ತಿಳಿಯಲು ಸಹಾಯಕವಾಗಿವೆ.

**ತಲೆ ಬರಹ**

ಒಂದು ಸುದ್ಧಿ ಅದು ಮಹತ್ವದಲ್ಲಿ ಸಣ್ಣದೇ ಇರಲಿ, ದೊಡ್ಡದೇ ಇರಲಿ ಅದರ ಮೌಲ್ಯಕ್ಕೆ ಸರಿಹೋಗುವ ತಲೆ ಬರಹ ಇರಬೇಕು. ಅದು ಅರ್ಥಪೂರ್ಣವಾಗಿರಬೇಕು. ಆಕರ್ಷಕವಾಗಿರಬೇಕು. ಸುದ್ದಿಯಲ್ಲಿ ಏನಾದರೂ ವೈಶಿಷ್ಟ್ಯವಿದ್ದರೆ ಅದು ಎದ್ದು ಕಾಣುವಂತಿರಬೇಕು. ಅದು ಕೇವಲ ಶಬ್ದಜಾಲವಾಗಿರಬಾರದು. ಹಿಂದೆ ಕ್ರಿಯಾಪದ ಸಹಿತ ಉದ್ದ ಉದ್ದ ವಾಕ್ಯಗಳಲ್ಲಿ ತಲೆ ಬರಹಗಳನ್ನು ಕೊಡುವ ಪದ್ಧತಿ ಇತ್ತಂತೆ. ತಲೆ ಬರಹ ನೋಡಿಯೇ ಓದುಗ, ತಕ್ಷಣ ಸುದ್ದಿಯಲ್ಲಿ ಆಸಕ್ತಿ, ಕುತೂಹಲ ತಳೆಯುವಂತಿರಬೇಕು. ಸುದ್ದಿಯ ಸ್ವರೂಪ ಗಮನಿಸಿ ಅದರ ಭಾವಕ್ಕೆ ಅನುಗುಣವಾದ ತಲೆ ಬರಹ ಕೊಡಬೇಕು. ಆದಷ್ಟು ಕಡಿಮೆ ಶಬ್ದಗಳಿರಬೇಕು. ತಲೆ ಬರಹ ಸುದ್ದಿಯ ಆಶಯಕ್ಕೆ ವ್ಯತಿರಿಕ್ತವಾಗಿರಬಾರದು. ಸುದ್ದಿಯ ಮೊದಲನೆಯ ವಾಕ್ಯ ವೃಂದದರಲ್ಲಿ ಇಡೀ ಸುದ್ದಿಯ ಸಾರ ಅಥವಾ ತಿರುಳು ಇರಬೇಕು. ತಲೆ ಬರಹ ಸುದ್ದಿಯ ಇನ್ನೊಂದು ಸ್ವರೂಪದಂತಿರಬೇಕು.

ಒಂದು ತಲೆಬರಹದ ಸಮರ್ಪಕತೆಯನ್ನು ನಿರ್ಧರಿಸುವ ಸಂಗತಿ ಯಾವುದು? ಅದನ್ನು ಎಷ್ಟು ಶಬ್ದಗಳಲ್ಲಿ ವಿವರಿಸಿದರೂ ಸಾಲದು. ಅತ್ಯುತ್ತಮ ಉಪಾಯವೆಂದರೆ, ತಾನು ಬರೆದ ತಲೆಬರಹವನ್ನು ತಾನೇ ತನ್ನ ಕಿವಿಗೆ ಕೇಳುವಂತೆ ಉಚ್ಚರಿಸಿಕೊಳ್ಳಬೇಕು. ಅದು ಅವನ ಕಿವಿಗೆ ಹಿತವಾಗಿ ಧ್ವನಿಸಿದರೆ ಅದು ಒಂದು ಒಳ್ಳೆಯ ತಲೆ ಬರಹ. ಪ್ರತಿಯೊಂದು ಶಬ್ದಕ್ಕೂ ಧ್ವನಿ

ಇರುತ್ತದೆ. ಅದಕ್ಕೆ ರಮ್ಯತೆಯನ್ನು ಕೊಡುವವನು ಬರಹಗಾರ. ಅದನ್ನು ಗುರುತಿಸುವ ಪ್ರಜ್ಞೆ ಅಗತ್ಯ. ತಲೆ ಬರಹ ಕೊಡಬೇಕಾದರೆ ವಿಷಯದ ಮುಖ್ಯಾಂಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಬರಹದ ಘನತೆ, ಯೋಗ್ಯತೆ, ವಸ್ತುನಿಷ್ಠತೆಯನ್ನು ತಲೆ ಬರಹ ಓದುಗರಿಗೆ ಮನದಟ್ಟು ಮಾಡಿಕೊಡುತ್ತದೆ. ತಲೆ ಬರಹ ಒಂದು ಕಲೆ ಎಂಬುದು ತಿಳಿದ ವಿಷಯ. ಸರಕನ್ನು ಗ್ರಾಹಕನಿಗೆ ಮಾರಾಟ ಮಾಡುವ ನೈಪುಣ್ಯತೆ ಅದರಲ್ಲಿರಬೇಕಾಗುತ್ತದೆ. ತಲೆ ಬರಹವನ್ನು, ಅರ್ಥ ಬಲಿಗೊಡದೆ ಚಮತ್ಕಾರಿಕವಾಗಿ, ಪ್ರಾಸಬದ್ಧವಾಗಿ ಬರೆಯಬಹುದು.

ಸಾಮಾನ್ಯವಾಗಿ ಪತ್ರಿಕೆಗಳಲ್ಲಿ ಬರುವ ಸುದ್ದಿಗಳು ಏಕತಾನತೆಯಿಂದ ಕೂಡಿರುತ್ತಿವೆ. ತಲೆ ಬರಹಗಳು ಸಪ್ಪೆಯಾಗಿದ್ದು ಆಕರ್ಷಿಸುವಲ್ಲಿ ವಿಫಲವಾಗುತ್ತವೆ. ಸಾಮಾನ್ಯ ತಲೆ ಬರಹಗಳೆಂದರೆ ನಿಧನ ಸುದ್ಧಿ, ಅಧಿಕಾರ ಸ್ವೀಕಾರ, ಮಹಿಳೆಯ ಮೇಲೆ ಅತ್ಯಾಚಾರ, ಪದಾಧಿಕಾರಿಗಳು, ಶಂಕುಸ್ಥಾಪನೆ, ನ್ಯಾಯಾಲಯ ತೀರ್ಪು ಮುಂತಾದವುಗಳು ಎಲ್ಲಾ ಪತ್ರಿಕೆಗಳಲ್ಲೂ ಒಂದೇ ತೆರನಾಗಿರುತ್ತವೆ. ತಲೆ ಬರಹಗಳನ್ನು ನೋಡಿ ಓದುವ ಓದುಗರಿದ್ದಾರೆ. ಪತ್ರಿಕೆಗಳ ವಿಷಯಕ್ಕೆ ಸಂಬಂಧಿಸಿದಂತೆ 'ರಸ್ತೆಯ ಅಪಘಾತ–ಯಾರು ಸತ್ತಿಲ್ಲ' ಎಂದು ತಲೆ ಬರಹ ಕೊಟ್ಟರೆ, ಯಾರಾದರೂ ಸಾಯಬೇಕಿತ್ತೇ ಎಂದು ಸಹಜವಾಗಿ ಪ್ರಶ್ನೆಗಳು ಎದುರುಗುತ್ತವೆ. ಇದು ಅಂಕಣ ಬರಹಗಳಿಗೂ ಅನ್ವಯಿಸುತ್ತದೆ.

'ಗೆಳೆಯರಿದ್ದಾರೆ ಎಚ್ಚರಿಕೆ!' (ಬಾಟಮ್ ಐಟಮ್)

ಈ ತಲೆ ಬರಹ ಹೊಂದಿರುವ ಲೇಖನದಲ್ಲಿ ಆಯ್ಕೆಯ ಪ್ರಶ್ನೆಗೆ ಸಂಬಂಧಿಸಿದಂತೆ ಮಾತನಾಡಲಾಗಿದೆ. 'ಇಲ್ಲಿ ನಾಯಿ ಇದೆ ಎಚ್ಚರಿಕೆ' ಎಂದು ಯಾವುದೋ ಮನೆಯ ಮುಂದಿನ ಫಲಕದಂತೆ, 'ಮುಂದೆ ತಿರುವು ಇದೆ ಎಚ್ಚರಿಕೆಯಿಂದ ಚಲಿಸಿ' ಎಂಬ ರಸ್ತೆಯ ಸೂಚನಾ ಫಲಕದಂತೆ ಇಲ್ಲಿಯೂ 'ಗೆಳೆಯರಿದ್ದಾರೆ ಎಚ್ಚರಿಕೆ!' ಎಂಬ ತಲೆ ಬರಹವನ್ನು ಕೊಡಲಾಗಿದೆ. ಕಾರಣವಿಷ್ಟೇ, ರಕ್ತ ಸಂಬಂಧಿಗಳ ವಿಷಯದಲ್ಲಿ ಆಯ್ಕೆಗೆ ಅವಕಾಶವಿರುದಿಲ್ಲ, ಆದರೆ ಗೆಳೆಯರ ಪ್ರೀತಿಸುವವರ ವಿಷಯದಲ್ಲಿ ಆಯ್ಕೆಗಳಿರುತ್ತವೆ. ಎಷ್ಟೋ ಸಲ ಬೇರೆ ದಾರಿಯಿಲ್ಲ ಎಂಬ ಕಾರಣಕ್ಕೆ ಕೆಲವು ಕೆಲಸಗಳನ್ನು ಮಾಡಿಬಿಟ್ಟಿರುತ್ತವೆ. ಅದಕ್ಕಿಂತ ಹೆಚ್ಚು ಅವರು ಆಯ್ಕೆ ಮಾಡಿಕೊಳ್ಳುವ ಗೆಳೆಯರ ವಿಷಯದಲ್ಲಿ ಆಗಬಿಟ್ಟಿರುತ್ತದೆ. ಹೊಸತರಲ್ಲಿ ಒಂಟಿ ಎನಿಸಿ ಅಥವಾ ಇನ್ನಿತರ ಯಾವ್ಯಾವುದೋ ಕಾರಣಗಳಿಂದಾಗಿ ತಮ್ಮ ವ್ಯಕ್ತಿತ್ವ, ಅಭಿಪ್ರಾಯ, ಬುದ್ಧಿವಂತಿಕೆ, ಇಷ್ಟಗಳಿಗೆ ಸಂಬಂಧವೇ ಇಲ್ಲದಂಥವರೊಬ್ಬರನ್ನು ಗೆಳೆತನ ಮಾಡಿಕೊಂಡು ಬಿಟ್ಟಿರುತ್ತೇವೆ. ಆಯ್ಕೆಗಳಿದ್ದಾಗ್ಯೂ ಅವರು ಆಯ್ಕೆಗಳ ಬಗ್ಗೆ ಯೋಚಿಸುವುದಿಲ್ಲ. ಅವರ ವ್ಯಕ್ತಿತ್ವಕ್ಕೆ ತೀರ ತದ್ವಿರುದ್ಧವಾದ ವಲಯ ಸೃಷ್ಟಿಸಿಕೊಂಡು ಬಿಟ್ಟಿರುತ್ತಾರೆ. ಅದರಾಚೆಗೆ ಇವರು ಬೆಳೆಯುವುದಿಲ್ಲ. ಅವರಂತೂ ಬೆಳೆಸುವ ಸಾಧ್ಯತೆಗಳಿರುವುದಿಲ್ಲ. ಗೆಳೆತನ ಬೆಳೆಸುವಲ್ಲಿ, ಪ್ರೇಮದಲ್ಲಿಯೂ ಆಯ್ಕೆಗಳಿವೆ ಎಂದು ಹೇಳಿ ಕೆಟ್ಟ ಗೆಳೆಯರೂ ಇದ್ದಾರೆ ಎಂದು ಎಚ್ಚರಿಸುವ ಪ್ರಯತ್ನವೇ ಈ ತಲೆ ಬರಹ. ಇದು ಸಾದೃಷ್ಯ ಸೃಷ್ಟಿಯಿಂದ ಉದಯಿಸಿದ ತಲೆ ಬರಹ ಇದೇ ರೀತಿಯ ತಲೆಬರಹಗಳೆಂದರೆ,

'ಇದು ತಾಯಂದಿರಿಗೆ ಮಾತ್ರ!' (ಬಾ.ಐ)

'ಇದು ಕೇವಲ ಮಧ್ಯ ವಯಸ್ಕರಿಗೆ ಮಾತ್ರ!' (ಬಾ.ಐ)

'ಏನಂದ್ಕಂಡಿದೀಯ ನನ್ನನ್ನ ಅಂತ ಯಾರನ್ನೂ ಕೇಳಬೇಡಿ!'

'ಏನಂದ್ಕಂಡಿದೀಯ ನನ್ನನ್ನ? ಅಂತ ಯಾರನ್ನಾದರೂ ಕೇಳುವ ಮುನ್ನ ನನ್ನ ಬಗ್ಗೆ ನಾನೇನು ಅಂದುಕೊಂಡಿದ್ದೇನೆ ಎಂಬುದನ್ನು ನಾವೇ ಕೇಳಿಕೊಳ್ಳಬೇಕು ಎಂಬುದು ಈ ತಲೆ ಬರಹ ಹೇಳಹೊರಟಿರುವ ತಿರುಳು. ನಾನೇನು, ನನ್ನ ಶಕ್ತಿಯೇನು ಅಂತ ಉಳಿದವರಿಗಿಂತ ನನಗೆ ಚೆನ್ನಾಗಿ ಗೊತ್ತಿರುತ್ತದೆ. ನನ್ನ ಶಕ್ತಿಯನ್ನು ಅನುಮಾನಿಸುವುದರಲ್ಲಿ ಅರ್ಥವಿಲ್ಲ. ಅದನ್ನೇ ಅವಮಾನಿಸಿಕೊಂಡರೆ ಯಾವ ಸಾಧನೆಯೂ ನನ್ನದಾಗುವುದಿಲ್ಲ. 'ಅಯ್ಯೋ ನನ್ನಂಥವನ ಕೈಲಿ ಏನಾಗುತ್ತೆ?' ಅಂತ ಕೂತು ಬಿಟ್ಟರೆ ಆಗಬಹುದಾದ್ದೂ ಆಗುವುದಿಲ್ಲ. ಒಂದು ಆರೋಗ್ಯವಂತ ಸ್ವಾರ್ಥವನ್ನು ಬೆಳೆಸಿಕೊಳ್ಳಲು ಪ್ರೇರೇಪಿಸುವ ಉದ್ದೇಶವನ್ನು ಹೊಂದಿರುವುದು ಈ ತಲೆ ಬರಹದ ಲೇಖನ.

'ಆ ಹೆಣ್ಣು ಮಗಳಿಗೊಂದು ನಂಬುಗಸ್ಥ ಕಿವಿ ಬೇಕು!'

ಈ ತಲೆ ಬರಹ ಹೇಳ ಹೊರಟಿರುವುದಿಷ್ಟೇ ಗಂಡನಿಂದ ವಂಚನೆಗೊಳಗಾದ ಗೃಹಿಣಿಯ ಅಳಲು ಮತ್ತು ಆ ಅಳಲನ್ನು ಆಲಿಸುವ ಬುದ್ಧ ಸಹನೆಯ ಕಿವಿ ಅಥವಾ ವ್ಯಕ್ತಿ. ಆಕೆಯ ಅಥವಾ ಅಂಥವರ ಯಾವ ಸಮಸ್ಯೆಗೆ ಯಾವ ಪರಿಹಾರ ಹೇಳಲು ಹೋದರೂ, ಆಕೆಗದು ಸಮ್ಮತವಿಲ್ಲ. ಏನೇ ಹೇಳಿದರೂ ಅದಕ್ಕೊಂದು ಕಥೆ ಹೇಳುತ್ತಾಳೆ. ಇಂಥದ್ದಾಗಬೇಕು ಅಂತ ಕೂಡ ಹೇಳುವುದಿಲ್ಲ. ಇಂಥದ್ದು ಮಾಡೋಣವಾ ಎಂದರೆ ಅದಕ್ಕೂ ಬೇಡವೆನ್ನುತ್ತಾಳೆ. ಮಾತನಾಡಲು ಬಿಟ್ಟರೆ ಸಂಜೆ ತನಕ ಹೀಗೆ ಮಾತನಾಡುತ್ತಲೇ ಇರುತ್ತಾಳೆ. ಯಾಕೆಂದರೆ ಆಕೆಗೆ ತನ್ನ ಸಮಸ್ಯೆಯ ಪರಿಹಾರಕ್ಕಿಂತ ಕೇವಲ ಕೇಳಿಸಿಕೊಳ್ಳಲಿಕ್ಕೊಂದು ಕಿವಿ ಬೇಕು! ಇಂಥ ಅನೇಕ ಪ್ರಕರಣಗಳಲ್ಲಿ ಅಸಲು ಸಮಸ್ಯೆಯೇ ಇರುವುದಿಲ್ಲ. ಸಮಸ್ಯೆಯನ್ನು ಅವರೇ ಕಲ್ಪಿಸಿಕೊಂಡಿರುತ್ತಾರೆ. ಆದ್ದರಿಂದ ಅವುಗಳಿಗೆ ಪರಿಹಾರವೂ ಇರುವುದಿಲ್ಲ. ಒಂದು ನಂಬಿಕಸ್ಥ, ಮಾನವೀಯ, ಅನುಕಂಪವುಳ್ಳ ಬೇರೆಯವರೊಂದಿಗೆ ಯಾವತ್ತೂ ಬಾಯಿ ಬಿಡದ ಸುಭದ್ರ ಕಿವಿ ಅವರಿಗೆ ಬೇಕು. ಅಂಥವರ ದೃಷ್ಟಿಯಿಂದ ಬರೆದ ಬರಹವಿದು. ಈ ತಲೆ ಬರಹದಲ್ಲಿ ಅಂಥವರಿಗೆ ಬೇಕಿರುವುದು ಕಿವಿಯಲ್ಲ, ಅಂಥ ಕಿವಿ ಹೊಂದಿರುವ ವ್ಯಕ್ತಿ ಎಂಬ ವಾಚಾರ್ಥವಿದೆ. ಆದರೆ ವ್ಯಕ್ತಿಯ ಬದಲಾಗಿ ವ್ಯಕ್ತಿಯ ಅಂಗದ ಪ್ರಸ್ತಾಪವನ್ನು ಮಾಡಿರುವುದು ಈ ತಲೆ ಬರಹದ ವಿಶೇಷ ಮತ್ತು ಆಕರ್ಷಣೀಯ.

'ಲೆಟ್ ಅಸ್ ಫೇಸ್ ದಿ ಕಷ್ಟ!'

ನಮಗೆ ಯಾಕಿಷ್ಟು ಕಷ್ಟ ಬರ್‍ತವೆ? ಹಾಗಂತ ಹೇಳಿಕೊಳ್ಳುವ ಮನುಷ್ಯ ಮತ್ತೊಬ್ಬರ ಕಷ್ಟಗಳತ್ತ ಗಮನ ಹರಿಸಿರುವುದಿಲ್ಲ. ಬೆಚ್ಚಗಿನ ಮನೆಯಲ್ಲಿ ಮುದ್ದಾಗಿ ಬೆಳೆದ ಹುಡುಗನಿಗೆ ಆಫೀಸಿನಲ್ಲಿ ಬಾಸು ಬೈದನೆಂಬುದೇ ಕಷ್ಟ, ಮೊದಲ ರ್‍ಯಾಂಕು ಬರುತ್ತಾನೆಂದು ಕೊಂಡಿದ್ದ ಮಗ ಮೂರನೇ ರ್‍ಯಾಂಕು ಬಂದುಬಿಟ್ಟನೆಂಬುದು ಎಷ್ಟೊಂದು ಕಷ್ಟ! ಮುಂತಾದವುಗಳು. ಇವು ಸುಖಕ್ಕೆ ಹುಟ್ಟಿದ ಕಷ್ಟಗಳು ಆಫೀಸಿನಲ್ಲಿ ಬಾಸು ಬೈದನೆಂದು ಮುಸುಡಿ ಕಿವುಚಿದ ಹುಡುಗನಿಗೆ 'ನೋ ವೇಕೆನ್ಸಿ' ಬೋರ್ಡು ನೋಡಿ ಹೋಗಿ ಉಪವಾಸ ಮಲಗುವ ನಿರುದ್ಯೋಗಿಯ ಸಂಕಟ ತೋರಿಸಬೇಕು. ರ್‍ಯಾಂಕು ತಪ್ಪಿದ ಮಗನನ್ನು ಬೈಯುವ ಅಪ್ಪನಿಗೆ ಬುದ್ಧಿಮಾಂದ್ಯ ಮಗುವಿನ ತಂದೆಯ ಸಹನೆ ಪರಿಚಯಿಸಬೇಕು. ನಮ್ಮ ಸಂತೋಷಗಳನ್ನು ಇತರರ ಸಂತೋಷಕ್ಕೆ ಹೋಲಿಸಿಕೊಂಡು, ಇಷ್ಟೇನಾ? ಅಂತ ಅಲುಬುವುದಕ್ಕಿಂತ ನಮ್ಮ ಕಷ್ಟಗಳನ್ನು ಇನ್ನೊಬ್ಬರ ಕಷ್ಟಗಳಿಗೆ ಹೋಲಿಸಿಕೊಂಡು ಸದ್ಯ

ಇಷ್ಟೇ ಅಲ್ಲ! ಅಂತ ಸಮಾಧಾನ ಪಟ್ಟುಕೊಳ್ಳುವುದು ಜಾಣತನ. ಇಂತಹ ಜಾಣತನದ ಆತ್ಮಸ್ಥೈರ್ಯವನ್ನು ಈ ಬರಹ ಕೊಡುತ್ತದೆ. ಕಷ್ಟಗಳು ಮನುಷ್ಯರಿಗಲ್ದೆ ಮರಕ್ಕೆ ಬರ್ತಾವೇನೋ? ಎಂದು ಹೇಳುವ ಹಳೆ ಕಾಲದವರ ಗಟ್ಟಿತನವನ್ನು ಪರಿಚಯಿಸುತ್ತದೆ. ಹಾಗೆ ಈ ತಲೆ ಬರಹದಲ್ಲಿ ನುಡಿ ಬೆರೆಕೆಯು ನಡೆದಿದೆ. ತಲೆ ಬರಹಗಳನ್ನು ಸುಂದರಗೊಳಿಸಲು, ಪರಿಣಾಮಕಾರಿಯಾಗಿಸಲು ಬೇರೆ ಬೇರೆ ಪ್ರಕಾರದ ಹಾಗೂ ಆಕಾರದ ತಲೆ ಬರಹಗಳನ್ನು ಬಳಸಬೇಕು. ತಲೆ ಬರಹವು ವಿಷಯದ ಮಹತ್ವ, ವಿಷಯದ ಸಮತೋಲನ ಮೊದಲಾದ ಸಂಗತಿಗಳನ್ನು ಅವಲಂಭಿಸಿರುತ್ತದೆ.

**ಅಂಕಣ ಬರಹ**

ಸಾಮಾನ್ಯ ಜ್ಞಾನ(ಕಾಮನ್‌ಸೆನ್ಸ್) ಈ ಅಂಕಣಗಳ ಜೀವಾಳ. ಸಾಮಾನ್ಯ ಜನರಿಗೆ ತೀರ ಸಾಮಾನ್ಯ, ಅಸಂಗತ ಎನಿಸುವ ಸಂಗತಿಗಳನ್ನು ಆಯ್ದುಕೊಂಡು ಲಘುವಾದ ಭಾಷೆಯಲ್ಲಿ ಅವುಗಳ ಅಸಮಾನ್ಯ ಸ್ವರೂಪವನ್ನು ಬಹಿರಂಗಪಡಿಸುವ ಅಂಕಣಗಳೂ ಉಂಟು. ಹಾಸ್ಯ, ಅಪಹಾಸ್ಯಗಳೆರಡೂ ಅವುಗಳ ಲಕ್ಷಣಗಳಾಗುವುದುಂಟು. ಇಂದು ಸಾಮಾನ್ಯವಾಗಿ ಪತ್ರಿಕೆಗಳಲ್ಲಿ ಅಂಕಣ ಬರಹಗಳು ಜಾಸ್ತಿ. ಸಂಪಾದಕೀಯ ಸಿಬ್ಬಂದಿಯಲ್ಲಿ ಹಿರಿಯರಾದವರು ಮತ್ತು ಒಂದೊಂದು ವಿಷಯದಲ್ಲಿ ತಜ್ಞರಾದ ಹವ್ಯಾಸಿ ಲೇಖಕರು ಇವುಗಳನ್ನು ಬರೆಯುತ್ತಾರೆ. ಹೆಚ್ಚಾಗಿ ಕ್ರೀಡೆ, ಸಂಗೀತ, ಸಾಂಸ್ಕೃತಿಕ ರಂಗ, ಸಿನೇಮಾ, ಸಾಹಿತ್ಯ ಕುರಿತು ವಿಶ್ಲೇಷಣೆಯೊಂದಿಗೆ ತಮ್ಮ ಅಭಿಪ್ರಾಯಗಳನ್ನು ಸೇರಿಸಿ, ಓದುಗರ ಮನಸೆಳೆಯುವಂತೆ ಸುಲಲಿತ ಭಾಷೆ ಹಾಗೂ ಶೈಲಿಯಲ್ಲಿ ಬರೆಯುವ ಅಂಕಣಕಾರರು ಉಂಟು. ಕನ್ನಡದಲ್ಲಿ ಅಂಕಣ ಬರಹಗಳನ್ನು ಜನಪ್ರಿಯಗೊಳಿಸಿದವರು ದಿವಂಗತ ಹಾ.ಮಾ.ನಾಯಕರು. ಅಂಕಣ ಬರಹಕ್ಕೆ ಸಂಬಂಧಿಸಿದಂತೆ ಹಲವು ಪ್ರಕಾರಗಳಿವೆ. ಅವುಗಳಿಗೆ ಸಂಬಂಧಿಸಿದಂತೆ ಕೆಲವನ್ನು ಗಮನಿಸಬಹುದು.

೧. ಸಂಪಾದಕೀಯ ಅಂಕಣ

ಇದು ಸಂಪಾದಕೀಯ ಸ್ವರೂಪ ಹೊಂದಿರಬಹುದಾದರೂ ಆದರೆ ಸಂಪಾದಕೀಯವಲ್ಲ. ಸಂಪಾದಕೀಯನ್ನು ನಿಯಂತ್ರಿಸುವ ಸಂಯಮ. ಪತ್ರಿಕೆಯ ನೀತಿ, ಗಾಂಭೀರ್ಯ, ಸಂಪಾದಕೀಯ ಅಂಕಣದಲ್ಲಿ ಕಾಣುವುದಿಲ್ಲ. ಇಲ್ಲಿ ಸ್ವಲ್ಪ ಸ್ವಚ್ಛಂದ ಪ್ರವೃತ್ತಿ ಗೋಚರಿಸಬಹುದು. ಸಂಪಾದಕರು ತಮ್ಮ ಅಂಕಿತ ಹಾಕಿ ಬರೆಯುವುದರಿಂದ ಅವರ ವೈಯಕ್ತಿಕ ಅಭಿಪ್ರಾಯಗಳಿಗೆ ಅವಕಾಶ ಇದೆ.

೨. ಪ್ರಮಾಣಿಕ ಅಂಕಣ

ಗಂಭೀರ ಸ್ವರೂಪದ, ಸಂಪಾದಕೀಯ(ಅಗ್ರರೆಂಬ) ಲೇಖನಕ್ಕೆ ಆಯ್ದುಕೊಳ್ಳದ, ಕಡಿಮೆ ಮಹತ್ವದ ವಿಷಯಗಳ ಚರ್ಚೆ ಈ ಅಂಕಣದ ಪ್ರಧಾನ ಅಂಶ. ಇದರ ಹಿನ್ನೆಲೆ, ಮುನ್ನೆಲೆ, ವಿಷಯದ ಗತಿ ಹಾಗೂ ಬೆಳವಣಿಗೆಯನ್ನು ಪ್ರಸ್ತಾಪಿಸಲಾಗುತ್ತದೆ. ಇಲ್ಲಿ ವೈಯಕ್ತಿಕ ಹಾಗೂ ಸಮುದಾಯಿಕ ಅಭಿಪ್ರಾಯಗಳಿಗೆ ಆಸ್ಪದವಿಲ್ಲ.

೩. ವ್ಯಕ್ತಿ ಪ್ರಧಾನ ಅಂಕಣ

ಸಾಧನೆ, ಸನ್ಮಾನ, ಮೃತ್ಯುವಿನಂಥ ಸಂಗತಿಗಳು ವಸ್ತುವಾಗುವ ವ್ಯಕ್ತಿಗೆ ಸಲ್ಲಿಸುವ ಶ್ರದ್ಧಾಂಜಲಿ ಹಾಗೂ ಗೌರವಾಂಜಲಿ. ಮೃತ ವ್ಯಕ್ತಿಯ ಹಿರಿಮೆ, ಸಾಮಾಜಕ್ಕೆ ಅವರು ಉಪಯುಕ್ತರಾಗಿದ್ದ ಬಗೆ, ಗುಣ ವಿಶೇಷಣ ಮೊದಲಾದವುಗಳನ್ನು ಎತ್ತಿ ತೋರಿಸುವ ಬರಹ, ಸಾಧನೆಗಾಗಿ ಸಿಕ್ಕ ಪುರಸ್ಕಾರ,

ಸಾರ್ವಜನಿಕ ಗೌರವಾದರಗಳಿಗೆ ಪಾತ್ರವಾದ ವ್ಯಕ್ತಿಯ ಔದಾರ್ಯ ಹಿರಿಮೆಗಳನ್ನು ಶ್ಲಾಘಿಸುವ ಅಭಿಪ್ರಾಯ ಪ್ರಧಾನ ಲೇಖನ.

೪. ಹರಟೆ ಅಂಕಣ

ಲೋಕಾಭಿರಾಯವಾಗಿ ಆಡುವ ಮಾತು ನಿರಪಾಯಕಾರಿ. ಊಹಾಪೋಹಗಳ ಆವಾಂತರ, ಕಲ್ಪನೆಯ ಕೂಸುಗಳಾಗಿ ನಿರ್ಮಾಣವಾಗುವ ಪಾತ್ರಗಳಿಂದ ಮಾತನಾಡಿಸುವ ಪ್ರಸಂಗದ ರಸವತ್ತಾದ ವರ್ಣನೆ ಇರಬೇಕು. ವೈಯಕ್ತಿಕ ಟೀಕೆ, ಗಂಭೀರ ವಿಷಯ ಪ್ರಸ್ತಾಪ ಸಮಾಜದಲ್ಲಿರುವ ವಿಭಿನ್ನ ಮಾದರಿಗಳ ಪ್ರತಿಸೃಷ್ಟಿ ಮಾಡಿ ಅವುಗಳ ಮೂಲಕ ಬರಹಕ್ಕೆ ವಿಡಂಬನೆಯ ಸ್ವರೂಪ ಕೊಡಬಹುದು. ಇದರಲ್ಲಿ ಪ್ರಸ್ತಾಪವಾಗುವ ಕಲ್ಪನೆಯ ಸರಕು ಹಾಗೂ ವ್ಯಕ್ತಿಗಳು ಇವರಿಗೆ ಹೋಲಿಸಿಕೊಂಡರೆ ಅವರು ತಮ್ಮ ಹೆಗಲು ನೋಡಿಕೊಳ್ಳುವಂತಿರಬೇಕು.

೫. ವಿನೋದ ಅಂಕಣ

ಬಹಳ ಪತ್ರಿಕೆಗಳಲ್ಲಿ ಕಾಣಬರುವ ಅಂಕಣ. ಇವುಗಳಲ್ಲಿ ಮನೋರಂಜನೆ ಇದೆ. ಚಾರಿತ್ರ್ಯವಧೆಗೆ ಲವಲೇಶವೂ ಅವಕಾಶವಿಲ್ಲದ ಹಾಗೆ ಸಾರ್ವಜನಿಕ ವ್ಯಕ್ತಿಗಳ ವಿಚಿತ್ರ ನಡವಳಿಕೆಯನ್ನು ವಸ್ತುವಾಗಿ ಆರಿಸಿಕೊಳ್ಳಬಹುದು. ಹಾಸ್ಯ, ವಿಡಂಬನೆ, ನೋವಾಗದ ಹಾಗೆ ಚುಚ್ಚುವ ತಂತ್ರಗಾರಿಕೆಗೆ ಇದು ಸೂಕ್ತ ಅಂಕಣಕ ಸಾರ್ವಜನಿಕ ಸಮಾರಂಭಗಳಲ್ಲಿ ದೇವೇಗೌಡರ ತೂಕಡಿಕೆ ವಿಡಂಬನೆಗೆ ಗುರಿಯಾದ ಜನಪ್ರಿಯ ಸಂಗತಿ. ಹರಟೆಯಲ್ಲಿರುವ ಕಲ್ಪನಾ ವಿಲಾಸ ವಿನೋದ ಅಂಕಣಗಳಲ್ಲಿಯೂ ಕಂಡುಬರುತ್ತಿದೆ. ವಿನೋದ ಅಂಕಣಗಾರನಿಗೆ ಯಾವ ವಸ್ತು ತಾಜ್ಯವಲ್ಲ. ನಗೆಯನ್ನು ಹುಟ್ಟು ಹಾಕುವ ಆದರೆ ಯಾರ ಮನಸ್ಸನ್ನು ನೋಯಿಸದಿರುವ ಲಘು ಬರವಣಿಗೆ ಇದು.

ರವಿ ಬೆಳಗೆರೆಯವರು ಬರೆಯುವ 'ಖಾಸ್‌ಬಾತ್' ಮತ್ತು 'ಬಾಟಮ್ ಐಟಮ್' ಎಂಬ ಅಂಕಣ ಬರಹಗಳು ಪ್ರತಿವಾರ 'ಹಾಯ್ ಬೆಂಗಳೂರ್!' ಪತ್ರಿಕೆಯಲ್ಲಿ ಪ್ರಕಟವಾಗುವಂತಹವು. ಅವೇ ಪತ್ರಿಕೆಯ ಜೀವಾಳ. ಅವೆಲ್ಲವನ್ನು ಒಟ್ಟಾಗಿ ಸೇರಿಸಿ 'ಖಾಸ್‌ಬಾತ್'ನ ಹತ್ತು (೧೯೯೬ರಿಂದ ೨೦೦೫ರ ವರೆಗೆ) ಪುಸ್ತಕಗಳು, 'ಬಾಟಮ್ ಐಟಮ್'ನ ಆರು ಕೃತಿಗಳನ್ನು ಪ್ರಕಟಿಸಿದ್ದಾರೆ.

ಮಾಧ್ಯಮದ ಒತ್ತಡದ ಮಧ್ಯೆಯೇ ಅನುಭವಗಳ ನೆನಪಿನಲ್ಲಿ ಹುಟ್ಟಿರುವ ಅವುಗಳಲ್ಲಿ ಅನೇಕ ಪ್ರಾದೇಶಿಕ, ಅನ್ಯಭಾಷೆ, ವಿಶೇಷ ಪದ ಮತ್ತು ಸಾಂಸ್ಕೃತಿಕ ಪದಗಳು, ದ್ವಿರುಕ್ತಿ, ಬೈಗಳಂಥ ಮುಂತಾದ ಹಲವು ಭಾಷಿಕ ಅಂಶಗಳನ್ನು ಗುರುತಿಸಿಕೊಳ್ಳಲು ಸಾಧ್ಯ. ಬರೀ ಒಂದು 'ಮುಖ'ದ ಬಗ್ಗೆ ಬರೆಯುವಾಗ ರವಿ ಬೆಳಗೆರೆಯವರು ಭಾಷಾಭಿವ್ಯಕ್ತಿಗೆ ಅದೆಷ್ಟು ಶಕ್ತಿಯಿದೆ ಎಂಬುದನ್ನು ಈ ಕೆಳಗಿನ ಒಂದು ಪ್ಯಾರದಲ್ಲಿ ನೋಡಬಹುದು.

'ಹುಚ್ಚು ಸಾವಿರ ನಮೂನೆಯದಂತೆ 'ವೆರ್ರಿ ವೇಯಿ ವಿಧಾಲು' ಅಂತಾರೆ ತೆಲುಗಿನಲ್ಲಿ ಮುಖಗಳು ಕೂಡ ಅಷ್ಟೆ. ಚೌಕ ಮುಖ, ಕೋಲು ಮುಖ, ದುಂಡು ಮುಖ, ಹ್ಯಾಪ ಮುಖ, ದ್ರಾಬೆ ಮುಖ, ಗೂಬೆ ಮುಖ, ರೌಡಿ ಮುಖ, ಕಳ್ಳ ಮುಖ, ಕುಡುಕ ಮುಖ, ಮುದ್ದು ಮುಖ, ಪೆದ್ದು ಮುಖ, ಪರಿಚಿತ ಮುಖ, ವಂಚಕ ಮುಖ, ಒರಟು ಮುಖ, ಕೂದಲಿಲ್ಲದ ಬೋಳು ಮುಖ, ಸಿಂಗಾರವಿಲ್ಲದ ಹುಚ್ಚು ಮುಖ, ಸುಖದ ಚರಮ ಸೀಮೆಯಲ್ಲಿರುವ ಮದಿತ ಮುಖ, ದುಃಖದ ಪಾತಾಳದಲ್ಲಿರುವ ನೊಂದ ಮುಖ, ನಾಚಿತ ಮುಖ, ಯಾರೋ ಬಂದು ಗೀಚಿದ

ಮುಖ, ನೋಡಿದ ಕೂಡಲೇ ಏನೂ ತೋಚದ ಮುಖ, ನೋಡಿದಷ್ಟು ನೋಡಬೇಕೆನ್ನಿಸುವ ಸುಖದ ಮುಖ, ವಿನಾಕಾರಣ ದ್ವೇಷ ಹುಟ್ಟಿಸುವ ವಿಚಿತ್ರ ಮುಖ, ಪತ್ತೆಯೇ ಆಗದ ಎರಡು ಮುಖ, ಗೊತ್ತೇ ಆಗದ ಇನ್ನೊಂದು ಮುಖ, ಹತ್ತಾರು ಪ್ರತಿಭೆಗಳ ಬಹುಮುಖ, ಅತ್ತಿತ್ತ ನೋಡಲೊಲ್ಲದ ಏಕಮುಖ, ಪೂಜೆಗೆ ರೆಡಿಯಾಗುವ ಪಂಚಮುಖ, ನೂರು ಬಯಕೆಗಳ ಆಸೆ ಮುಖ, ಸಾವಿರ ತೂತುಗಳ ದೋಸೆ ಮುಖ, ವೀರಪ್ಪನ್ ತರಹದ ಮೀಸೆ ಮುಖ, ಚಪ್ಪಟ್ಟೆ ಮುಖ, ಮುಚ್ಚಟೆಯ ಮುಖ, ಕಪಟವಿಲ್ಲದ ಮುಗುವಿನ ಮುಖ ಹೀಗೆ ಮುಖವೆಂಬ ಮುಖಕ್ಕೆ ಅದೆಷ್ಟು ಮುಖಗಳೋ! ಆದರೆ ಈ ಎಲ್ಲ ಮುಖಗಳನ್ನು ಮೀರಿದ್ದೊಂದು ಮುಖವಿದೆ. ಅದು ಅಪರೂಪಕ್ಕೊಮ್ಮೆ ಕಾಣಸಿಗುತ್ತದೆ. ಕಂಡ ತಕ್ಷಣ ಎಂಥವರನ್ನು ಉದ್ಗರಿಸುವಂತೆ ಮಾಡುತ್ತದೆ ಅದು–

ಎಲ್ಲೋ ನೋಡಿದ ಮುಖ!'

ಹೀಗೆ ಆರಂಭವಾಗುವ ಅಂಕಣದಲ್ಲಿ ಅವರು ಮುಖ ಎಂಬುದಕ್ಕೆ ನೀಡುವ ವಿವರಣೆ ಇದು. ಮುಖವೊಂದಕ್ಕೆ ಅಷ್ಟೇ ಅಲ್ಲ ಯಾವುದೇ ವಿಷಯವನ್ನು ಹೇಳಹೋದರೂ ಅದರ ಬಗೆಗೆ ಸ್ವಲ್ಪ ವಿವರಣೆಯನ್ನು ಕೊಡುತ್ತಾರೆ. ಅಲ್ಲದೇ ಅವರ ಅಂಕಣ ಬರಹಗಳ ಆರಂಭದ ಸ್ವರೂಪವೇ ಹಾಗೆ ಎಂದು ಹೇಳಬಹುದು.

'ಹಾಯ್ ಬೆಂಗಳೂರ್!' ವಾರ ಪತ್ರಿಕೆಯಲ್ಲಿ ಪ್ರಕಟವಾಗಿ ಪುಸ್ತಕ ರೂಪದಲ್ಲಿ ಮುದ್ರಣಗೊಂಡ ಅಂಕಣ ಬರಹಗಳನ್ನಷ್ಟೇ ಇಲ್ಲಿ ಗಣನೆಗೆ ತೆಗೆದುಕೊಳ್ಳಲಾಗಿದೆ. ಈ ಭಾಗದಲ್ಲಿ ಅವರ ಬರವಣಿಗೆ ಉಳಿದೆಲ್ಲ ಪ್ರಕಾರದ ಬರವಣಿಗೆಗಿಂತಲೂ ಭಿನ್ನವಾಗಿರುತ್ತವೆ. ಅದು ಮಾಧ್ಯಮದ ಒತ್ತಡದಿಂದಲೋ ಅಥವಾ ಆ ವೃತ್ತಿ ಗುಣಧರ್ಮವೋ ಒಟ್ಟಾರೆ ಇಲ್ಲಿ 'ಖಾಸ್‌ಬಾತ್' ಮತ್ತು 'ಬಾಟಮ್ ಐಟಮ್' ಎಂಬ ಎರಡು ಬರಹಗಳು ಪ್ರಕಟವಾಗುತ್ತವೆ. ಒಂದು ಬದುಕಿದ ಬರಹ ಇನ್ನೊಂದು ಬದುಕುವ ಬರಹ. ಖಾಸ್‌ಬಾತ್ ರವಿ ಬೆಳಗೆರೆಯವರ ಬದುಕಿನ ವಿವರಗಳನ್ನು ಒದಗಿಸಿದರೆ, ಬಾಟಮ್ ಐಟಮ್ ಜೀವನದ ಪ್ರತಿ ಚಿಕ್ಕ ಸಂಗತಿಯ ಮೇಲೂ ಬೆಳಕು ಚೆಲ್ಲುತ್ತದೆ. ಬದುಕಿನ ಅರ್ಥವನ್ನು ಹೇಳುತ್ತಾ ಇಲ್ಲಿ ಬಳಸುವ ಭಾಷೆ ಸಹ ಹೆಚ್ಚಿನದಾಗಿ ಮಾತಿನ ರೂಪದ್ದಾಗಿರುತ್ತದೆ. ನಾಜೂಕಾಗಿ, ವ್ಯಂಗ್ಯವಾಗಿ, ಗುರುವಿನಂತೆ, ಆಪ್ತ ಗೆಳೆಯನಂತೆ ಬಂದುವಾಗಿ ಕಾರ್ಯನಿರ್ವಹಿಸುತ್ತದೆ. ಆದರೆ ಅಂಕಣದ ಯಾವ ಶಬ್ದದಲ್ಲೂ ಬೋಧನೆ, ಆಜ್ಞೆ, ಎಲ್ಲವನ್ನು ಬಲ್ಲವನ ಅಹಂ ಕಾಣಿಸುವುದಿಲ್ಲ: ಪ್ರೀತಿ ವಿನಂತಿಯ ಹೊರತು. ಅದು ಕೇವಲ ಆಪ್ತ ಗೆಳೆಯನೊಬ್ಬನ ಅರ್ಥಪೂರ್ಣ ಸಂಭಾಷಣೆ. ಇಂತಹದೊಂದು ಸಾಮಾಜಿಕ ಕಳಕಳಿಯನ್ನು ಸಾರುವ ಈ ಎರಡು ಅಂಕಣಗಳನ್ನು ಸಾಮಾನ್ಯ ಮನುಷ್ಯರ ದೈನಂದಿನ ಪ್ರಾಯೋಗಿಕ ತತ್ವಜ್ಞಾನ ಎಂದೇ ಹೇಳಬಹುದು. ತನ್ನದೇ ಬದುಕಿನ ವಿವರಗಳನ್ನು ಕೊಡುತ್ತಾ ಸಾರ್ವತ್ರಿಕತೆಯನ್ನು ಬಿಂಬಿಸುವ ಮೂಲಕ ಸಹೃದಯದಲ್ಲಿ ಒಬ್ಬನಾಗಿ ನಿಲ್ಲುವ ಪ್ರಯತ್ನವದು.

ಇದರಲ್ಲಿ ಇಂಗ್ಲೀಶ್ ಭಾಷೆಯ ಪದಗಳನ್ನು ಹೆಚ್ಚಾಗಿ ಬಳಸುವುದು ಕಂಡುಬರುತ್ತದೆ. ಅವು ಎಷ್ಟೋ ಸಮಯದಲ್ಲಿ ಕನ್ನಡ ಪದವಿದ್ದರು, ಆ ಜಾಗಕ್ಕೆ ಅನಗತ್ಯವೆಂಬಂತೆ ಬಂದರೂ ಅದರ ದೋಷ ಕಾಣದಂತೆ ಇಂಗ್ಲೀಶ್ ಪದಗಳನ್ನು ಬಳಸುತ್ತಾರೆ. ಈ ಬರಹಗಳಲ್ಲಿ ಆಡುಮಾತಿನ

ಬರವಣಿಗೆ ರೂಪವನ್ನು ಹೆಚ್ಚಾಗಿ ಗುರುತಿಸಲು ಸಾಧ್ಯವಿದೆ. ಪ್ರಾದೇಶಿಕ ಪದಗಳ ಯಥಾವತ್ತಾಗಿ ದಾಖಲಿಸುತ್ತಾರೆ. ಹೀಗೆ ಅಂಕಣ ಬರಹಕ್ಕೆ ಸಂಬಂಧಿಸಿದಂತೆ ವಿಶೇಷ ಪದಗಳನ್ನು ಇಲ್ಲಿ ನೋಡಬಹುದು.

'ಆದರೂ ನಿಮ್ಮ ಪತ್ನಿಗೆ ಅದರಿಂದ ಕಿರಿಕಿರಿಯಾಗುತ್ತಿದ್ದರೆ Just stop talking to ಪಕ್ಕದ ಮನೆಯಾಕೆ.'

'ಅವತ್ತಿಗೆ ಲೈಫ್‌ನ ಕ್ವಾಲಿಟಿ ಮತ್ತು Enjoyment ಎರಡೂ ಖಲಾಸ್!'

'ಸಣ್ಣ ತಪ್ಪು ಮಾಡಿ ಬಿಟ್ಟರೂ ಕೈ ಹಿಡಿದು ಗರ ತಿಪ್ಪಾಳೆ ಆಡಿಸಿ ಬಿಡುತ್ತದೆ'.

'ದೇಹವೆಂಬ ಪೀಚು ಬಲಿತು ಕಾಯಾಗಲಿಕ್ಕೆ, ದೋರಗಾಯಾಗಲಿಕ್ಕೆ ಕಾಲ ಸಾಕು'

'ಬೇಕಾದ್ದು ಮಾತ್ರ ನೆನಪಿಟ್ಟುಕೊಳ್ಳುವುದು ಮನಸ್ಸಿನ ಛತ್ರಿತನ'

'ಹಾಗೇನೇ ವಿಷಯಾಂತರಗಳು'

'ನಮ್ಮ ಇಮ್ಮೀಡಿಯಟ್ ಜರೂರತ್ತು ಅಂದರೆ'

'ನಾನು ತಮಾಷೆಯಾಗಿ ಅಂಥವರನ್ನು ಒಡಹುಟ್ಟಿದ ಗಂಡ ಹೆಂಡ್ತಿ ಅನ್ನುತ್ತಿರುತ್ತೇನೆ'

ಮುಂತಾದವುಗಳು. ಈ ಮೇಲೆ ಗುರುತಿಸಿರುವ ವಾಕ್ಯಗಳಲ್ಲಿ ಪ್ರಾದೇಶಿಕ ಪದಗಳು, ಆಡು ಮಾತಿನ ರೂಪಗಳು, ಅನ್ಯಭಾಷಾಪದಗಳು, ದ್ವಿಭಾಷೆ, ಬಹುಭಾಷೆ ಹೀಗೆ ಭಾಷೆಯ ಅನೇಕ ಸಾಧ್ಯತೆಗಳನ್ನು ಕಾಣಬಹುದು. 'ಅಲ್ಲಿಗೆ ಮಾತು ಬಿಟ್ಟುಬಿಡಿ' ಎಂಬುದಕ್ಕೆ ಬದಲಾಗಿ Just stop talking to ಎಂಬುದರ ಮೂಲಕ ಭಾಷಾ ಮಿಶ್ರಣವನ್ನು ಮಾಡುವುದು ಕಂಡುಬರುತ್ತದೆ. ಅಲ್ಲದೆ ಆ ಮೂಲಕ ಓದುಗರನ್ನು ಕೇಂದ್ರಿಕರಿಸಲು ಆಕರ್ಷಕವಾಗಿ ಬಳಸಿದಂತೆ ಅನಿಸುತ್ತದೆ. ಅದು ಇಂದು ಪತ್ರಿಕೆ ಓದುಗರನ್ನು ಸೆರಿಹಿಡಿಯುವ ಒತ್ತಡದ ಪ್ರಭಾವವು ಇರಬಹುದು. ಗರ ತಿಪ್ಪಾಳೆ ಆಡಿಸು ಎಂಬುದು 'ಗಿರ್ಗಿಟ್ಲೆ' ಎಂಬುದರ ಸಮಾನಾರ್ಥ ರೂಪ. ಒಂದು ತಪ್ಪು ನಮ್ಮನ್ನು ಅಲ್ಲೇ ಸುತ್ತಿಸುತ್ತದೆ ಎಂಬುದರ್ಥವಾಗಿ ಬಂದಿರುವಂತದ್ದು 'ಪೀಚು' ಎಂದರೆ ಒಂದು ಹಣ್ಣು ಇನ್ನು ಆರಂಭದ ಹಂತದಲ್ಲಿದ್ದಾಗ ಇನ್ನೂ ಎಳೆ 'ಪೀಚು' ಎಂದು ಕರೆಯುತ್ತಾರೆ. ಪೀಚು ಎಂದಾಗುವ ಪ್ರಾದೇಶಿಕ ರೂಪ ಇಲ್ಲಿ ಯೌವ್ವನಕ್ಕೆ ಬರಲು, ಅನುಭವ ಬಲಿಯಲು ಇನ್ನೂ ಕಾಲವಿದೆ. ಅದಕ್ಕೆ ವಾಸ್ತವ ಸ್ಥಿತಿಯನ್ನು ಹೇಳಲು ಪೀಚು ಪದವನ್ನು ಬಳಸಿರುವಂತದ್ದು. ಹೀಗೆ ವಿಷಯಾಂತರ, ಜರೂರತ್ತು ಮುಂತಾದ ಪದಗಳು ಬಳಕೆಯಾಗಿರುವುದನ್ನು ಗಮನಿಸಬಹುದು. ಅವರ ವ್ಯಂಗದ ಚಾಟಿ 'ಒಡಹುಟ್ಟಿದ ಗಂಡ ಹೆಂಡ್ತಿ ಈ ರೀತಿಯಲ್ಲಿ ನೀಡುವಂತದ್ದು. ಇದೆ ರೀತಿಯಲ್ಲಿ ರವಿ ಬೆಳಗೆರೆಯವರು ಇಲ್ಲಿ ಭಾಷೆಯನ್ನು ವಿಶೇಷ(ಎಫೆಕ್ಟ್‌ಗಾಗಿ), ಪರಿಣಾಮಕ್ಕಾಗಿ, ಸೃಜನಶೀಲ (ಕ್ರೀಯೆಟೀವ್)ವಾಗಿ ತಂದು ನಿಲ್ಲಿಸುತ್ತಾರೆ. ಆಕರ್ಷಕವಾಗಿ ಬಳಸಿ ಓದುಗರನ್ನು ಕೇಂದ್ರಿಕರಿಸಿಕೊಳ್ಳುತ್ತಾರೆ. ಇಂದಿನ ಮಾಧ್ಯಮಗಳ ಒತ್ತಡದ ಪ್ರಭಾವವು ಇದಕ್ಕೆ ಕಾರಣವಿರಬಹುದು. ಇಂತಹ ಒಂದು ವಿಶೇಷವಾದ ಬರವಣಿಗೆ ಮತ್ತು ಶೈಲಿಯ ಮೂಲಕ ಇವರದೇ ಎಂದು ಗುರುತಿಸಿಕೊಳ್ಳುವ ಶಕ್ತಿ ರವಿ ಬೆಳಗೆರೆಯವರ ಬರಹಕ್ಕಿದೆ.

ಮತ್ತೆ ಅವರ ಅಂಕಣ ಬರಹಗಳಲ್ಲಿ ಇಂಗ್ಲೀಶ್‌ನ ಹೆಚ್ಚಾಗಿ ಬಳಕೆಯನ್ನು ಕಾಣಬಹುದು. ಉದಾಹರಣೆಗೆ 'ಅವನನ್ನು Handle ಮಾಡುವ ವಿದ್ಯೆ ಗೊತ್ತಾಗಿತ್ತು', 'ನನ್ನ ಇಮ್ಮೀಡಿಯೆಟ್

ಜರೂರತ್ತು ಅಂದೆ', 'ಯೋಚನಾ ವಿಧಾನದಲ್ಲೊಂದು Clarity, ಒಂದು ಸ್ಪಷ್ಟತೆ ಬಂದಿರಬೇಕು'. 'The same thing happens to ಹೆಂಗಸು', 'ಚಿನ್ನದ ಕನ್ನಡಕ ಇಂಥ Worldly ವಸ್ತುಗಳ ಬಗ್ಗೆ ಬಲು ಮಮಕಾರ' ಮುಂತಾದವುಗಳು. ಹೆಚ್ಚಾಗಿ ಅನ್ಯಭಾಷಾ ಮಿಶ್ರಿತ ವಾಕ್ಯಗಳು ಕಂಡರೆ ಕೆಲವೊಂದು ಸಲ ಇಡೀ ವಾಕ್ಯವೇ ಬೇರೆ ಭಾಷೆಯಿಂದ ರಚಿಸಿರುವುದನ್ನು ಕಾಣಲು ಅವಕಾಶವಿದೆ. ಮತ್ತು ಅಂಕಣ ಬರಹಗಳಲ್ಲಿ ಅಲ್ಲಲ್ಲಿ ಸಂಭಾಷಣೆಗಳನ್ನು ಕಾಣುತ್ತೇವೆ. ಈ ಸಂಭಾಷಣೆಯ ಸಂದರ್ಭದಲ್ಲಿ ಆ ಪ್ರದೇಶದ ಪ್ರಾದೇಶಿಕ ಭಾಷೆಯನ್ನು ಕಾಣಬಹುದು.

**೪.೪. ಅಪರಾಧಿ ಸಂಬಂಧಿತ ಬರಹಗಳ ಅಥವಾ ಕ್ರೈಮ್ ಬರಹಗಳು – ಭಾಷೆ**

ಕ್ರೈಮ್ ಎಂಬುದು ರವಿ ಬೆಳಗೆರೆಯವರ ಬರಹದ ಮತ್ತೊಂದು ಭಾಗ. ಬೆಂಗಳೂರಿನ ಭೂಗತ ಜಗತ್ತಿನಲ್ಲಿ ಗುರುತಿಸಿಕೊಂಡಿರುವವರನ್ನು ಸಂದರ್ಶಿಸಿದ್ದಾರೆ. ಅವುಗಳ ಬಗ್ಗೆ ಅದೆಷ್ಟೋ ಬರಹಗಳನ್ನು ಬರೆದಿದ್ದಾರೆ. ಕನ್ನಡದ ಮಟ್ಟಿಗೆ ಈ ರೀತಿಯ ಕ್ರೈಮ್ ಬರಗಳನ್ನು ಬರೆದವರೆಂದರೆ ಅಗ್ನಿ ಶ್ರೀಧರ್(ದಾದಾಗಿರಿಯ ದಿನಗಳು) ಬಿ.ಕೆ. ಶಿವಾರಾಂ(ಪೋಲೀಸ್ ಕಂಡ ಕಥೆಗಳು) ಮತ್ತು ರವಿ ಬೆಳಗೆರೆ. ಇವರಲ್ಲಿ ರವಿಯವರೆ ಮೊದಲಿಗರಾಗಿ ನಿಲ್ಲುತ್ತಾರೆ. ಶಿವರಾಂ ನಿವೃತ್ತ ಪೊಲೀಸ್ ಅಧಿಕಾರಿ, ಅವರ ತಮ್ಮ ವೃತ್ತಿ ಬದುಕಿನಲ್ಲಿ ಕಂಡ ಅನುಭವಗಳನ್ನು ಬರಹವಾಗಿಸಿದ್ದಾರೆ. ಶ್ರೀಧರ ತಮ್ಮ ಬದುಕಿನಲ್ಲಿನ ವಿಷಯಗಳನ್ನು ಅಕ್ಷರಗಳಲ್ಲಿ ಮೂಡಿಸಿದ್ದಾರೆ. ಆದರೆ ರವಿಯವರು ಕೇವಲ ಆಸಕ್ತಿಯಿಂದ ತಮ್ಮ ವೃತ್ತಿಯ ಅನುಕೂಲಕ್ಕಾಗಿ ಪ್ರವೃತ್ತಿಯನ್ನಾಗಿಸಿಕೊಂಡವರು.

ರವಿಯವರಿಗಿಂತ ಮುಂಚೆ ಬೆಂಗಳೂರು ಭೂಗತ ಜಗತ್ತಿನ ಬಗ್ಗೆ ವರದಿಗಳು ಪತ್ರಿಕೆಗಳಲ್ಲಿ ಬರೆದಿದ್ದೇನೋ ನಿಜ. ಆದರೆ ಅವುಗಳಲ್ಲಿ ಹೆಚ್ಚಿನವು ಪೊಲೀಸ್ ವರದಿಗಳು. ನಂತರ ಅವುಗಳ ಬಗ್ಗೆ ಸುದೀರ್ಘವಾಗಿ ಬರೆದವರು ರವಿ ಬೆಳಗೆರೆಯವರು. ೧೯೬೩ರಲ್ಲಿ 'ಕರ್ಮವೀರ' ಪತ್ರಿಕೆ ಶುರುವಾದ ಹೊಸತರಲ್ಲಿ ಒಂದು ಚಿಕ್ಕ ವರದಿ ಪ್ರಕಟಿಸಿದ್ದಾರೆ. ಅದು ಅಂದಿನ ಡಿ.ಸಿ.ಪಿ. ಕೆಂಪಯ್ಯ ಅವರ ಹೇಳಿಕೆಯನ್ನು ಯಥಾವತ್ತಾಗಿ ಪ್ರಕಟಿಸಲಾಯಿತು. ಅಲ್ಲಿಂದ ಶುರುವಾಗುತ್ತದೆ ಕ್ರೈಮ್ ಬರಹದ ಸಂಚಾರ. ಒಬ್ಬೊಬ ರೌಡಿಯನ್ನು ಬೇಟಿಯಾದಾಗಲೂ ಒಂದೊಂದು ಅನುಭವ. ಒಂದೊಂದು ಭೇಟಿಯೂ ಒಂದೊಂದು ಘಟನೆ. ಪ್ರತಿಯೊಂದರಲ್ಲೂ ಒಂದು ವೈಶಿಷ್ಟ್ಯ. ತುಂಬ ಭಿನ್ನ ಎನಿಸುವಂತಹ ವ್ಯಕ್ತಿತ್ವ, ಭಾಷೆ, ಮುಂತಾದವೆಲ್ಲವುಗಳನ್ನು ರವಿ ಬೆಳಗೆರೆಯವರು ದಾಖಲಿಸುತ್ತಾರೆ. ಜಗತ್ತಿನಲ್ಯಾರು ಮಾಡಿರದ ಕೆಲಸವೇನೂ ಇವರು ಮಾಡಿಲ್ಲ. ರೋಮಾಂಚನಕಾರಿಯಾದ Investigative Journalism ಎಂದೇನೂ ಭಾವಿಸಬೇಕಿಲ್ಲ. ಆದರೆ ಕನ್ನಡ ಪತ್ರಿಕೋದ್ಯಮಕ್ಕೆ ಇದು ಹೊಸದು. ಆ ದೃಷ್ಟಿಯಿಂದ ಭಾಷಿಕ ನೆಲೆಯಿಂದ ವೈವಿಷ್ಯವನ್ನು ಪಡೆದುಕೊಂಡಿದೆ.

ಇದು ನಿಷಿದ್ದ ಲೋಕ, ನಿಷೇಧಿತ ಜಗತ್ತು, ಲೋಕನಿಂದಿತರ ಪ್ರಪಂಚ ಸಾಮಾಜಿಕ ಕಳಂಕಿತ ಭೂಗತ ಜಗತ್ತನ್ನು ಹತ್ತಿರದಿಂದ ಕಂಡು, ಅವರ ಅಂತರಂಗದಲೊಬ್ಬ ಮನುಷ್ಯ ಇದ್ದಾನೆಯೇ? ಇರಲು ಸಾಧ್ಯವೇ? ಎಂದು ಶೋಧಿಸಲು ಹೊರಟ ಪ್ರಯತ್ನವಿದು. ರವಿಯವರ ಕ್ರೈಮ್ ಬರಹಗಳಲ್ಲಿ ಹೆಚ್ಚಿನ ವೈಭವೀಕರಣವಿರುವುದು ನಿಜ. ಆದರೆ ಅದು ಒಂದು ಕಾದಂಬರಿಯ ರೂಪ ಪಡೆದುಕೊಂಡಿದ್ದರ ಫಲವಷ್ಟೇ. ಭೂಗತ ಜಗತ್ತನ್ನು ವೈಭವಿಕರಿಸಿ ಅದರ ಬಗ್ಗೆ ಕುತೂಹಲ ಕೆರಳಿಸುವ ಪ್ರೇರೇಪಿಸುವ ಯಾವ ಅಂಶವೂ ಅವರ ಬರಹಗಳಲ್ಲಿ ಕಾಣದು. ಸಾಹಿತ್ಯ ರೂಪವೊಂದಿಗೆ

ಬಂದ ವೈಭವೀಕರಣ ಭೂಗತ ಕ್ರೌರ್ಯದ ಆಳಕ್ಕೆ ಇಳಿದಿಲ್ಲ. ಅಲ್ಲಿ ಇದು ಬದುಕಬೇಕಾದ ರೀತಿಯಲ್ಲ, ಇಲ್ಲಿ ಬದುಕುವುದು ಸಾಧ್ಯವಿಲ್ಲ. ಬದುಕಬೇಕಾದ ಜೀವನವೇ ಇದಲ್ಲ. ಯಾರಿಗೂ ಇವರು ಆದರ್ಶಗಳಾಗಬಾರದು ಎಂಬುದೆ ಅವರ ಒಟ್ಟು ಬರಹಗಳ ಉದ್ದೇಶ. ಅದು ಅಲ್ಲಿನ ಬರಹಗಳಲ್ಲಿ ಸ್ಪಷ್ಟವಿದೆ. ಈ ಭಾಗದಲ್ಲಿ ಕ್ರೈಮ್ ಬರಹಗಳಲ್ಲಿನ ಭಾಷಿಕ ವೈಶಿಷ್ಟ್ಯವನ್ನು ಗುರುತಿಸುವ ಪ್ರಯತ್ನವನ್ನಷ್ಟೇ ಈ ಭಾಗದಲ್ಲಿ ಮಾಡಲಾಗಿದೆ.

ಭಾಷಿಕವಾಗಿ ಗಮನಿಸಿದಾಗ ರವಿ ಬೆಳಗೆರೆಯವರು ಬಳಸುವ ಭಾಷೆಯೂ ಕುತೂಹಲಕಾರಿ ಮತ್ತು ಆಕರ್ಷಕ ಮಾಯಾ ಶಕ್ತಿಯಂತಹದ್ದು. ಒಬ್ಬ ವ್ಯಕ್ತಿಯ ಯಾವ ನಾಡಿಯನ್ನು ಹಿಡಿದರೆ ಸ್ತಬ್ಧವಾಗುತ್ತಾನೆ ಎಂಬುದನ್ನು ಬಲ್ಲ ವೈದ್ಯನಂತೆ ಅವರು ಸಹೃದಯರನ್ನು ಕೇಂದ್ರಿಕರಿಸುವ ಶಕ್ತಿ ಅಡಗಿರುವುದು, ಅವರು ಬಳಸುವ ಭಾಷೆ ಮತ್ತು ನಿರೂಪಣ ಕ್ರಮದಲ್ಲಿ ಬರಹ ಭಾಷಾ ವೈಶಿಷ್ಟ್ಯತೆಯ ಮೋಡಿಯ ಶಕ್ತಿ ಅಡಕವಾಗಿರುವುದು ಅವರ ನಿರೂಪಣಾ ಶೈಲಿಯಲ್ಲಿ. ರವಿಯವರು ಸಾಹಿತ್ಯದ ಅಷ್ಟು ಪ್ರಕಾರದಲ್ಲಿ ಬರೆದಿದ್ದಾರೆ. ಭಾಷಿಕವಾಗಿ ಕ್ರೈಮ್ ಬರಹಗಳು ವಿಶೇಷತೆಯನ್ನು ಪಡೆದುಕೊಂಡಿದೆ. ಈ ಪ್ರಕಾರದಲ್ಲಿ ಬಳಸುವ ಭಾಷೆಗೆ ಅದರದೇ ಆದ ಪದಕೋಶವಿದೆ. ಭೂಗತ ವಲಯದಲ್ಲಿ ಅದು ಗುಪ್ತ(Coded) ಭಾಷೆಯಂತೆ ಚಲಾವಣೆಯಾಗುತ್ತದೆ. ಸಾಮಾಜಿಕ ವಲಯದಲ್ಲಿ ಬಳಕೆಯಿರುವ ಪದಗಳಿಗೆ ಭೂಗತ ವಲಯದಲ್ಲಿ ಬಳಸುವಾಗ ಬೇರೆಯದೇ ಆದ ಅರ್ಥಗಳಿವೆ. ಕನ್ನಡದ ಜೊತೆಗೆ ಅನೇಕ ಅನ್ಯಭಾಷಾ ಪದಗಳು ಕಂಡುಬರುತ್ತವೆ. ಕೆಲವು ವ್ಯಕ್ತಿಗಳ ಅನ್ವರ್ಥ ನಾಮ, ವಸ್ತು, ಸ್ಥಳ ಮತ್ತು ಕಾಲಕ್ಕೆ ಇಂಗ್ಲೀಶ್‌ನ ಪದಗಳು ಬಳಕೆಯಾಗಿವೆ. ಹೀಗೆ ಅವರ ಕ್ರೈಮ್ ಬರಹಗಳಲ್ಲಿ ದ್ವಿಭಾಷಾ, ಬಹುಭಾಷಾ ಮತ್ತು ಹೊಸ ಹೊಸ ಪದಗಳ ಬಳಕೆ ಇರುವುದು ಕಂಡುಬರುತ್ತದೆ.

ಕ್ರೈಮ್ ಬರಹಕ್ಕೆ ಸಂಬಂಧಿಸಿದಂತೆ, ಅದರ ವಲಯ ವ್ಯಾಪ್ತಿಯೊಳಗೆ ಬಳಕೆಯಲ್ಲಿರುವ ಭಾಷೆಗೆ ಅದರದ್ದೇ ಆದ ಒಂದು ಪದಕೋಶವಿದೆ. ರಚನೆ ಮತ್ತು ಬಳಕೆಯ ದೃಷ್ಟಿಯಿಂದ ವಿಶಿಷ್ಟವಾಗಿದೆ. ಹೀಗಾಗಲೇ ಹೇಳಿದಂತೆ ಇಲ್ಲಿ ಇಂಗ್ಲೀಶ್‌ನ ಯಥೇಚ್ಛ ಪದಗಳು ಕಾಣಿಸಿಕೊಳ್ಳುತ್ತವೆ. ಈ ರೀತಿಯಲ್ಲಿ ಅನ್ಯಭಾಷಾ ಪದಗಳು ಮತ್ತು ವಾಕ್ಯಗಳು ಬೆರೆಕೆಯಾಗಿರುವುದರಿಂದ ಭಾಷೆ ವಿಭಿನ್ನವಾಗಿ ಬಳಕೆಯಾಗುತ್ತದೆ. ಕೆಲವು ಪದಗಳಿಗೆ ಬೇರೆ ಅರ್ಥಗಳು ಬರುವಂತೆ ಬಳಸಿರುವುದನ್ನು ನೋಡಬಹುದು. ಅಂತಹ ವಿಶೇಷವಾದ ಪದಗಳುಳ್ಳ ವಾಕ್ಯಗಳನ್ನು ಉದಾಹರಣೆಯಾಗಿ ಇಲ್ಲಿ ಗಮನಿಸಬಹುದು.

‘ಬಹುಶಃ ರಾತ್ರಿಯ ತನಕ ಎಲ್ಲೋ ಕುಳಿತು ಪಾನಕ ಸೇವಿಸಿರಬೇಕು’

‘ಈಗಾಗಲೇ ಹೇಳಿದಂತೆ, ಅವನು ಕೇವಲ ಕೊಲೆಗಳ ಇಂಜಿನಿಯರ್!’

‘ಬೆಂಗಳೂರಿನ ದಂಧೆಯ ಮನೆಗಳು ಕಿಟ್ಟಿಯ ಪಾಲಿನ ಕ್ರೀಡಾಗೃಹಗಳು’

‘ಅದೇ ಆಳ್‌ಕಾಟಿಗಳ ಉಪಾಯ’

‘ಸೋಮನಂತಹ ಒಬ್ಬ ಚಮಕ್‌ದಾರ್ ರೌಡಿಯೊಂದಿಗೆ ಇಂತಹ ಹುಡುಗರಿರುವುದು ಸಹಜವೇ’.

‘ಫೀಲ್ಡ್ ಬಿಟ್ಟು ಬಿಡ್ತೀನಿ ಸಾರ್’.

‘...ಪ್ರಕಾಶ್ ಎಂಬುವವನ ತಂಗಿಯನ್ನು ಈ ಮಂಜೂರ್ ಸೀಗ್ರೋ ಚುಡಾಯಿಸಿದ್ದ’

'ನಮ್ಮ ಗುಂಪಿನಲ್ಲಿದ್ದ ನಿಜವಾದ ಮೀಟರ್ ಇರೋ ಫೈಟರುಗಳ ಪೈಕಿ ಎಂ.ಸಿ. ಪ್ರಕಾಶ್ ಒಬ್ಬ'

'ಎರಡು ದಿನ ಲಾಕಪ್ಪಿನಲ್ಲಿಟ್ಟುಕೊಂಡು ಉಪಚಾರ ಮಾಡಿ ನಂತರ ಕೋರ್ಟಿಗೆ ಕಳಿಸುತ್ತಿದ್ದರು'

'ಬಾಸ್‌ಗಳು ಅಪರೂಪಕ್ಕೆ ಕೊಡುವ ಇಂಥ ಅಸೈನ್‌ಮೆಂಟ್‌ಗಳು ಚಿಕ್ಕ ವಯಸ್ಸಿನ ಪಂಟರುಗಳಿಗೆ ಭಾರಿ ಉತ್ಸಾಹ ತಂದುಕೊಡುತ್ತವೆ'

'ಬಸವ ಆಟೋದಿಂದ ಇಳಿದವನೇ ವಿಜಿಯ ಮುಖಕ್ಕೆ ಎರಡು ಪಂಚ್ ಮಾಡಿದ'

'ಸೋಮಾ, ಬಲರಾಮನಿಗೆ ಡೀಲ್ ಮಾಡಿದ್ದಾರೆ... ಜೈಲಿನಲ್ಲೇ ಕೊಲೆಯಾಗಿದೆ!'

'ಬಿಡ್ಡನ ಛಾಪ್ಟರ್ ಮುಗಿದಿತ್ತು'

'...ಏಟು ತಿನ್ನುತ್ತಲೇ ಎಚ್ಚರ ತಪ್ಪುವ ರೌಡಿಗಳಿಗೆ ತಕ್ಷಣ ಶೈತ್ಯೋಪಚಾರ ಮಾಡಿ ಮತ್ತೆ ಶುರುಮಾಡುತ್ತಾರೆ ಇಸ್ತ್ರಿ'

'ಹಿಂದು ಮುಂದು ನೋಡದೆ ವಸಂತನಿಗೆ ಬಲವಾಗಿ ಇರಿದೇ ಬಿಟ್ಟ. ಮಟಾಷ್!'

'ಲಿಲ್ಲೀ... ಎಂಬ ಕಡೆಯ ಕೂಗು ಆ ನಿರ್ಜನ ರಾತ್ರಿಯ ಮೌನವನ್ನು ನಡುಗಿಸಿ ಹಾಕಿತು. ಫಿನಿಶ್!'

'...ಬಾಬುಸಿಂಗ್‌ನನ್ನು ಬಂಧಿಸಿದ ಪೊಲೀಸರಿಗೆ ಜೇಡರಹಳ್ಳಿಯ ಸ್ಥಾವರ ಗೊತ್ತಾಯಿತು'

'ಜೇಡರಳ್ಳಿ ಕೃಷ್ಣಪ್ಪ ಸಕತ್ ರಾಂಗ್ ಆಗವ್ನೆ!'

'ಅದಕ್ಕೆ ಮುನ್ನ ಬಾಣಸವಾಡಿ ಠಾಣೆಯಲ್ಲಿ ನಯೀಮ್‌ನ ರಿಪೇರಿಯಾಯಿತು'

'ಗೋಪಾಲ ಕುರುಬರಪೇಟೆ ರಾಜನಿಗೆ ಮುಹೂರ್ತ ಇಟ್ಟು ಬಿಟ್ಟ!'

ಇಲ್ಲಿ ಉಲ್ಲೇಖಿಸಿರುವ ಉದಾಹರಣೆಗಳಲ್ಲಿನ ಪಾನಕ, ಇಂಜಿನಿಯರ್, ಕ್ರೀಡಾಗೃಹಗಳು, ಆಳ್‌ಕಾಟಿ, ಚಮಕ್‌ದಾರ್, ಫೀಲ್ಡ್, ಮಂಜೂರ್, ಮೀಟರ್, ಉಪಚಾರ, ಅಸೈನ್‌ಮೆಂಟ್, ಪಂಚ್, ಡೀಲ್, ಛಾಪ್ಟರ್, ಇಸ್ತ್ರಿ, ರಾಂಗ್, ರಿಪೇರಿ ಮತ್ತು ಮುಹೂರ್ತ ಇತ್ಯಾದಿ ಪದಗಳು ಸಾಮಾಜಿಕ ವಲಯದಲ್ಲಿ ಪರಿಚಿತವಾದವುಗಳು. ಭೂಗತ ಜಗತ್ತಿನಲ್ಲಿಯೂ ಈ ಪದಗಳ ಬಳಕೆಯಿದೆ. ಆದರೆ ಅರ್ಥಗಳಲ್ಲಿ ವ್ಯತಾಸವಿದೆ. ಅದೇ ಈ ಬರಹಗಳ ಭಾಷಿಕ ವೈಶಿಷ್ಟ್ಯ. ಇಲ್ಲಿ ಬೇರೊಂದು ವಿಶೇಷ ಅರ್ಥವನ್ನು ಹೊರಡಿಸಲು ಅಥವಾ ಬೇರೊಂದು ಪದದ ಅರ್ಥವನ್ನು ನಿಭಾಯಿಸಲು ಇವುಗಳನ್ನು ಬಳಸಿರುವಂತಹವು. ಉದಾ: 'ಮೀಟರ್' ಎಂದರೆ ಎದೆಗಾರಿಕೆ, ಧೈರ್ಯ, ಗುಂಡಿಗೆ ಎಂತಲೂ, 'ರಾಂಗ್' ಎಂದರೆ ಕೊಪೋದ್ರಿಕ್ತ, ಸಿಟ್ಟುಗೊಂಡಿರುವುದು ಎಂಬರ್ಥದೊಂದಿಗೆ ಭೂಗತ ಭಾಷೆಯಲ್ಲಿ ಕರೆಯುತ್ತಾರೆ. ಆದರೆ ಸಾಮಾಜಿಕ ವಲಯದಲ್ಲಿ ಇವು ಯಾವುದೋ ಗಾಡಿಯ ಇಂಜಿನ್, ಯಂತ್ರ, ಆಟೋಗಳಲ್ಲಿ ದರ ನಿರ್ಧರಿಸಲು ಬಳಸುವ ಯಂತ್ರ ಎಂದು, ರಾಂಗ್ ಎಂದರೆ ತಪ್ಪು ಎಂತಲು ಬಳಕೆಯಲ್ಲಿರುವುದನ್ನು ಕಾಣುತ್ತೇವೆ. ಇವೇ ಪದಗಳು ಭೂಗತ ವಲಯಕ್ಕೆ ಬಂದಾಕ್ಷಣ ಅರ್ಥಾಂತರವಾಗಿ ಚಲಾವಣೆಗೊಳ್ಳುತ್ತವೆ. ಈ ರೀತಿಯಲ್ಲಿ ಕ್ರೈಮ್ ಬರಹಗಳಲ್ಲಿ ಅನೇಕ ವಿಶೇಷ ಪದಗಳನ್ನು ಗುರುತಿಸಲು ಸಾಧ್ಯವಿದೆ. ಇವುಗಳ ವಿವರಣೆಯ ಸಂದರ್ಭದಲ್ಲಿ ಬಳಕೆಯಾದ ಪದಗಳಿಗೆ ನಿಘಂಟಿನ ಅರ್ಥವನ್ನು ನೀಡದೆ ಸಾಂದರ್ಭಿಕ ಅರ್ಥವನ್ನು ನೀಡಲಾಗಿದೆ.

| **ಪದಗಳು** | **ಮತ್ತು** | **ಭೂಗತ ವಲಯದಲ್ಲಿನ ಅವುಗಳ ವಿವರ್ಣಾರ್ಥ** |
|---|---|---|
| ಇಂಜಿನಿಯರ್ | – | ಕೊಲೆ ಮಾಡಲು ಯೋಜನೆಗಳನ್ನು ರೂಪಿಸುವವನು |
| ಕ್ರೀಡಾಗೃಹಗಳು | – | ವೇಶ್ಯಾವಾಟಿಕೆಯ ಮನೆಗಳು |
| ಆಳ್‌ಕಾಟಿ | – | ಪೊಲೀಸ್ ಇನ್‌ಫಾರಮರ್, ಪೊಲೀಸರ ಮಾಹಿತಿದಾರ |
| ಚಮಕ್‌ದಾರ್ | – | ಚಾಣಾಕ್ಷ, ಚುರುಕುತನದವನು |
| ಫೀಲ್ಡ್ | – | ವೃತ್ತಿ, ಭೂಗತ ಕೆಲಸ ಮಾಡುವುದು/ಸೇರುವುದು ಕ್ಷೇತ್ರ ಅಥವಾ ವಲಯ |
| ಮಂಜೂರ್ | – | ಜೇಬುಗಳ್ಳ |
| ಮೀಟರ್ | – | ಎದೆಗಾರಿಕೆ, ಧೈರ್ಯ, ಗುಂಡಿಗೆ, ಬಡಿದಾಡುವ ತಾಕತ್ತುಳ್ಳವನು ಎಂದರ್ಥ |
| ಉಪಚಾರ | – | ಪೊಲೀಸರು ಹೊಡೆದರು ಎಂದು ಹೇಳುವುದಕ್ಕೆ ಬಳಸುವ ಪದ |
| ಅಸೈನ್‌ಮೆಂಟ್‌ಗಳು | – | ಕ್ರೈಮ್ ಮಾಡಲು ಪ್ರತ್ಯೇಕ ಕೆಲಸ ಕೊಟ್ಟಿರುವುದನ್ನು ಸೂಚಿಸುತ್ತದೆ. |
| ಪಂಟರು | – | ಕಟ್ಟು ಮಸ್ತಾದವರು, ಗಟ್ಟಿಗರು, ಸಿದ್ಧಹಸ್ತರು |
| ಪಂಚ್ | – | ಹೊಡೆ–ಗುದ್ದು(ಮುಷ್ಠಿ ಬಿಗಿ ಹಿಡಿದು ಗುದ್ದುವುದು) |
| ಡೀಲ್ | – | ಕೊಲೆಯಾಗಿದೆ ಎಂದು ಹೇಳಲು ಮತ್ತು ವ್ಯವಹಾರ ಕುದುರಿದೆ ಎಂತಲೂ ಅರ್ಥವಿದೆ |
| ಛಾಪ್ಟರ್ | – | ಕಥೆ ಮುಗಿದಿದೆ ಅಂಥ ಅಥವಾ ಸತ್ತನೆಂದು ಹೇಳಲು(ಉದಾ: ಬಿಡ್ಡನ ಛಾಪ್ಟರ್ ಮುಗಿತು) |
| ಇಸ್ತ್ರಿ | – | ಇಸ್ತ್ರಿ ಅಂದರೆ ಪೊಲೀಸರು ಅಪರಾಧಿಗಳನ್ನು ಹೊಡೆಯುವುದಕ್ಕೆ ಬಳಸುವ ಪದ |
| ಮಟಾಷ್ | – | ಮುಗಿಯಿತು, ಕಲಾಸ್ ಎಂಬರ್ಥ, ಅಂತ್ಯ |
| ಫಿನಿಶ್ | – | ಮುಕ್ತಾಯ, ಕೊನೆ |
| ಸ್ಥಾವರ | – | ನೆಲೆ, ವಾಸಸ್ಥಾನ, ಬಿಡು ಬಿಟ್ಟಿರುವ ಸ್ಥಳ |
| ರಾಂಗ್ | – | ಕೊಪ, ಸಿಟ್ಟು, ಉದ್ವೇಗ |
| ರಿಪೇರಿ | – | ಸರಿಪಡಿಸು, ತಿದ್ದು, ತಪ್ಪು ಕೆಲಸದ ಬಗ್ಗೆ ಅರಿವು ಮೂಡಿಸು (ಪೊಲೀಸರು ನಯಿಮ್‌ನನ್ನು ರಿಪೇರಿ ಮಾಡಿದರು) |

ಮುಹೂರ್ತ – ಸಾಯಿಸುವುದಕ್ಕೆ ಎಲ್ಲಾ ರೀತಿಯಿಂದಲೂ ಸಿದ್ಧವಾಗಿರುವುದು ಸಮಯ ಮತ್ತು ಸ್ಥಳ ನಿಗದಿಪಡಸುವುದು ಎಂಬರ್ಥವನ್ನು ಸೂಚಿಸುತ್ತದೆ. ಗೊತ್ತು ಪಡಿಸು (ಉದಾ: ಬಿಡ್ಡನಿಗೆ ಮುಹೂರ್ತ ಇಡಬೇಕು).

ಮೇಲಿನವನ್ನು ಗಮನಿಸಿದಾಗ ಒಟ್ಟಾರೆ ಭೂಗತ ಜಗತ್ತಿನದೇ ಒಂದು ರೀತಿಯ ಭಾಷೆ ಮತ್ತು ಪರಿಭಾಷೆ ಇರುವುದು ಕಂಡುಬರುತ್ತದೆ. ಸಮಾಜದಲ್ಲಿ ಹಲವಾರು ವಲಯಗಳಿರುವಂತೆಯೇ ಕ್ರೈಮ್ ಲೋಕವೂ ತನ್ನದೇ ಆದ ಒಂದು ವಲಯವನ್ನು ಗುರುತಿಸಿಕೊಂಡಿದೆ. ಭಾಷಾ ಪ್ರಭೇದವೊಂದನ್ನು ಸೃಷ್ಟಿಸಿಕೊಂಡಿದೆ. ಈಗಾಗಲೇ ಒಂದು ನಿರ್ದಿಷ್ಟ ವಲಯದಲ್ಲಿ ಬಳಕೆಯಲ್ಲಿರುವ ಪದಗಳು ಮತ್ತೊಂದು ವಲಯದಲ್ಲಿ ಬಳಕೆಯಾಗಿದ್ದನ್ನು ಈ ಕ್ರೈಮ್ ಬರಹಗಳಲ್ಲಿ ಗುರುತಿಸಲು ಸಾಧ್ಯ ಎಂದು ಕಂಡುಕೊಳ್ಳಲಾಗಿದೆ. ಅದರ ಪ್ರಕ್ರಿಯೆಯನ್ನು 'ಪದಗಳ ವಲಸೆ' ಎಂದು ಕರೆಯಬಹುದು. ಹೀಗೆ ರವಿ ಬೆಳಗೆರೆಯವರು ಭಾಷೆಯನ್ನು ಪರಿಣಾಕಾರಿಯಾಗಿ ಸೃಜನಾತ್ಮಕ ಮತ್ತು ವಾಸ್ತವ ನೆಲೆಯಲ್ಲಿ ಬಳಕೆ ಮಾಡುತ್ತಾರೆ.

ಭೂಗತ ಜೀವಿಗಳಿಗೆ ತಮ್ಮದೇ ಆದ ಭಾಷೆಯಿದೆ, ಕೋಡ್‌ವರ್ಡ್‌ಗಳಿವೆ, ಅಡ್ಡ ಹೆಸರುಗಳಿವೆ. ರೌಡಿ ಕೊತ್ವಾಲ ರಾಮಚಂದ್ರನ ಭಾಷೆಯಲ್ಲಿ 'ನಾಯಿಗಳು' ಎಂದರೆ ಪೊಲೀಸರು. ರೌಡಿಗಳ ಭಾಷೆಯಲ್ಲಿ 'ಲಾಂಗ್' ಅಂದರೆ ೩–೪ ಅಡಿ ಉದ್ದದ ತಲವಾರ್(ಖಡ್ಗ). ಬ್ಯಾಟ್, ಮಚ್ಚು, ಕತ್ತಿ, ಬಾಕು, ರೇಜರ್, ರಾಡ್, ಚಾಕು ಮುಂತಾದವು ರೌಡಿಗಳು ಬಳಸುವ ಆಯುಧಗಳು. ಸಾಮಾನ್ಯವಾಗಿ ರೌಡಿಗಳು ತಮ್ಮ ಆಕ್ರಮಣ/ಕಾರ್ಯಾಚರಣೆಯನ್ನು 'ರೈಡ್' ಅಂತ ಕರೆದುಕೊಳ್ಳುತ್ತಾರೆ.

ರೌಡಿಗಳೆಲ್ಲರಿಗೂ ಅವರವೇ ಆದ ಅಡ್ಡ ಹೆಸರುಗಳಿರುತ್ತವೆ. ಅವುಗಳಲ್ಲಿ ಕೆಲವು ಇಲ್ಲಿವೆ. ಬ್ಲೇಡ್, ಜೆರ್ಕಿನ್, ಗಿಡಿಗಿಡಿ, ಬಂಟ, ಕಿಚ್ಚ, ಕೆಂಚ, ಮೀಟ್ರು, ಬುಲೆಟ್, ಫೈಟರ್, ಕುಳ್ಳ, ಕೊರಂಗು, ಕೋಳಿ, ನೀಗ್ರೋ, ಬಿಡ್ಡ, ಬುಡ್ಡಿ, ಕಿರಿಕ್ಕು, ಕ್ಯಾಮೇಲ್, ಮೊಸಳೆ, ಪೇಟೆ, ಎಲೆ, ಟೈಟು, ಆ್ಯಸಿಡ್, ರೇಜರ್, ಬೆಕ್ಕಿನ ಕಣ್ಣು, ಆಯಿಲ್, ಬೂಟ್‌ಹೌಸ್ ಇತ್ಯಾದಿಯಾಗಿ ಸಾಗುತ್ತದೆ ಪಟ್ಟಿ.. ಇಂತಹ ಅನೇಕ ಹೆಸರುಗಳನ್ನು ಇಂದಿನ ಸಿನೆಮಾಗಳಲ್ಲಿ ಕಾಣಬಹುದಾಗಿದೆ.

ಭಾಷಿಕವಾಗಿ ಗಮನಿಸಿದಾಗ ರವಿಯವರ ಈ ಪ್ರಯತ್ನ ವೈಶಿಷ್ಟ್ಯ ಪೂರ್ಣವಾದದ್ದು ಮತ್ತು ಮಹತ್ವವಾದದ್ದು. ಅವರ ಬರಹಗಳ ಹಿಂದಿನ ಉದ್ದೇಶ ಏನೇ ಇರಲಿ ಕನ್ನಡ ಭಾಷೆಯ ಮಟ್ಟಿಗೆ ವಿಶೇಷ ಮಾಹಿತಿಯನ್ನು ನೀಡುವ ವಲಯವಾಗಿ ಕಾಣಿಸಿಕೊಳ್ಳುತ್ತದೆ. ಪರೋಕ್ಷವಾಗಿಯಾದರೂ ಕನ್ನಡಕ್ಕೆ ಇಂತಹ ವಲಯದಲ್ಲಿ ಬಳಕೆಯಾಗುವ ಪದ, ಪದದ ಅರ್ಥಗಳನ್ನು ದಾಖಲಿಸುವುದರ ಮೂಲಕ ಕೊಡುಗೆಯನ್ನು ನೀಡಿದಂತಾಗಿದೆ ಎಂದೇ ಹೇಳಬಹುದೇನೋ. ಅವರ ಅಷ್ಟು ಕ್ರೈಮ್ ಬರಹಗ ಭೂಗತ ಭಾಷಾ ಪದಗಳನ್ನು ಮಾತ್ರ ಒಟ್ಟು ಸೇರಿಸಿದರೂ ಕ್ರೈಮ್ ವಲಯದಲ್ಲಿ ಬಳಕೆಯಿರುವಂತಹ ಪದಗಳದ್ದು ಒಂದು ಪದಕೋಶವನ್ನೇ ಸಿದ್ದಪಡಿಸಬಹುದು. ಆ ಮೂಲಕ ಭಾಷೆಯ ವೈವಿಧ್ಯತೆಯನ್ನು ಮೆರೆದಂತಾಗುತ್ತದೆ.

ಇಂದಿಗೂ ಆ ವಲಯದಲ್ಲಿ ಇಂತಹ ಭಾಷೆ ಬಳಕೆಯಲ್ಲಿರಬಹುದು ಕೇವಲ ಸಣ್ಣ ಪುಟ್ಟ ಕೋಡ್‌ವರ್ಡ್ ಬಂದಿರಬಹುದು ಮತ್ತು ಬದಲಾಗಿರಬಹುದು. ಒಬ್ಬ ಭಾಷಾಧ್ಯಯನಕಾರನಿಗೆ

ಅಥವಾ ಭಾಷಾ ಆಸಕ್ತನಿಗೆ ಈ ಕ್ಷೇತ್ರವಂತೂ ವಿಪುಲವಾದ ಭಾಷಿಕ ಮಾಹಿತಿಯನಂತೂ ಒದಗಿಸುವ ಕ್ಷೇತ್ರವೆಂದೆ ಹೇಳಬೇಕು.

**೪.೫. ಇತರೆ**

ಮನುಷ್ಯನಿಗೆ ತನ್ನ ಭಾವನೆಗಳನ್ನು ವ್ಯಕ್ತಪಡಿಸಲು ಇರುವ ಏಕೈಕ ಮಾಧ್ಯಮವೆಂದರೆ ಭಾಷೆ. ಅದು ಆಂಗಿಕ, ಮೌಖಿಕ ಅಥವಾ ಬರಹದಂತಹ ಸಂಜ್ಞಾ ರೂಪದಲ್ಲಿಯಾದರೂ ಇರಬಹುದು. ಆದರೆ ಈ ಭಾಷೆ ವಿಚಾರ(ಭಾವನೆ)ಗಳ ಸಂಪರ್ಕವನ್ನು ಅರ್ಥಪೂರ್ಣವಾಗಿ ಮಾಡಬಲ್ಲ ತಿಳುವಳಿಕೆ. ನಮ್ಮ ಅರ್ಥ ಪ್ರತೀತಿಗಳಿಗೆಲ್ಲ ಮೂಲವಾಗಿರುವ ತಿಳಿವಳಿಕೆಯು ಹೌದು. ಇನ್ನೂ ನಾವು ಉಪಯೋಗಿಸುವ ಭಾಷೆ ನಮ್ಮ ಸಂಸ್ಕೃತಿಯ ಮುಖ್ಯ ಅಂಶವಾಗಿರುತ್ತದೆ. ಆದರೆ ಅದು ಪ್ರತ್ಯೇಕ ವ್ಯವಸ್ಥೆಯಾದಾಗ ಇಡೀ ಸಂಸ್ಕೃತಿ ಅದರ ವಸ್ತುವಾಗಬಹುದು. ಅದು ಕೇವಲ ಶಬ್ದ, ವ್ಯವಹಾರಕ್ಕೆ ಮಾತ್ರ ಸಿಮೀತವಾಗಿರುವುದಿಲ್ಲ. ಸಾಹಿತ್ಯ ಭಾಷೆಯಲ್ಲಿ ಒಡಮೂಡುವ ಕಲೆ. ಜಗತ್ತನ್ನೆಲ್ಲ ಸೆರೆಹಿಡಿಯಬಲ್ಲ ಒಂದು ಭಾಷೆ, ಕೃತಿಯ ಗ್ರಹಿಕೆಗೆ ಒಂದು ರೀತಿಯ ಪ್ರಜ್ಞೆಯ ರೂಪ ಕೊಡುತ್ತದೆ. ಭಾಷೆಯ ಧ್ಯೇಯ ಓದುಗನ ಗ್ರಹಿಕೆಗೆ ಒಳಪಡುವಂತಹದು. ಒಂದರ್ಥದಲ್ಲಿ ಪ್ರತಿಯೊಬ್ಬ ಲೇಖಕನ ಅರ್ಥಸ್ಫುರಣತೆ, ಶ್ರೇಷ್ಠತೆ ಮತ್ತು ಅದರ ಸೋಲು–ಗೆಲವುಗಳು ಭಾಷೆಯ ಪ್ರಜ್ಞೆಯ ಮಟ್ಟವನ್ನೇ ಅವಲಂಭಿಸಿರುತ್ತದೆ. ಅಂದರೆ ಮನುಷ್ಯನ ಎಲ್ಲಾ ಸಂವೇದನಾಶೀಲ ಚಟುವಟಿಕೆಗಳನ್ನು ಒಂದು ವಿನ್ಯಾಸದಲ್ಲಿ ನಿಜಗೊಳಿಸುವುದು ಭಾಷೆ. ಅಂದರೆ ಒಂದು ಮೌಲ್ಯವನ್ನು ಲೇಖಕ ತನ್ನ ಭಾಷಾ ಮಾಧ್ಯಮದಲ್ಲಿ ವ್ಯಕ್ತಗೊಳಿಸುತ್ತಾನೆ.

ಬರಹಗಾರರ ಭಾಷಾ ಶೈಲಿಯನ್ನು ಕುರಿತು ಅವಲೋಕಿಸಿದಾಗ, ಒಬ್ಬೊಬ್ಬ ಬರಹಗಾರನು ತನ್ನದೇ ಆದ ಭಾಷೆ ಶೈಲಿಯಲ್ಲಿ ಅನುಭವಗಳನ್ನು ವ್ಯಕ್ತಪಡಿಸುತ್ತಾನೆ. ಕೆಲವರು ಗ್ರಾಂಥಿಕ ಭಾಷೆ ಬಳಿಸಿದರೆ, ಇನ್ನೂ ಕೆಲವರು ಪ್ರಾದೇಶಿಕ ಭಾಷೆ ಬಳಸುತ್ತಾರೆ. ಕೆಲವರು ಆಡು ಮಾತಿನ ರೀತಿ, ಅನುಭವನಿಷ್ಠ ನಾಣ್ಣುಡಿಗಳ ರೂಪದಲ್ಲಿ ಅನುಭವ, ಘಟನೆಗಳನ್ನು ದಾಖಲಿಸುತ್ತಾರೆ. ಕೆಲವರಲ್ಲಿ ಅನುಭವಗಳನ್ನು ಆಡುಮಾತಿನ ರೀತಿಯಲ್ಲಿ ಹೇಳಿಕೊಳ್ಳುವ ಸಹಜ ಮಾತುಗಾರಿಕೆ ಎದ್ದು ಕಾಣುತ್ತದೆ. ಎಲ್ಲೋ ಒಬ್ಬಿಬ್ಬರನ್ನು ಹೊರತುಪಡಿಸಿದರು ಸಹಜವಾಗಿ ಎಲ್ಲರದು ಆಡುಮಾತಿನ, ಗ್ರಾಂಥಿಕ ಮಿಶ್ರಣದ ಸ್ವರೂಪವನ್ನೇ ಹೋಲುವಂತಹ ಭಾಷೆಯಾಗಿರುತ್ತದೆ. ಭಾಷೆಯಲ್ಲಿ ಕಾದಂಬರಿಯ ಶೈಲಿ, ಕಥನಾತ್ಮಕ ಶೈಲಿ, ಸಂಭಾಷಣೆಯ ರೂಪದ ನಾಟಕೀಯ ಶೈಲಿ ಹೀಗೆ ಅವರವರ ಪ್ರತಿಭೆ, ಪರಿಸರ, ಸಂದರ್ಭಕ್ಕೆ ತಕ್ಕಂತೆ ವಿಶೇಷ ಪದ ವಾಕ್ಯ, ಪ್ರಯೋಗಗಳಂತಹ ವಿಶಿಷ್ಟ ಶೈಲಿಯ ಭಾಷೆ ವ್ಯಕ್ತಗೊಳಿಸುವುದು ಕಂಡುಬರುತ್ತದೆ. ಅಂತವರಲ್ಲಿ ರವಿ ಬೆಳಗೆರೆಯವರೂ ಪ್ರಮುಖರು.

ರವಿ ಬೆಳಗೆರೆಯವರು ಗದ್ಯ ಬರವಣಿಗೆಗೆ ಒಂದು ವಿಶಿಷ್ಟತೆಯನ್ನು ತಂದು ಕೊಟ್ಟವರು. ಅವರು ಬಳಸುವ ಭಾಷೆ, ಶೈಲಿ ವಿಶಿಷ್ಟವಾದದ್ದು. ವ್ಯಾಕರಣ ನಿಯಮಗಳನ್ನು ಅರ್ಥಪೂರ್ಣವಾಗಿ ಮೀರುವ ರೀತಿಯೂ ವಿಶೇಷವಾಗಿದೆ. ಸನ್ನಿವೇಶಕ್ಕೆ ತಕ್ಕ ಪದ/ವಾಕ್ಯ ಪ್ರಯೋಗ(Right word at right place) ರವಿಯವರ ಬರಹದ ವೈಶಿಷ್ಟ್ಯತೆಗಳು. ಅವರ ಬರವಣಿಗೆಯ ಬಗೆಗೆ ಕುಂ. ವೀರಭದ್ರಪ್ಪನವರು 'ವ್ಯಾಕರಣ, ಛಂದಸ್ಸಿನ ಹಂಗುತೊರೆದ ಪಾಡ್ದನ ಕಾವ್ಯದಂತೆ, ಕೊಡಲಿ ಪರಶುಗಳನ್ನು ಗೆದ್ದು ಸಾಗುವಾನಿ ಮರದಂತೆ, ಅಂತರಂಗ, ಬಹಿರಂಗದ ನಡುವಿನ ಚೀನಾ ಗೋಡೆಯನ್ನು

ಕೆಡುವುತ್ತಲೇ ಬೆಳೆಯುತ್ತಿರುವ ರವಿ ದೂರ್ವಾಸಪುರದ ನಾರಾಯಣಪ್ಪನ ಅಪರಾವತಾರವೇ ಸರಿ. ಮಾರ್ಕ್ಸಿಸ್ಟನಾಗಿ ನನ್ನಂಥ ಉಪದ್ರವಿಗಳ ಮೇಲೆ ಸೃಜನಶೀಲವಾಗಿ ನಿಗಾ ಇಟ್ಟಿದ್ದ. ಮೆಚ್ಚುಗೆಯ ಕರಿಗಡುಬಿನೊಳಗೆ ಅನುಮಾನದ ಹೂರಣ ತುಂಬಿರುತ್ತಿದ್ದ ಈ ತೇನ್‌ಸಿಂಗ್ ಟ್ಯಾಬ್ಲಾಯ್ಡ್ ಪ್ರಪಂಚದ ಹೊಸ ಭಾಷ್ಯ ಬರೆದಿದ್ದಾನೆ'[೧೭] ಎನ್ನುತ್ತಾರೆ.

ಲಂಕೇಶ್‌ರು ತಮ್ಮ ಪತ್ರಿಕೆಯ ಮೂಲಕ ಭಾಷೆಯ ಹೊಸತನ ತಂದರೂ ಭಾಷಾ ಮಡಿವಂತಿಕೆಯ ನೆರಳೊಳಗಿನಿಂದ ಹೊರಬರಲಾಗಲಿಲ್ಲ. ಆದರೆ ರವಿಯವರು ಅವುಗಳನ್ನೆಲ್ಲ ಅರ್ಥಪೂರ್ಣವಾಗಿ ಮೀರುತ್ತಾರೆ. ಅದಕ್ಕೆ ಅವರು ಬಳಸುವ ಭಾಷೆ ಬರೀ ವಿದ್ವಾಂಸರ ಭಾಷೆಯಾಗಿ ಉಳಿಯದೆ ಜನ ಸಾಮಾನ್ಯರು ಆಡುವ ಭಾಷೆಯಾಗಿಯೂ ಉಳಿದು ತನ್ನ ವೈಶಿಷ್ಟ್ಯವನ್ನು ತೋರಿದೆ. ಈ ಕಾರಣಕ್ಕಾಗಿಯೇ ರವಿಯವರ ಬರಹ ಮತ್ತು ಭಾಷೆಯ ಬಗೆಗೆ ಬಿ.ಎಸ್.ವೆಂಕಟಲಕ್ಷ್ಮೀಯವರು 'ಒಂದೆರಡು ವರ್ಷಗಳ ಕೆಳಗೆ ಗೆಳೆಯನೊಬ್ಬನ ಜತೆ ಮಾತ್ತಾಡ್ತಿದ್ದಾಗ ಕುತೂಹಲಕ್ಕೆ ನೀನು ರವಿ ಬೆಳಗೆರೇನ ಹೇಗೆ ಅನಲೈಸ್ ಮಾಡ್ತೀ...' ಅಂತ ಕೇಳಿದ್ದೆ. ಅದಕ್ಕವನು ಥಟ್ಟನೆ ಅಂದದ್ದು: 'ಇವನ ಹಾಗೆ ಯಾರೂ ಭಾಷೆಯನ್ನು ವ್ಯಾಪಾರಕ್ಕಿಟ್ಟಿಲ್ಲ ಹಾಗೂ ಅದೇ ಸಮಯಕ್ಕೆ ಯಾರೂ ನಮ್ಮಲ್ಲಿ ಭಾಷೆಯನ್ನು ಯಶಸ್ವಿಯಾಗಿ ಬಳಸಿಕೊಂಡೇ ಇವನಷ್ಟು ಮೇಲ್ಮಟ್ಟಕ್ಕೆ ಬಂದು ಉದ್ಧಾರವಾಗಿಲ್ಲ...' ರವಿಯನ್ನು ಕುರಿತಂತೆ ಬೆಸ್ಟ್ ಎಕ್ಸ್‌ಪ್ಲನೇಶನ್ ಇದು ಅಂತ ನಂಗನ್ನಿಸ್ತು. ಇವತ್ತು ರವಿ ಬಳಸೋ ಭಾಷೆ ಎಷ್ಟು ವ್ಯಾಪಕವಾಗಿದೆ ಅಂದ್ರೆ ಅದನ್ನು ಯಾರ್‍ಯಾರೋ ಕದ್ದು ಕೋತಾರೆ, ತಮ್ಮ ಕಾಲಂಗಳಲ್ಲಿ ಅದನ್ನು ಕಾಪಿ ಮಾಡಿ ಬಳಸ್ತಾರೆ. ಇವನ ಸ್ಟೈಲ್‌ನ ಇಮಿಟೇಟ್ ಮಾಡೋಕ್ಕೆ ಪ್ರಯತ್ನಿಸ್ತಾರೆ.

ಇವರೆಲ್ಲರ ಬರವಣಿಗೇನ ಓದ್ತಿದ್ದ ಹಾಗೆ ಭಾಷೆ, ಶೈಲಿ ಎಲ್ಲಿಂದ ಬಂತು ಅಂತ ಸುಲಭವಾಗೇ ಗೋತ್ತಾಗುತ್ತೆ. ಆದರೆ ಇವುಗಳಲ್ಲಿ ರವಿಯ ಬರವಣಿಗೆಯ ಧಾಟಿಯಿಂದ ಉಂಟಾಗೋ ಎಫೆಕ್ಟ್ ಇರೋಲ್ಲ ಅಷ್ಟೆ. ರವಿ ನಂಗೆ ಗ್ರೇಟ್ ಅನ್ನಿಸೋದು ಭಾಷೆ ಹಾಗೂ ಶೈಲಿಯೊಂದನ್ನು ಹೊಸದಾಗಿ ಹುಟ್ಟು ಹಾಕಿದ ಪ್ರವರ್ತಕನಾಗಿ. 'ರವಿ ಬೆಳಗೆರೆ ಬಳಸೋ ಶಬ್ದಗಳ ನಿಘಂಟು' ಅನ್ನೋ ಪ್ರಕಟಣೆಯೊಂದನ್ನು ಯಾರೂ ಹೊರ ತಂದಿರಬಹುದು; ಕನ್ನಡ ಸಾಹಿತ್ಯವನ್ನು ಕುರಿತು ಹಗಲೂ ರಾತ್ರಿ ಚರ್ಚಿಸೋ ನಮ್ಮ ಪಂಡಿತರು ಇಂಥದೊಂದು ಕಾಲಘಟ್ಟದಲ್ಲಿ ಇಂಥದೊಂದು ಭಾಷೆ ಬಳಕೆಗೆ ಎಂದು ಬಂತು ಎಂಬುದನ್ನು ದಾಖಲಿಸುವಂಥ ಧಾರಾಳತನವನ್ನು ಪ್ರದರ್ಶಿಸದಿರಬಹುದು. ಆದರೆ ಆಡುಮಾತಿನ ಮೂಲಕವೇ ಬರವಣಿಗೆಯೊಂದು ಎಲ್ಲರನ್ನೂ ಮುಟ್ಟಬಹುದು ಅಂತ ನಂಬಿರೋ ನನ್ನಂಥವರಿಗೆ ಮಾತ್ರ ಈ ಭಾಷೆ, ಶೈಲಿ ಅದ್ಭುತ ಅನ್ನಿಸಿ ಬಿಡುತ್ತೆ'.[೧೮] ಒಬ್ಬ ಬರಹಗಾರ ಬಳಸುವ ಭಾಷೆ ಇದೆಯಲ್ಲ ಅದು ಆತನ ಭಾಷಾಶೈಲಿಯ ವಿಶೇಷತೆಯನ್ನು ಹೇಳುತ್ತದೆ. ಆಕರ್ಷಕತೆ, ವಸ್ತು, ವಿಷಯ, ನಿರೂಪಣಾ ವಿಧಾನ ಮತ್ತು ಮಂಡಿಸುವ ಶೈಲಿ ಗ್ರಹಿಕಾ ಸಾಮಥ್ಯವನ್ನು ಹೆಚ್ಚಿಸುವುದಲ್ಲದೆ ಏಕಾಗ್ರತೆಯನ್ನು ಕುದುರಿಸುತ್ತವೆ. ಈ ಗ್ರಹಿಕಾ ಸಾಮಾರ್ಥ್ಯ ಹೆಚ್ಚಾದಾಗಲೇ ಅದರ ಪ್ರಭಾವ, ಪ್ರಚಾರ ಮತ್ತು ಪ್ರಸಾರ ಹೆಚ್ಚಾಗುವುದು. ಇಂಥದೊಂದು ಸಾಮರ್ಥ್ಯ ರವಿಯವರ ಭಾಷೆಗಿದೆ ಎಂಬುದು ವಿಶೇಷವಾದುದು. ಆ ಭಾಷೆ ವಿಶೇಷತೆಯ ಹಲವು ಲಕ್ಷಣಗಳನ್ನು 'ಇತರೆ'ಯ ಭಾಗದಲ್ಲಿ ನೋಡಲಾಗಿದೆ.

### ೪.೫.೧. ನುಡಿ ಬೆರಕೆ ಅಥವಾ ಭಾಷಾ ಮಿಶ್ರಣ - Code-mixing

ಒಂದು ಭಾಷೆಯನ್ನು ಮಾತನಾಡುವಾಗ ಅಥವಾ ಬಳಸುವಾಗ ಅಥವಾ ಬರೆಯುವಾಗ ಬೇರೊಂದು ಭಾಷೆಯನ್ನು ಬೆರೆಸುವುದು ಭಾಷೆಯ ಅಜ್ಞಾನದ ಲಕ್ಷಣ ಅಥವಾ ಭಾಷಿಕನ ಸೋಮಾರಿತನ ಇಲ್ಲ ಪರ ಭಾಷಾ ವ್ಯಾಮೋಹಿ ಎಂಬಂತಹ ಮಾತುಗಳು ಕೇಳಿಬರುತ್ತಿರುತ್ತವೆ. ಈ ರೀತಿಯ ಬೆಳವಣಿಗೆ, ಚಲಾವಣೆಯಾಗುವುದು ಭಾಷೆಯ ಹಾಳಾಗುತ್ತಿರುವುದರ ಸಂಕೇತವೆಂತಲೂ, ಭಾಷೆಯ ಬೆಳವಣಿಗೆಗೆ ಅಡ್ಡಿ ಎಂತಲೂ ಹೇಳುವವರು ಇದ್ದಾರೆ. ಒಟ್ಟಿನಲ್ಲಿ ಈ ನುಡಿ ಬೆರಕೆ (code-mixing)ಯ ಬಗೆಗೆ ಅಸಮಾಧಾನ ಕೀಳರಿಮೆ, ತಾತ್ಸರದ ಭಾವನೆಗಳೇ ಹೆಚ್ಚಿನದಾಗಿ ಕೇಳಿಬರುತ್ತಿರುತ್ತವೆ. ಹಾಗೆ ನೋಡಿದರೆ ನುಡಿ ಬೆರಕೆ ಎಂಬುದು ಇಂದು ಯಾವುದೋ ಅನಕ್ಷರಸ್ಥರ, ಅಜ್ಞಾನಿಗಳ ವಲಯಕ್ಕೆ ನಿಲ್ಲುವುದಿಲ್ಲ. ಅದು ಇಂದಿನ ಪ್ರಜ್ಞಾವಂತರ, ಶಿಕ್ಷಿತರ ಕನ್ನಡದಲ್ಲಿ ಎದ್ದು ಕಾಣುವ ಅಂಶವೆಂದೇ ಹೇಳಬಹುದು. ಶೋಕಿಗಾಗಿ ಬಂದು ಹೋಗುವ ತಾತ್ಕಾಲಿಕ ಅತಿಥಿಯಂತೂ ಅಲ್ಲ ಇದು. ಹಾಗಾಂತ ಕೇವಲ ಕನ್ನಡಕ್ಕಷ್ಟೇ ಸಿಮೀತವಾದದೇನೂ ಅಲ್ಲ. ಈ ರೀತಿಯ ನುಡಿ ಬೆರಕೆ ಜಗತ್ತಿನ ಎಲ್ಲ ಭಾಷೆಗಳು ಒಂದಲ್ಲ ಒಂದು ಭಾಷೆಯಿಂದ ಮಿಶ್ರಣಕ್ಕೆ ಪಾಲುಗಳು ಎಂದೇ ಹೇಳಬಹುದು.

ಹಾಗಾದರೆ ನುಡಿ ಬೆರಕೆಯ ಬಗೆಗೆ ನಮ್ಮ ಪಂಡಿತರಿಗೇಕೆ ನಕಾರಾತ್ಮಕವಾದ ಭಾವನೆ? ಬರೀ ಕನ್ನಡ ಭಾಷೆಗಷ್ಟೇ ಈ ಭಾವನೆ ಸಿಮೀತವಾಗಿಲ್ಲ. ಅಮೇರಿಕಾದ 'ಯುರಿಯಲ್ ವೈನ್‌ರೈಖ್' ಸಹ ತನ್ನ 'ಭಾಷಾ ಸಂಪರ್ಕ'ವೆಂಬ ಅತಿ ಪ್ರಸಿದ್ಧ ಗ್ರಂಥದಲ್ಲಿ ಹೀಗೆ ಹೇಳುತ್ತಾನೆ. 'ಆದರ್ಶ ದ್ವಿಭಾಷಿ ಭಾಷಾ ಸಂದರ್ಭ(ಉದ್ದೇಶಿತ ವ್ಯಕ್ತಿ, ವಿಚಾರ ಇತ್ಯಾದಿ) ಬದಲಾದಂತೆ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಬದಲಾಯಿಸುತ್ತಿರುತ್ತಾನೆ. ಸಂದರ್ಭ ಬದಲಾಗದಿದ್ದರೆ ಭಾಷೆಯನ್ನು ಬದಲಾಯಿಸುವುದಿಲ್ಲ. ಅದೂ ಒಂದೇ ವಾಕ್ಯದೊಳಗಂತೂ ಖಂಡಿತಾ ಬದಲಾಯಿಸುವುದಿಲ್ಲ'.[೧೯] ಒಂದೇ ವಾಕ್ಯದೊಳಗೇ ಹಲವಾರು ಬಾರಿ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಬದಲಾಗುತ್ತ ಮಾತಾನಾಡುವುದು ನುಡಿ ಬೆರಕೆಯ ಅತ್ಯಂತ ಸಾಮಾನ್ಯ ಲಕ್ಷಣ. ಶೈಲಿಯ ತಂತ್ರದ ಕಾರಣಗಳಿಗಾಗಿಯೂ ನುಡಿ ಬೆರಕೆ ನಡೆಯುತ್ತದೆ. ಅದಕ್ಕೆ ತನ್ನದೇ ಆದ ಸಾಂದರ್ಭಿಕ ಔಚಿತ್ಯವೂ ಉಂಟು. ನುಡಿ ಬೆರಕೆ ನುರಿತ ದ್ವಿಭಾಷಿಕರ ಸಹಜವಾದ ವರ್ತನೆಯೇ ಹೊರತು ಭಾಷಾ ಅಜ್ಞಾನದ ಕುರುಹಲ್ಲ. ನುಡಿ ಬೆರಕೆ ಮಾಡುವ ಪ್ರತಿಯೊಬ್ಬ ಬರಹಗಾರನು/ಭಾಷಿಕನೂ ತನಗೆ ವಿಶಿಷ್ಟವಾದ ರೀತಿಯಲ್ಲಿ ಭಾಷಾ ಮಿಶ್ರಣದ ವಾಕ್ಯಗಳನ್ನು ಸೃಷ್ಟಿಸುತ್ತಾನೆ. ರವಿ ಬೆಳಗೆರೆಯವರಂತೂ ವಿಪರೀತವಾದ ನುಡಿ ಬೆರಕೆಯ ವಾಕ್ಯಗಳನ್ನು ಸೃಷ್ಟಿಸುತ್ತಾರೆ. ಅವರ ನುಡಿ ಬೆರಕೆಯಲ್ಲಿ ಇಂಗ್ಲೀಶ್ ಒಂದೇ ಅಲ್ಲ ಹಿಂದಿ, ಉರ್ದು, ತೆಲುಗು ಭಾಷೆಯ ಪದಗಳ ಸೇರಿಕೊಂಡಿರುತ್ತವೆ. ಇತರ ಭಾಷೆಗಳಲ್ಲದೆ ಒಂದೇ ಭಾಷೆಯೊಳಗೆ ನುಡಿ ಬೆರಕೆಯಾಗುತ್ತದೆ ಎಂಬುವುದೂ ಗಮನೀಯ ಅಂಶವೇ.

ನುಡಿ ಬೆರಕೆ ಒಂದು ವಾಕ್ಯದೊಳಗೆ ನಡೆಯುತ್ತದೆ. ಸಂದರ್ಭ ಬದಲಾಗದಿದ್ದರೂ ಅದರ ಪ್ರಕ್ರಿಯೆ ನಡೆಯುತ್ತದೆ. ನುಡಿ ಬೆರಕೆಗೆ ತನ್ನದೇ ಆದ ಒಂದು ತರ್ಕವಿದೆ, ವ್ಯಾಕರಣವಿದೆ, ಮನಸ್ಸಿಗೆ ಬಂದ ಹಾಗೆ ಬರೆಯುವುದು, ಮಾತನಾಡುವುದು ನುಡಿ ಬೆರಕೆಯ ಲಕ್ಷಣವಲ್ಲ.

ಕೇಳುಗರೊಡನೆ/ಓದುಗರೊಡನೆ ಸಹಕರಿಸಲು ಅಥವಾ ಅವರ ಮಧ್ಯೆ ಅಂತರವನ್ನು ಕಡಿಮೆ ಮಾಡಲು ಭಾಷಿಕರು ನುಡಿ ಬೆರಕೆಯ ಸಹಾಯವನ್ನು ಪಡೆಯುತ್ತಾರೆ. ಪತ್ರಿಕೋದ್ಯಮದ ಒತ್ತಡವೋ? ಓದುಗರನ್ನು ಆಕರ್ಷಿಸಲು ಬಳಸಿಕೊಂಡ ತಂತ್ರವೋ? ಒಟ್ಟಿನಲ್ಲಿ ರವಿ ಬೆಳಗೆರೆಯವರು ತಮ್ಮ ಬರಹಗಳಲ್ಲಿ ನುಡಿ ಬೆರಕೆ ಮಾಡಿರುವುದನ್ನು ಕಾಣಬಹುದು. ಅದರ ಪ್ರಕ್ರಿಯೆಯನ್ನು ಈ ಮುಂದಿನಂತೆ ಉದಾಹರಣೆಗಳ ಸಹಿತ ಗಮನಿಸಲಾಗಿದೆ(ಇಲ್ಲಿ ಉದಾಹರಣೆಗಾಗಿ ರವಿ ಬೆಳಗೆರೆಯವರ ಎಲ್ಲಾ ಪ್ರಕಾರದ ಬರಹಗಳಿಂದ ಉದಾಹರಣೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ)

ಕನ್ನಡ ಇಂಗ್ಲೀಶ್ ನುಡಿ ಬೆರಕೆಯ ಉದಾಹರಣೆಗಳು (ಕನ್ನಡ ಲಿಪಿಯಲ್ಲಿ ಇದ್ದವನ್ನು ಕನ್ನಡ ಲಿಪಿಯಲ್ಲಿ, ರೋಮನ್ ಲಿಪಿಯಲ್ಲಿ ಇದ್ದವನ್ನು ರೋಮನ್ ಲಿಪಿಯಲ್ಲಿ ಒಟ್ಟಾರೆ ಮೂಲ ಬರಹದಲ್ಲಿ ಇರುವಂತೆಯೇ ದಾಖಲಿಸಲಾಗಿದೆ.)

'ಏನಿಲ್ಲ ಬಿ.ಪಿ. ಜಾಸ್ತಿಯಾಗಿರಬೇಕು. ವರ್ಕ್‌ಲೋಡ್ ತುಂಬ ಹೆವಿ ಆಗಿದೆ ಅಷ್ಟೆ'
ತಮ್ಮಲ್ಲೇ ಗುನುಗಿಕೊಂಡರು ರಾಜೇಗೌಡ'[೨೦]

'ಪ್ರೇಯಸಿಯ ಹೆಬ್ಬೆರಳ romantic ತುದಿಯನ್ನು ನಾಯಿ ಮೂಗಿನ cold touch ಎಂದು confuse ಮಾಡಿಕೊಂಡು ಬೆಚ್ಚಿಬಿದ್ದು ಕಿರುಚುವ ಅರಸಿಕ idiot ಜೊತೆಗಿದ್ದರೆ ಇನ್ನೇನಾದೀತು?'[೨೧]

'ಒಂದು night standಗೂ worth ಅಲ್ಲ ನೀನು'[೨೨]

'ಅಲ್ಲಿಗೆ ಸಿಬಿಐನ ಮೊದಲ ಸೂಪರ್ ಕಾಪ್‌ಗಳ ಟೀಮ್ನ ಅಷ್ಟೂ ಕೆಲಸ ನಿರರ್ಥಕವಾಗಿ ಬಿಡುತ್ತದೆ'[೨೩]

'ಏಕಾಗ್ರತೆಯಿಂದ ನೃತ್ಯ ಸಂಯೋಜನೆ ಮಾಡಬೇಕಿದ್ದ ಮಹಾಗುರುವಿಗೆ ಮಹಾ ಡಿಸ್ಟರ್ಬೆನ್ಸು'[೨೪]

ಕನ್ನಡ–ಹಿಂದಿ–ಉರ್ದು ನುಡಿ ಬೆರಕೆಯ ಉದಾಹರಣೆಗಳು

'ಚುಡೈಲ್ ಶೈತಾನ್ ಯಾರ್ದಾದ್ರೂ ಪ್ರಾಣ ತೆಗ್ದು ಬಿಡ್ತೈತೆ'[೨೫]

'ಮೈ ತುಂಬ ಫಜೀತಿಯನ್ನು ಅನುಭವಿಸಿದ್ದೇನೆ'[೨೬]

'ಕ್ಷಮಿಸು; ನಿನ್ನೊಂದಿಗೆ ಬಾಳುವಂಥ ನಸೀಬು ನಗಿಲ್ಲ'[೨೭]

'ಬೆಂಗಳೂರಿನ ಯಾವ ರೌಡಿನೂ ನಂಗೆ ದುಶ್ಮನ್ ಅಲ್ಲ'[೨೮]

'ಅವನ ಬಿಳಿಯ ಷರಾಯಿಯ ಮೇಲೆ ಅವನದೇ ಗಡ್ಡದ ನೆರಳು ಬಿದಿತ್ತು'[೨೯]

ಈ ಮೇಲಿನ ವಾಕ್ಯಗಳು ಸರ್ವೇ ಸಾಮಾನ್ಯವಾಗಿ ಕೇಳಿಬರುವ ಕನ್ನಡ–ಇಂಗ್ಲೀಶ್, ಕನ್ನಡ–ಹಿಂದಿ–ಉರ್ದು ಭಾಷಾ ಬೆರಕೆಯ ವಾಕ್ಯಗಳನ್ನು ಗಮನಿಸಿದಾಗ ಬಹಳ ಹಿಂದಿನಿಂದಲೂ ಈ ರೀತಿಯ ಭಾಷಾ ಮಿಶ್ರಣ ಜಾರಿಯಲ್ಲಿ ಇರುವುದನ್ನು ತಿಳಿಯುತ್ತದೆ. ಅದಕ್ಕೆ ನಮ್ಮ ಚರಿತ್ರೆ ಸಾಕಷ್ಟು ಪುರಾವೆಗಳನ್ನು ಒದಗಿಸುತ್ತದೆ. ಅಂತೆಯೇ ರವಿ ಬೆಳಗೆರೆಯವರ ಬರಹಗಳಲ್ಲಿ ನುಡಿ ಬೆರಕೆಯ ಅಂಶಗಳನ್ನು ಗಮನಿಸಿದಾಗ ವಿಶೇಷವಾದ ಅಂಶಗಳು ಕಂಡುಬರುತ್ತವೆ. ಅದು ಮೇಲಿನ ಉದಾಹರಣೆಗಳಿಂದ ವಿಧಿತವಾಗುತ್ತದೆ. Romantic, Cold toucl, Confuse, Night Stand, Worth, ಸಿಬಿಐ, ಸೂಪರ್ ಕಾಪ್, ಟೀಮ್, ಡಿಸ್ಟರ್ಬೆನ್ಸ್ ಮುಂತಾದ ಇಂಗ್ಲೀಶ್ ಪದಗಳು, ಚುಡೈಲ್

ಶೈತಾನ್, ಫಜೀತಿ, ನಸೀಬು, ದುಶ್ಮನ್, ಷರಾಯಿ ಇತ್ಯಾದಿ ಹಿಂದಿ, ಉರ್ದು ಪದಗಳು ಕಂಡುಬರುತ್ತವೆ. ಪತ್ರಿಕೋದ್ಯಮವೆಂಬುದು ಅವಸರದ ಸಾಹಿತ್ಯ ನಿಜ. ಆದರೆ ಅದು ತನ್ನದೆಯಾದ ಒತ್ತಡವನ್ನು ಒಳಗೊಂಡಿರುತ್ತದೆ. ಒಬ್ಬ ಪತ್ರಕರ್ತ ಪತ್ರಿಕೆಯ ವರದಿಗಾಗಿ ಅನೇಕ ಸ್ಥಳ. ಪ್ರದೇಶಗಳಿಗೆ ಹೊಗಬೇಕಾಗಿರುತ್ತದೆ. ಅದಲ್ಲದೇ ಓದುಗರ ಅನೇಕ ಪತ್ರ, ಪ್ರಾದೇಶಿಕ ವರದಿ ಇವೆಲ್ಲದರ ಪ್ರಭಾವ ಆತನಿಗಾಗಿರುವ ಸಾಧ್ಯತೆಯಿರುತ್ತದೆ. ಬಹುಶಃ ಆಧುನಿಕತೆಯ ನಾಗಲೋಟದಲ್ಲಿ ಓಡುತ್ತಿರುವ ಓದುಗನ ನಿರೀಕ್ಷೆಯೂ ಇದಾಗಿರಬಹುದು. ಇಲ್ಲ ವ್ಯಕ್ತಿಯ ಬರಹದ ವೈಶಿಷ್ಟ್ಯ ಅಥವಾ ತಂತ್ರವಾಗಿರಬಹುದು.

ಒಟ್ಟಿನಲ್ಲಿ ರವಿಯವರ ಬರಹಗಳಲ್ಲಿ ನುಡಿ ಬೆರಕೆಯು ಕಥೆ, ಕಾದಂಬರಿ, ಜೀವನ ಕಥನಗಳಂತಹ ಕೆಲವು ಪ್ರಕಾರಗಳಲ್ಲಿ ಅಲ್ಪ ಪ್ರಮಾಣದಲ್ಲಿಯೂ ಅಂಕಣ, ಪತ್ರ ಸಾಹಿತ್ಯ ಮತ್ತು ಅಪರಾಧಿ(ಕ್ರೈಮ್) ಬರಹಗಳಂತೂ ಯಥೇಚ್ಛವಾಗಿ ಬಳಕೆ ಮಾಡಿರುವುದು ಕಂಡುಬರುತ್ತದೆ. ಅಂಕಣ ಮತ್ತು ಕ್ರೈಮ್ ಬರಹಗಳಲ್ಲಿ ಅತಿಯಾದ ಇಂಗ್ಲೀಶ್ ಬಳಕೆ ಕಂಡುಬಂದರೆ, ಪತ್ರ(ಲವ್‌ಲವಿಕೆ) ಬರಹಗಳಲ್ಲಿ ಇಂಗ್ಲೀಶ್‌ನ್ನು ಒಳಗೊಂಡು ಹಿಂದಿ, ಉರ್ದುವಿನ ಗಜಲ್, ಹಾಡುಗಳ ಉಲ್ಲೇಖಗಳ ಬಳಕೆಯನ್ನು ಕಾಣಬಹುದಾಗಿದೆ.

ಸವಿಸ್ತಾರವಾದ ಒಂದು ಬರಹ, ಭಾಷಣ, ಪಾಠದಲ್ಲಿ ಹೇಳದೆ, ವ್ಯಕ್ತಪಡಿಸುದಕ್ಕೆ ಆಗದಿರುವ ವಿಷಯ, ಭಾವನೆಯನ್ನು ಒಂದು ಪದ, ಪದ್ಯದಲ್ಲಿ ಹೇಳಬಹುದಂತೆ. ಅದಕ್ಕೆ ಉದಾಹರಣೆಯೆಂಬಂತೆ ಕಾವ್ಯ, ಹಾಡುಗಳು ದೊರೆಯುತ್ತವೆ. ಬಹುಶಃ ರವಿಯವರು ಮಾಡಿರುವುದು ಅದನ್ನೇ. ಹೇಳದೇ ಆಗದಿರುವ ಅಂಶವನು ಆ ಮೂಲಕ ಗ್ರಹಿಕೆಗೆ ಬಿಡುವುದು. ಇದು ಏಕಕಾಲದಲ್ಲಿ ತಂತ್ರವೂ ಹೌದು, ಶೈಲಿಯೂ ಹೌದು. ಬರಹಗಾರನ ಬರಹ ವೈಶಿಷ್ಟ್ಯವೂ ಹೌದು. ಇಲ್ಲಿ ಅವರು ಬಲವಂತದ ನುಡಿ ಬೆರಕೆ ಕ್ರಿಯೆಯನ್ನು ತರುವುದಿಲ್ಲ. ಸಹಜವೆಂಬಂತೆ ಆ ಸ್ಥಾನಕ್ಕೆ ಆ ಪದವೇ ಸೂಕ್ತ ಬೇರೆ ಯಾವ ಪದ ತಿಳಿಸಿದ್ದರೂ ಆ ಅರ್ಥ, ಭಾವನೆ ಸ್ಪಷ್ಟತೆ ಬರುತ್ತಿರತ್ತಿಲ್ಲವೇನೋ ಎನ್ನುವಂತಹ ಸಂದರ್ಭದಲ್ಲಿ ಬಳಸುತ್ತಾರೆ. ಆದರೆ ಇತ್ತೀಚಿನ ದಿನ ಮಾನಗಳಲ್ಲಿ ಎಲ್ಲರ ಬದುಕಿನಲ್ಲಿಯೂ ಇಂಗ್ಲೀಶ್ ಲಗ್ಗೆ ಇಟ್ಟಿರುವ ಕಾರಣ ಮಾತಿನ ಮಧ್ಯೆ ನುಡಿ ಬೆರಕೆ ಸರ್ವೇ ಸಾಮಾನ್ಯವೆಂಬಂತಾಗಿದೆ. ಅದರಲ್ಲೂ ರವಿಯವರದು ಸಂಭಾಷಣೆ ರೂಪದ ಬರಹವಾಗಿರುವುದರಿಂದ ಸರ್ವೇ ಸಾಮಾನ್ಯವಾಗಿ ನುಡಿ ಬೆರಕೆಯನ್ನು ಕಾಣಬಹುದು.

ರವಿ ಬೆಳಗೆರೆಯವರ ಬರಹಗಳಲ್ಲಿಯ ಮತ್ತಷ್ಟು ನುಡಿ ಬೆರಕೆಯ ವಾಕ್ಯಗಳನ್ನು ಗಮನಿಸಬಹುದು.

'ಅವತ್ತಿಗೆ ಲೈಫ್‌ನ ಕ್ವಾಲಿಟಿ ಮತ್ತು enjoyment–ಎರಡೂ ಖಲಾಸ್!'

'ತಾಯಿ ಈಸ್ ಗ್ರೇಟ್!'

'ಕುದುರೆ ಅಂದರೆ once again ಸೆಕ್ಸ್'

'ಒಮ್ಮೆ ತಗುಲಿಕೊಂಡರೆ ಖಲಾಸ್'

'ಅವಳಿಗೆ ಪ್ರಪಂಚದ ಖಬರೇ ಇಲ್ಲ'

'ಅದು ಈ ವ್ಯವಸ್ಥೆಯ ಕರಾರು'

'ಫಿರೋಜ್ ಗಾಂಧಿ ಪರಾಯಿ ಹೆಂಗಸರ ತೆಕ್ಕೆಯಲ್ಲಿ ತಲ್ಲೀನನಾಗಲು ಚಡಪಡಿಸುತ್ತಿದ್ದ'

'ರಾತ್ರಿಯಿಡೀ ದಿಲ್ಲಿಯ ಗಲ್ಲಿಗಲ್ಲಿ ಸುತ್ತಿ ಪರೇಶಾನ್ ಆದ ಪೊಲೀಸರಿಗೆ, ಬೆಳಗ್ಗೆ ಎಂಟು ಗಂಟೆ ಹೊತ್ತಿಗೆ ಫಿಯೆಟ್ ಕಾರು ಪಾಲಮ್ ಏರ್‌ಪೋರ್ಟಿನ ಬಳಿ ದೊರಕಿತ್ತು.

'ನಮ್ಮ ಇಮೀಡಿಯಟ್ ಜರೂರತ್ತು ಅಂದರೆ'

'ಅವರು ಯೂನಿವರ್ಸಿಟಿ ಕ್ಯಾಂಪಸ್ಸಿನ ಪ್ರಕಾಂಡ ಪಂಡಿತರ ಗುಂಪಿಗೆ ಸೇರಿದವರಲ್ಲ, ಹಾಸ್ಟೆಲುಗಳ ಫಾಸ್ಟ್ ಮೂವಿಂಗ್ ಜೀವಿಗಳಲ್ಲ. ಸೂಪರ್ ಡ್ಯೂಪರ್ ಸೌಂದರ್ಯವಂತರಲ್ಲ.

'ಮೇಜರ್ ಮುರಳಿಯ ಕರೆಯಲ್ಲಿರುವಂಥ wormth ಯಾಮಿನಿ ಆಹ್ವಾನದಲಿಲ್ಲ'

'ಪೈಜಾಮಾ ಜೋಬಿನಲ್ಲಿಕೊಂಡು ಮೇಲೊಂದು ಪಿನ್ನು ಹಾಕ್ಕೊಂಡು ಹೋಗೋ'

ಹೀಗೆ ರವಿಯವರ ನುಡಿ ಬೆರಕೆಯ ವಿಸ್ತಾರ ತುಂಬಾ ಹರವುಳ್ಳದ್ದು. ಮೇಲ್ನೋಟಕ್ಕೆ ನುಡಿ ಬೆರಕೆ ಸ್ವೀಕರಣದ ಒಂದು ಪ್ರಭೇದದಂತೆ ಕಾಣುತ್ತದೆ. ಅವರ ಬರಹಗಳಲ್ಲಿ ಇದು ಆಕರ್ಷಣೀಯ ಅಂಶವೆಂದು ಹೇಳಬಹುದು. ಇದು ಅವರ ಐದು ಭಾಷೆಗಳ ಜ್ಞಾನದ ಸಹಜ ವರ್ತನೆಯೇ ಹೊರತು, ಭಾಷಾ ಅಜ್ಞಾನದ, ಸೋಮಾರಿತನದ ಕುರುಹಲ್ಲ. ನುಡಿ ಬೆರಕೆಗೆ ತನ್ನದೇ ಆದ, ಸಾಂದರ್ಭಿಕ ಔಚಿತ್ಯವುಂಟು. ಕೇಳುಗರೊಡನೆ, ಓದುಗರೊಡನೆ ಸಹಕರಿಸಲು ಅಥವಾ ಅವರ-ಬರಹ-ಮಾತಿನ ಮಧ್ಯೆ ಅಂತರವನ್ನು ಕಡಿಮೆ ಮಾಡಲು ರವಿ ಬೆಳಗೆರೆಯವರು ಕೆಲವು ಬಾರಿ ನುಡಿ ಬೆರಕೆಯ ಸಹಾಯ ಪಡೆಯುತ್ತಾರೆ.

ಸಂಸ್ಕೃತ, ಮರಾಠಿ, ಉರ್ದು, ತೆಲುಗು, ಹಿಂದಿ, ಇಂಗ್ಲೀಶ್ ಬೆರಕೆಯ ಫಲವಾಗಿ ಇಂದು ಕನ್ನಡದಲ್ಲಿ ಹಲವಾರು ಶೈಲಿಯ ಸ್ತರಗಳು ಬಳಕೆಯಲ್ಲಿವೆ. ಯಾವುದೇ ಪರಿಸರಕ್ಕೆ, ಪ್ರಾಂತ್ಯಕ್ಕೂ ಸೇರದ ಪ್ರಮಾಣಿತ ಅಥವಾ ಗ್ರಾಂಥಿಕದ ಶೈಲಿಯಲ್ಲಿ ಸಂಸ್ಕೃತದ ಅಂಶಗಳು ಹೇರಳವಾಗಿ ಕಂಡು ಬರುತ್ತವೆ. ರವಿಯವರ ಬರಹಗಳಲ್ಲಿಯೂ ಸಂಸ್ಕೃತದ ಪದಗಳು ಹೇರಳವಾಗಿ ಕಂಡುಬರುತ್ತವೆ. ನುಡಿ ಬೆರಕೆ ಮಾಡುವ ಪ್ರತಿಯೊಬ್ಬ ಭಾಷಿಕನೂ ತನಗೆ ವಿಶಿಷ್ಟವಾದ ರೀತಿಯಲ್ಲಿ ನುಡಿ ಬೆರಕೆಯ ವಾಕ್ಯಗಳನ್ನು ಸೃಷ್ಟಿಸಿಕೊಳ್ಳುವಂತೆ ರವಿಯವರು ತಮ್ಮ ಬರಹದ ಸತ್ವಕ್ಕೆ, ಆಕರ್ಷಣೆ, ಒಂದು ರೀತಿಯಲ್ಲಿ ಮಾಧ್ಯಮಗಳ ಒತ್ತಡದ ನಡುವಿನ ಅಸ್ತಿತ್ವಕ್ಕೆ ಹೊಸ ಹೊಸ ಪ್ರಯೋಗಳಂತೆಯೇ ಇದು ಒಂದು ಎಂದು ಹೇಳಬಹುದು. ಅವರ ಈ ಶೈಲಿ ಕೈಲಾಸಂರವರ ನಾಟಕದಲ್ಲಿನ ಇಂಗ್ಲೀಶ್ ಬಳಕೆಯನ್ನು ನೆನಪಿಸುತ್ತದೆ.

**೪.೫.೨. ನುಡಿ ಜಗಿತ ಅಥವಾ ನುಡಿ ಪಲ್ಲಟ – Code Switching**

ನುಡಿ ಬೆರಕೆಯಾಗಲಿ ಅಥವಾ ನುಡಿ ಜಗಿತವಾಗಲೀ ಒಂದು ಭಾಷೆಯು ಮತ್ತೊಂದು ಭಾಷೆಯ ಪ್ರಭಾವಕ್ಕೆ ಒಳಪಟ್ಟು, ತನ್ನ ಸ್ವಭಾವವನ್ನು ಬದಲಾಯಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ನುಡಿ ಬೆರಕೆಯಲ್ಲಿ ಕೊಡುವ ಮತ್ತು ತೆಗೆದುಕೊಳ್ಳುವ ಬಾಷೆಗಳು ಪರಸ್ಪರ ತೊಳಲಾಟಕ್ಕೆ ಒಳಗಾಗುತ್ತವೆ. ನುಡಿ ಜಗಿತದಲ್ಲಾದರೇ ಈ ಭಾಷೆಗಳು ಒಂದರ ಪಕ್ಕದಲೊಂದು ಕೆಲಸ ಮಾಡುತ್ತವೆ.

'ನುಡಿ ಬೆರಕೆ ಒಂದು ವಾಕ್ಯದೊಳಗೇ ನಡೆಯುತ್ತದೆ. ನುಡಿ ಪಲ್ಲಟ ವಾಕ್ಯಗಳ ನಡುವೆ ನಡೆಯುತ್ತದೆ. ನುಡಿ ಪಲ್ಲಟ ಸಾಮಾನ್ಯವಾಗಿ ಭಾಷಾ(ಸಾಮಾಜಿಕ) ಸಂದರ್ಭದಲ್ಲಿ ಉಂಟಾದ

ಬದಲಾವಣೆಗೆ ಸಂವಾದಿಯಾಗಿ ನಡೆಯುತ್ತದೆ. ನುಡಿ ಬೆರಕೆಯಾದರೋ ಸಂದರ್ಭ ಬದಲಾಗದಿದ್ದರೂ ನಡೆಯುತ್ತದೆ'.[೩೦] ಉದಾಹರಣೆಗೆ ಪರಸ್ಪರ ಪರಿಚಯವಿರುವವರು ಕಛೇರಿಯ ಸಮಯದಲ್ಲಿ ಭೇಟಿಯಾದಾಗ ಇಂಗ್ಲೀಶ್‌ನಲ್ಲಿ, ಕುಶಲೋಪರಿ ವಿಚಾರಣೆಯನ್ನು ಕನ್ನಡದಲ್ಲಿ ಮಾತನಾಡಬಹುದು. ಇದು ನುಡಿ ಜಿಗಿತ. ಇದರಲ್ಲಿ ಭಾಷಿಕರು ಬದಲಾದದ್ದರಿಂದ ಸಂದರ್ಭ ಬದಲಾಗಿದೆ. ವ್ಯವಹಾರದ ವಿಷಯ ಬದಲಾದಾಗ ಭಾಷೆಯೂ ಬದಲಾಗುತ್ತದೆ. ನುಡಿ ಬೆರಕೆಯಲ್ಲಿ ಇಂತಹ ಭಾಷಾ ಸಂಧರ್ಭದ ಬದಲಾವಣೆ ಇರಬೇಕಿಲ್ಲ. ಒಂದೇ ವಾಕ್ಯದೊಳಗೇ ಹಲವಾರು ಸಲ ಅನ್ಯಭಾಷಾ ಪದಗಳು ಬಳಕೆಯಾಗುವುದು ನುಡಿ ಬೆರಕೆಯ ಅತ್ಯಂತ ಮಾಮೂಲಿ ಲಕ್ಷಣ. ಆದರೆ ನುಡಿ ಜಿಗಿತ ಹಾಗಲ್ಲ. ಅದು ವಾಕ್ಯದಿಂದ ವಾಕ್ಯಕ್ಕೆ ಭಾಷೆಯನ್ನು ಬದಲಾಯಿಸುತ್ತದೆ. ನುಡಿ ಜಿಗಿತದ ವಿಷಯದಲ್ಲೂ ರವಿ ಬೆಳಗೆರೆಯವರು ನುಡಿ ಬೆರಕೆಯನ್ನು ಅಷ್ಟೇ ಸಹಜವಾಗಿ ಬಳಸುತ್ತಾರೆ. ಅವರ ಬರಹಗಳಲ್ಲಿನ ನುಡಿ ಜಿಗಿತದ ಉದಾಹರಣೆಗಾಗಿ ವಾಕ್ಯಗಳನ್ನು ಗಮನಿಸುವುದಾದರೆ.

**ಕನ್ನಡದಿಂದ ಇಂಗ್ಲೀಶ್‌ಗೆ ನುಡಿ ಜಿಗಿತವಾಗಿರುವುದು.**

'ಇಲ್ಲ ಅಮ್ಮಾ... ನಂಗೆ ಸಲುಹಬೇಕಾದ ಕುಟುಂಬ ಅಂತ ಕೂಡ ಇಲ್ಲ. I am alone. ನಾನು ಹೀಗಿರೋಕೆ ಇಷ್ಟಪಟ್ಟಿರಲಿಲ್ಲ. I wanted to be extraordinary'.[೩೧]

'ಅವನು ನೀಗ್ರೋ ಹುಡುಗಿಯರನ್ನು ಕರೆಯೋದೇ Black meat ಅಂತ. well, Let's have a sound Sleep'.[೩೨]

'ನೋಡು, ಲಷ್ಕರ್ ಒಂದು ಸೈನ್ಯವಲ್ಲ. ಅದು ಸಂಘಟನೆ. Small group. ಅದು ಮತ್ತೂ ಅಪಾಯಕಾರಿಯೂ ನಮ್ಮ ಮೇಲೆ ಆಕ್ರಮಣ ಮಾಡುತ್ತದೆ. Only to prove'[೩೩]

'ಬಲಹೀನತೆಗಳ ಮಾತೇ ಇಲ್ಲ. Cool and calm old man'[೩೪]

'ಕೇಳುವ ಮನುಷ್ಯ ಇದ್ಯಾವುದನ್ನು ಯೋಚಿಸುವುದಿಲ್ಲ. Bad approach'[೩೫]

'I am sorry. ನೀಗೇನು ತೊಂದರೆಯಿತ್ತೊ ನಾನು ಕೇಳಲಿಲ್ಲ'[೩೬]

'ಸನ್ ಆಫ್ ಎ ಬಿಚ್! ಎಷ್ಟಾದರೂ ನೀನೊಬ್ಬ ಪೊಲೀಸು'[೩೭]

**ಕನ್ನಡದಿಂದ ಹಿಂದಿ, ಉರ್ದುಗೆ ನುಡಿ ಜಿಗಿತವಾಗಿರುವುದು**

'ಅಲ್ಲಾ ಹೋ ಅಕ್ಬರ್. ಜಿಹಾದ್‌ನಲ್ಲಿ ಬಡಿದಾಡಿ ಸತ್ತರೆ ನೀನು ಷಹೀದ್' ನಿನಗೆ ಜನ್ನತ್ ಸಿದ್ಧ'[೩೮]

'ತಾನು ಬೀಳುತ್ತಿರಲಿಲ್ಲವೆಂಬುದು ಖಚಿತವಾದ ಕೂಡಲೆ ತನಗೆ ಆಸರೆಯಾಗಿ ನಿಂತು ತಡೆದವರ್ಯಾರು ಎಂದು ತಿರುಗಿ ನೋಡಿದಳು. ರಹೂಂಗಾ ತೇರೆ ಪೀಛೆ ಆವೂಂಗಾ ಸಾಥವಾ ದಿನ್. ಉಸ್ಕೆ ಬಾದ್ ದೋ ಹೀ ದಿನ್ ರೆಹಜಾಯೆಂಗೇ!'[೩೯]

'ಔರತ್ ಕೋ ಹಠಾವೋ... ಅಕೀನ ಕಳಸರಿ... ತ್ರಾಸಾಗಲಿಕ್ಕ ಹತ್ಯದಾ...[೪೦]

'ಅಂಬಿಗನೇ ಕೈ ಚೆಲ್ಲಿ ಕುಳಿತ ಸಮುದ್ರ ಮಧ್ಯದ ಒಂಟಿ ದೋಣಿ.

ಜಾನೆ ಚಲೆ ಜಾತೇ ಹೈ ಕಹಾಂ

ದುನಿಯಾ ಸೆ ಜಾನೆ ವಾಲೇ...

ಇಲ್ಲ, ಅವಳು ಕೈ ಕೊಸರಿಕೊಂಡು ಹೋಗಲಿಲ್ಲ'[೪೧]

'ಎದೆಯಲ್ಲಿ ಚಿತ್ರವಿಟ್ಟುಕೊಂಡು ನೋಡುತ್ತಿರು!

ತುಮ್ ನ ಜಾನೇ ಕಿಸ್ ಜಹಾ ಮೇ ಖೋಗಯೇ

ಇಸ್ ಭರೀ ದುನಿಯಮೇ ತನಹಾ ಹೋಗಯೇ...

ಅವಳು ಕುಳಿತೇ ಇದ್ದಾಳೆ. ಕಾಯುತ್ತಾ! ದೀಪ ಉರಿಯುತ್ತಲೇ ಇದೆ'[೪೨]

'ದಿಲ್-ಎ-ನಾದಾನ್ ತುಝೀ ಹುವಾ ಕ್ಯಾಹೈ

ಆಖಿರ್ ಇಸ್ ದರ್ದ್ ಕೀ ದವಾ ಕ್ಯಾಹೈ...

ಗಾಲಿಬ್ ಅದನ್ನು ನನಗೋಸ್ಕರ, ನನಂಥ ನಿಮಗೋಸ್ಕರವೇ ಬರೆದಿದ್ದಾನೇನೋ ಅನ್ನಿಸುತ್ತದೆ'[೪೩]

**ಕನ್ನಡ-ತೆಲುಗು ಭಾಷೆಗಳ ನಡುವೆ ನುಡಿ ಜಿಗಿತವಾಗಿರುವುದು**

'ತೆಲುಗಾ ಗುರೂ? ನೇನು ಮಳ್ಳೀ ವಚ್ಚಿ ತೀಸ್ಕುನಿ ಪೋತಾ. ಇದಿ ಉಂಚ್ಚು ನೀ ದಗ್ಗಿರ'[೪೪]

'ಅವರು ರೇಗಿಸುತ್ತ ಹಾಡುತ್ತಿದ್ದ ಹಾಡು ಕೂಡ ಅಮ್ಮನಿಗೆ ನೆನಪಿತ್ತು. ಎಕ್ಕಡಿಕಿ ಪೋತಾವೇ ಬಂಗಾರು ಪಾಪಾ...!'[೪೫]

'ಬಂದವರೆಲ್ಲ ಒಮ್ಮೆ ಸನ್ನಿಯನ್ನು ಭೇಟಿಯಾಗಿ 'ನಮಸ್ಕಾರಮು ದೊರಾ' ಅಂತ ಮಾತನಾಡಿಸಿ ಹೋಗುತ್ತಿದ್ದರು'[೪೬]

'ಹೊರಕ್ಕೆ ಬಂದವರೇ ನನ್ನನ್ನು ನೋಡಿ. 'ಏಮ್ರಾ ಇಕ್ಕಡ?'[೪೭]

'ಏಮೀ ಲೇದಪ್ಪಾ, ಮೇಮು ಚೇಸಿನ ಅಪರಾಧಾನಿಕಿ ನೀ ಕಾಳ್ಳು ಪಟ್ಟುಕುನಿ ನೀ ಕ್ಷಮಾಪಣ ಅಡಗುದಾಮನಿ ವಚ್ಚೆಸಿಮಿ ಅಂದು ಬಿಟ್ಟರು. ಹಾಗಂದ ಕೂಡಲೇ ಅಣ್ಣ ಸೀತಾರಾಮ ಶಾಸ್ತ್ರಿ ಕರಗುತ್ತಾರೆ ಅಂದಕೊಂಡಿದ್ದೆ. ಆದರೆ ಆತ ಅಂದದ್ದೇನು ಗೊತ್ತೆ?

'ನಾ ಕಾಳ್ಳು ಪಟ್ಟುಕುಂಟೇ ಅದೇ ಕಾಳ್ಳತೋ ಎಗ್ಗರಿಸಿ ತನ್ನಿ ಕಿಂದಿಕಿ ವೇಸ್ತಾನು!' ಅಂದುಬಿಟ್ಟ'[೪೮]

ಹೀಗೆ ರವಿ ಬೆಳಗೆರೆಯವರು ಕನ್ನಡ, ಹಿಂದಿ, ಉರ್ದು, ಇಂಗ್ಲೀಶ್ ಮತ್ತು ತೆಲುಗು ಐದು ಭಾಷೆಯಲ್ಲೂ ಪ್ರವೀಣರಿರುವ ಕಾರಣ ಅವರ ಬರಹಗಳಲ್ಲಿ ನುಡಿ ಪಲ್ಲಟಗಳಾಗೋದು ಸಹಜವೇ. ಅವರು ಎಷ್ಟೋ ಸಾರಿ ಆ ವಾಕ್ಯವನ್ನೇ ಮತ್ತೊಂದು ಭಾಷೆಯಲ್ಲಿ ಪುನರಾವರ್ತಿಸಿರುತ್ತಾರೆ. ಅಂತಹ ನುಡಿ ಜಿಗಿತಗಳು ಹೆಚ್ಚಾಗಿ ಇಂಗ್ಲೀಶ್ ಕನ್ನಡದ ಮಧ್ಯ ನಡೆದಿರುವಂತಹದು.

ಒಬ್ಬ ಬರಹಗಾರ ಬಹುತೇಕ ಸಂದರ್ಭದಲ್ಲಿ ಎರಡೂ ಭಾಷೆಗಳನ್ನು ತನ್ನ ಬರವಣಿಗೆಯಲ್ಲಿ ಬಳಸಿಕೊಳ್ಳಬಹುದು. ಆದರೆ ರವಿಯವರು ಐದು ಭಾಷೆಗಳನ್ನು ತಮ್ಮ ಬರಹಗಳಲ್ಲಿ ಬಳಸಿಕೊಂಡಿರುವುದು ವಿಶೇಷವೆಂದು(ಬೇರೆ ಬೇರೆಯಾಗಿ) ಹೇಳಬಹುದು. ಮೇಲೆ ನೋಡಿದಂತೆ ನುಡಿ ಜಿಗಿತ ಒಂದು ಸಂಕೀರ್ಣವಾದ ವಿದ್ಯಮಾನ. ಅದು ಏಕರೂಪದ ಪ್ರಕ್ರಿಯೆಯಲ್ಲ. ಅದಕ್ಕೆ ಹಲವಾರು ವಿಭಿನ್ನ ಪ್ರಯೋಜನಗಳುಂಟು. ಎಲ್ಲದಕ್ಕೂ ಮಿಗಿಲಾಗಿ ಅದು ದ್ವಿಭಾಷಿಗರ ಮಿತ್ರ ಸಂವೇದನೆ, ಅಭಿವ್ಯಕ್ತಿಗೆ ಅವಶ್ಯವಾದ ಒಂದು ಸಮರ್ಥ ಅಭಿವ್ಯಕ್ತಿ ಸಾಧನ.

ಭಾಷಾ ಶೈಲಿ, ಅನ್ಯ ಭಾಷಾ ಜ್ಞಾನ ಬರಹಗಾರರಿಗೆ, ಭಾಷಣಕಾರರಿಗೆ ವರವೂ ಹೌದು, ಬಹುಮುಖ್ಯ ಬಂಡವಾಳವೂ ಹೌದು. Right word at right Place ಎಂಬ ಅಂಶ ರವಿಯವರ ವಿಷಯದಲ್ಲಿ ಎಷ್ಟು ಸಲವಾದರೂ ಪುನರಾವರ್ತಿಸಿದರೂ ಒಪ್ಪಿತವೇ. ನುಡಿ ಬೆರಕೆಯ ವಿಷಯದಲ್ಲಾಗಲೀ, ನುಡಿ ಜಿಗಿತದ ವಿಷಯದಲ್ಲಾಗಲೀ ಸಂದರ್ಭಾನುಸಾರ ಪದ, ವಾಕ್ಯಗಳನ್ನು ತರುತ್ತಾರೆ. ಭಾಷಾ ಜ್ಞಾನವಿದೆಯೆಂದು ಹೇಗ್ಹೇಗೋ ಬಳಸಿದರೆ 'ಆತಿಥೇಯ' ಭಾಷೆ ಒಪ್ಪುವುದಿಲ್ಲ. ಭಾಷೆಗೆ ತನ್ನದೇ ಆದ ಒಂದು ತರ್ಕವಿದೆ, ವ್ಯಾಕರಣವಿದೆ, ಮನಸ್ಸಿಗೆ ಬಂದ ಹಾಗೆ ಹುಚ್ಚಾಪಟ್ಟೆ ಕಲಸುಮೇಲೋಗರ ಮಾಡಿ ಬರೆಯುವುದು, ಮಾತನಾಡುವುದು ಭಾಷೆಯ ಲಕ್ಷಣವಲ್ಲ ಎಂಬುದೂ ವಿಧಿತವೇ. ನುಡಿ ಬೆರಕೆಯಲ್ಲಾಗಲೀ ಅಥವಾ ನುಡಿ ಜಿಗಿತದಲ್ಲಾಗಲೀ ಮಿಶ್ರಿತ ಘಟಕಗಳು(ಪದ, ಪಾಠ, ಪುಂಜ, ವಾಕ್ಯ) ಸ್ವೀಕೃತ ಭಾಷೆಯ ವ್ಯಾಕರಣದ ಸಾಧ್ಯತೆಗಳನ್ನು ಮೀರದಂತಿರಬೇಕಾಗುತ್ತದೆ. ಅಂದರೆ ಕನ್ನಡ ವಾಕ್ಯವೊಂದರಲ್ಲಿ ಕಾಣಬರುವ ಇಂಗ್ಲೀಶ್ ಅಥವಾ ಯಾವುದೇ ಭಾಷೆಯ ವಿಶೇಷಣ ಕನ್ನಡ ವ್ಯಾಕರಣ ನಿಯಮ ನಿಬಂಧನೆಗಳಿಗನುಸಾರ ಎಲ್ಲಿ ಬರಬಹುದೋ ಅಲ್ಲಿ ಮಾತ್ರ ಬರಬಹುದು. ಆದರೆ ಬೇರೆ ಕಡೆಯಲ್ಲ. ರವಿಯವರ ಈ ಎರಡು ಪ್ರಕ್ರಿಯೆಗಳಲ್ಲಿ ಯಾವುದೇ ನಿಯಮ ಉಲಂಘನೆ ಮಾಡಿ ಪದ ವಾಕ್ಯಗಳನ್ನು ಬಳಸಿದಂತೆ ಕಂಡುಬರುವುದಿಲ್ಲ.

**೪.೫.೩. ತಲೆ ಬರಹಗಳ ವೈಶಿಷ್ಟ್ಯ**

ಒಂದು ವಿಷಯ ಅಥವಾ ಸುದ್ದಿ, ಅದು ಮಹತ್ವದಲ್ಲಿ ಸಣ್ಣದೇ ಇರಲಿ, ದೊಡ್ಡದೇ ಇರಲಿ ಅದರ ಮೌಲ್ಯಕ್ಕೆ ಸರಿಹೋಗುವ ತಲೆ ಬರಹ ಅಥವಾ ಶೀರ್ಷಿಕೆ ಇರಲೇಬೇಕು. ಅದು ಅರ್ಥಪೂರ್ಣವಾಗಿರಬೇಕು, ಆಕರ್ಷಕವಾಗಿರಬೇಕು. ಕೇವಲ ಶಬ್ದ ಜಾಲವಾಗಿರಬಾರದು, ಒಟ್ಟಾರೆ ಬರಹದ ಸ್ವರೂಪ, ತಾತ್ಪರ್ಯ ಗಮನಿಸಿ ಅದರ ಭಾಗಕ್ಕೆ ಅನುಗುಣವಾಗಿ ತಲೆ ಬರಹ ಕೊಡಬೇಕು. ಈ ಹಿಂದೇ ಹೇಳಿದಂತೆಯೇ ರವಿ ಬೆಳಗೆರೆಯವರು ಕೊಡುವ ಶೀರ್ಷಿಕೆಯು ವಿಶೀಷ್ಟ್ಯತೆಯಿಂದ ಕೂಡಿರುವಂತಹವು. ಅವು ಕೃತಿಯ ಹೆಸರಿರಬಹುದು ಅಥವಾ ಅಂಕಣ, ಪತ್ರ ಬರಹಗಳ ತಲೆ ಬರಹವಿರಬಹುದು. ಇಲ್ಲ ಅವರ ಪತ್ರಿಕೆಯಲ್ಲಿ ಬರುವ ಶೀರ್ಷಿಕೆಗಳೂ ವೈವಿಧ್ಯ ಮತ್ತು ವೈಶಿಷ್ಟ್ಯದಿಂದ ಕೂಡಿರುವ ತಲೆ ಬರಹಗಳು. ಅವುಗಳನ್ನು ಎರಡು ರೀತಿಯಲ್ಲಿ ನೋಡಬಹುದು. ಒಂದು: ಕೃತಿಗಳ ತಲೆ ಬರಹ. ಎರಡು: ಅಂಕಣ ಬರಹಗಳ ತಲೆ ಬರಹ ಎಂಬುದಾಗಿ.

**೧. ಕೃತಿಗಳ ತಲೆ ಬರಹ ಅಥವಾ ಪುಸ್ತಕದ ಶೀರ್ಷಿಕೆ**

ಒಂದು ತಲೆ ಬರಹದ ಸಮರ್ಪಕತೆಯನ್ನು ನಿರ್ಧರಿಸುವ ಸಂಗತಿ ಯಾವುದು? ಅದನ್ನು ಎಷ್ಟು ಪದಗಳಲ್ಲಿ ವಿವರಿಸಿದರೂ ಸಾಲದು. ಪ್ರತಿಯೊಂದು ಶಬ್ದಕ್ಕೂ ಧ್ವನಿ ಇರುತ್ತದೆ. ಅದಕ್ಕೆ ರಮ್ಯತೆಯನ್ನು ಕೊಡುವವನು ಬರಹಗಾರ. ಅದನ್ನು ಗುರುತಿಸುವ ಪ್ರಜ್ಞೆ ಅಗತ್ಯ. ತಲೆ ಬರಹ ಕೊಡಬೇಕಾದರೆ ವಿಷಯದ ಮುಖ್ಯಾಂಶಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಬರಹದ ವಸ್ತು ನಿಷ್ಠತೆಯನ್ನು ತಲೆ ಬರಹ ಓದುಗರಿಗೆ ಮನದಟ್ಟು ಮಾಡಿಕೊಡುತ್ತದೆ. ತಲೆ ಬರಹವೂ ಒಂದು ಕಲೆ. ಸರಕನ್ನೂ ಗ್ರಾಹಕನಿಗೆ ಮಾರಾಟ ಮಾಡುವ ನೈಪುಣ್ಯತೆ ಅದರಲ್ಲಿರಬೇಕಾಗುತ್ತದೆ. ಇಂತಹ ತಲೆ ಬರಹವನ್ನು ಟಂಕಿಸುವುದರಲ್ಲಿ ರವಿ ಬೆಳಗೆರೆಯವರು ನಿಪುಣರು ಎಂಬುದನ್ನು ಅವರು ನೀಡಿರುವ ತಲೆ ಬರಹಗಳಿಂದಲೇ ತಿಳಿಯುತ್ತದೆ. ಅವರು ಕೃತಿಗಳನ್ನೇ ಸುಮಾರು ಎಪ್ಪೈದಕ್ಕೂ

ಹೆಚ್ಚು ಬರೆದಿದ್ದಾರೆ. ಅಂಕಣಗಳು ಅದಕ್ಕೂ ಹೆಚ್ಚು. ಆದ ಕಾರಣ ಕೆಲವನಷ್ಟೇ ಪ್ರಸ್ತಾಪಿಸಿ ವಿವರಿಸಲು ಪ್ರಯತ್ನಿಸಲಾಗಿದೆ.

'ಮಾಟಗಾತಿ' ಎಂಬುದು ಒಂದು ಕಾದಂಬರಿಯ ತಲೆ ಬರಹ. ಇದರ ಹೆಸರೇ ಸೂಚಿಸುವಂತೆ ಇದು ಮಂತ್ರ, ಯಂತ್ರ, ಅಘೋರಿ, ಕ್ಷುದ್ರ ಜಗತ್ತಿನ ವಸ್ತುವನ್ನು ಒಳಗೊಂಡ ಕೃತಿ. ಕೇಂದ್ರ ಪಾತ್ರ 'ತೇಜಮ್ಮ'. ಅವಳು ಈ ವೃತ್ತಿಯಲ್ಲಿ ಪ್ರವೀಣಳು. ಸಾಮಾಜಿಕ ವಲಯದಲ್ಲಿ 'ಮಾಟ' ಎಂದರೆ ಭಯಭೀತರಾಗುವರು ಎಷ್ಟಿದಾರೋ ಅಷ್ಟೇ ಕುತೂಹಲಿಗಳು ಇದ್ದಾರೆ. ಆ ಕಾರಣಕ್ಕಾಗಿಯೇ ತಲೆ ಬರಹ ಸಹಜವಾಗಿ ಕುತೂಹಲ ಹುಟ್ಟಿಸುತ್ತದೆ. ಇದೇ ವಸ್ತುವಿನ ಮುಂದುವರೆದ ಭಾಗದಂತಿರುವ 'ಸರ್ಪ ಸಂಬಂಧ' ಕೃತಿಯ ತಲೆ ಬರಹ ಮತ್ತೊಂದು ರೀತಿಯಲ್ಲಿ ಕುತೂಹಲಕಾರಿಯಾದದ್ದು. ಸಾಮಾಜಿಕ ವಲಯದಲ್ಲಿ ಮಾನವ ಸಂಬಂಧ ಎನ್ನುವ ರೀತಿಯಲ್ಲಿ ಒಂದು ವಿಷಕಾರಿ ಸರಿಸೃಪವನ್ನೂ ಹೋಲಿಸಿ ಮಾಡಿರುವಂತಹ ವಿಶೇಷಣ ಈ ಶೀರ್ಷಿಕೆ. ಇಂತಹ ವಿಚಿತ್ರ ನೆಲೆಯ ಯೋಚನೆ ಮತ್ತು ಬರಹ ಮಾಡುವುದನ್ನು ರವಿ ಬೆಳಗೆರೆಯವರಲ್ಲಿ ಕಾಣಬಹುದು. ಅದು ಅವರ ವಿಶೇಷ ಎಂದು ಹೇಳಿದರೆ ಅತಿಶಯೋಕ್ತಿಯೇನಲ್ಲ.

'ಕವಿರಾಜ ಮಾರ್ಗವಲ್ಲ ಇದು ಕಾಮರಾಜ ಮಾರ್ಗ' ಕಾದಂಬರಿಯ ಕಥಾವಸ್ತುವೇ ರಾಜಕೀಯ. ಇಂದಿನ ರಾಜಕೀಯ ಧುರೀಣರು ಆಡಳಿತ, ಅಧಿಕಾರ, ಹಣ ಎಲ್ಲವೂ ಪಡೆದು ಜನರಿಗಾಗಿ ದುಡಿಯಬೇಕಾದ್ದು ಬಿಟ್ಟು ಸ್ವಹಿತಾಸಕ್ತಿಗಾಗಿ, ತೃಷೆಗಾಗಿ ಜನರ ನಂಬಿಕೆ, ಅವರು ನೀಡಿದ ಅಧಿಕಾರದ ದುರ್ಬಳಕೆಗಳನ್ನು ವಿವರಿಸುವ ಕೃತಿ. ಕನ್ನಡ ಸಾಹಿತ್ಯದಲ್ಲಿ ಮಹತ್ವದ ಸ್ಥಾನವನ್ನು ಪಡೆದ ಶ್ರೀವಿಜಯನ ಕವಿರಾಜ ಮಾರ್ಗಕ್ಕೂ ಇದಕ್ಕೂ ಯಾವುದೇ ಸಂಬಂಧವಿಲ್ಲ. ಇದು ಅದರ ಸಾದೃಶ್ಯ ಸೃಷ್ಟಿಯಷ್ಟೇ. ಕಾದಂಬರಿಯಲ್ಲಿ ಲೈಂಗಿಕ ಹಗರಣಗಳ ಸರಣಿ ಒಳಗೊಂಡಿರುವುದರಿಂದ 'ಕಾಮರಾಜ ಮಾರ್ಗ' ಎಂಬ ತಲೆ ಬರಹ ಪಡೆದಿಕೊಂಡಿದೆ. ಇಂತಹ ವಿಚಿತ್ರ ಶೀರ್ಷಿಕೆಯನ್ನು ಮುಕ್ತವಾಗಿ ನೀಡಿರುವುದೇ ಅದರ ವಿಶೇಷ.

'ಒಮರ್ಟಾ' ಎಂಬುದು ಒಂದು ಕ್ರೈಮ್ ಆಧಾರಿತ ಕಾಲ್ಪನಿಕ ಕಾದಂಬರಿ. 'ಒಮರ್ಟಾ' (The law of Silence!) ಎಂದರೆ ಸಿಸಿಲಿಯನ್ ಭಾಷೆಯಲ್ಲಿ 'ಮೌನವಾಗಿರು! ಸುಮ್ಮನಿರು! ಎಂಬ ಅರ್ಥವಿದೆ. ಅಂದರೆ ಭೂಗತ ಭಾಷೆಯಲ್ಲಿ 'ಸುಮ್ಮನಿರು' ಅಂತ ಅರ್ಥ. ಇದೇ ಭೂಗತ ವಸ್ತುವನ್ನಾಧರಿಸಿದ ಕೃತಿ 'ಪಾಪಿಗಳ ಲೋಕದಲ್ಲಿ' ಎಂಬುದು. 'ದೇವ ಲೋಕ, ಯಮ ಲೋಕ, ಮರ್ತ್ಯ ಲೋಕ, ಭೂಲೋಕ, ಪ್ರೇಮ ಲೋಕ ಇತ್ಯಾದಿ ಲೋಕಗಳ ಮಾದರಿಯ ಸಾದೃಶ್ಯ ಸೃಷ್ಟಿಯೇ ರವಿಯವರ 'ಪಾಪಿಗಳ ಲೋಕದಲ್ಲಿ'. ಎಷ್ಟೇ ಲೋಕಗಳಿದ್ದರೂ ರವಿಯವರು ತಮ್ಮ ಬರಹದಲ್ಲಿ 'ಪಾಪಿ'(ಅಪರಾಧಿಗಳಿಗೆ) ಒಂದು 'ಲೋಕ'ವನ್ನು ಕೊಟ್ಟಿದ್ದಾರೆ ಎಂಬುದು ವೈಶಿಷ್ಟ್ಯ.

ಇದೇ ತರಹದ ತಲೆ ಬರಹವನ್ನು ಹೊಂದಿರುವ ಅವರ ಕೃತಿಗಳೆಂದರೆ ರಾಜ ರಹಸ್ಯ ಟೈಮ್‌ಪಾಸ್, ಹಂತಕೀ ಐ ಲವ್ ಯೂ. ನಕ್ಷತ್ರ ಜಾರಿದಾಗ, ಅರ್ತಿ, ಹಿಮಾಗ್ನಿ, ಕಂಪೆನಿ ಆಫ್ ವಿಮೆನ್, ಪ್ಯಾಸಾ, ಪಾಪದ ಹೂವು ಫೂಲನ್, ರೇಷ್ಮೆ ರುಮಾಲು, ನೀನಾ ಪಾಕಿಸ್ತಾನ?, ಮಾಂಡೋವಿ, ಹೇಳಿ ಹೋಗು ಕಾರಣ, ಏನಾಯ್ತು ಮಗಳೇ? ಮುಂತಾದವು. ಅವರ ಕೃತಿಗಳಿಗೆ ಸಂಬಂಧಿಸಿದಂತೆ ವೈಶಿಷ್ಟ್ಯದಿಂದ ಕೂಡಿದ ತಲೆ ಬರಹಗಳೆಂದು ಹೇಳಬಹುದು.

**೨. ಅಂಕಣಗಳ ತಲೆ ಬರಹ ಅಥವಾ ಶೀರ್ಷಿಕೆ.**

ಅಂಕಣಗಳಿಗೆ ಸಂಬಂಧಿಸಿದಂತೆ 'ಹಾಯ್ ಬೆಂಗಳೂರ್!' ವಾರ ಪತ್ರಿಕೆಯಲ್ಲಿ ಪ್ರಕಟಗೊಂಡು ನಂತರ ಪುಸ್ತಕ ರೂಪದಲ್ಲಿ ಪ್ರಕಟವಾದವುಗಳನ್ನಷ್ಟೇ ಈ ಅಧ್ಯಾಯಕ್ಕೆ ಬಳಸಿಕೊಳ್ಳಲಾಗಿದೆ. ಇಲ್ಲಿಯೂ ಅವುಗಳಿಂದಲೇ ತಲೆ ಬರಹಗಳನ್ನು ಗಮನಿಸಲಾಗಿದೆ. ಹಾಯ್ ಬೆಂಗಳೂರ್! ಪತ್ರಿಕೆಯಲ್ಲಿ ರವಿಯವರು ಬರೆಯುವುದು ಪ್ರಮುಖವಾಗಿ ನಾಲ್ಕು ಅಂಕಣಗಳನ್ನು. ಒಂದು: ಜೀವನ ಕಥನ ಖಾಸ್‌ಬಾತ್, ಎರಡು: ಬದುಕಿಗೆ ಸಂಬಂಧಿದಂತೆ ಬಾಟಮ್ ಐಟಮ್, ಮೂರು: ರಾಜಕೀಯ ವಿಷಯವನ್ನು ಒಳಗೊಂಡಿರುವ ವಾರದ ವಿಶೇಷ ಅಂಕಣ ಹಲೋ. ನಾಲ್ಕು: ಪ್ರೇಮಿಗಳಿಗಾಗಿ ಲವ್ ಲವಿಕೆ ಪ್ರೇಮ ಪತ್ರಗಳ ಬರಹ. ಆದರೆ ಪುಸ್ತಕ ರೂಪ ಪಡೆದ ಅಂಕಣಗಳೆಂದರೆ ಖಾಸ್ ಬಾತ್, ಬಾಟಮ್ ಐಟಮ್ ಮತ್ತು ಲವ್‌ಲವಿಕೆ.

ಅವರ ಅಂಕಣಗಳಲ್ಲಿ ತಲೆ ಬರಹಗಳನ್ನು ನುಡಿ ಬೆರಕೆ, ಅನ್ಯಭಾಷೆ ತಲೆ ಬರಹ ಲೇಖನ? ಚಿಹ್ನೆಯುಕ್ತ, ಪ್ರಾಸದಿಂದ ಕೂಡಿದ ಭಾವಸೂಚಕ (!) ಚಿಹ್ನೆಯುಕ್ತ ತಲೆ ಬರಹ ಇತ್ಯಾದಿಯಾಗಿ ಭಾಷಿಕ ಅಂಶಗಳನ್ನೂ ಗುರುತಿಸಲು ಸಾಧ್ಯ. ಅವುಗಳೆಂದರೆ,

'ಅದು ಕಾಮನ್ ಸೆನ್ಸ್‌ಗಿಂತ ಚೂರೆ ಚೂರು ದೊಡದು!'[೪೯]

'ಹಾಗೆ ದಕ್ಕುವ ಪ್ರತ್ಯಿನಿತ್ಯದ ಸೈಲೆನ್ಸೇ ಧ್ಯಾನ!'[೫೦]

'ಚುಂಬಿಸುವುದು ತುಟಿಗಳೇ ಆದರೂ ಕೈಗಳೇಕೆ ತಾರಾಡುತ್ತವೆ?'[೫೧]

'ಆ–ರತಿ ತಟ್ಟೆಯೊಳಗಿನ ದೀಪ ಚಡಪಡಿಸಿತು'[೫೨]

'ಎಕ್ ಕರ್ಜ್ ಮಾಂಗ್ ತಾ ಹಾಂ ಬಚಪನ್ ಉಧಾರ್ ದೇ ದೋ.[೫೩]

'ಯೋಗಿಯಂತೆ, ಸಂತನಂತೆ, ಬೋನ್‌ಲೆಸ್ ಮಾಂಸದಂತೆ[೫೪]...'

'ನಿನ್ನ ಹಿಮಲೋಟದಲೊಂದು ಇಬ್ಬನಿಯ ಬಿಂದು'[೫೫]

'ಹೆಸರೇ ಇಲ್ಲದ ಒಂದು ಸಂಬಂಧ...'[೫೬]

'ಆಡು ಭಾಷೆಯಲ್ಲಿ ಅವರನ್ನು ಮಿಸ್ಟರ್ ಮಿಜಿ ಮಿಜಿ ಅನ್ನುತ್ತಾರೆ!'[೫೭]

'ಕನಸು ಮೂಡುವುದಕ್ಕೆಷ್ಟು ಹೊತ್ತು? ಕನಸು ಕೆಡಿಸುವದಕ್ಕೆಷ್ಟು ಹೊತ್ತು?[೫೮]

'ಅಲ್ಲಾಹೋ ಅಕ್ಬರ್ ಅನ್ನಲು ಬಿಡಿ!'[೫೯]

'ಹೆತ್ತ ಮಗಳ ಎದೆ ಮೇಲೆ ಉಳಿ ಕತ್ತಿ?'[೬೦]

ಇತ್ಯಾದಿಯಾಗಿ ಅವರ ಬರಹಗಳಲ್ಲಿ ತಲೆ ಬರಹವನ್ನು ಗುರುತಿಸಬಹುದು. ಅನೇಕ ಶೀರ್ಷಿಕೆಗಳಲ್ಲಿ ಅವರು ನುಡಿ ಬೆರಕೆಯನ್ನು ಮಾಡುತ್ತಾರೆ. ಅವುಗಳ ಉದಾಹರಣೆಯನ್ನು ಈ ಮೇಲಿರುವ ಕಾಮನ್‌ಸೆನ್ಸು, ಸೈಲೇಸ್‌ನ್ಸು, ಬೋನ್‌ಲೆ, ಮಿಸ್ಟರ್, ಅಲ್ಲಾಹೋ ಅಕ್ಬರ್ ಮುಂತಾದ ತಲೆ ಬರಹಗಳಲ್ಲಿ ಅನ್ಯಭಾಷಾ ಪದಗಳನ್ನು ಬಳಸಿ ತಲೆ ಬರಹವನ್ನು ಸೃಷ್ಟಿಸಿರುತ್ತಾರೆ. ಅದರಲ್ಲಿ ಕುತೂಹಲ ಕೆರಳಿಸುವ ಅಂಶವೂ ಅಡಗಿರುತ್ತದೆ. ಆ ತಲೆ ಬರಹ ವಸ್ತುನಿಷ್ಠವೂ ಇದ್ದು, ಒಟ್ಟು ಬರಹದ ಸಾರಾಂಶವನ್ನೂ ಗರ್ಭಿಕರಿಸಿಕೊಂಡಿರುತ್ತದೆ. ಅದರಂತೆ ಸಂಪೂರ್ಣವಾಗಿ ಅನ್ಯಭಾಷಾ ಪದದಿಂದ ತಲೆ ಬರಹವನ್ನು ಸೃಷ್ಟಿಸಿರುವುದಕ್ಕೆ ಉದಾಹರಣೆಗಳು ಅವರ ಬರಹಗಳಲ್ಲಿ ಹೇರಳವಾಗಿ

ದೊರೆಯುತ್ತವೆ. ಬಹುತೇಕವಾಗಿ ಅವು ಹಿಂದಿ, ಉರ್ದುವಿನ ಹಾಡು ಗಝಲ್‌ಗಳಿಂದ ಪ್ರೇರಿತವಾದವುಗಳಾಗಿರುತ್ತವೆ. ತಲೆ ಬರಹವನ್ನು ನೋಡಿದ ಕೂಡಲೇ ಓದುಗನ ಆಸಕ್ತಿ ಮತ್ತು ಮನಸ್ಸನ್ನು ಹಿಡಿದಿಡುವ ತಂತ್ರ ಅವರ ತಲೆ ಬರಹಗಳಲ್ಲಿದೆ.

ರವಿ ಬೆಳಗೆರೆಯವರ ಒಟ್ಟು ಬರಹಗಳಲ್ಲಿ ಯಥೇಚ್ಚವಾಗಿ ಕಾಣಿಸಿಕೊಳ್ಳುವ ಚಿಹ್ನೆಯೆಂದರೆ ಭಾವಸೂಚಕ(!) ಚಿಹ್ನೆ. ನಂತರದ್ದು ಪ್ರಶ್ನಾರ್ಥಕ(?) ಚಿಹ್ನೆ. ಪದೇ ಪದೇ ಕಾಣಿಸಿಕೊಳ್ಳುವ ಇವು, ತಲೆ ಬರಹಗಳಲ್ಲಿ ಅಷ್ಟೇ ಪ್ರಮಾಣದಲ್ಲಿ ಕಾಣಿಸಿಕೊಳ್ಳುವುದು ಒಂದು ವೈಶಿಷ್ಟ್ಯ. ಅದಕ್ಕೆ ಉದಾಹರಣೆ ನೀಡಲಾಗಿರುವ ವಾಕ್ಯಗಳಿಂದ ಮನದಟ್ಟಾಗುತ್ತದೆ. ಅದರಂತೆಯೇ ಅವರ ತಲೆ ಬರಹಗಳಲ್ಲಿ ಪ್ರಾಸಗಳನ್ನು ಕಾಣಬಹುದಾಗಿದೆ. ಕೊಟ್ಟಿರುವ ವಾಕ್ಯಗಳಲ್ಲಿರುವ 'ಒಂದು', 'ಅಂತೆ'ಗಳಿಂದ ತಿಳಿಯುತ್ತದೆ. ಇಷ್ಟೆಲ್ಲ ಯಾಕೆ ಅವರ ಅಂಕಣಗಳ ತಲೆ ಬರಹ ವೈವಿದ್ಯ ಮತ್ತು ವಿಭಿನ್ನವಾದವುಗಳು 'ಖಾಸ್‌ಬಾತ್', 'ಬಾಟಮ್ ಐಟಮ್', 'ಲವ್‌ಲವಿಕೆ' ಈ ಮೂರು ಅನ್ಯ ಭಾಷೆಯ ಪದಗಳನ್ನು ಅವರು ಬಳಸಿಕೊಂಡಿದ್ದಾರೆ. ಹೀಗೆ ರವಿ ಬೆಳಗೆರೆಯವರು ಯಾಕೆ? ಅಷ್ಟೊಂದು ಅನ್ಯಭಾಷಾ ಪದಗಳನ್ನು ಬಳಸುತ್ತಾರೆ ಎಂಬುದಕ್ಕೆ ಹೀಗಾಗಲೇ ವಿವರಿಸಿದಂತೆ ಮಾಧ್ಯಮದ ಒತ್ತಡ ಮತ್ತು ಓದಗರ ಅಭಿರುಚಿ, ಆಸಕ್ತಿ, ಕೋರಿಕೆಗನುಗುಣವಾಗಿ ಬರಹಗಾರ ಸ್ಪಂದಿಸಬೇಕಾಗುತ್ತದೆ. ಅದು ಆತನ ಅಸ್ತಿತ್ವದ ಹೋರಾಟವೂ ಹೌದು. ಯಶಸ್ವಿಯಾದರೆ ನೂತನ ಶೈಲಿಯ ಪ್ರಯೋಗ ಹೌದು. ಇದಕ್ಕೆ ಸಾಕ್ಷಿ ಅವರ ಯಶಸ್ವಿ ಪ್ರಯೋಗಗಳೇ.

**೪.೫.೪. ವಾಕ್ಯ ಪ್ರಯೋಗ**

ಭಾಷೆ ಕೃತಿಯ ಗ್ರಹಿಕೆಗೆ ಒಂದು ರೀತಿಯ ಪ್ರಜ್ಞೆಯ ರೂಪ ಕೊಡುತ್ತದೆ. ಭಾಷೆಯ ಧ್ಯೇಯ ಓದುಗನ ಗ್ರಹಿಕೆಗೆ ಒಳ ಪಡುವಂತಹದ್ದು. ಒಂದರ್ಥದಲ್ಲಿ ಪ್ರತಿಯೊಬ್ಬ ಬರಹಗಾರನ ಅರ್ಥಸ್ಫುರಣತೆ, ಶ್ರೇಷ್ಠತೆ ಮತ್ತು ಸೋಲು-ಗೆಲುವುಗಳು ಭಾಷೆಯ ಪ್ರಜ್ಞೆಯ ಮಟ್ಟವನ್ನೇ ಅವಲಂಬಿಸಿರುತ್ತವೆ. ಅಂದರೆ ಮನುಷ್ಯನ ಎಲ್ಲಾ ಸಂವೇದನಾಶೀಲ ಚಟುವಟಿಕೆಗಳನ್ನು ವಿನ್ಯಾಸದಲ್ಲಿ ನಿಜಗೊಳಿಸುವುದು ಭಾಷೆ. ಒಂದು ಮೌಲ್ಯವನ್ನು ಲೇಖಕ ತನ್ನ ಭಾಷಾ ಮಾಧ್ಯಮದಲ್ಲಿ ವ್ಯಕ್ತಗೊಳಿಸುತ್ತಾನೆ. ಕನ್ನಡ ಸಾಹಿತ್ಯ ಬರಹಗಾರರ ಭಾಷಾ ಶೈಲಿಯನ್ನು ಅವಲೋಕಿಸಿದಾಗ, ಒಬ್ಬೊಬ್ಬ ಬರಹಗಾರರು ತಮ್ಮದೇ ಆದ ಭಾಷಾಶೈಲಿ ಅನುಭವಗಳನ್ನು ವ್ಯಕ್ತಪಡಿಸಿರುತ್ತಾರೆ. ಅದರಂತೆ ರವಿ ಬೆಳಗೆರೆಯವರು ತಮ್ಮದೇ ಆದ ಶೈಲಿಯೊಂದನ್ನು ರೂಢಿಸಿಕೊಂಡವರು. ಹೊಸಗನ್ನಡದ ಗದ್ಯ ಬರವಣಿಗೆಗೆ ಹೊಸ ಶೈಲಿಯನ್ನು ನೀಡಿದವರು. ಬರಹದ ತಂತ್ರ ಏನೇ ಆದರೂ ಭಾಷೆಯನ್ನು ಸುಂದರ ಸರಳವಾಗಿ, ಬಳಸುವುದರಿಂದ ಬರಹಕ್ಕೊಂದು ವಿಶೇಷತೆ ದೊರೆಯುತ್ತದೆ.

ಕನ್ನಡ ಭಾಷೆಯ ಮಟ್ಟಿಗೆ ಹೇಳುವುದಾದರೆ, ವಾಕ್ಯ ಪ್ರಯೋಗ ಅಥವಾ ರಚನೆ ಭಿನ್ನವಾಗಿ ಕಾಣುತ್ತವೆ, ಆದರೆ ಅರ್ಥದಲ್ಲಲ್ಲ. ಬಹುಶಃ ಅವರ ಮಾತೃ ಭಾಷೆ ತೆಲುಗು ಇರುವ ಕಾರಣಕ್ಕೊ ಏನೋ ಅವರ ಬರಹಗಳಲ್ಲಿ ವಿಶಿಷ್ಟ ರೀತಿಯ ವಾಕ್ಯ ರಚನೆಯನ್ನು ಕಾಣಬಹುದು. ಅವುಗಳೆಂದರೆ,

'ಅವನ ತಾಯಿ ಓಡಿ ಬರುತ್ತಿದ್ದಳು ಹುಡುಕಿಕೊಂಡು'[೬೧]

'ಮುಂಚೆಯೂ ಸೀಳಿದ್ದಾನೆ ಹತ್ತು ಹಲವು ಹೆಂಗಸರನ್ನ ಮೀಸಲು ಮುರಿಯದ ಹುಡುಗಿಯರನ್ನು'[೬೨]

'ಪಕ್ಕಾ ಮುಸಲ್ಮಾನಿ ಗ್ಯಾಂಗಿನ ಹುಡುಗ ಅವನು'[೬೩]

'ನಾನು ಕೆಲಸ ಬಿಟ್ಟು ಮನೆಯಲ್ಲೇ ಇರತೊಡಗಿದ ಮೇಲೆ ನನ್ನ-ಸುಮ್ಮಿಯ ಮಧ್ಯೆ ಜಗಳಗಳಾಗ ತೊಡಗಿದವು, ಮೊದಲಿಗಿಂತ'[೬೪]

'ಅಲ್ಲಿ ದೂರದಲ್ಲಿ ಮಲಗಿದ್ದ ಹೇಮರಾಜ್: ಹೆಣವಾಗಿ!'[೬೫]

ಆದರೆ ಆತ ಧರ್ಮ ಪ್ರಚಾರಕನ ಸ್ಥಾನದಲ್ಲಿ ಕುಳಿತು ಆ ಕೆಲಸ ಮಾಡಬಾರದಿತು: ಆಶ್ರಮದಲ್ಲಿ'[೬೬] ಮುಂತಾಗಿ.

ಹೀಗೆ ರವಿ ಬೆಳಗೆರೆಯವರು ವಾಕ್ಯ ಪ್ರಯೋಗ ಅಥವಾ ರಚನೆಯನ್ನು ಮಾಡುತ್ತಾರೆ. ಕನ್ನಡ ಭಾಷೆಯ ನಿಯಮಾನುಸಾರ ಕರ್ತೃ, ಕರ್ಮ, ಕ್ರಿಯಾ ಎಂದು ಬೆನ್ನತ್ತಿ ಹೊರಟರೆ ಅವರ ಬರವಣಿಗೆ ಸ್ವಲ್ಪ ಗೊಂದಲವನ್ನು ಉಂಟುಮಾಡುತ್ತದೆ. ಅದೇ ಅವರ ಬರವಣಿಗೆಯ ವಿಶೇಷ. ಅದು ಅವರ ಶೈಲಿ. ವಾಕ್ಯದ ಮಧ್ಯೆದಲ್ಲಿ ಬರಬೇಕಾದ ಮುಖ್ಯವಾದ ಪದವನ್ನು ವಾಕ್ಯದ ಕೊನೆಯಲ್ಲಿ, ಒಟ್ಟು ವಿಶೇಷವಾದ ಪರಿಣಾಮ(Epect) ಬೀರುವಂತೆ ಮಾಡುತ್ತಾರೆ. ತಮ್ಮ 'ಅಫಿಡವಿಟ್ಟು'ವಿಲ್ಲೇನ ನಾಗೂ ನಿಮ್ಮಂತೆಯೇ ಮನುಷ್ಯ: ಕೊಂಚ ಚಿತ್ತೆ, ಕೊಂಚ ಗಟ್ಟಿ ಎನ್ನುತ್ತಾರೆ. ಕನ್ನಡ ಭಾಷೆಯ ಮಟ್ಟಿಗೆ ಅವರ ಬರವಣಿಗೆ ವಿಶೇಷವೇ ಸರಿ.

ಅವರ ಬರಹಗಳಲ್ಲಿ ಅತ್ಯಂತ ಚಿಕ್ಕ ಚಿಕ್ಕ ವಾಕ್ಯಗಳನ್ನು ಕಾಣಬಹುದು. ಚಿಕ್ಕವೆಂದರೆ ಎಷ್ಟು ಚಿಕ್ಕವು ಒಂದೇ ಒಂದು ಪದ. ಒಂದೇ ಪದವನ್ನು ಒಂದು ವಾಕ್ಯವಾಗಿ ಮಾಡುತ್ತಾರೆ ಉದಾಹರಣೆಗೆ

'ನಂಗೆ ಆದರ್ಶಗಳಿಲ್ಲ. ಆಶಯಗಳ ಮೇಲೆ ನಂಬಿಕೆಯಿಲ್ಲ. ನಾನು ಒರಟ ನನ್ನೊಳಗೆ ದಿಗಿಲಿದೆ. ನಾನು ಬದುಕಿನ ಮುಳ್ಳು ಬೇಲಿಗಳ ನಡುವೆ, ಕೆಸರ ಹೊಂಡದ ಮಧ್ಯೆ ಸತ್ಯಕ್ಕಾಗಿ ಸಂಶೋಧನೆ ಮಾಡುತ್ತಿರುತ್ತೇನೆ. ನೀನು ಲೆಷರ್ಲಿಯಾಗಿ ಪ್ರೇಮಿಸುತ್ತಾ ಏಕಾಂತದಲ್ಲಿ ಬಹುಕಾಂತೆಯರೊಂದಿಗೆ ವಿಹರಿಸುತ್ತೀ. ನಾನು ನಿಟ್ಟುಸಿರಿಡುತ್ತಾ, ಪ್ರಾಕೃತಿಕವಾದ ಹಸಿವನ್ನೂ – ಪಾಶವಿಕವಾದ ಕಾಮವನ್ನೂ ಭರಿಸಲಾಗದೆ ಕಂಗಾಲಾಗುತ್ತೇನೆ. ನಿನ್ನ ಪಾಲಿಗೆ ಸತ್ಯವೆಂಬುದು ಸತ್ಪದಾರ್ಥ. ಅದು ಅರ್ಥವಂತವಾದ ನಿರಂತರ ಪ್ರಕಾಶ. ನನ್ನ ಪಾಲಿಗೆ ನಿಜವೆಂಬುದು ಭಯಂಕರ. ಅರ್ಥವಿಹೀನ. ಅಸಂಪೂರ್ಣ!'[೬೭] ಹೀಗೆ ಸಂಯುಕ್ತ ವಾಕ್ಯಗಳನ್ನೊಳಗೊಂಡ ದೀರ್ಘ ವಾಕ್ಯಗಳಿಂದ ಹಿಡಿದು ಒಂದೇ ಒಂದು ಪದದಿಂದ ವಾಕ್ಯ ರಚನೆಯನ್ನು ಮಾಡುತ್ತಾರೆ

ಇದರ ಜೊತೆಗೆ ಅವರು ಎಷ್ಟೊ ಸಲ ಅಪೂರ್ಣ ವಾಕ್ಯಗಳನ್ನು ರಚನೆ ಮಾಡುತ್ತಾರೆ. ಆದರೆ ಅರ್ಥಕ್ಕೆ ಧಕ್ಕೆಯಾಗದಂತೆ ಅವರು ಜಾಗ್ರತೆಯನ್ನು ವಹಿಸುತ್ತಾರೆ. ಅಂತಹ ಅಪೂರ್ಣ ವಾಕ್ಯಗಳೆಂದರೆ? 'ಮಾತು ಗಿರ್ರ ಗಿರ್ರ ಬುಗರಿ', 'ಅಲ್ಲಿ ಎಲ್ಲವೂ ಮುಗುಮ್ಮು', 'ನಾನು ನಿದ್ದೆ', 'ಕಾಫಿಯ ಘಮ', 'ಬಹುಶಃ ಪಾಪ ಪ್ರಜ್ಞೆ' ಇತ್ಯಾದಿಯಾಗಿ ರವಿಯವರ ಬರಹಗಳಲ್ಲಿ ಅಪೂರ್ಣ ವಾಕ್ಯರಚನೆಯನ್ನು ಕಾಣಬಹುದು. ಮೇಲಿನ ಉದಾಹರಣೆಗಳಲ್ಲಿ ಕ್ರಿಯೆ ಸೂಚಕ ಪದವೇ ಇಲ್ಲ. ಅದು ಸಕಾರಾತ್ಮಕವಿರಲಿ ಅಥವಾ ನಕರಾತ್ಮಕವಿರಲಿ, ಇಲ್ಲ. ಆದರೆ ಓದುತ್ತಿರುವಾಗ ಅರ್ಥಕ್ಕೆ ಭಾವಕ್ಕೆ ಎಲ್ಲೂ ತಡೆಯಾಗದು. ವಾಕ್ಯಗಳು ಅಪೂರ್ಣ ನಿಜ. ಆದರೆ ಅದು ರಚನೆಯಲ್ಲಿ; ಅರ್ಥ, ಭಾವದಲ್ಲಲ್ಲ. ಹೀಗೆ ಅನೇಕ ರೀತಿಯಲ್ಲಿ ರವಿ ಬೆಳಗೆರೆಯವರ ಬರಹಗಳಲ್ಲಿನ ವಾಕ್ಯ ಪ್ರಯೋಗ, ರಚನೆ, ವಿಶೇಷತೆಗಳನ್ನು ಗುರುತಿಸಲು, ಕಂಡುಕೊಳ್ಳಲು ಅವಕಾಶವಿದೆ.

### ೪.೫.೫. ವಿಶೇಷಣಗಳು

ಒಬ್ಬ ಪತ್ರಕರ್ತನು ವ್ಯಕ್ತಿ, ವಿಷಯ, ಘಟನೆ, ಸಂದರ್ಭ ಇನ್ನಿತರ ಅಂಶಗಳ ಬಗ್ಗೆ ಬರೆಯುವಾಗ ವಿಶೇಷಣ ಹಚ್ಚಿ ಹೊಗಳುವ ಮತ್ತು ತೆಗಳುವ ಜರೂರತ್ತಿದೆಯಾ? ಎಂದು ಯೋಚಿಸಿದರೆ, ಪತ್ರಿಕೋದ್ಯಮದ ಭಾಷೆಗೆ ವಿಶೇಷಣಗಳು ಅನಿವಾರ್ಯವೇನೋ? ಎನಿಸುತ್ತದೆ. ರವಿ ಬೆಳಗೆರೆಯವರು ವೃತ್ತಿಯಿಂದ ಪತ್ರಕರ್ತರು. ಆ ಕಾರಣಕ್ಕಾಗಿಯೇ ಏನೋ ಅವರ ಬರವಣಿಗೆ, ಬರಹಗಳಲ್ಲಿ ವಿಪರೀತ ವಿಶೇಷಣಗಳನ್ನು ಗುರುತಿಸಲು ಸಾಧ್ಯ. ಅವುಗಳನ್ನು ನೋಡುವುದಾದರೆ,

'ನಾಹಿದ್‌ರಂಥ್ ಭಯಂಕರ ಪ್ರಾಮಾಣಿಕ ಹೆಣ್ಣು ಮಕ್ಕಳನ್ನು ಗೌರವಿಸಿದ್ದೇವೆ'

'ಜನ ಹುಚ್ಚೆದ್ದು ಪ್ರೀತಿಸಿದ್ದಾರೆ'

'ಹಿಮಾಲಯದ ಕಂದರಗಳ ಮಧ್ಯೆ ನಾನು ಅಂಥ ದುರ್ಭರವಾದ ಒಂಟಿತನ ಅನುಭವಿಸಿದ್ದೇನೆ'

'ಉತ್ಕಟ ಪ್ರೇಮದಿಂದ ಆ ಮಾತನ್ನು ಆಡುತ್ತಿದ್ದಾನೆಂದು ಕೊಳ್ಳಬೇಕಿಲ್ಲ'

'ಆಕೆ ಅಪ್ಪಟ ಹೆಂಗಸು.'

'ಆದರೆ ಪರಮ ಸ್ಫುರದ್ರೂಪಿ ಕೂಡಿ ಯಾರನ್ನಾದರೂ ಗೇಲಿ ಮಾಡಿ, ಅಪಹಾಸ್ಯ ಮಾಡಿ ನಕ್ಕಾಗ ಮುಖ ಕುರೂಪಕ್ಕೆ ತಿರುಗುತ್ತದೆ'

'ಅದ್ಭುತ ವೇಗವಿದೆ ಜಿಂಕೆಗೆ'

'ಪಾರ್ಟಿ ಪರಮ ಬೋರು ಅನ್ನಿಸತೊಡಗಿತ್ತು'

'ಅಂಥ ವಿಚಿತ್ರ ಹೆಂಗಸು ನಾನು'

'ಮನೆ ಬಿಟ್ಟು ಆಚೆಗೆ ನಡೆದು ಬಿಡಬಹುದಾದಂತಹ ಶರಂಪರ ಜಗಳ'

'ನಾನೊಬ್ಬ 'ಹುಟ್ಟು' ತಾಯಿ'

'ಪ್ರತಿಯೊಬ್ಬರೂ ವಿಪರೀತ ಅಪ್‌ಸೆಟ್ ಆಗಿದ್ದರು'

'ಅವನೊಬ್ಬ ಶುದ್ದ ಸುದ್ದಿ ಬಾಕನಾಗಿದ್ದ. ಜಾಣ ಸೆನ್ಸೇಪನಲಿಸ್ಟ್!'

'ಅದರಿಂದಾಗಿ ಅವನು ತನ್ನ ಅತ್ಯಂತ ಆಕರ್ಷಕ ಸಂಕೋಚವನ್ನು ಕಳೆದುಕೊಳ್ಳಬೇಕಿತು'

'ಹಿಂತಿರುಗುವ ಹೊತ್ತಿಗೆ ಕಬೀರ್ ನನ್ನನ್ನು ಹುಚ್ಚಾಬಟ್ಟೆ ಪ್ರೀತಿಸತೊಡಗಿದ್ದ'

'ಪರಿಶುದ್ಧ ಕೊಳಕು ಭಾಷೆಯಲ್ಲಿ ಸ್ವಾಗತಿಸುತ್ತಿದ್ದರು.'

'ನಾನು ಭಾರತ ದೇಶದ ಮಾನಗೆಟ್ಟ, ಮನೋಲಂಘನೆಯ ಮಹಾರಾಣಿ!'

'ಮುಖದಲ್ಲಿ ವಿಲಕ್ಷಣ ಏಕಾಗ್ರತೆ'

'ನಾನು ತೀರ ಚಿಲ್ಲರೆ ಹೆಂಗಸಲ್ಲ, ಇತ್ಯಾದಿ.

ಹೀಗೆ ಅವರ ಬರವಣಿಗೆಯಲ್ಲಿ ವಿಶೇಷಣಗಳನ್ನು ತರುತ್ತಾರೆ. ಮೇಲೆ ಉದಾಹರಿಸಿದವುಗಳಲ್ಲಿನ ಭಯಂಕರ, ಹುಚ್ಚೆದ್ದು, ದುರ್ಭರ, ಉತ್ಕಟ, ಅಪ್ಪಟ, ವಿಲಕ್ಷಣ, ವಿಪರೀತ, ಹುಚ್ಚಾಬಟ್ಟೆ, ಪರಮ, ಅದ್ಭುತ ಮತ್ತು ಶರಂಪರ ಎಂಬ ವಿಶೇಷಣಗಳನ್ನು ಅವರು ಬಳಸಿದ್ದಾರೆ.

ವಿಶೇಷಣಗಳನ್ನು ಬಳಸುವ ಮೂಲಕ ರವಿಯವರು ಒಂದು ವಿಷಯವನ್ನು ಅಥವಾ ಸಂದರ್ಭವನ್ನು ಕೇಂದ್ರೀಕರಿಸಿ ವಿಶೇಷವಾಗಿ ಇಲ್ಲಿ ಒತ್ತಿ(Strest) ಹೇಳಲು ಪ್ರಯತ್ನಿಸುತ್ತಿದ್ದಾರೆ. 'ಪ್ರಾಮಾಣಿಕ' ಎಂಬುದು ಅರ್ಥವತ್ತಾದದ್ದು. ಅಂದರೆ ಪ್ರಾಮಾಣಿಕತೆಯ ಮಟ್ಟಿಗೆ ಅದೇ ಅಂತಿಮವಾದದ್ದು. ಆದರೆ ಅದನ್ನು ಇನ್ನೂ ಹೆಚ್ಚಿನದಾಗಿ ಹೇಳುವ ಪ್ರಯತ್ನ ಇಲ್ಲಿದೆ. 'ಪ್ರಾಮಾಣಿಕನಿಗಿಂತ ಪ್ರಾಮಾಣಿಕ' ಎಂಬರ್ಥದ ತರಹದ್ದು. ಅದರಂತೆಯೇ 'ಬೋರು' ಅನ್ನುವುದು ಅಂತಿಮ ಅರ್ಥವನ್ನೂ ನೀಡುವ ಪದವೇ ಅದಕ್ಕೆ 'ಪರಮ' ವಿಶೇಷಣದೊಂದಿಗೆ ಮತ್ತಷ್ಟು ವಿವರಿಸಲಾಗದಷ್ಟು 'ಬೋರು' ಎಂಬರ್ಥಕ್ಕೆ ಸನಿಹವಾಗುತ್ತದೆ. ಇವುಗಳಂತೆಯೇ ಉಳಿದೆಲ್ಲ ವಿಶೇಷಣಗಳ ಸಂದರ್ಭದಲ್ಲೂ ಅವನ್ನು ಕಾಣಲು ಸಾಧ್ಯ.

ಇಷ್ಟೆಲ್ಲ ವಿಶೇಷಣಗಳ ಜೊತೆಗೆ ಅವರು ಅತಿ ಯಥೇಚ್ಚವಾಗಿ ಬಳಸುವ ವಿಶೇಷಣಗಳೆಂದರೆ ಭಯಂಕರ, ವಿಪರೀತ, ವಿಲಕ್ಷಣ, ಅಪ್ಪಟ ಎಂಬವು. ಹಿಂದೆ ಹೇಳಿದಂತೆ ಪತ್ರಿಕೋದ್ಯಮದ ಭಾಷೆ, ಅಭಿವ್ಯಕ್ತಿಗೆ ವಿಶೇಷಣಗಳು ಅನಿವಾರ್ಯವಾಗಿಬಿಟ್ಟಿವೆ ಎನಿಸುತ್ತದೆ. ಒಂದಂಶವಂತೂ ಸ್ಪಷ್ಟವಾಗುತ್ತದೆ; ಪತ್ರಿಕೋದ್ಯಮದ ಪ್ರಭಾವವೋ ಏನೋ ಅವರ ಬರಹಗಳಲ್ಲಂತೂ ಹೇರಳವಾಗಿವೆ.

**೪.೫.೬. ದ್ವಿರುಕ್ತಿಗಳು ಮತ್ತು ಜೋಡು ವಾಕ್ಯಗಳು**

ಒಂದು ವಿಶೇಷಾರ್ಥವನ್ನು ವ್ಯಕ್ತಪಡಿಸುವುದಕ್ಕಾಗಿ ಒಂದು ಪದ ಅಥವಾ ಒಂದು ವಾಕ್ಯವನ್ನು ಅವಕಾಶ ಅಥವಾ ಬಿಡುವು ಇಲ್ಲವೇ ಎರಡು ಸಲ ಪ್ರಯೋಗಿಸುವುದು, ಉಚ್ಚರಿಸುವುದನ್ನು 'ದ್ವಿರುಕ್ತಿ' ಎಂತಲೂ 'ಪುನರುಕ್ತಿ' ಎಂತಲೂ ಹೇಳುವರು. ಕನ್ನಡ ಬಳಕೆಯಲ್ಲಿ 'ದ್ವಿರುಕ್ತಿ' ಎಂಬ ಪದವನ್ನು ಬಳಸಲಾಗುತ್ತದೆ. ವಿವರಿಸುವಾಗ ಮಾತ್ರ 'ದ್ವಿರುಕ್ತಿ' ಅಥವಾ ಪುನರುಕ್ತಿಗಳಲ್ಲಿ ಬಳಕೆಯಾಗುವ ಎರಡು ಪದಗಳು ಸಾಮಾನ್ಯವಾಗಿ ಒಂದೇ ರೂಪದಲ್ಲಿರುತ್ತವೆ; ಒಂದೇ ಅರ್ಥವನ್ನು ಹೊಂದಿರುತ್ತವೆ. ಬಳಕೆಯಾಗುವ ಒಟ್ಟು ರೂಪದಲ್ಲಿ ಎರಡಕ್ಕೂ ಸೇರಿಸಿ ಒಂದೇ ಅರ್ಥವನ್ನು ಸ್ಫುರಿಸುತ್ತವೆ. ಅಂದ ಮೇಲೆ ಈ ದ್ವಿರುಕ್ತಿಗಳು ಏಕೆ? ಬಳಕೆಯಾಗುತ್ತವೆ. ಇದೇ ಮಾದರಿಯ ಹತ್ತತ್ತಿರ ಮತ್ತೊಂದು ಮಾದರಿಯಿದೆ; 'ಜೋಡುನುಡಿ'. ಅದು ಕನ್ನಡದಲ್ಲಿ ಬಳಕೆಯಾಗುವ ಕೆಲವು ಇಂಗ್ಲೀಶ್-ಕನ್ನಡ ಜೋಡು ನುಡಿಗಳನ್ನು ಇದೇ ವ್ಯಾಪ್ತಿಯಲ್ಲಿ ವಿವರಿಸುತ್ತಿರುವುದನ್ನು ಕಾಣುತ್ತೇವೆ. ಆದರೆ ಈ ಪ್ರಕಾರ ರವಿಯವರ ಬರಹಗಳಲ್ಲಿ ಕಂಡುಬರುವುದಿಲ್ಲ. ಇದೇ ಮಾದರಿಯನ್ನು ಕಾಣಬಹುದು ಬಹುಶಃ ಅದನ್ನು 'ಜೋಡುವಾಕ್ಯ' ವೆಂದು ಕರೆಯಬಹುದೇನೋ! ಮುಂದೆ ಅವುಗಳನ್ನು ಗಮನಿಸುವ ಪ್ರಯತ್ನ ಮಾಡಲಾಗಿದೆ. 'ದ್ವಿರುಕ್ತಿ' ಅಥವಾ 'ಪುನರುಕ್ತಿ'ಗಳನ್ನು ಸಾಮಾನ್ಯವಾಗಿ ಒಂದು ಪದದ ಅರ್ಥ ಸ್ಪಷ್ಟತೆ ವಿಷಯ ಮತ್ತು ಭಾವಕ್ಕೆ ಒತ್ತು ಕೊಡಲು ಈ ಪ್ರಕಾರದ ಪ್ರಯೋಗಗಳನ್ನು ಬಳಸಲಾಗುತ್ತದೆ.

ರವಿ ಬೆಳಗೆರೆಯವರ ಬರಹಗಳಲ್ಲಿ ಅತಿ ಹೆಚ್ಚಿನದಾಗಿ ದ್ವಿರುಕ್ತಿಗಳು ಕಂಡುಬರುತ್ತವೆ. ಬಹುತೇಕ ಅವು ಅನ್ಯಭಾಷೆಯ ಪದಗಳು ಆಗಿರುತ್ತವೆ. ಅಂತಹ ಕೆಲವನ್ನು ಉದಾಹರಣೆಗಳ ಮೂಲಕ ವಿವರಿಸಬಹುದು.

'ಓದಿಕೊಂಡರೆ ಪ್ರತಿ ಕವಿತೆ ಪ್ರತಿ ಸಾಲು ತೂಕ ತೂಕ'

'ಇಡೀ ದಿನ ಫ್ರೆಷ್ ಫ್ರೆಷ್!'

'ಗಂಡನಲ್ಲದವನು ಸುಮ್ಮನೆ ಮುತ್ತು ಕೊಟ್ಟರೂ, ಎದೆ ತಾಕಿದರೂ ಅದು ನಷ್ಟನಷ್ಟ'

'ರಿಜಲ್ಟ್ ಮನಸಿಗೆ ಮಾತ್ರ ಗೊತ್ತಾಗುತ್ತಿರುತ್ತದೆ. ಮಿದುಳು ಮೂಕ ಮೂಕ'

'ಹೊಗೆ ಹೊಗೆ ಸಿಗರೇಟು'

'ಹೊಗೆ ಲೀನ ಲೀನ'

'ಬಸಿರಾಗದಿದ್ರೂ ಏನೋ ಭಾರ ಭಾರ'

'ಅವರ ನೆರಳು ತಂಪು ತಂಪು.'

'ಎರಡನೆಯ ಸಂಬಂಧಗಳು ಯಾವಾಗಲೂ ಗುಪ್ತ್‌ಗುಪ್ತ್!'

'ಮನಸ್ಸನ್ನು ಅಚ್ಚ ಅಚ್ಚ ಮಾಡಿ ಗೋಗರೆದು ಕೆಲಸ ಮುಂದುವರೆಸುವಂತೆ ಪ್ರೇರೇಪಿಸುವುದು'

'ಅವನು ನಿಗಿ ನಿಗಿ ಇಪ್ಪತ್ತೊಂದರ ಹುಡುಗ'

'ಇಬ್ಬರೂ ತಮ್ಮದೇ ಆದ ಒಂದು ಗುಟ್ಟು ಗುಟ್ಟು ಪ್ರಪಂಚ ಸೃಷ್ಟಿಸಿಕೊಂಡು ಬಿಟ್ಟಿರುತ್ತಾರೆ'

'ಬೊಗಸೆ ಬೊಗಸೆ ಪ್ರೀತಿ ಮುಚ್ಚಿ ಮುಚ್ಚಿ ಕೊಡುತ್ತೇನೆ'

'ಎಲ್ಲವೂ ಪ್ರಫುಲ್ಲ ಪ್ರಫುಲ್ಲ ಅನ್ನಿಸತೊಡಗುವ ಕಾಲವದು'

'ಟ್ರಾಫಿಕ್ ನಿಂತು ಹೋಗುತ್ತೆ ಜಾಮ್ ಜಾಮ್!'

'ಪೆದ್ದಾ ಪೆದ್ದ! ಎಷ್ಟು ಕೊಟ್ಟೆ ಈ ತಾಯತಕ್ಕೆ?'

'ಆ ಮೇಲೆ ಗಂಡ ಅವರನ್ನು ತೌಬಾ ತೌಬಾ ಅನ್ನಿಸಿಬಿಟ್ಟಿರುತ್ತಾನೆ'

'ಶುರುವಿಟ್ಟುಕೊಂಡಾಗ ಮಾತು ನೆಮ್ಮದಿಯಾಗೇ ಇರುತ್ತದೆ. ಧಾಟಿ cool cool'

ಮೇಲಿನ ಉದಾಹರಣೆಗಳಲ್ಲಿ ಬಳಕೆಯಾಗಿರುವ ದ್ವಿರುಕ್ತಿ ಅಥವಾ ಪುನರುಕ್ತಿಗಳನ್ನು ಗಮನಿಸಿದಾಗ ಒಂದೇ ಅರ್ಥ ಸೂಚಿಸುವ ಪ್ರತಿನಿಧಿಸುವ ಪದವನ್ನು ಎರಡು ಬಾರಿ ಬಳಸಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಇಲ್ಲಿ ಬಳಸಿರುವ ದ್ವಿರುಕ್ತಿಗಳು ಒಂದು ಘಟನೆ, ವಿಷಯ ಮತ್ತು ಸಂದರ್ಭದ ಪರಿಣಾಮವನ್ನು ಸೂಚಿಸಲು ವಿಶೇಷವಾಗಿ 'ದ್ವಿರುಕ್ತಿ' ಬಳಸಿ ಹೇಳಿರುವುದನ್ನು ಕಾಣಬಹುದು. ಇದರಲ್ಲಿ ರವಿಯವರು 'ಫ್ರೆಷ್ ಫ್ರೆಷ್!', 'ಅಚ್ಚ ಅಚ್ಚ', 'ಪ್ರಫುಲ್ಲ ಪ್ರಫುಲ್ಲ', 'ಜಾಮ್ ಜಾಮ್' 'ಪೆದ್ದಾಪೆದ್ದ!', 'ತೌಬಾ ತೌಬಾ', cool cool ಮುಂತಾದ ಅನ್ಯಭಾಷೆಯ ಪದಗಳನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ. ತೋರಿಕೆಗೆ ಈ ಪ್ರಯೋಗ ಸಹಜವೆಂಬಂತೆ ಅನಿಸಿದರೂ ಬರಹದಲ್ಲಿ ಅದು ಬೀರುವ ಪರಿಣಾಮ ತನ್ನಡೆಗೆ ಸೆಳೆಯುತ್ತದೆ. ಇಂತಹ ವಿಶಿಷ್ಟ ಶೈಲಿಯಿಂದಲೇ ಅವರ ಭಾಷೆ ವಿಶಿಷ್ಟತೆಯನ್ನು ಪಡೆದುಕೊಂಡಿದೆ.

ಇದರಲ್ಲಿಯೇ ಗುರುತಿಸಬಹುದಾದ ಮತ್ತೊಂದು ಅಂಶವೆಂದರೆ ಹಿಂದೆ ಸೂಚಿಸಿರುವ 'ಜೋಡು ನುಡಿ' ಹೋಲಿಕೆಯ 'ಜೋಡು ವಾಕ್ಯ' ಎಂಬುದು. 'ದ್ವಿರುಕ್ತಿ' ಒಂದೇ ಭಾಷೆಯ ಒಂದೇ ರೂಪದ ಎರಡು ಪದಗಳ ಬಳಕೆಯಾದರೆ, 'ಜೋಡು ನುಡಿ' ಎರಡು ಭಾಷೆಯ ಒಂದೇ ಅರ್ಥದ ಭಿನ್ನರೂಪಗಳ ಬಳಕೆಯಾಗಿದೆ. ಅದರಂತೆಯೇ 'ಜೋಡು ವಾಕ್ಯ' ಎಂದರೆ ಎರಡು ಭಾಷೆಯ

ಭಿನ್ನರೂಪಗಳು. ಇದನ್ನು ಪುನರುಕ್ತಿಯೆಂತಲೂ ಕರೆಯಬಹುದೇನೋ? ರಚನೆಯ ಹಿನ್ನೆಲೆ ಭಿನ್ನವಾದರೂ ಅರ್ಥದ ನೆಲೆಯಲ್ಲಿ ಒಂದೆ ಆಗಿರುತ್ತದೆ. ಅಂತಹವೊಂದು ಪ್ರಯೋಗವನ್ನು ಅವರ ಬರಹಗಳಲ್ಲಿ ಕಂಡುಬರುತ್ತವೆ. ಉದಾಹರಣೆಗೆ

'ಮುಖ್ಯವಾಗಿ ನಂಗೆ ಏಕಾಗ್ರತೆಯಿಲ್ಲ. ಕಾನ್ಸನ್‌ಟ್ರೇಷನ್ ಇಲ್ಲ'

'ಇವು ಅಭ್ಯಾಸಗಳು. By habit.'

'ನೀವು ವರ್ಷಗಟ್ಟಲೆ ಮಾಡಿದ್ದು ಧ್ಯಾನವಲ್ಲ. ಅದು meditation ಅಲ್ಲ.'

'ಏನನ್ನೂ ಮುಚ್ಚಿಟ್ಟುಕೊಳ್ಳದ ಮೂಕ ಸಬ್‌ಮಿಷನ್. ಸೈಲೆಂಟು ಸಮರ್ಪಣೆ.'

'ಸ್ಪರ್ಶ! ದಿ ಟಚ್.'

'ನಂಗೇ ಎದುರು ಮಾತಾಡ್ತೀಯೇನೋ ಬಾಸ್ಟರ್ಡ್! ಸೂಳೆ ಮಗ್ನೆ.'

'ಇದು ಬರೀ ಕಪ್ಪು-ಬಿಳುಪಿನ ದೇಶ. Black and white country.'

'ನಾನು ಪ್ರತೀ ಸಲ ಕಾಮದೊಳಕ್ಕೆ ಬೀಳುತ್ತಿದ್ದೆ. Falling in Sex.'

'ನನ್ನನ್ನು ಒಬ್ಬಳೇ ಇರಕ್ಕೆ ಬಿಡು ಇವತ್ತು. ಲೀವ್ ಮಿ ಅಲೋನ್.'

'...ಉದ್ಗಾರ ಮಾಡಿದ ಸಿಖ್ ಯುವಕ ಜತ್ವಂತ್ ಸಿಂಗ್: ಕುತಡೀ ಮರ್‌ಗಯೀ! ನಾಯಿ ಸತ್ತಿತು ಅಂತ.'

ಹೀಗೆ ಬೇರೆ ಯಾರ ಬರಹಗಳಲ್ಲಿಯೂ ಕಾಣಿಸಿಕೊಳ್ಳದ ಈ ಒಂದು ಪ್ರಯೋಗವು ರವಿಯವರಲ್ಲಿ ಕಾಣಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ಒಂದು ಹೇಳಿಕೆಯ ಪುನರ್ಮನನ, ಸ್ಪಷ್ಟತೆ ಮತ್ತು ವಿಷಯಕ್ಕೆ ಒತ್ತು ಕೊಡಲು ಮಾತ್ರ ಇಂತಹ ಪ್ರಯೋಗಗಳು ಯಶಸ್ವಿಯಾಗುತ್ತದೆ ಅಥವಾ ಬಳಕೆಯಾಗುತ್ತವೆ. ಇದು ಅರ್ಥ ಸಂವಹನ ಕ್ರಿಯೆಗೆ ಯಾವುದೇ ರೀತಿಯ ತೊಡಕಾಗದು. ಬರಹಗಳಲ್ಲಿ ಇವು ಅಭ್ಯಾಸಗಳು. By habit, ಏಕಾಗ್ರತೆಯಿಲ್ಲ. ಕಾನ್ಸ್‌ನ್‌ಟೈಷನ್ ಇಲ್ಲ, ಸ್ಪರ್ಶ! ದಿ ಟಿಚ್, ಕಪ್ಪು-ಬಿಳುಪಿನ ದೇಶ. Black and white country. ಲೀವ್ ಮಿ ಅಲೋನ್ ಮುಂತಾದವುಗಳನ್ನು ನೋಡಿದಾಗ ಮೂಲದಲ್ಲಿ ಒಂದೇ ಅರ್ಥವನ್ನು ಹೊಂದಿರುವ ಎರಡು ಬೇರೆ ಬೇರೆ ವಾಕ್ಯಗಳಾಗಿವೆ. ರಚನೆಯಲ್ಲಿ ಅಲ್ಪ ಸ್ವಲ್ಪ ಭಿನ್ನತೆ ಕಂಡರೂ ಒಟ್ಟು ಅರ್ಥದಲ್ಲಿ ಎರಡೂ ಒಂದೇ ಅರ್ಥವನ್ನು ಪಸರಿಸುತ್ತವೆ. ಆದರೆ ಎಲ್ಲಾ ಸಮಯದಲ್ಲಿಯೂ ಇದು ಸಾಧ್ಯವೇ? ಇಂತಹ ಕನ್ನಡ-ಇಂಗ್ಲೀಶ್ ಜೋಡು ವಾಕ್ಯಗಳನ್ನು ಬಳಸುವುದನ್ನು ಗೇಲಿ ಮಾಡುವ ಸಾಧ್ಯತೆಯೂ ಇದೆ. ರವಿಯವರ ಬರಹದಲ್ಲಿ ಇಂತಹ ಗೇಲಿಗೆ ಆಸ್ಪದವಿರಲಾರದೇನೋ? ಯಾಕೆಂದರೆ ಅವರು ಈ ರೀತಿಯ ಪ್ರಯೋಗಗಳನ್ನು ಎಲ್ಲಂದರಲ್ಲಿ, ಹೇಗಂದರೆ ಹಾಗೆ ಮಾಡಿರುವುದಿಲ್ಲ. ಓದಿಗೂ, ಅರ್ಥಕ್ಕೂ, ಭಾವಕ್ಕೂ, ಗ್ರಹಿಕೆಗೂ ನಿನಾದವನ್ನುಂಟು ಮಾಡುವಂತಹ ಸಂದರ್ಭದಲ್ಲಿ ಬಳಸುತ್ತಾರೆ. ಅದೇ ಅವರ ಭಾಷೆ, ಬರಹ, ಶೈಲಿಯ ವೈಶಿಷ್ಟ್ಯ Right word at right place.

**೪.೫.೨. ಪದಗಳ ವೈಶಿಷ್ಟ್ಯ**

ಸಾಹಿತ್ಯ ಕೃತಿಯ ದಟ್ಟವಾದ ಇರವು ಎಲ್ಲಿದೆ ಎನ್ನುವ ಪ್ರಶ್ನೆಗೆ ಉತ್ತರ, ಭಾಷೆಯೆ ಸಾಹಿತ್ಯದ ಮೈ ಆಗಿದ್ದರಿಂದ ಅದರ ಭಾಷಿಕ ಶರೀರವನ್ನೇ ನಂಬಿ ಅದನ್ನು ಅರಿಯಲು

ಮುಂದಾಗಬೇಕೆಂಬುದಾಗಿದೆ. ಆ ಭಾಷಿಕ ಮೈಯನ್ನು ಬಿಟ್ಟು, ನಾವು ಕಟ್ಟಿಕೊಟ್ಟ ಯಾವ ಹೊರ ಪ್ರಭಾವಳಿಯೂ ಕೃತಿಯನ್ನು ಅರಿಯಲು ನೇರವಾಗಿ ನೆರವಾಗಲಾರದು. ಅಂತಹ ನೆರವನ್ನು ಪಡೆದರೆ ದಾರಿ ತಪ್ಪುವುದು ಸಹಜ ಎನಿಸುತ್ತದೆ. ಹೀಗಾದಾಗ ಕೃತಿಗಳಿಗೆ ನಿನ್ನೆಗಳಿಲ್ಲದಂತಾಗುವ ಸಾಧ್ಯತೆಯೂ ಇದೆ. ಹಾಗಾದದ್ದೇ ಆದರೆ ಪಂಪ, ಕುಮಾರವ್ಯಾಸ, ಬಸವಣ್ಣ, ಕುವೆಂಪು, ಅಡಿಗ, ಅನಂತಮೂರ್ತಿ ಇವರೆಲ್ಲರೂ ಒಂದೇ ಸಾಲಿನಲ್ಲಿ, ಕಾಲದಲ್ಲಿ ನಿಂತಂತೆ ತೋರತೊಡಗುತ್ತಾರೆ. ಯಾರೂ ಒಬ್ಬರಾದ ಮೇಲೊಬ್ಬರು ಹುಟ್ಟಿಕೊಂಡಂತೆ ತೋರುವುದೇ ಇಲ್ಲ. ಓದುಗರಿಗೆ ಇವರೆಲ್ಲರೂ. ಈಗ ಮತ್ತು ಇಲ್ಲಿ ಮಾತ್ರ ಅನಿಸುತ್ತದೆ. ಈ ನೆಲೆಯಲ್ಲಿ ಕೃತಿ ಹುಟ್ಟಿದ ಕಾಲದ ನೆನಪನ್ನು ಕೈಬಿಡುವುದು ತರವಲ್ಲ. ಹಾಗಾಗಿ ಅದು ಹುಟ್ಟಿದ ಕಾಲಕ್ಕೆ ಮಾತ್ರ ಸಲ್ಲುವ ನೆನಪಿನ ನಂಟುಗಳಿರುತ್ತದೆ. ಅದರಿಂದಾಗಿ ಅದನ್ನು ಅರಿಯುವ ಬಗೆಯಲ್ಲೇ ದಾಖಲಿಸಿ ವಿಶ್ಲೇಷಿಸಬೇಕಾದದ್ದು ಅಗತ್ಯ.

ಈ ಹಿನ್ನೆಲೆಯಲ್ಲಿ ಆಧುನಿಕ ಕಾಲದಲ್ಲಿ ಬರೆಯುತ್ತಿರುವ ರವಿಯವರ ಬರಹಗಳಲ್ಲಿ ಪದಗಳನ್ನು, ಅವುಗಳ ವೈಶಿಷ್ಟ್ಯವನ್ನು ದಾಖಲಿಸುವ ಮತ್ತು ವಿವರಿಸುವ ಪ್ರಯತ್ನ ಮಾಡುವಂತೆಯೇ ಪ್ರತಿಯೊಬ್ಬ ಬರಹಗಾರನು ವ್ಯಕ್ತಿ ವಿಶಿಷ್ಟತೆಯನ್ನು ಹೊಂದಿರುತ್ತಾನೆ ಎಂದು ಹೇಳಬೇಕಾಗುತ್ತದೆ. ಪ್ರತಿಯೊಬ್ಬ ಬರಹಗಾರನಿಗೂ ಒಂದು ಶೈಲಿ ಇರುತ್ತದೆ; ಅಸ್ತಿತ್ವದ ಗುರುತಿಗಾಗಿ. ಅದು ಏಕಕಾಲದಲ್ಲಿ ವ್ಯಕ್ತಿಯನ್ನ, ಭಾಷೆಯನ್ನ ಪ್ರತಿನಿಧಿಸುತ್ತಿರುತ್ತದೆ. ರವಿಯವರ ಬರಹಗಳಲ್ಲಿ ವ್ಯಕ್ತಿ ವೈಶಿಷ್ಟ್ಯದ ಕೆಲವು ಪದಗಳನ್ನು, ಶೈಲಿಯನ್ನು ಕಾಣಬಹುದು. ಅಂತಹುಗಳನ್ನು ಮುಂದಿನಂತೆ ನೋಡಬಹುದು.

'ಹಂತಕನಿಗಿಂತ ಕ್ರೂರಿ, ದುಷ್ಟಾತಿ ದುಷ್ಟ', 'ನಿಸರ್ಗದಂಥ ನಿಸರ್ಗ', ಕೊಳ್‌ಕೊಳಯಾಗಿದೆ', 'ಸತ್ಯಕ್ಕಿಂತಲೂ ಸತ್ಯವಾದ', ಬೆಂಗಳೂರಿನಂತ ಬೆಂಗಳೂರ್', ಮಾನವಾರಣ್ಯ', 'ಕಾಂಕ್ರಿಟ್‌ಕಾಡು' 'ಘೋರಾತಿ ಘೋರ', 'ತೇಜಮ್ಮನಂಥಹ ತೇಜಮ್ಮ', 'ಕಂಚಿಗೆ ಕಂಚು' 'ಪೂಂಖಾನು ಪೂಂಖ' ಮುಂತಾಗಿ ಬಳಸುತ್ತಾರೆ. ಯಾಕೆ? ಆ ಮೂಲಕ ಅವರು ಹೇಳಲು ಪ್ರಯತ್ನಿಸುತ್ತಿರುವುದಾದರೂ ಏನು? ಕ್ರೂರಿ, ದುಷ್ಟ, ನಿಸರ್ಗ, ಸತ್ಯ, ಬೆಂಗಳೂರು ಎಂದಷ್ಟೆ ಹೇಳಿದರೆ ಸಾಕಾಗುತ್ತಿರಲಿಲ್ಲವೇ? ಇವುಗಳ ಬಳಕೆಯಿಂದ ಏನಾದರೂ ವ್ಯತ್ಯಾಸಗಳು ಆಗುತ್ತಿವೆಯೇ? ಅಂತಹ ಅನೇಕ ಪದಗಳನ್ನು ಅವರ ಬರಹದಲ್ಲಿ ಕಾಣಬಹುದು. ಈ ರೀತಿಯ ಪದಗಳ ಬಳಕೆ ಕುತೂಹಲ ಹುಟ್ಟಿಸುವಂತಹವು. ರವಿ ಬೆಳಗೆರೆಯವರಿಗೆ ಸಂಬಂಧಿಸಿದಂತೆ ಇದು ವಿಶಿಷ್ಟವಾದುದು ಎಂದೇ ಹೇಳಬಹುದು. 'ಹಂತಕ' ಎಂದರೆ ಆತನೊಬ್ಬ ದುಷ್ಟ, ಕಟುಕ, ಕಲ್ಲು, ಕ್ರೂರಿ ಎಂದು ಹೇಳಿದ್ದರೆ ಸಾಕಿತ್ತು. ಅವರು ಇಲ್ಲಿ ಇನ್ನೂ ಏನೋ ಹೇಳಲು ಪ್ರಯತ್ನಿಸುತ್ತಿರುವಂತಿದೆ. ಬಹುಶಃ ಅದು ಅಭಿವ್ಯಕ್ತಿಯ ಭಾಷೆಯನ್ನು ಮೀರಿದ್ದು. ಆ ಕಾರಣಕ್ಕಾಗಿ ಅವರು 'ಅಂತ' ಎಂದು ಹೇಳುವ ಮೂಲಕ ಆ ಪದದ ಅರ್ಥಕ್ಕೆ, ಭಾವಕ್ಕೆ ತೀವ್ರತೆಯನ್ನು ತರಲು ಪ್ರಯತ್ನಿಸಿದ್ದಾರೆ.

'ಬೆಂಗಳೂರಿನಂತ ಬೆಂಗಳೂರು' ಎಂಬಲ್ಲಿಯೂ ಅದೇ ಪ್ರಯೋಗ ಕಂಡುಬರುತ್ತದೆ. 'ಸತ್ಯಕ್ಕಿಂತಲೂ ಸತ್ಯ' ಎಂಬಲ್ಲಿಯೂ ಅದೇ. ಆದರೆ ಈ 'ಮಾನವಾರಣ್ಯ ಮತ್ತು ಕಾಂಕ್ರಿಟ್ ಕಾಡು' ಇದಕ್ಕೆ ಸ್ವಲ್ಪ ಭಿನ್ನವೆನಿಸುತ್ತವೆ. ಅವುಗಳ ಹಿಂದಿನ ಪ್ರಯತ್ನ ಮಾತ್ರ ಒಂದೇ ತರಹದ್ದು. ಈಗಾಗಲೇ ಸಾಮಾಜಿಕ ವಲಯದಲ್ಲಿ ಕಾಡು, ಅರಣ್ಯಗಳ ಅರಿವು ಬೇರೆಯೇ ಇದೆ. ಅದಕ್ಕೆ ಮಾನವ ಕಾಂಕ್ರೀಟ್' ಎಂಬ ವಾರ್ಗಿಕಗಳು ಸೇರಿ ಅವು ವಿಶೇಷವೆನಿಸಿವೆ. ಅಸಂಭವ ಎಂಬ ಕಲ್ಪನೆಗೆ ಸಂಭವದ ಸಾಧ್ಯತೆ. ಜನಸಂದಣಿಯನ್ನು ಗುರುತಿಸಲು, ಅದನ್ನು ಮನದಟ್ಟು ಮಾಡಲು

'ಮಾನವಾರಣ್ಯ'ದ ಪರಿಭಾಷೆಯನ್ನು ನೀಡಿದ್ದಾರೆ. 'ಕಾಂಕ್ರಿಟ್ ಕಾಡು' ಎಂಬುದು ಆ ಮಾನವಾರಣ್ಯದಲ್ಲಿ ಜನಸಂಖ್ಯೆಯಷ್ಟೇ ವಿಪರೀತವಾಗಿ ಎದ್ದು ನಿಂತಿರುವ ಕಟ್ಟಡಗಳನ್ನು ಹೇಳಲು ಅಥವಾ ಮನುಷ್ಯರು ನೆಲೆಸಿರುವ ನೆಲೆ ಎಲ್ಲವೂ ಕಾಂಕ್ರಿಟ್. ಎಂದರೆ ಮಾನಸಿಕವಾಗಿ, ಭಾವನಾತ್ಮಕವಾಗಿ, ಮನುಷ್ಯ ಮೌಲ್ಯಗಳೆಲ್ಲ ಅಲ್ಲಿ ಕಾಂಕ್ರಿಟ್‌ನಂತೆಯೇ ಎಂಬರ್ಥವನ್ನೂ ಸೂಚಿಸಲು ಬಳಸಿದ್ದಾರೆ.

ಅದೇ ರೀತಿ 'ಘೋರಾತಿ ಘೋರ', 'ಪೂಂಖಾನು ಪುಂಖ' ಎಂಬಂಥವು ಮೇಲೆ ವಿವರಿಸಿದ 'ಹಂತಕನಿಗಿಂತ ಕ್ರೂರಿ' ಎಂಬ ರೀತಿಯವು. ಅಂತೆಯೇ ಅವರಲ್ಲಿ ಅನೇಕ ನೂತನ ಭಾಷಾ ಪ್ರಯೋಗಗಳನ್ನು ಕಾಣಬಹುದು. ಪತ್ರಿಕೋದ್ಯಮದಲ್ಲಿ ಈ ರೀತಿಯ ಪ್ರಯೋಗಗಳನ್ನು ಮಾಡದೇ ಹೋದರೆ ಪತ್ರಿಕೆ ಮತ್ತು ಪತ್ರಿಕೋದ್ಯಮಿ ಅಸ್ತಿತ್ವವನ್ನು ಕಳೆದುಕೊಳ್ಳಬೇಕಾಗುತ್ತದೆ. ಪದಗಳು ಅವರ ಬರಹಗಳಿಗೆ ನೀಡುವ ಶೀರ್ಷಿಕೆಗಳು ವಿಶಿಷ್ಟವೆನಿಸಿಸುತ್ತವೆ. ಅದು ವ್ಯಕ್ತಿಯ ಪ್ರಭಾವವಾ? ಅಥವಾ ಭಾಷೆಯ ಪ್ರಭಾವವಾ? ಅಂದಾಗ ನಿಸ್ಸಂದೇಹವಾಗಿ ಅದು ಭಾಷೆಯ ಪ್ರಭಾವವೆ ಎನಿಸುತ್ತದೆ. ಆದರೆ ಭಾಷೆಗೆ ಸ್ವತಂತ್ರ ಶಕ್ತಿ ಇಲ್ಲವೆ? ಅದಕ್ಕೆ ಮನುಷ್ಯ ಬೇಕೆ ಬೇಕು: ಪ್ರಯೋಗಕ್ಕೂ, ಪ್ರಸಾರಕ್ಕೂ. ಅದು ರವಿ ಬೆಳಗೆರೆಯವರಷ್ಟೇ ಅಲ್ಲ ಬೇರೆ ಯಾರಾದರೂ ಆಗಿರಬಹುದು. ಒಟ್ಟಿನಲ್ಲಿ ಮನುಷ್ಯ ಬೇಕು. ಅಂತಹ ಹೊಸ ಹೊಸ ಪ್ರಯೋಗಗಳನ್ನು ಮಾಡುವ, ಯೋಚಿಸುವ ಸೃಜನಾತ್ಮಕ ಚಲನೆ ಆತನಲ್ಲಿರಬೇಕು.

ನೋಡಿ ನಮಗೆ ಅನೇಕ ರೀತಿಯ ಸಂಬಂಧಗಳು ಗೊತ್ತು. ಅಣ್ಣ, ತಮ್ಮ, ತಂಗಿ, ಅಮ್ಮ, ಅಪ್ಪ ಮುಂತಾದ ಬಂಧು-ಬಳಗ ಸಂಬಂಧ, ಗೆಳೆಯ-ಗೆಳೆತಿಯರ ಸಂಬಂಧ, ನೌಕರಿ ವಾಹನಗಳ ಸಂಬಂಧ ಮುಂತಾದ ಎಷ್ಟೊ ಸಂಬಂಧಗಳು ಗೊತ್ತು. ಆದರೆ 'ಸರ್ಪ ಸಂಬಂಧ' ಎಷ್ಟೇ ವೇಳೆ ನೋಡಿದ್ದರೂ ಪ್ರಯೋಗ ಹೊಸದೆನಿಸುತ್ತದೆ. ಅದರಂತೆ ಅನೇಕ 'ಲೋಕಗಳು ಗೊತ್ತು' 'ಪಾಪಿಗಳ ಲೋಕ'? 'ಒಮರ್ಟಾ', 'ಅರ್ತಿ' 'ಅಮ್ಮ ಸಿಕ್ಕಿದ್ಲು' ಮುಂತಾದ ಪದ ಪ್ರಯೋಗಗಳೇ ರವಿಯವರನ್ನು ವಿಶೇಷವಾಗಿ ನೋಡಲು ಪ್ರೇರಕ. ಅವರ ಬಳಕೆಯ ಭಾಷಿಕ ಅಂಶಗಳ ವಿಶಿಷ್ಟ ಪೂರ್ಣವಾಗಿವೆ. ಎಲ್ಲರಿಗಿಂತಲೂ ಅವರನ್ನು ಭಿನ್ನವಾಗಿ ಗುರುತಿಸುವ ಪ್ರಮುಖ ಕಾರಣಗಳಲ್ಲಿ ಇದೊಂದು.

**೪.೫.೮. ಪದಗಳ ವಲಸೆ**

ಕನ್ನಡವನ್ನು ಈಗ ಬಹು ವಿಸ್ತಾರವಾದ ಮತ್ತು ಬಲು ವೈವಿಧ್ಯಮಯ ಪರಿಸರಗಳಲ್ಲಿ ಬಳಸುವುದು ಅನಿವಾರ್ಯವಾಗಿದೆ. ಈ ಹೊಸ ಬಳಕೆಗಳು ಹೊಸ ಸಮಸ್ಯೆಗಳನ್ನು ತರುತ್ತಿವೆ. ಪ್ರಪಂಚದಾದ್ಯಂತ ಹಲವಾರು ಭಾಷೆಗಳು ಇಂಥದೇ ಸಮಸ್ಯೆಗಳನ್ನು ಎದುರಿಸುತ್ತಿವೆ. 'ಭಾಷಿಕನೊಬ್ಬನಲ್ಲಿ ಪದಕೋಶ ಹೇಗೆ ನೆಲೆಗೊಂಡಿರುತ್ತದೆ ಎಂಬ ಬಗ್ಗೆ ಕೊನೆ ಮಾತನ್ನು ಹೇಳುವುದು ಸಾಧ್ಯವಿಲ್ಲ ಮತ್ತು ನೆಲೆಗೊಂಡಿರುವ ಪದಕೋಶ ಅವನಿಗೆ ಹೇಗೆ ಬಳಕೆಗೆ ಒದಗುತ್ತದೆ. ಎಂಬ ಪ್ರಶ್ನೆಗೂ ಖಚಿತ ಉತ್ತರವಿಲ್ಲ'.[೬೮] ಭಾಷೆ ಎಂಬುದು ಒಂದು ವಿಸ್ತಾರವಾದ ಕ್ಷೇತ್ರ ಅದು ಅನೇಕ ನಿಯಮಗಳನ್ನು ಹೊಂದಿದಾಗ್ಯೂ ವಿಸ್ತಾರಗೊಳ್ಳುತ್ತಲೇ ಸಾಗುತ್ತದೆ. 'ಭಾಷೆಗೆ ಸಂಬಂಧಿಸಿದಂತೆ ನೀಲನಕ್ಷೆಯನ್ನು ಸಿದ್ಧಪಡಿಸಿಕೊಂಡವರು ಮಾತ್ರ ಸರಿಯಾದ ದಿಕ್ಕಿನೆಡೆಗೆ ಪ್ರಯಾಣಿಸಬಲ್ಲರು. ಪ್ರಯಾಣಿಸಬಲ್ಲರೇ ಹೊರತು ದಡ ಸೇರುವುದಿಲ್ಲ. ಯಾಕೆಂದರೆ ಆ ಕ್ಷೇತ್ರಕ್ಕೆ ದಡವೆಂಬುದೇ ಇಲ್ಲ'. ಇಷ್ಟು ವಿಸ್ತಾರವಾದ ಭಾಷಾ ಕ್ಷೇತ್ರಕ್ಕೆ ಅದರದ್ದೇ ಆಕರ ಮೂಲಗಳಿರುತ್ತವೆ. ಸುಲಭವಾಗಿ ತಿಳಿಯುವ ಅಂಥ ಆಕರ

ಮೂಲವೆಂದರೆ ಭಾಷೆಯ ಪದಕೋಶ. ಮಾತನಾಡುವಾಗ, ಬರೆಯುವಾಗ ಗೊತ್ತಿರುವ ಭಾಷೆಯ ಪದಗಳನ್ನು ಬಳಸುತ್ತಿರುತ್ತೇವೆ. ಈ ಪದಗಳ ಸಂಖ್ಯೆ ಅಸಂಖ್ಯೆವೇನಲ್ಲ. ಕನ್ನಡದ ಎಲ್ಲ ಪದಗಳು ಎಲ್ಲರಿಗೂ ಗೊತ್ತಿರುವುದಿಲ್ಲ. ಹಾಗೆ ಗೊತ್ತಿರಬೇಕೆಂದೇನೂ ಇಲ್ಲ.

ನಾವು ಬಳಸುವ ಪದಕೋಶದಲ್ಲಿ ಸೀಮಿತ ಸಂಖ್ಯೆಯ ಪದಗಳಿರುತ್ತವೆ. ಆದರೆ ಇತರರು ಮಾತನಾಡಿದಾಗ ಅಥವಾ ಇತರರು ಬರೆದದ್ದನ್ನು ಓದುವಾಗ ಬಳಕೆಯಾಗುವ ಕನ್ನಡ ಪದಕೋಶದಲ್ಲಿ ಇನ್ನೂ ಹೆಚ್ಚಿನ ಪದಗಳಿರುತ್ತವೆ. ಅಂದರೆ ನಮಗೆ ಗೊತ್ತಿರುವ ಎಲ್ಲ ಪದಗಳನ್ನು ನಾವು ಮಾತಾಡುವಾಗ ಇಲ್ಲವೇ ಬರೆಯುವಾಗ ಬಳಸುವುದಿಲ್ಲ. ಕನ್ನಡದಲ್ಲಿ ಹೊಸಪದಗಳ ಅವಶ್ಯಕತೆಯೂ ಅಗಾಧ ಪ್ರಮಾಣದಲ್ಲಿದ್ದಾಗ ಬಳಕೆಯಲ್ಲಿ ಸದಾ ಕಾಲವೂ ಹೊಸ ಹೊಸ ಸವಾಲುಗಳು ಎದುರಿಸಬೇಕಾಗುತ್ತದೆ. ಸಮಾಜದಲ್ಲಿ ಆಗುವ ಬದಲಾವಣೆಗಳು ಮನುಷ್ಯ ಇತರ ಜ್ಞಾನ ವಲಯಗಳಲ್ಲಿ ಮಾಡುವ ಪ್ರಯೋಗ, ಸಾಧನೆಗಳು ಭಾಷೆಯ ಬಳಕೆಯನ್ನೂ ಪ್ರಭಾವಿಸುತ್ತಿರುತ್ತವೆ. ಅದಕ್ಕೆ ಅನುಸಾರವಾಗಿ ಭಾಷೆ ತನ್ನ ಸ್ವರೂಪದಲ್ಲಿ ಬದಲಾವಣೆ, ಹೊಂದಾಣಿಕೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಇಂತಹ ಪ್ರಕ್ರಿಯೆಯ ಫಲವೇ ಪದಗಳ ವಲಸೆ.

ಪ್ರತಿದಿನ ಹೊಸ ಪದಗಳು ಬರುತ್ತಲೇ ಇರುತ್ತವೆ; ಇರುವ ಪದಗಳ ಅರ್ಥ ಸಂಕುಚಿತ, ವಿಸ್ತಾರ ಅಥವಾ ಅರ್ಥಾಂತರವಾಗುತ್ತಿರುತ್ತವೆ. ಅಂದರೆ ಒಂದು ಕ್ಷೇತ್ರದಲ್ಲಿ ಬಳಕೆಯಲ್ಲಿರುವ ಪದಗಳು ಅದೇ ರೂಪದಲ್ಲಿ ಬೇರೊಂದು ಕ್ಷೇತ್ರದಲ್ಲಿ ಮತ್ತೊಂದು ಅರ್ಥದಲ್ಲಿ ಬಳಕೆಯಾಗುತ್ತಿರುತ್ತವೆ. ಇದನ್ನೇ ಕ್ರಿಯಾತ್ಮಕ ಭಾಷೆಯ ವಿಶಿಷ್ಟ ಶಕ್ತಿ ಎಂದು ಹೇಳಬಹುದೇನೋ? ಇಂತಹ ಕ್ರಿಯೆಯನ್ನು ಕೆ.ವಿ.ನಾರಾಯಣ ಅವರು 'ಪದಗಳ ವಲಸೆ' ಎಂದು ಗುರುತಿಸುತ್ತಾರೆ.

ರವಿ ಬೆಳಗೆರೆಯವರ ಬರಹಗಳಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಗಮನಿಸುವುದಾದರೆ, ಅದು ಅವರ ಅಪರಾಧಿ(ಕ್ರೈಮ್) ಬರಹಗಳಲ್ಲಿ ಹೆಚ್ಚಿನದಾಗಿ ಕಾಣಬಹುದು. ಆ ಬರಹಗಳಿಂದ ತೆಗೆದ ಕೆಲವು ಉದಾಹರಣೆಗಳ ಮೂಲಕ ಪದಗಳ ವಲಸೆಯ ಪ್ರಕ್ರಿಯೆಯನ್ನು ಗಮನಿಸಬಹುದು.

'ಬಲಗೈ ಮುಷ್ಟಿ ಬಿಗಿದದ್ದೇ ತಡ ಅನಂತನ ಮುಖಕ್ಕೊಂದು ಪಂಚ್ ಕೊಟ್ಟೆ.'

'ಅನಂತ ಎಲ್ಲಿಂದಲೋ ಹಾರಿ ಬಂದು ನನಗೊಂದು ಡಿಚ್ಚಿ ಹೊಡೆದುಬಿಟ್ಟ.'

'ಜಯರಾಜ್ ಜೊತೆ ಟಕ್ಕರ್ ತಗೊಂಡ್ನೋ'

'ರಾತ್ರಿ ಒಂಬತ್ತು ಗಂಟೆ ಹೊತ್ನಲ್ಲಿ ತಿಗಳರಪೇಟೆ ಮೇಲೆ ರೈಡ್ ಮಾಡಿಬಿಟ್ಟ.'

'...ಮನಸಾರೆ ಲಾಕಪ್ಪಿನಲ್ಲಿ ಕೆಡವಿ work ಮಾಡಿದರಂತೆ.'

'ಅರವಿಂದ್‌ನ ತಂಡ ಅಲ್ಲಿಂದ ವ್ಯಾನಿಶ್ ಆಯಿತು.'

'ಅದು ಅಶೋಕನನ್ನು ಆಸ್ಪತ್ರೆಗೂ, ಸಿದ್ದನನ್ನು ಭಯಾನಕವಾದ ಭೂಗತ ಲೋಕಕ್ಕೂ admit ಮಾಡಿತು.'

'ಆ ಮೇಲೆ ಕೊತ್ವಾಲನ ಬುರುಡೆಗೆ ಎಸರು ಮಡಿಗಿದರಾಯ್ತು!'

'ಗೋಪಾಲ ಕುರುಬರ ಪೇಟೆ ರಾಜನಿಗೆ ಮುಹೂರ್ತ ಇಟ್ಟುಬಿಟ್ಟ!'

'ಜಯರಾಜ್‌ನನ್ನು ಬಂಧಿಸಿ ಪೂರ್ತಿ ನಾಲ್ಕು ದಿನ ಅವನ ರಿಪೇರಿ ಮಾಡಿದರು.'

'ಸೋಮಾ, ಬಲರಾಮನಿಗೆ ಡೀಲ್ ಮಾಡಿದ್ದಾರೆ.'

'ಜೇಡರಳ್ಳಿ ಕೃಷ್ಣಪ್ಪ ಸಕತ್ ರಾಂಗ್ ಆಗವ್ನೆ.'

'ಏನ್ ಚಂದೂ... ಮೀಟರಿಲ್ವಾ? ಎಂದಷ್ಟೇ ಕೇಳಿದ.'

'ಅವನು ಕೊಲೆಗಳ ಇಂಜಿನಿಯರ್!'

'ಮತ್ತೆ ಶುರುಮಾಡುತ್ತಾರೆ ಇಸ್ತ್ರಿ'

'ರಾತ್ರಿಯ ತನಕ ಎಲ್ಲೊ ಕುಳಿತು ಪಾನಕ ಸೇವಿಸಿರಬೇಕು.'

'ಬಿಡ್ಡನ ಛಾಪ್ಟರ್ ಮುಗಿದಿತ್ತು.'

ಹೀಗೆ ರವಿಯವರ ಅಪರಾಧಿ ಸಂಬಂಧಿತ ಬರಹಗಳಲ್ಲಿ ಈಗಾಗಲೇ ಬೇರೊಂದು ವಲಯದಲ್ಲಿ ಒಂದು ಅರ್ಥ ಹೊಂದಿ ಚಲಾವಣೆಗೊಳ್ಳುತ್ತಿದ್ದ ಪದ, ಇನ್ನೊಂದು ವಲಯದಲ್ಲಿ ಮತ್ತೊಂದು ಅರ್ಥ/ಸಂದರ್ಭವನ್ನು ಪಡೆದು ಚಲಾವಣೆಗೊಳ್ಳುತ್ತವೆ. ಇಲ್ಲಿನ ಎಲ್ಲಾ ಪದಗಳು ಸಾಮಾಜಿಕ ವಲಯದಲ್ಲಿ ಬಳಕೆಯಲ್ಲಿವೆ. ಅವು ಭೂಗತ ವಲಯಕ್ಕೆ ಬಂದಾಗ ಬೇರೊಂದು ಅರ್ಥದಲ್ಲಿ ಚಲಾವಣೆಗೊಳ್ಳುತ್ತವೆ. ಉಳಿದಂತೆ ಸಾಮಾಜಿಕ ವಲಯದಲ್ಲಿ ಯಾಥಾಸ್ಥಿತಿಯಲ್ಲಿ ಮುಂದುವರೆಯುತ್ತವೆ. ಇವುಗಳಲ್ಲಿ ಕೆಲವು ಪದಗಳು(ರಿಪೇರಿ, ಮೂಹೂರ್ತ ಇತ್ಯಾದಿ) ಎರಡೂ ವಲಯದಲ್ಲಿ ಒಂದೇ ಅರ್ಥವನ್ನು ಸೂಚಿಸುತ್ತಿದ್ದರೂ ಸಂದರ್ಭ ಮತ್ತು ಘಟನೆಯಲ್ಲಿ ವ್ಯತ್ಯಾಸವಿರುವುದನ್ನು ಗಮನಿಸಬಹುದು.

| **ಪದಗಳು** | **ಸಾಮಾಜಿಕ ವಲಯದ ಅರ್ಥ** | **ಭೂಗತ ವಲಯದ ಅರ್ಥ** |
|---|---|---|
| ರೈಡ್ | ಕಾರ್ಯಾಚರಣೆ | ಮುತ್ತಿಗೆ ಹಾಕು/ಆಕ್ರಮಿಸು |
| work | ಕೆಲಸ | ಹೊಡೆಯುವುದು |
| admit | ದಾಖಲು | ಪ್ರವೇಶ, ಪಾದಾರ್ಪಣೆ |
| ಮುಹೂರ್ತ | ಸಮಯ/ಘಳಿಗೆ | ಸಾಯಿಸಲು ನಿರ್ಧರಿಸಿರುವುದಕ್ಕೆ |
| ರಿಪೇರಿ | ಸರಿಪಡಿಸು | ಹೊಡೆಯುವುದು |
| ಡೀಲ್ | ವ್ಯವಹಾರ ಕದುರಿಸುವುದು | ಕೊಲೆ ಮಾಡುವುದು, ಮಾಡಿರುವುದು |
| ರಾಂಗ್ | ತಪ್ಪು | ಕೋಪಗೊಂಡಿರುವುದು |
| ಮೀಟರ್ | ಅಳತೆ ಮಾಡುವ ಒಂದು ಬಗೆಯ ಯಂತ್ರ | ತಾಕತ್ತು, ಧೈರ್ಯ, ಗುಂಡಿಗೆ ಸಾಮರ್ಥ್ಯ |
| ಇಂಜಿನಿಯರ್ | ರಸ್ತೆ, ಮನೆ, ಇತ್ಯಾದಿ ಕೆಸಗಳನ್ನು ಮಾಡಿಸುವುದರಲ್ಲಿ ನಿಪುಣನಾದವ, ಯಂತ್ರಶಾಸ್ತ್ರಜ್ಞ, ವಾಸ್ತುವಿದ್ಯಾವಿಶಾರದ | ಕೊಲೆಗಳ ಯೋಜನೆಗಳನ್ನು ರೂಪಿಸುವವನು (ಫ್ಲಾನ್) |

| | | |
|---|---|---|
| ಇಸ್ತ್ರಿ | ಶಾಖವಾಗಿರುವ ಉಕ್ಕಿನ ಉಜ್ಜುಮಣೆ ಯಿಂದ ಬಟ್ಟೆಗಳನ್ನು ತೀಡಿ ಅಚ್ಚುಕಟ್ಟು ಗರಿಯಾಗಿರುವಂತೆ ಮಾಡುವುದು | ಬಡಿ, ಹೊಡೆ, ನಿಲ್ಲಿಸಿ ಪುನಃ ಹೊಡೆಯುವುದಕ್ಕೆ |
| ಪಾನಕ | ಸಿಹಿಯಾದ ಪಾನೀಯ | ಮಧ್ಯಪಾನ |
| ಛಾಪ್ಟರ್ | ಅಧ್ಯಾಯ | ಕೊನೆಗೊಳ್ಳು, ಸತ್ತನು, ಕೊಲೆಯಾದನು |

ಹೀಗೆ ರವಿ ಬೆಳಗೆರೆಯವರ ಭೂಗತ ವಲಯಕ್ಕೆ ಸಂಬಂಧಿಸಿದ ಬರಹಗಳಲ್ಲಿ ಈಗಾಗಲೇ ಬೇರೊಂದು ಕ್ಷೇತ್ರದಲ್ಲಿ ಅಥವಾ ವಲಯದಲ್ಲಿ ಬೇರೊಂದು, ಅರ್ಥದಲ್ಲಿ ಚಲಾವಣೆಗೊಳ್ಳುತ್ತಿದ್ದ ಪದ, ಭೂಗತ ವಲಯದಲ್ಲಿ ಮತ್ತೊಂದು ಅರ್ಥವನ್ನು ಪಡೆದುಕೊಂಡು ಚಲಾವಣೆಗೊಳ್ಳುತ್ತಿದೆ. ಅದು ಅವರ ಬರಹದ ವೈಶಿಷ್ಟವೆಂದೇ ಹೇಳಬಹುದು. ಕನ್ನಡ ಭಾಷೆಯ ಮಟ್ಟಿಗೆ ಇದು ಹೊಸತು ಮತ್ತು ಭಾಷಿಕವಾಗಿ ವಿಶೇಷವಾದದ್ದು.

**೪.೫.೯. ಎರವಲು ಪದಗಳು**

ಒಂದು ಭಾಷೆಗೆ ಅನ್ಯಭಾಷೆಯಿಂದ ಎರವಲಾಗಿ ಬಂದು ಬಳಕೆಯಾಗುವ ಪದಗಳ ಕುರಿತ ವ್ಯಾಸಂಗವು ಭಾಷಾಧ್ಯಯನದ ಬಹು ಪ್ರಮುಖವಾದ ಭಾಗವಾಗಿದೆ. ಇದು ಕೇವಲ ಭಾಷೆಯ ದೃಷ್ಟಿಯಿಂದ ಮಾತ್ರವಲ್ಲದೆ ಸಂಸ್ಕೃತಿಯ ದೃಷ್ಟಿಯಿಂದಲೂ ಪ್ರಧಾನವಾಗಿದೆ. ಹಲವು ವರ್ಷಗಳ ಅವಧಿಯಲ್ಲಿ ಕೆಲವು ಪ್ರಭಾವಗಳಿಂದ ತನ್ನಷ್ಟಕ್ಕೆ ನಡೆದು ಹೋಗುವ ಪದಗಳು ಇಂಥ ಬಳಕೆಯ ಅರ್ಥವ್ಯಾಪ್ತಿಯು ಅತ್ಯಂತ ಕುತೂಹಲಕರ ಪ್ರಕ್ರಿಯೆ. ಎರವಲು ಪದಗಳು ಕನ್ನಡ ಸ್ವಭಾವ, ಸ್ವರೂಪವನ್ನೂ ಹೇಗೆ ಪಡೆಯುತ್ತವೆ ಎಂಬುದನ್ನು ತಿಳಿದಾಗ ಅಚ್ಚರಿಯಾಗುತ್ತದೆ. ಸಾಮಾನ್ಯವಾಗಿ ಜನರು ತಮ್ಮ ಧ್ವನ್ಯಂಗಗಳಿಗೆ ಹೊಂದಿಕೊಳ್ಳುವಂತೆ ಹೊಸ ಶಬ್ದಗಳನ್ನು ಉಚ್ಚರಿಸಿ ಅವುಗಳಿಗೆ ಸ್ವರೂಪ, ಉಚ್ಚಾರಣೆ, ಅರ್ಥವನ್ನು ನಿರ್ಧರಿಸುತ್ತಾರೆ. ಅವು ಹಾಗೆ ನಿಂತು ಬಿಡುತ್ತವೆ. ಹೀಗೆ ಮಾಡುವವರು ವಿದ್ವಾಂಸರಾಗಲೀ ಭಾಷಾಧ್ಯಯನಕಾರರಾಗಲಿ ಅಲ್ಲ ಎಂಬುದು ಪ್ರಮುಖ ವಿಷಯ.

ಹೀಗೆ ಇತರ ಭಾಷೆಗಳಿಂದ ಬಂದು ರವಿ ಬೆಳಗೆರೆಯವರ ಬರಹವನ್ನು ಇಲ್ಲಿ ಮಾಡಲಾಗಿದೆ. ಅಲಂಕರಿಸಿರುವ ಕನ್ನಡದಲ್ಲಿನ ಎರವಲು ಪದಗಳನ್ನು ಗುರುತಿಸುವ ಪ್ರಯತ್ನ. 'ನಾವು ಆಡುವ ಭಾಷೆಗೆ ಬೇರೊಂದು ಭಾಷೆಯಿಂದ ಬಂದು ಸೇರಿಕೊಂಡು ನಮಗೆ ಪ್ರಯೋಜನಕರವಾಗಿರುವ ಪದವನ್ನು ಎರವಲು ಪದ ಎಂದು ಕರೆಯುತ್ತವೆ. ಇದನ್ನೇ ಅನ್ಯದೇಶೀ ಪದ ಎಂದೂ, ಅನ್ಯದೇಶ್ಯ ಎಂದೂ ಕರೆಯುತ್ತೇವೆ. Loan word ಎಂಬ ಇಂಗ್ಲೀಶ್‌ನ ಪಾರಿಭಾಷಿಕ ಶಬ್ದಕ್ಕೆ ಪ್ರತಿಯಾಗಿ ಕನ್ನಡದಲ್ಲಿ ಉಪಯೋಗಿಸುತ್ತಿರುವ ಶಬ್ದ ಎರವಲು ಪದ. ಈ ಪದ ಬೇರೆ ಭಾಷೆಯಿಂದ ನೇರವಾಗಿ ನಮ್ಮ ಭಾಷೆಗೆ ಬಂದು ಸೇರಿಕೊಂಡಿರಬಹುದು. ಅಥವಾ ಅಂಥ ಅನ್ಯದೇಶ್ಯದ ಅನುವಾದವಾಗಿರಬಹುದು ಅಥವಾ ಇತರ ಭಾಷೆಯವರು ಉಪಯೋಗಿಸುವ ಮಾನಸಿಕ ಚಿತ್ರವಾಗಿರಬಹುದು.'[೨೯] ಎರವಲು ಎಂಬುದು ಕನ್ನಡ ಶಬ್ದ. ತಮಿಳಿನಲ್ಲಿ 'ಇರವಲು' ಎಂಬ ಶಬ್ದವಿದೆ. ಇದಕ್ಕೆ ಸಾಲ, ಕಡ ಎಂದು ಅರ್ಥ. 'ಎರವು' ಎಂಬ ಶಬ್ದಕ್ಕೆ ಅಲ್' ಎಂಬ ಭಾವನಾಮ ಪ್ರತ್ಯಯವು ಸೇರಿ ಎರವಲು ಎಂದಾಗುತ್ತದೆ.

ಎರವಲು ಎಂಬ ಶಬ್ದವನ್ನು ಸಂಸ್ಕೃತ ಮತ್ತು ಪ್ರಾಕೃತ ಶಬ್ದಗಳಿಂದ ಕನ್ನಡಕ್ಕೆ ಬ... ಗಳನ್ನು ಹೆಸರಿಸುವಾಗ ಪರಿಗಣನೆಗೆ ತೆಗೆದುಕೊಳ್ಳುವುದಿಲ್ಲ. ಸಂಸ್ಕೃತದ ಒಂದು ಶಬ್ದವನ್ನು ತ... ಎಂದು ಕರೆದು ಅದರ ಕನ್ನಡದ ರೂಪವನ್ನು ತದ್ಭವ ಎಂದು ಕರೆಯುವ ಮೂಲಕ ಅದನ್ನು ... ವನ್ನಾಗಿ ಮಾಡಿಕೊಂಡು ಶತಮಾನಗಳಾಗಿವೆ. ಹಾಗೆಯೇ ಪ್ರಾಕೃತದಿಂದ ಬಂದ ಶಬ್ದಗಳು ... ಡದಲ್ಲಿ ಹೊಂದಿಕೊಂಡು ಬಿಟ್ಟಿವೆ. ಕನ್ನಡದ ಶಬ್ದ ಭಂಡಾರದಲ್ಲಿ ಇವುಗಳ ಭಾಗ ೫೦%ಕ್ಕಿ... ಚ್ಚಿಗಿದೆ. ಆದ ಕಾರಣ ಈ ಭಾಗದಲ್ಲಿ ರವಿಯವರ ಬರಹಗಳಲ್ಲಿ ಅನ್ಯಭಾಷಾ(ಸಂಸ್ಕೃತ ಮತ್ತು ... ತವನ್ನು ಹೊರತುಪಡಿಸಿ)ಗಳಿಂದ ಎರವಲು ಬಂದ ಪದಗಳನ್ನು ಮಾತ್ರ ಗಮನಿಸಲಾಗಿದೆ.

'ಒಬ್ಬ ತಾಯಿಗೆ ಮಗನಾಗಲಿಕ್ಕೆ ವಯಸ್ಸಿನ ಹರಕತ್ತು ಯಾಕೆ ಬೇಕು?'

'ಮನಸ್ಸು ಒಂದೊಂದು ಬಾರಿ ಛೇಂಜು ಕೇಳುತ್ತೆ; ಅಷ್ಟೇ!'

'ಗಾಸಿಪ್ಪು ನಮ್ಮನ್ನು ಎಚ್ಚರಿಸುತ್ತದೆ; ನಾವು ಎಚ್ಚೆತ್ತುಕೊಳ್ಳಬೇಕು!'

'ಅಲ್ಲಿಂದ ಶುರುವಾಗುತ್ತದೆ ಅವಳ ವಂಚನೆಯ ದಸ್ತಾವೇಜು.'

'ನಾನೇ ನಖರೆ ಮಾಡಿದೆ.'

'ಅವನು ಕೇವಲ chromozomes ಕೊಟ್ಟ ಪರಾಯಿ ಪುರುಷ.'

'ಸಬೂಬು ಹೇಳುವುದು ಸರಿಯಲ್ಲ.'

'...ಮಧ್ಯರಾತ್ರಿ ಎದ್ದು ಕುಳಿತು ಜಬರ್ದಸ್ತಾಗಿ ರಷಿಯನ್ ಕ್ರಾಂತಿಯ ಬಗ್ಗೆ ... ಪ್ರಾರಂಭಿಸಿ ಬಿಡುತ್ತಿದ್ದೆ.'

'...ಮಾಸ ಪತ್ರಿಕೆಯನ್ನು ವಿಜಯ ಸಂಕೇಶ್ವರ ಮುಚ್ಚಿಬಿಡುವಂತೆ ಫರ್ಮಾನು ಹ... ದ್ದಾರೆ.'

'ಮಧ್ಯದ ಹಂತಗಳಲ್ಲಿ ನಾವು ಮಾಡಿದ ಪರಾರಿ ಯತ್ನಗಳು ಕೂಡ ಈಗ ... ತೋರಿಸುವಂತಹ ಮಾರ್ಗಸೂಚಿಗಳಾಗಿ ಬಿಟ್ಟಿರುತ್ತವೆ.'

'ಓದುಗನ ಹಸಿವು ಅಪಾರವಷ್ಟೇ ಅಲ್ಲ; ಅವನ ರುಚಿಯ ತರಹೇವಾರಿ.'

'ಅವಳ ಒಬ್ಬಂಟಿತನದ ಹುತ್ತದ ಆಖೈರು ಕಿಟಿಕಿ ಕೂಡ ಮುಚ್ಚಿ ಹೋಗಿದೆ.'

'ಮೈ ತುಂಬ ಫಜೀತಿಯನ್ನು ಅನುಭವಿಸಿದ್ದೇನೆ.'

'ರಾಂಗ್ ಸೈಡಿಗೆ ನುಗ್ಗಿದವರು ನಾವೇ.'

'ಪ್ರಪಂಚ ನಿನ್ನೆಗಿಂತ ಬೆಟರ್ರು ಅನ್ನಿಸತೊಡಗುತ್ತದೆ.'

'ಯಾವುದು ಸರಿ ಅಂತ ತೀರ್ಮಾನಿಸುವುದು ಅವನ ಇರಾದೆಯಲ್ಲ.'

ಹೀಗೆ ರವಿಯವರು ಹರಕತ್ತು, ಛೇಂಜು, ಗಾಸಿಪ್ಪು, ದಸ್ತಾವೇಜು, ನಖ... ರಾಯಿ, ಸಬೂಬು, ಜಬರ್ದಸ್ತಾಗಿ, ಫರ್ಮಾನು, ಪರಾರಿ, ತರಹೇವಾರಿ, ಆಖೈರು, ಸೈ... ಬೆಟರ್ರು, ಇರಾದೆ ಇತ್ಯಾದಿಯಾಗಿ ಎರವಲು ಪದಗಳನ್ನು ಬಳಸುತ್ತಾರೆ. ಇಂಗ್ಲೀಶ್, ತೆಲು... ಹಿಂದಿ, ಉರ್ದುಗಳಿಂದಲೂ ಪದಗಳನ್ನು ಎರವಲು ತಂದು ಬಳಕೆ ಮಾಡುತ್ತಾರೆ. ಅವು... ಳಕೆಯ ಸ್ಥಾನಗಳನ್ನು ನೋಡಿದರೆ ತಿಳಿಯುತ್ತದೆ. ಅದರಲ್ಲಿಯೂ ತಮ್ಮ ವೈಶಿಷ್ಟ್ಯವನ್ನು ಗುರುತಿಸಿ... ಸುವುದು ಕಂಡುಬರುತ್ತದೆ.

ಈ ಎರವಲು ಕ್ಷೇತ್ರದಲ್ಲಿ ನಡೆಯುವ ಅಧ್ಯಯನದಿಂದ ಎರವಲು ಪಡೆಯುವ ಮತ್ತು ಎರವಲು ನೀಡುವ ಎರಡು ಭಾಷೆಗಳ ಧ್ವನಿ ವ್ಯವಸ್ಥೆಗಳ ಪರಿಚಯವಾಗುತ್ತದೆ. ಅಲ್ಲದೆ ಒಂದು ಗೊತ್ತಾದ ಕಾಲಾವಧಿಯಲ್ಲಿ ಆಗಲಿ, ಅಥವಾ ಚಾರಿತ್ರಿಕ ಬೆಳವಣಿಗೆಯ ಮಜಲುಗಳಲ್ಲಿ ಆಗಲಿ, ಆ ಭಾಷೆಯಲ್ಲಿ ಆಗುವ ಧ್ವನಿ ವ್ಯವಸ್ಥೆಯ ವ್ಯತ್ಯಾಸಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಒಂದು ಭಾಷೆಯ ಚರಿತ್ರೆಯನ್ನು ಅಭ್ಯಾಸ ಮಾಡುವಾಗ ಆ ಭಾಷೆಯ ಧ್ವನಿವ್ಯವಸ್ಥೆ, ಶಬ್ದ ಸ್ವರೂಪ, ಅರ್ಥ ನಿರೂಪಣೆ, ವಾಕ್ಯಗಳ ನಿರ್ಮಾಣ ಮುಂತಾದವುಗಳನ್ನು ಮಾತ್ರ ಗಮನಿಸುವುದಲ್ಲ. ಕಾಲಕ್ರಮದಲ್ಲಿ ಆ ಭಾಷೆಯ ಮೇಲೆ ಇತರ ಭಾಷೆಗಳ ಪ್ರಭಾವವು ಎಷ್ಟಾಗಿದೆ ಎಂಬುದನ್ನೂ ಗುರುತಿಸಬೇಕಾಗುತ್ತದೆ. ಒಂದು ಭಾಷೆಯ ಸಂಪತ್ತು ಆ ಭಾಷೆಯ ಸಾಂಸ್ಕೃತಿಕ, ಸಾಮಾಜಿಕ, ಸಾಧನೆಗಳನ್ನು ಗುರುತಿಸುವ ಮೂಲ ಸಾಮಗ್ರಿಯಾಗಿದೆ. ಆ ಭಾಷೆಯ ಅಂತರಂಗವಾದ ಪದ ಸಂಪತ್ತು ಆ ಭಾಷಿಕರ ಸಾಂಸ್ಕೃತಿಕ ಪರಂಪರೆಯನ್ನು ಎತ್ತಿ ಹಿಡಿಯುವ ದೃಷ್ಟಾಂತ. ಕೆಲವು ಪದಗಳಂತೂ ಆ ಭಾಷೆಗೆ ಸಂಬಂಧಿಸಿದ ಅನೇಕ ಸಮಸ್ಯೆಗಳನ್ನು ಪರಿಹರಿಸುವ ಸಾಧನವಾಗಿವೆ. ಆದ್ದರಿಂದಲೇ ಚರಿತ್ರೆಕಾರರು, ಭಾಷಾಧ್ಯಯನಕಾರರು ಎರವಲು ಪದಗಳ ಪ್ರಾಮುಖ್ಯವನ್ನು ಒತ್ತಿ ಹೇಳುತ್ತಾರೆ.

ಜಗತ್ತಿನಲ್ಲಿರುವ ಯಾವ ಭಾಷೆಯ ಪದ ಸಂಪತ್ತನ್ನು ಚಾರಿತ್ರಿಕವಾಗಿ ಪರಿಶೀಲಿಸಿ, ವಿಶ್ಲೇಷಿಸಿದರೆ ಆ ಎಲ್ಲ ಭಾಷೆಗಳಲ್ಲಿಯೂ ಅನೇಕ ಎರವಲು ಪದಗಳು ಕಂಡುಬರುತ್ತವೆ. ಇದಕ್ಕೆ ಯಾವೊಂದು ಭಾಷೆಯೂ ಅಪವಾದವಲ್ಲ. ಕನ್ನಡದ ವಿಷಯವನ್ನು ತೆಗೆದುಕೊಂಡರೆ ಉಪಯೋಗದಲ್ಲಿಲ್ಲದ ಎಷ್ಟೋ ವಸ್ತುಗಳ ಹೆಸರುಗಳನ್ನು ನಾವು ಎರವಲು ಪಡೆಯಲೇಬೇಕಿದೆ ಎಂಬುದು ಅರಿವಾಗುತ್ತದೆ. ಇಂದು ಜಗತ್ತಿನಲ್ಲಿ ಇಂಗ್ಲೀಶ್ ಭಾಷೆಗೆ ಇರುವ ಪ್ರಾಮುಖ್ಯತೆ ಬೇರ್‍ಯಾವ ಭಾಷೆಗೂ ಇಲ್ಲ. ವಿಶ್ವದ ಎಲ್ಲ ದೇಶಗಳಲ್ಲಿಯೂ ಅದರ ಪ್ರಭಾವ ಕಂಡುಬರುತ್ತಿದೆ. ಒಟ್ಟಿನಲ್ಲಿ ಕನ್ನಡ ಭಾಷೆಗೆ ಎರವಲು ನೀಡಿರುವ ಭಾಷೆಗಳು ಇಂತಿವೆ. ಪಾರಸಿ, ಅರಬ್ಬಿ, ಉರ್ದು, ಹಿಂದಿ, ಬೆಂಗಾಳಿ, ಫ್ರೆಂಚ್, ಮರಾಠಿ, ಪಂಜಾಬಿ, ಗುಜರಾತಿ, ಇಂಗ್ಲೀಶ್, ತೆಲುಗು, ತಮಿಳು, ಪೋರ್ಚುಗೀಸ್ ಇತ್ಯಾದಿ. ಈ ಭಾಷೆಗಳಿಗೆ ಇತರ ಎಷ್ಟೋ ಭಾಷೆಗಳಿಂದ ಪದಗಳು ಬಂದು ಸೇರಿವೆ.

ಒಂದು ಭಾಷೆಗೆ ಎರವಲುಗಳನ್ನು ಪಡೆಯಲು ಭಾಷೆಗೆ ಸಂಬಂಧಪಟ್ಟ ಕಾರಣಗಳೂ ಇರಬಹುದು; ಭಾಷೇತರ ಕಾರಣಗಳೂ ಇರಬಹುದು. ಭಾಷೆಯ ದೃಷ್ಟಿಯಿಂದ ನೋಡಿದರೆ ಕೆಲವು ಪದಗಳು ಯಾವುದೋ ಹೊಸ ಭಾವನೆಯನ್ನೋ, ಅರ್ಥವನ್ನೋ, ಅನುಭವವನ್ನೋ, ವಸ್ತುವನ್ನೋ ಕುರಿತದ್ದಾಗಿರಬಹುದು. ಹೀಗೆ ಕಂಡಾಗ ಹೊಸ ಪದಗಳನ್ನು ಸೃಷ್ಟಿ ಮಾಡುವುದಕ್ಕಿಂತ ಬೇರೆ ಭಾಷೆಯ ಪದಗಳನ್ನೇ ಉಪಯೋಗಿಸುವುದು(ದಿನನಿತ್ಯದ ಮಾಧ್ಯಮ ಒತ್ತಡದ ಅನಿವಾರ್ಯ) ಸುಲಭವೆಂದು ತೋರುತ್ತದೆ. ಇಂಥ ಪದಗಳು ಸತ್ವವುಳ್ಳ, ಪ್ರಯೋಜನಕಾರಿಯಾದ ಜನಪ್ರಿಯ ಪದಗಳಾಗಿ ಚಲಾವಣೆಗಳಾಗುತ್ತವೆ. ಅಲ್ಲದೇ ಭಾಷೇತರ ಕಾರಣಗಳಾಗಿ ಕೆಲವು ಪದಗಳು ಬಂದು ಸೇರುತ್ತವೆ. ಇಂಥ ಸಮಯದಲ್ಲಿ ಎರವಲು ಪಡೆಯುವ ಭಾಷೆಯ ಪ್ರಧಾನತೆಗಿಂತ ಎರವಲು ನೀಡುವ ಭಾಷೆಯ ರಾಜಕೀಯ ಮತ್ತು ಸಾಮಾಜಿಕ ಅಭಿರುಚಿ, ಪ್ರಾಧಾನ್ಯ, ಹೊಸತನ ಎಂಬ ಭಾವನೆ ಇರಬಹುದು. ಜನರಲ್ಲಿರುವ ಈ ರೀತಿಯ ಮನೋಧರ್ಮದಿಂದ ಕನ್ನಡದಲ್ಲಿರುವ ಪದಗಳನ್ನು ಎರವಲು ಪದಗಳಿಗಾಗಿ ಬಲಿ ಕೊಡುವ ಪರಿಸ್ಥಿತಿ ಉಂಟಾಗುತ್ತದೆ. ಇದರಿಂದ ಹಳೆಯ ಪದಗಳು ನಿರ್ನಾಮವಾಗಿ ಬಿಡುತ್ತವೆ.

ಕನ್ನಡಕ್ಕೆ ಬರುವ ಎರವಲು ಪದಗಳು ಸಾಮಾನ್ಯವಾಗಿ ನಾಮಪದಗಳು, ಗುಣವಾಚಕಗಳು ಮತ್ತು ಕ್ರಿಯಾಪದ ಪುಂಜಗಳು. ಸರ್ವನಾಮಗಳಾಗಲೀ, ಸಂಖ್ಯಾವಾಚಕಗಳಾಗಲೀ ಬರುವುದಿಲ್ಲ. ಎರವಲು ಪದಗಳನ್ನು ಕುರಿತ ವೈಜ್ಞಾನಿಕವಾದ ವ್ಯಾಸಂಗದಿಂದ ಭಾಷಾ ಅಧ್ಯಯನಕ್ಕೆ ಅನುಕೂಲವುಂಟು. ಎರಡು ಭಾಷೆಗಳ ಧ್ವನಿ ವ್ಯವಸ್ಥೆಯ ಪರಿಚಯದ ಜೊತೆಗೆ ಮತ್ತೊಂದು ನಿರ್ಧಾರವನ್ನು ಕೈಗೊಳ್ಳಬಹುದು. ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಆಗುವ ಧ್ವನಿ ವ್ಯವಸ್ಥೆಯ ವ್ಯತ್ಯಾಸವನ್ನು ಚಾರಿತ್ರಿಕ ಹಿನ್ನೆಲೆಯಿಂದ ವರ್ಗೀಕರಿಸಬಹುದು. ಭಾಷೆಯ ಚರಿತ್ರೆಯನ್ನು ಗುರುತಿಸುವುದು ಎಂದರೆ ಧ್ವನಿ ವ್ಯವಸ್ಥೆ, ಶಬ್ದ ಸ್ವರೂಪ, ಅರ್ಥ ನಿರೂಪಣೆ, ವಾಕ್ಯಗಳಲ್ಲಿ ಪದಗಳ ಅನುಕ್ರಮ, ಕಾಲಕಾಲಕ್ಕೆ ಆ ಭಾಷೆಯ ಮೇಲೆ ಆದ ಇತರ ಭಾಷೆಗಳ ಪ್ರಭಾವ ಇವೆಲ್ಲವನ್ನೂ ಕಂಡುಕೊಳ್ಳುವುದು ಎಂದು ಅರ್ಥ. ಅಲ್ಲದೇ ಎರವಲು ಪದಗಳನ್ನು ಹೀಗೆ ಅಭ್ಯಾಸ ಮಾಡುವಾಗ ಒಂದು ಭಾಷೆಯ ಎಷ್ಟು ಅಂಶಗಳು ಇತರ ಭಾಷೆಗಳಿಗೆ ಅನ್ಯೋನ್ಯವಾಗಿ ಹೊಂದಿಕೊಳ್ಳುತ್ತವೆ. ಮತ್ತಷ್ಟು ಅಂಶಗಳು ಸ್ವತಂತ್ರವಾಗಿಯೇ ಉಳಿದುಬಿಡುತ್ತವೆ ಎಂಬುದರ ಮೇಲೆ ನಿರ್ಧರಿಸಬಹುದು. ಈ ಎಲ್ಲಾ ಕಾರಣಗಳಿಂದ ರವಿ ಬೆಳಗೆರೆಯವರ ಬರಹಗಳಲ್ಲಿ ಇತರ ಭಾಷೆಯಿಂದ ಎರವಲಾಗಿ ಬಂದಿರುವ ಪದಗಳನ್ನು ಚಾರಿತ್ರಿಕ. ಅಧ್ಯಯನ ಮಾಡುವುದರಿಂದ ಆಯಾ ಭಾಷೆಯ ಸಾಂಸ್ಕೃತಿಕ ಚರಿತ್ರೆಯನ್ನು ಪುನರ್ ಸೃಷ್ಟಿಸಲು ಅವಕಾಶವಿದೆ.

ಒಟ್ಟಾರೆಯಾಗಿ ಈ ಮೇಲಿನ ಎಲ್ಲ ಅಂಶಗಳಿಂದಲ್ಲದೇ ಇನ್ನೂ ಅನೇಕ ಕಾರಣಗಳಿಂದಾಗಿ ರವಿ ಬೆಳಗೆರೆಯವರ ಬರಹಗಳು ಭಾಷಿಕವಾಗಿ, ವಿಶೇಷವಾದ ಮಾಹಿತಿಯನ್ನು ನೀಡುವಂಥ ಬರಹಗಳು ಎಂದು ಹೇಳಬಹುದು. ಅವರು ಬಳಸುವ ಪದಗಳ ಅರ್ಥ, ಧ್ವನಿ, ಭಾವಗಳ ಬೆನ್ನತ್ತಿ ಹೋದರೆ ಮತ್ತಷ್ಟು ಕುತೂಹಲಕರ ಅಂಶಗಳು ಕಂಡುಕೊಳ್ಳಲು ಅವಕಾಶವಿದೆ. ಅದು ಅವರೇ ಕಂಡುಕೊಂಡ ಶೈಲಿ. ಆದ್ದರಿಂದ ಅದಕ್ಕೊಂದು ಸೊಗಸು ಇದೆ. ಅದು ಅವರೇ ರೂಢಿಸಿಕೊಂಡ ನಿರೂಪಣಾ ಸೊಗಸು. ಮಾದಕತೆ ಇದೆ, ಅದು ಅವರೇ ತುಂಬಿದ ಭಾವ, ಅದಕ್ಕೊಂದು ಅರ್ಥವಿದೆ. ಈ ರೀತಿಯಲ್ಲಿ ಅವರೇ ಹುಟ್ಟುಹಾಕಿದ ಎಷ್ಟೋ ಉದಾಹರಣೆಗಳಿವೆ. ಒಟ್ಟಿನಲ್ಲಿ ನೂತನ ಪ್ರಯೋಗ, ಸೃಜನಶೀಲತೆ ಮತ್ತು ಇತರೆ ಹಲವಾರು ಕಾರಣಗಳಿಂದ ಭಾಷೆ ವಿಶೇಷತೆಯಿಂದ ಕೂಡಿದೆ. ಅಲ್ಲದೇ ಭಾಷಿಕ ಅಧ್ಯಯನದ ದೃಷ್ಟಿಯಿಂದ ರವಿಯವರ ಬರವಣಿಗೆ, ಬರಹಗಳು ಭಾಷಾ ಕ್ಷೇತ್ರಕ್ಕೆ ಮಾಹಿತಿಯನ್ನು ನೀಡುವ ವಲಯಳು ಎನ್ನಬಹುದು.

## ಅಡಿ ಟಿಪ್ಪಣಿ

೧. ಕಥೆ ಕಥನ, ಪ್ರಸಾದಸ್ವಾಮಿ ಎಸ್, ಪು. ೨೪೦
೨. ಅದೇ, ಪುಸ್ತಕ. ಪು. ೨೪೪
೩. ಪಾ.ವೆಂ. ಹೇಳಿದ ಕಥೆ, ರವಿ ಬೆಳಗೆರೆ ಪು. ೨೧
೪. ಅದೇ ಪುಸ್ತಕ, ಪು. ೧೪೫
೫. ಅದೇ ಪುಸ್ತಕ, ಪು. ೧೪೬
೬. ಅದೇ ಪುಸ್ತಕ, ಪು. ೬೩
೭. ದಾರಿ, ರವಿ ಬೆಳಗೆರೆ, ಪು. ೬೨
೮. ಒಟ್ಟಾರೆ ಕಥೆಗಳು, ರವಿ ಬೆಳಗೆರೆ ಪು. ೭೧
೯. ಅದೇ ಪುಸ್ತಕ, ಪು. ೮೧
೧೦. ಪಾ.ವೆಂ. ಹೇಳಿದ ಕಥೆ, ರವಿ ಬೆಳಗೆರೆ ಪು. ೧೫೨
೧೧. ಅದೇ, ಪುಸ್ತಕ ಪು. ೭೭
೧೨. ಮಾಂಡೋವಿ, ರವಿ ಬೆಳಗೆರೆ, ಪು. ೫೪
೧೩. ದಿ ಗಾಡ್ ಫಾದರ್, ರವಿ ಬೆಳಗೆರೆ, ಪು. ೫೪
೧೪. ದಂಗೆಯ ದಿನಗಳು, ರವಿ ಬೆಳಗೆರೆ, ಪು. ೭೫
೧೫. ರೇಷ್ಮೆ ರುಮಾಲು, ರವಿ ಬೆಳಗೆರೆ, ಪು. ೧೨೬
೧೬. ಠಕ್ಕನೊಬ್ಬನ ಆತ್ಮಚರಿತ್ರೆ, ಶಂಕರನಾರಾಯಣರಾವ್ ಎಸ್.ಪಿ, ಪು. ೧೬
೧೭. ಫಸ್ಟ್ ಹಾಫ್, ಸಂ. ಶರತ್ ಕಲ್ಕೋಡ್, ಪು. ೩೪
೧೮. ಅದೇ ಪುಸ್ತಕ, ಪು. ೫೩
೧೯. ಇಂದಿನ ಕನ್ನಡ: ರಚನೆ ಮತ್ತು ಬಳಕೆ, ಶ್ರೀಧರ್.ಎಸ್.ಎನ್, ಪು. ೦೩
೨೦. ಅರ್ತಿ, ರವಿ ಬೆಳಗೆರೆ, ಪು. ೧೬
೨೧. ಖಾಸ್‌ಬಾತ್ ೯೭, ರವಿ ಬೆಳಗೆರೆ, ಪು ೬೯
೨೨. ಅಮ್ಮ ಸಿಕ್ಕಿದ್ಲು, ರವಿ ಬೆಳಗೆರೆ, ಪು. ೨೪
೨೩. ಏನಾಯ್ತು ಮಗಳೇ?, ರವಿ ಬೆಳಗೆರೆ, ಪು. ೪೦
೨೪. ಟೈಮ್ ಪಾಸ್, ರವಿ ಬೆಳಗೆರೆ, ಪು. ೧೧೯
೨೫. ಅರ್ತಿ, ರವಿ ಬೆಳಗೆರೆ, ಪು. ೪೬
೨೬. ಬಾಟಮ್ ಐಟಮ್, ರವಿ ಬೆಳಗೆರೆ, ಪು. ೧೬೦
೨೭. ಅದೇ ಪುಸ್ತಕ, ಪು. ೧೭೨
೨೮. ಪಾಪಿಗಳ ಲೋಕದಲ್ಲಿ, ರವಿ ಬೆಳಗೆರೆ, ಪು. ೮೭
೨೯. ಲವ್‌ಲವಿಕೆ ಭಾಗ-೧, ರವಿ ಬೆಳಗೆರೆ, ಪು. ೭೫
೩೦. ಪೂರ್ವೋಕ್ತ, ಶ್ರೀಧರ್.ಎಸ್.ಎನ್, ಪು. ೦೪
೩೧. ಅಮ್ಮ ಸಿಕ್ಕಿದ್ಲು, ರವಿ ಬೆಳಗೆರೆ, ಪು. ೬೮
೩೨. ಹಿಮಾಗ್ನಿ, ರವಿ ಬೆಳಗೆರೆ, ಪು. ೨೬೦
೩೩. ಅದೇ, ಪುಸ್ತಕ ಪು. ೩೦೭
೩೪. ಖಾಸ್‌ಬಾತ್ ೨೦೦೪, ರವಿ ಬೆಳಗೆರೆ, ಪು. ೨೦೧
೩೫. ಬಾಟಮ್ ಐಟಮ್ ಭಾಗ-೪, ರವಿ ಬೆಳಗೆರೆ, ಪು. ೧೨೦

೩೬. ಲವ್‌ಲವಿಕೆ, ರವಿ ಬೆಳಗೆರೆ, ಪು. ೨೭

೩೭. ಹಂತಕೀ ಐ ಲವ್ ಯೂ, ರವಿ ಬೆಳಗೆರೆ, ಪು. ೭೭

೩೮. ಹಿಮಾಗ್ನಿ, ರವಿ ಬೆಳಗೆರೆ, ಪು. ೨೧೨

೩೯. ಮಾಟಗಾತಿ, ರವಿ ಬೆಳಗೆರೆ, ಪು. ೨೪೭

೪೦. ಅದೇ ಪುಸ್ತಕ, ಪು. ೨೨೬

೪೧. ಲವ್‌ಲವಿಕೆ, ರವಿ ಬೆಳಗೆರೆ, ಪು. ೧೬೧

೪೨. ಅದೇ ಪುಸ್ತಕ, ಪು. ೭೧

೪೩. ಖಾಸ್‌ಬಾತ್ ೨೦೦೪, ರವಿ ಬೆಳಗೆರೆ, ಪು. ೧೯

೪೪. ದಿ ಗಾಡ್ ಫಾದರ್, ರವಿ ಬೆಳಗೆರೆ, ಪು. ೧೬೫

೪೫. ಇದು ಜೀವ ಇದುವೇ ಜೀವನ, ರವಿ ಬೆಳಗೆರೆ, ಪು. ೧೧೨

೪೬. ದಿ ಗಾಡ್ ಫಾದರ್, ರವಿ ಬೆಳಗೆರೆ, ಪು. ೧೧೩

೪೭. ಇದು ಜೀವ ಇದುವೇ ಜೀವನ, ರವಿ ಬೆಳಗೆರೆ, ಪು. ೧೧೪

೪೮. ಅದೇ ಪುಸ್ತಕ, ಪು. ೧೧೮

೪೯. ಬಾಟಮ್ ಐಟಮ್ ಭಾಗ-೬, ರವಿ ಬೆಳಗೆರೆ, ಪು. ೧೩೮

೫೦. ಅದೇ ಪುಸ್ತಕ, ಪು. ೧೯

೫೧. ಲವ್‌ಲವಿಕೆ, ರವಿ ಬೆಳಗೆರೆ, ಪು. ೧೫೪

೫೨. ಅದೇ ಪುಸ್ತಕ, ಪು. ೩೯

೫೩. ಖಾಸ್‌ಬಾತ್ ೯೭, ರವಿ ಬೆಳಗೆರೆ, ಪು. ೧೩೧

೫೪. ಅದೇ ಪುಸ್ತಕ, ಪು. ೭೨

೫೫. ಅದೇ ಪುಸ್ತಕ, ಪು. ೧೫೦

೫೬. ಅದೇ ಪುಸ್ತಕ, ಪು. ೨೯

೫೭. ಬಾಟಮ್ ಐಟಮ್ ಭಾಗ-೬, ರವಿ ಬೆಳಗೆರೆ, ಪು. ೧೪೭

೫೮. ಅದೇ ಪುಸ್ತಕ, ಪು. ೫೪

೫೯. ಖಾಸ್‌ಬಾತ್ ೨೦೦೦, ರವಿ ಬೆಳಗೆರೆ, ಪು. ೧೯೮

೬೦. ಅದೇ ಪುಸ್ತಕ, ಪು. ೧೨೨

೬೧. ಅರ್ತಿ, ರವಿ ಬೆಳಗೆರೆ, ಪು. ೦೮

೬೨. ಅದೇ ಪುಸ್ತಕ, ಪು. ೭೦

೬೩. ಟೈಮ್ ಪಾಸ್, ರವಿ ಬೆಳಗೆರೆ, ಪು. ೨೦

೬೪. ಅಮ್ಮ ಸಿಕ್ಕಿದ್ಲು, ರವಿ ಬೆಳಗೆರೆ, ಪು. ೦೩

೬೫. ಏನಾಯ್ತು ಮಗಳೇ?, ರವಿ ಬೆಳಗೆರೆ, ಪು. ೨೫

೬೬. ಕವಿರಾಜಮಾರ್ಗವಲ್ಲ ಇದು ಕಾಮರಾಜಮಾರ್ಗ, ರವಿ ಬೆಳಗೆರೆ, ಪು. xxi

೬೭. ಖಾಸ್‌ಬಾತ್೯೬, ರವಿ ಬೆಳಗೆರೆ, ಪು. ೧೪೯

೬೮. ಕೃಷಿ ಪದಕೋಶ, ಸಂ. ನಾರಾಯಣ ಕೆ.ವಿ. ಮತ್ತು ಸಂಗಡಿಗರು, ಪು. ೦೭

೬೯. ಎರವಲು ಪದಕೋಶ, ವೆಂಕಟಸುಬ್ಬಯ್ಯ, ಜಿ. ಪು. ೦೬

ಅಧ್ಯಾಯ ಐದು

# ಕನ್ನಡ ಭಾಷೆಯ ಮೇಲೆ ರವಿ ಬೆಳಗೆರೆಯವರ ಪ್ರಭಾವ

ಮಾಧ್ಯಮ ನಿಜಕ್ಕೂ ನಿತ್ಯನವೀನ ಎನಿಸಿದೆ. ಎಷ್ಟೇ ಸಲ ಓದಿದರೂ, ನೋಡಿದರೂ, ಕೇಳಿದರೂ ಅದರ ಸವಿ ಹೆಚ್ಚುವುದೇ ಹೊರತು ಕಡಿಮೆ ಆಗದು. ಇದಕ್ಕೆ ಕಾರಣ ಮಾಧ್ಯಮಗಳಲ್ಲಿ ಬರುವ ವಿಷಯಗಳು, ಘಟನೆಗಳು, ದೃಶ್ಯಗಳು ಜನಸಾಮಾನ್ಯರ ಬದುಕಿಗೆ ಅತೀ ಹತ್ತಿರ ಇರುವಂತಹವು. ಮಾನವನ ಸಂವೇದನೆಯ ಅಭಿವ್ಯಕ್ತಿಗಳನ್ನು, ಸಮಾಜದ ಕಂದಾಚಾರ, ಭ್ರಷ್ಟಾಚಾರ, ಮೌಢ್ಯಗಳನ್ನು ಹೋಗಲಾಡಿಸಿ ಅವರಲ್ಲಿ ಜಾಗೃತಿಕ ಪ್ರಜ್ಞೆಯನ್ನು ಮೂಡಿಸುವುದರ ಮೂಲಕ ಸಮಾಜದಲ್ಲಿ ಮನುಷ್ಯನ ಬದುಕಿನ ಮೌಲ್ಯಗಳನ್ನು ಬೆಳೆಸುವಲ್ಲಿ ಪ್ರೇರಣೆಯಾಗಿವೆ.

ಕಳೆದ ಐವತ್ತು ವರ್ಷಗಳಲ್ಲಿ ಮಾಧ್ಯಮ ವಲಯದಲ್ಲಿ ಸ್ಫೋಟವೊಂದು ಸಂಭವಿಸಿದೆ ಎಂಬ ಮಾತು ಮೇಲಿಂದ ಮೇಲೆ ಕೇಳುತ್ತೇವೆ. ಈ ಮೊದಲು ಇದ್ದ ಪತ್ರಿಕೆಯ ಮಾಧ್ಯಮದ ಜೊತೆಗೆ ರೇಡಿಯೋ, ದೂರದರ್ಶನಗಳು ಬಂದು ಸೇರಿವೆ. ಇವು ಸಾಲದೆಂಬಂತೆ ಇಂಟರ್‌ನೆಟ್ ಕ್ರಾಂತಿ ನಡೆಯುತ್ತಿದೆ. ಈ ಎಲ್ಲಾ ಮಾಧ್ಯಮಗಳು ಒಂದಲ್ಲ ಒಂದು ರೀತಿಯಲ್ಲಿ ಭಾಷೆಯನ್ನು ಬಳಸುತ್ತವೆ. ಅಲ್ಲಿ ಭಾಷೆಯ ಬಳಕೆಯ ಎರಡು ರೂಪಗಳಾದ ಮಾತು ಮತ್ತು ಬರಹಗಳನ್ನು ಬೇರೆ ಬೇರೆ ರೀತಿಯಲ್ಲಿ ಮಾಧ್ಯಮಗಳು ಬಳಸಿಕೊಳ್ಳುತ್ತವೆ. ನಂತರದ ದಿನಮಾನಗಳಲ್ಲಿನ ಮತ್ತೊಂದು ಬದಲಾವಣೆ ಎಂದರೆ ಮಾಧ್ಯಮಗಳನ್ನು ಕುರಿತ ಚರ್ಚೆ, ವರದಿ, ಅಧ್ಯಯನಗಳು ನಡೆಯುತ್ತಿರುವುದು.

ಪ್ರತಿಯೊಂದು ಮಾಧ್ಯಮವೂ ಭಾಷೆಯನ್ನು ಒಂದೇ ರೀತಿಯಲ್ಲಿ ಬಳಸಿಕೊಳ್ಳುವುದಿಲ್ಲ. ಹಲವು ನೆಲೆಗಳಲ್ಲಿ ಈ ಬಳಕೆ ಕಂಡುಬರುತ್ತದೆ. ಎಷ್ಟೋ ವೇಳೆಗಳಲ್ಲಿ ಅವುಗಳಿಗೆ ಭಾಷೆಯ ಹೊಸ ಜವಾಬ್ದಾರಿಯನ್ನು ಒದಗಿಸಿದ ಪ್ರಸಂಗಗಳೂ ಇವೆ. ಪತ್ರಿಕೆ ವಿಷಯಕ್ಕೆ ಸಂಬಂಧಿಸಿದಂತೆ ಈ ಪ್ರಯತ್ನವನ್ನು ಮಾಡಿದ ಮೊದಲಿಗರು ಪಿ.ಲಂಕೇಶ್. ದೂರದರ್ಶನದಲ್ಲಿ ಕ್ರೈಮ್ ವರದಿಗಳ ನೂತನ ಪ್ರಯೋಗವನ್ನು ಆರಂಭಿಸಿದವರು ಬಾಲಕೃಷ್ಣ ಕಾಕತ್ಕರ್ ಅವರು ಈ ಎರಡು ವಿಧಗಳಲ್ಲಿ ರವಿ ಬೆಳಗೆರೆಯವರು ಭಾಷೆಯನ್ನು ಬಂಧ ಮುಕ್ತಗೊಳಿಸಿ ವಿಸ್ತರಿಸಿದವರು ಮತ್ತು ಜನಪ್ರಿಯಗೊಳಿಸಿದವರು. ಈ ಎರಡು ವಿಧಗಳ ಮೂಲಕ ರವಿ ಬೆಳಗೆರೆಯವರಿಂದ ಕನ್ನಡ

ಭಾಷೆಗೆ ಯಾವ ರೀತಿಯ ಪ್ರಯೋಗಗಳು ಮತ್ತು ಪ್ರಭಾವಗಳು ಆಗಿವೆ ಎಂಬುದನ್ನು ಗಮನಿಸುವ ಪ್ರಯತ್ನವಿದು. ಅದನ್ನು ದೂರದರ್ಶನ ಮತ್ತು ಪತ್ರಿಕೆಗಳು ಎಂಬ ಎರಡು ಪ್ರಕಾರಗಳಲ್ಲಿ ನೋಡಲು ಪ್ರಯತ್ನಿಸಿಲಾಗಿದೆ.

**೧. ದೂರದರ್ಶನ ವಾಹಿನಿಗಳು**

ದೂರದರ್ಶನ ವಾಹಿನಿಗಳಲ್ಲಿ ಆರಂಭಿಸಿದ ಕ್ರೈಮ್ ವರದಿಗಳಲ್ಲಿ ಅತ್ಯಂತ ಜನಪ್ರಿಯ ಮತ್ತು ಯಶಸ್ವಿಯಾದವರು ರವಿ ಬೆಳಗೆರೆಯವರು. ಆದರೆ ಈ ರೀತಿಯ ಪ್ರಯೋಗಗಳನ್ನು ಮೊದಲು ಮಾಡಿದವರು. ಬಾಲಕೃಷ್ಣ ಕಾಕತ್ಕರವರು. ಮೊದಲು ಉದಯ ವಾಹಿನಿಯಲ್ಲಿ 'ಕ್ರೈಮ್ ಸ್ಟೋರಿ' ಕಾರ್ಯಕ್ರಮವನ್ನು ನಡೆಸಿಕೊಟ್ಟವರು. ನಂತರ ರವಿಯವರು ಈ ಟಿ.ವಿ. ವಾಹಿನಿಯಲ್ಲಿ 'ಕ್ರೈಮ್ ಡೈರಿ'ಯನ್ನು ನಡೆಸಿ ಮನೆಮಾತಾದರು. ಅವರ ಧ್ವನಿಯ ಏರಿಳಿತ, ನಿರೂಪಣಾ ಶೈಲಿ, ಭಾಷೆ ಮುಂತಾದ ಪ್ರಯೋಗಗಳಿಂದ ಕಾರ್ಯಕ್ರಮಗಳನ್ನು ಯಶಸ್ವಿಯನ್ನಾಗಿಸಿದರು. ಒಂದೆರಡು ಗಂಟೆಗಳ ಕಾಲ ಒಬ್ಬರ ಮಾತುಗಳನ್ನು ಕೇಳಿಸಿಕೊಂಡರೆ ಅವರ ಪದಕೋಶದ ವ್ಯಾಪ್ತಿ ಗೊತ್ತಾಗಿಬಿಡುತ್ತದೆ. ಜೊತೆಗೆ ಅವರ ಮಾತಿನ ಬಳಕೆಗೆ ಇರುವ ವಿಶಿಷ್ಟ ಲಯಗಾರಿಕೆ ಪರಿಚಿತವಾಗುತ್ತದೆ. ಆದರೆ ಮಾತುಗಳ ಜೋಡಣೆಯಲ್ಲಿ ಬೇರೆ ಕಡೆ ಕಾಣದ ಲಯವೊಂದಿರುತ್ತದೆ. ಅದನ್ನು ಬೇರೆ ಮತ್ತೆಲ್ಲೂ ಕೇಳಲು ಸಾಧ್ಯವಿರುವುದಿಲ್ಲ. ರವಿಯವರು ನಮ್ಮ ಕನ್ನಡಕ್ಕೆ ಒಂದು ವಿಶಿಷ್ಟ ಲಯವನ್ನು ತರಲು ಪ್ರಯತ್ನಿಸಿದವರು.

ಕಾರ್ಯಕ್ರಮ ನಡೆಸಿಕೊಡುವವರು ಎಚ್ಚರ ತಪ್ಪದೆ ಕನ್ನಡದ ವ್ಯಾಕರಣದ ನಿಯಮಗಳನ್ನು ಪಾಲಿಸಲೇಬೇಕು. ಇಲ್ಲವಾದರೆ ಅವರ ಮಾತು ಯಾರಿಗೂ ಅರ್ಥವಾಗದು. ಇಂಗ್ಲೀಶ್ ಪದಗಳನ್ನು ಎರ್ರಾಬಿರ್ರಿಯಾಗಿ ಬೆರಸುವಂತೆ ಕಂಡರೂ ಅದರಲ್ಲೂ ಕೆಲವು ಆಯ್ಕೆ ಮತ್ತು ನಿಯಮಗಳು ಇರುತ್ತವೆ. Right word at right place ಮಾಧ್ಯಮದ ಒತ್ತಡ ಸಮಯದಲ್ಲಿ ಇಂಥವು ಅನೇಕ ಸಂಭವಿಸುತ್ತವೆ. ಸಂಖ್ಯಾವಾಚಕ, ದಿಕ್ಕು ಸೂಚಕ, ಪ್ರಮಾಣ ಸೂಚಕ ಪದಗಳು ಮತ್ತು ಗುಣವಾಚಕಗಳು ಹೆಚ್ಚಾಗಿ ಇಂಗ್ಲೀಶ್ ಪದಕೋಶದಿಂದ ಬಂದಿರುತ್ತವೆ. ಹಾಗೆಯೇ ಕ್ರಿಯಾ ವಿಶೇಷಣಗಳು, ಕೆಲವು ವಿಶಿಷ್ಟ ನಾಮಪದಗಳು ಸೇರಿಕೊಂಡಿರುತ್ತವೆ. ಅಲ್ಲದೇ ಇಂಗ್ಲೀಶ್ ಕ್ರಿಯಾಪದಗಳನ್ನು ಕನ್ನಡದಲ್ಲಿ ಬೆರೆಸುವಾಗ ವಿಶೇಷ ನಿಯಮವೊಂದು ಪಾಲನೆಯಾಗುವಂತೆ ಕಂಡುಬರುತ್ತದೆ. ಯಾವುದೇ ಇಂಗ್ಲೀಶ್ ಕ್ರಿಯಾಪದದಲ್ಲಿ(ಸಕರ್ಮಕ, ಅಕರ್ಮಕ) ಕನ್ನಡಕ್ಕೆ ಬಂದ ಕೂಡಲೇ ಅದು ಸಕರ್ಮಕವಾಗಿರುತ್ತವೆ. ಮೂಲದಲ್ಲಿ ಅವು ಒಂದು ಅವಸ್ಥೆಯನ್ನು ಸೂಚಿಸುತ್ತಿದ್ದರೂ ಕನ್ನಡಕ್ಕೆ ಬಂದಾಗ ಗೊತ್ತಾದ ಕ್ರಿಯೆಯೊಂದನ್ನು ಮಾತ್ರ ಸೂಚಿಸುತ್ತವೆ. ಉದಾಹರಣೆಗೆ ಟ್ರಯ್(Try) ಎನ್ನುವ ಇಂಗ್ಲೀಶ್ ಪದವನ್ನು ಗಮನಿಸಿದಾಗ, ಅದು ಇಂಗ್ಲೀಶ್‌ನಲ್ಲಿ ಏನೇ ಇರಲಿ ಕನ್ನಡಕ್ಕೆ ಬಂದಾಗ 'ಟ್ರಯ್ ಮಾಡು' ಎಂದು ಬಳಕೆಯಾಗಬೇಕು. ಇಲ್ಲಿ ಟ್ರಯ್ ಎನ್ನುವುದು ಒಂದು ನಿರ್ವಹಿಸಲೇಬೇಕಾದ ಕೆಲಸವೆಂಬ ವಿಶೇಷ ಅರ್ಥವನ್ನು ಪಡೆದುಕೊಳ್ಳುತ್ತದೆ. ಅಂಥ ಪದಗಳು

ಕನ್ನಡದಲ್ಲಿ ವಿವಿಧ ಸಾಮಾಜಿಕ ವಲಯಗಳಲ್ಲಿ ವಿವಿಧ ಸಂದರ್ಭದಲ್ಲಿ ಬಳಕೆಯಾಗುತ್ತವೆ. ಇಲ್ಲಿಯೂ ಕೇಳುಗರ ಸ್ವರೂಪದ ಬಗೆಗೆ ವಾಹಿನಿಗಳಿಗೆ ಮತ್ತು ಅವುಗಳನ್ನು ಪ್ರತಿನಿಧಿಸುವ ನಿರೂಪಕರಿಗೂ ಒಂದು ನಿರ್ದಿಷ್ಟ ಕಲ್ಪನೆ ಇರುತ್ತದೆ. ಆದ್ದರಿಂದ ಅದಕ್ಕೆ ತಕ್ಕ ಕನ್ನಡವನ್ನು ಬಳಸುತ್ತಿರುತ್ತಾರೆ.

ಒಂದು ಕ್ರೈಮ್ ಕಾರ್ಯಕ್ರಮವನ್ನು ನಡೆಸಿಕೊಡಬೇಕೆಂದರೆ ಸುಮಾರು ವರ್ಷಗಳ ಕಾಲ ಕ್ರೈಮ್ ರಿಪೋರ್ಟಿಂಗ್ ಮಾಡಿದವರಿಗೆ ಹತ್ಯೆಗಳು ಅರ್ಥವಾಗುವುದು ಕಷ್ಟವಲ್ಲ. ಆದರೆ ಹತ್ಯೆಗಳು ನಡೆದ ಸಂದರ್ಭ ಸನ್ನಿವೇಶ ಮತ್ತು ಕಾರಣಗಳು ಅರ್ಥವಾಗಬೇಕು. ಬಹುಶಃ ರವಿ ಬೆಳಗರೆಯವರ ಅನೇಕ ವರ್ಷಗಳ ಕ್ರೈಮ್ ರಿಪೋರ್ಟಿಂಗ್ ಇಂಥ ಕಾರ್ಯಕ್ರಮಕ್ಕೆ ಸಹಾಯಕವಾಗಿರಬೇಕು. ಈ ಸಂದರ್ಭದಲ್ಲಿ ರವಿಯವರು ಮಾಡಿದ ಪ್ರಯೋಗ ಯಶಸ್ವಿಯಾದದ್ದು. ಅಂದಿನ ಆ ಕಾರ್ಯಕ್ರಮಕ್ಕೆ ಅವರು ನೀಡಿದ ಶೈಲಿಯನ್ನೇ ಇಂದಿಗೂ ಸುದ್ದಿ ವಾಹಿನಿಗಳು ಮುಂದುವರಿಸಿರುವುದನ್ನು ಕಾಣಬಹುದಾಗಿದೆ. ಅವುಗಳಲ್ಲಿ ಮುಖ್ಯವಾಗಿ ಹೆಸರಿಸುವಂತಹ ಕಾರ್ಯಕ್ರಮಗಳೆಂದರೆ ವಾರೆಂಟ್, ಪೊಲೀಸ್ ಡೈರಿ, ಪೊಲೀಸ್ ಸ್ಟೋರಿ, ಪೊಲೀಸ್ ಬೆಲ್ಟ್, ಸೂಪರ್ ಕಾಪ್ ಮುಂತಾದವುಗಳನ್ನು ಹೆಸರಿಸಬಹುದು. ಇವುಗಳನ್ನಲ್ಲದೇ ಕ್ರೈಮ್ ವರದಿಗಳನ್ನು ಹೊರತುಪಡಿಸಿದ ಕೆಲವು ಕಾರ್ಯಕ್ರಮಗಳಲ್ಲಿಯೂ ಈ ಶೈಲಿಯನ್ನು ಕಾಣಬಹುದಾಗಿದೆ. ಅವುಗಳೆಂದರೆ ನಂಬಿದ್ರೆ ನಂಬಿ, ಹೀಗೂ ಉಂಟೆ, ಬೊಂಡರಿ ಲೈನ್, ಫಿಲ್ಮಿ ಫಂಡಾದಂಥ ವಿಶೇಷ ಕಾರ್ಯಕ್ರಮಗಳನ್ನು ಅನೇಕ ಹೆಸರಿಸಬಹುದು. ಇಲ್ಲಿ ಸುದ್ದಿಯ ವಿವರಣೆಗಿಂತ ಬಹುಪಾಲು ಅದನ್ನು ಮಂಡಿಸುವ ರೀತಿ ಶೈಲಿಯನ್ನು ಉಳಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

ದೃಶ್ಯ ಮಾಧ್ಯಮವಾಗಿ ಮಾತನ್ನು ಬಳಸುತ್ತಿರುವ ವಾಹಿನಿಗಳ ಮಟ್ಟಿಗೆ ಕನ್ನಡ ಇನ್ನೂ ವೃತ್ತಿಪರತೆಯ ಕೊರತೆಯನ್ನು ಎದುರಿಸುತ್ತಿದೆ ಎನಿಸುತ್ತದೆ. ಮುಖ್ಯವಾಗಿ ದೃಶ್ಯದ ಲಯ ಮತ್ತು ಮಾತಿನ(ನಿರೂಪಣೆಯ) ಲಯಗಳ ನಡುವೆ ಒಂದು ಅವಿರತ ಸಂಬಂಧವನ್ನು ನಿರ್ಮಿಸಲು ಸಾಧ್ಯವಾಗುತ್ತಿಲ್ಲ. ದೃಶ್ಯಗಳ ತಾಂತ್ರಿಕ ಪರಿಮಿತಿ, ಅವುಗಳ ಜೋಡಣೆಯ ಲಯ ಇವುಗಳೊಡನೆ ಬಳಕೆಯಾಗುವ ಭಾಷೆಯೂ ಹೊಂದಿಕೆಯಾಗಬೇಕು. ಕೆಲವು ಪ್ರಸಂಗಗಳಲ್ಲಿ ಹಿನ್ನೆಲೆಯ ನಿರೂಪಣೆಯ ಭಾಷೆಯೂ ಇರಬಹುದು. ಸರಳ ಸುಂದರ ಶೈಲಿ ಮತ್ತು ನಿರೂಪಣೆಯಲ್ಲಿ ನೈಜತೆ ಇರಬೇಕು. ಇವುಗಳು ಇಂದಿನ ವಾಹಿನಿಗಳಲ್ಲಿ ಕಂಡುಬರುತ್ತಿಲ್ಲ. ಬಹುಶಃ ಅವುಗಳ ವಿಫಲತೆಗೆ ಹೊಸತನದ ಕೊರತೆ ಕಾರಣ ಎನಿಸುತ್ತದೆ.

ರವಿ ಬೆಳಗೆರಯವರು ಜನಸಾಮಾನ್ಯರ ಭಾಷೆಯಲ್ಲಿಯೇ, ಸರಳ ಸುಂದರ ಶೈಲಿಯಲ್ಲಿ ಹೇಳುವ ವಿಷಯವನ್ನು ವಿದಿತಗೊಳಿಸಿದವರು. ಇಂದಿನ ಸಮಾಜದಲ್ಲಿ ನೈತಿಕ ಸ್ಥಿತಿಗತಿಗಳಿಗೆ ಸಂಬಂಧಿಸಿದಂತೆ ನಿರೂಪಣೆಯಲ್ಲಿ ನೈಜತೆ ಇರುವುದನ್ನೂ ಕಾಣಬಹುದಾಗಿದೆ. ಸಂದರ್ಭವರಿತು

ಪದಗಳ ಉಚ್ಚಾರಣೆ, ಧ್ವನಿಗಳ ಏರಿಳಿತದ ಗತ್ತು, ಸ್ಪಷ್ಟತೆ ಇವೆಲ್ಲವು ಕ್ರೈಮ್ ಡೈರಿಯ ಯಶಸ್ವಿಗೆ ಕಾರಣವಾದವು. ಅದೇ ಯಶಸ್ಸನ್ನು ಮುಂದಿನ ನಿರೂಪಕರು ಕಾಣುವಲ್ಲಿ ವಿಫಲರಾಗಿದ್ದನ್ನು ಕಾಣಬಹುದಾಗಿದೆ. ಇದೇ ರೀತಿ, ಶೈಲಿ ಮತ್ತು ತಂತ್ರವನ್ನು ಬಳಸಿ ಅಭಾಸಕ್ಕೆ ಒಳಗಾಗಿರುವ ಸಾಧ್ಯತೆಯೂ ಇಲ್ಲದಿಲ್ಲ.

ಇದಲ್ಲದೆಯೇ ರವಿ ಬೆಳಗೆರೆಯವರು ಮುಂದುವರೆದು ಇನ್ನೂ ಒಂದು ಪ್ರಯೋಗವನ್ನು ಗಮನಿಸಬಹುದಾಗಿದೆ. ಅಂದೆಂದರೆ ಸಿ.ಡಿ. ಇಲ್ಲಿಯವರೆಗೆ ಅವರು ಮೂರು ಸಿ.ಡಿಗಳನ್ನು ಕೇಳುಗರಿಗಾಗಿ ತಯಾರಿಸಿ ಅವರದೇ ಧ್ವನಿಯಲ್ಲಿ ಮುದ್ರಿಸಿ ನೀಡಿದ್ದಾರೆ. ಬದುಕಿನ ಯಶಸ್ಸಿನ ಬಗೆಗೆ ಮಾತಾನಾಡಿಸಿರುವುದು ಮನಸ್ಸೇ. ಎರಡನೆಯದು ಮನೆ, ಮನೆಯ ಕಟ್ಟುವಿಕೆಯ ಕನಸಿಗೆ ಸಂಬಂಧಿಸಿದಂತೆ ಕನಸ್ಸೇ. ಕೊನೆಯದು ಪ್ರೀತಿ–ಪ್ರೇಮ, ನಂಬಿಕೆ, ಮೋಸ, ಪ್ರೀತಿಯನ್ನು ಪಡೆಯುವುದು, ಉಳಿಸುವುದು, ಬೆಳೆಸುವುದಕ್ಕೆ ಸಂಬಂಧಿಸಿದಂತೆ ಒಲವೇ. ಇಲ್ಲಿಯೂ ಅವರು ಬಳಸುವ ಭಾಷೆ ಹೇಳುಗನನ್ನು ಆಪ್ತವಾಗಿಸುತ್ತದೆ. ಆದರೆ ಇಲ್ಲಿ ಬೋಧನೆ ಇರುವುದಿಲ್ಲ ಯಾರದೋ ಕತೆ, ವ್ಯಥೆಯನ್ನು ನಮ್ಮದಾಗಿಸುವ ಒಂದು ಸಣ್ಣ ತಂತ್ರವಿದೆ. (ಇವುಗಳಿಗೆ ಸಂಬಂಧಿಸಿದಂತೆ ಹಿಂದಿನ ಅಧ್ಯಾಯದಲ್ಲಿ ಪ್ರಸ್ತಾಪಸಲಾಗಿದೆ.)

ತಾಂತ್ರಿಕ ಮಾಧ್ಯಮದಲ್ಲಿ ಇವು ರವಿಯವರ ಪ್ರಯೋಗಗಳು. ಅವು ಹೊಸತನದಿಂದ ಕೂಡಿವೆ ಮತ್ತು ಯಶಸ್ವಿಯೂ ಆಗಿವೆ. ಆಪ್ತವಾದ ಅವರ ಶೈಲಿ ಕೇಳುಗರನ್ನು ಭಾವುಕರನ್ನಾಗಿ ಬಂಧಿಸುತ್ತದೆ; ಒಪ್ಪುವಂತೆ ಮಾಡುತ್ತವೆ. ಮಾಧ್ಯಮಗಳ ಒತ್ತಡದ ಕಾಲದಲ್ಲಿಯೂ ಪ್ರಯೋಗಗಳ ಅಗತ್ಯವಿದೆಯಾದರೂ ಹೆಚ್ಚಿನ ಸಂಖ್ಯೆಯಲ್ಲಿ ಯಶಸ್ವಿಯನ್ನು ಕಾಣಲಾಗುತ್ತಿಲ್ಲ.

**೨. ಪತ್ರಿಕೆಗಳು**

ಈ ಮೊದಲೇ ಹೇಳಿದಂತೆ ಪ್ರತಿಯೊಂದು ಮಾಧ್ಯಮವು ಭಾಷೆಯನ್ನು ಒಂದೇ ರೀತಿಯಲ್ಲಿ ಬಳಸಿಕೊಳ್ಳುವುದಿಲ್ಲ. ಇಲ್ಲಿ ಬಳಕೆಯಾಗುವ ಪದಕೋಶದಲ್ಲಿ ಆಗಾಧ ಪ್ರಮಾಣದ ಪಲ್ಲಟಗಳನ್ನು ಕಾಣಬಹುದು. ಮುಖ್ಯವಾಗಿ ಕನ್ನಡ ಪದಕೋಶದ ಜೊತೆಗೆ ಇಂಗ್ಲೀಶ್ ಸಂಸ್ಕೃತ ಹಿಂದಿ ಮತ್ತು ಕನ್ನಡದ ಇತರ ಉಪಭಾಷೆಗಳಿಂದ ಪದಗಳನ್ನು ಪಡೆದುಕೊಳ್ಳುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಕನ್ನಡ ಮತ್ತು ಇಂಗ್ಲೀಶ್ ಪದಗಳ ಮಿಶ್ರಿತ ರೂಪಗಳನ್ನು ವಾಣಿಜ್ಯ, ಆಟೋಟ, ವೈದ್ಯಕೀಯ, ಕ್ರೈಮ್, ತಾಂತ್ರಿಕ ಭಾಷಾ ಬರಹಗಳಲ್ಲಿ ಕಾಣುತ್ತೇವೆ.

ಕೆ.ವಿ.ನಾರಾಯಣ ಅವರು ಪತ್ರಿಕೆಯ ಭಾಷೆಗೆ ಮತ್ತು ಸ್ವರೂಪಕ್ಕೆ ಸಂಬಂಧಿಸಿ ಮೂರು ವಿಧಗಳಾಗಿ ವಿಭಜಿಸುತ್ತಾರೆ. ಅವುಗಳೆಂದರೆ ಒಂದು ವಿವರಣಾತ್ಮಕ. ಎರಡು ನಾಟಕೀಯ ಮೂರು ಚಿಂತನಾತ್ಮಕ ಎಂದು. ಮತ್ತೂ ಅವರು ಪಾರಂಪರಿಕ ಚಿಂತನೆಯಂತೆ ಈ ಮೂರು ಬಗೆಗಳನ್ನು ಚರಿತ್ರೆ, ಸಾಹಿತ್ಯ ಮತ್ತು ತತ್ವಶಾಸ್ತ್ರಗಳಿಗೆ ಸಂಬಂಧಿಸಿದ ಭಾಷಾ ಪ್ರಯೋಗಗಳು ಎಂದು ಕರೆಯುತ್ತಾರೆ. ಪತ್ರಿಕೆಗಳು ತಮ್ಮ ಒಡಲಿನಲ್ಲಿ ಇಂತಹ ಮೂರು ಶೈಲಿಗಳನ್ನು ಅಳವಡಿಸಿಕೊಳ್ಳುಬೇಕು. ಅಲ್ಲದೆ

ಓದುವವರನ್ನು ಸಹ ತಮ್ಮ ಭಾಷಾ ನಿರ್ಮಿತಿಯಲ್ಲಿ ಪಾತ್ರಧಾರಿಗಳನ್ನಾಗಿ ಮಾಡಬೇಕಾಗುತ್ತದೆ. ಇದರಂತೆಯೇ ಇಂದಿನ ಪ್ರತಿಯೊಂದು ಪತ್ರಿಕೆಯೂ ಓದುಗರ ಬರವಣಿಗೆಗಾಗಿ ಒಂದಷ್ಟು ಸ್ಥಳವನ್ನು ಮೀಸಲಿಡುತ್ತಲಿವೆ. ಈ ಪ್ರವೃತ್ತಿ ಕನ್ನಡ ಪತ್ರಿಕೋದ್ಯಮದಲ್ಲಿ ಇಂದು ಗುಣ ಮತ್ತು ಪ್ರಮಾಣದಲ್ಲಿ ತುಂಬಾ ಹೆಚ್ಚಿದೆ ಎನ್ನುವುದನ್ನು ಮರೆಯುವಂತಿಲ್ಲ.

ಪತ್ರಿಕೆಯಲ್ಲಿ ಪ್ರಕಟವಾಗುವ ಎಲ್ಲ ಬರಹ ಮತ್ತು ಸುದ್ದಿಗಳನ್ನು ಒಬ್ಬರೇ ಬರೆದಿರುವುದಿಲ್ಲ. ಹಲವರ ಬರಹಗಳು ಅಲ್ಲಿ ಬೆರೆತಿರುತ್ತವೆ ಎಂಬುದೂ ನಿಜ. ಹಾಗೆಯೇ ಎಲ್ಲ ಓದುಗರೂ ತಮ್ಮ ತಮ್ಮ ಗ್ರಹಿಕೆಗೆ ಗ್ರಹಿಸಿಕೊಳ್ಳುವ ಕೆಲವು ಸಾವಿರ ಪದಗಳೂ ಎಲ್ಲರಿಗೂ ಒಂದೇ ಆಗಿರುವುದಿಲ್ಲ. ಅಂದರೆ ಪತ್ರಿಕೆ ತನ್ನ ಮಾಧ್ಯಮ ಸಾಧನವಾಗಿರುವ ಭಾಷೆಯ ಸಾಮಗ್ರಿಗಳನ್ನು ಸುಮ್ಮನೆ ಹರಡಿರುತ್ತದೆ. ಸೂಕ್ತ ರೀತಿಯ ಭಾಷಾ ಬಳಕೆ, ನಿರೂಪಣೆ, ಶೈಲಿಯನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಅಲ್ಲದೆ ಸುದ್ದಿಯ ವಿವರಣೆಗಿಂತ ಅದನ್ನು ಮಂಡಿಸುವ ರೀತಿಯಲ್ಲಿ ಹೆಚ್ಚಿನ ಬದಲಾವಣೆ ಮಾಡಿಕೊಳ್ಳುವ ಅಗತ್ಯತೆ ಇರುತ್ತದೆ.

ಇಂಥ ಪ್ರಯೋಗಗಳು ಓದುಗರ ಮೇಲೆ ಪ್ರಭಾವವನ್ನು ಬೀರುತ್ತವೆ ಮತ್ತು ಅದೇ ಶೈಲಿಯನ್ನು ಅಳವಡಿಸಿಕೊಳ್ಳುವಂತೆ ಪ್ರೇರೇಪಿಸುತ್ತವೆ. ಈ ರೀತಿ ಪ್ರೇರೇಪಿಸುವ ಮೂಲಕ ತಮ್ಮದೇ ಆದ ಶೈಲಿಯಿಂದ ಅನೇಕ ಓದುಗರನ್ನು ಆಕರ್ಷಿಸಿದವರು ರವಿ ಬೆಳಗೆರೆಯವರು. ಹಾಗೆಯೇ ಅವರು ಹುಟ್ಟು ಹಾಕಿದ ಹಾಯ್ ಬೆಂಗಳೂರ್! ವಾರ ಪತ್ರಿಕೆಯನ್ನು ಅನುಕರಿಸುವಂತೆ ಗಲ್ಲಿಗೊಂದರಂತೆ ರಾಜ್ಯಾದ್ಯಂತ ಅನೇಕ ಪತ್ರಿಕೆಗಳು ತಲೆಯೆತ್ತಿರುವುದನ್ನು ನೋಡಬಹುದು. ಅಂತಹುವುಗಳನ್ನು ಹೆಸರಿಸುವುದಾದರೆ ಕ್ರೈಮ್ ನ್ಯೂಸ್, ಪೊಲೀಸ್ ನ್ಯೂಸ್, ಕ್ರೈಮ್ ಸ್ಟೋರಿ, ಹಾಯ್ ತುಮಕೂರು, ಹಲೋ ಬೆಂಗಳೂರು, ಖಡ್ಗ, ಸ್ಟಾರ್ ವಾರ್, ಪೊಲೀಸ್ ಮಿತ್ರ, ಪ್ರಬುದ್ಧ ಭಾರತ, ಸಂಘರ್ಷ, ಮುಂತಾದ ಹಿಮಾಗ್ನಿ ಅನೇಕ ಮಾದರಿಯ ಪತ್ರಿಕೆಗಳು ಹುಟ್ಟಿಕೊಂಡಿವೆ. ಇನ್ನೂ ಹೆಸರಿಸದೆ ಇರುವ ಅದೆಷ್ಟೋ ಪತ್ರಿಕೆಗಳಿವೆ.

ಇವರೆಲ್ಲರೂ, ಇವೆಲ್ಲವೂ ರವಿ ಬೆಳಗೆರೆಯವರನ್ನು ಬಹುಪಾಲು ಅನುಸರಿಸಿದ, ಅನುಕರಿಸಿದವು ಎಂದು ಹೇಳಬಹುದು. ಇಲ್ಲಿ ಬೇರೆ ಪತ್ರಿಕೆಯನ್ನು ನೋಡುವುದರ ಜೊತೆಗೆ 'ಹಾಯ್ ಬೆಂಗಳೂರ್!' ಪತ್ರಿಕೆಯನ್ನು ಗಮನಿಸಿದ್ದಾಗಲೂ ಬರವಣಿಗೆಯಿಂದ, ಶೈಲಿಯಿಂದ ಪ್ರೇರಣೆಗೆ ಒಳಗಾಗಿರುವುದನ್ನು ಕಾಣಬಹುದಾಗಿದೆ. ಅಲ್ಲಿ ಬರುವ ನೇವಿ ಕಾಲಂ, ಜಾನಕಿ ಕಾಲಂ, ಚಂದ್ರಶೇಖರ ಆಲೂರು ಅವರ ಒಲಿದಂತೆ ಹಾಡುವೆ ಇತ್ಯಾದಿ ಅಂಕಣಗಳ ಜೊತೆಗೆ ಇತರ ವರದಿಗಾರರ ವರದಿಗಳನ್ನೂ ಕಾಣಬಹುದು. ರವಿಯವರ ಬರಹದಿಂದ ಪ್ರಭಾವಕ್ಕೊಳಗಾದ ಕೆಲವು ವಾಕ್ಯಗಳನ್ನು ಉದಾಹರಣೆಗಾಗಿ ನೋಡಬಹುದು. (ಈ ಉದಾಹರಣೆಗಳನ್ನೆಲ್ಲ ಹಾಯ್ ಬೆಂಗಳೂರ್, ಓ ಮನಸ್ಸೇ, ಮತ್ತು ಈ ಭಾನುವಾರ ಪತ್ರಿಕೆಗಳಿಂದ ತೆಗೆದುಕೊಳ್ಳಲಾಗಿದೆ.)

'ಕೈ ಕಮಲ ಸೇರಿ ಕುಮ್ಮಿಗೆ ಗುನ್ನ?'

'ಹುಟ್ಕಂಡ ಕಣ್ರೀ ಈ ತುಮಕೂರಲ್ಲಿ ಫೇಕ್ ಸಾಹಿತಿ!'

'ಮಂಗಳೂರಿನ ನಿರ್ಮಿತ ಕೇಂದ್ರದಲ್ಲಿ ಭಕಾಸುರ ಪಡೆ!'

'ವಿವರಿಸಿದಾಗ ಎಸ್.ಎಸ್.ಎಲ್.ಸಿ. ಫೇಲ್ ಆಗಿ ಬಾರ್‌ನಲ್ಲಿ ಸಪ್ಲೈ ಮಾಡುವ ಕಥೆ ಶುರುಹಚ್ಕೊಂಡ' (ಜ್ವಲಂತ ಪತ್ರಿಕೆಯ ಸಂಪಾದಕ ವರ್ಣಜ್ಯೋತಿ).

'ಮಧ್ಯ ವಯಸ್ಕನ ಮೌನಿ ಹೆಂಡತಿ'(ಜಾನಕಿ ಕಾಲಂ)

'ಹಳೆಯ ಮಾಸ ಪತ್ರಿಕೆಗಳನ್ನು ಓದುವುದು ವಿನಾಕಾರಣ ಖುಷಿಕೊಡುತ್ತದೆ. ಹತ್ತಿಪ್ಪತ್ತು ವರುಷದ ಹಿಂದಿನ ತುಷಾರ ಕೈಗೆತ್ತಿಕೊಳ್ಳಿ. ಅಲ್ಲಿ ಧುತ್ತೆಂದು ನಿಮ್ಮ ನೆಚ್ಚಿನ ಲೇಖಕರು ಕಾಣಿಸಿಕೊಳ್ಳುತ್ತಾರೆ'. (ಜಾನಕಿ ಕಾಲಂ)

'ನಾನು ವಿನಾಕಾರಣ ಮಧ್ಯೆ ಪ್ರವೇಶಿಸಲು ಕಾರಣವಿದೆ'. (ಒಲಿದಂತೆ ಹಾಡುವೆ)

'ರೈಲು ಬಿಟ್ಟ ಪೂಜಾ ರೀಲು ಸುಟ್ಟ ಅಭಿನೇತ್ರಿ'

'ಎರಿಕಾ ಎಂಬ ಬುಗುರಿ'

'ಐದು ನೂರು ಚಿಲ್ಲರೆ ಪುಟಗಳ ಈ ಕಾದಂಬರಿಯನ್ನು ಒಂದೇ ವಾರದಲ್ಲಿ ಓದಿ ಮುಗಿಸಿದ್ದೇನೆ'.(ಟಿ.ಎಸ್. ಹನುಮೇಶ್ ಓದುಗ)

'ತನ್ನ ವೈಯಕ್ತಿಕ ದ್ವೇಷಕ್ಕಾಗಿ ಅಧಿಕಾರಿಗಳನ್ನು ಬಳಸಿಕೊಳ್ಳುವ ಅವಳ ಕ್ರಮಕ್ಕೆ ದಿಕ್ಕಾರವಿರಲಿ'

'ಓದುಗನ ಶಬ್ದ ಭಂಡಾರವನ್ನು ಬೆಳೆಸುತ್ತಿದ್ದೀರಿ. Once again thanks.'

'ಮಾಂಸದ ಮನೆಗೆ ತಾಯಂದಿರಿಂದಲೇ ಸರಬರಾಜು'

'ಮದುವೆಗೆ ಮುಂಚೆ ಅವೆಷ್ಟು ಆಸೆಗಳೋ! ಎಲ್ಲ ಒಂದೇ ವಾರದಲ್ಲಿ ಛಿದ್ರ ಛಿದ್ರ' (ಓ ಮನಸ್ಸೇ ಪಾಕ್ಷಿಕದಲ್ಲಿನ ಪತ್ರ)

'ಆಸೆಯಿರುವುದಿಲ್ಲವೆ? ವಾರಕ್ಕೊಂದು ದಿನ townಗೆ ಕರೆದುಕೊಂಡು ಹೋಗಿ ಸಿನೆಮಾ ನೋಡೋಣ, ಕೆಲ ತಿಂಗಳಲ್ಲಿ ಏನೂ ಕೆಲಸವಿರುವುದಿಲ್ಲ. ತೋಟದಲ್ಲಿ.'

'ಯಾವಾಗಲೋ, ಅಮಾವಾಸ್ಯೆಗೊಮ್ಮೆ, ಹುಣ್ಣಿಮ್ಮೆಗೊಮ್ಮೆ ಬರುತ್ತಾರೆ; ಹತ್ತಿರಕ್ಕೆ' ಒಂಥರಾ stone ಮ್ಯಾನ್!'

'ಕರ್ನಾಟಕ ರಾಜ್ಯ ರಾಜಕಾರಣದ ದಿಕ್ಕನ್ನೇ ಬದಲಿಸಿದ ಇಂಥ ಕಪ್ಪುಹಣ ಉತ್ತರ ಪ್ರದೇಶವೂ ಸೇರಿದಂತೆ...' (ಈ ಭಾನುವಾರ)

ಹೀಗೆ ಈ ಮೇಲಿನ ವಾಕ್ಯಗಳೆಲ್ಲವೂ 'ಹಾಯ್ ಬೆಂಗಳೂರ್!', 'ಓ ಮನಸ್ಸೇ...' ಮತ್ತು ಈ ಭಾನುವಾರ ಪತ್ರಿಕೆಗಳಲ್ಲಿನ ಉದಾಹರಣೆಗಳು. ಇವೆಲ್ಲವೂ ರವಿ ಬೆಳಗೆರೆಯವರು ಬಳಸುವ ರೀತಿಯಲ್ಲೇ, ಅಂದರೇ ವಿಷಯವನ್ನು ಮಂಡಿಸುವ ಭಾಷೆಯಲ್ಲಿ ಬದಲಾವಣೆಯನ್ನು ಮಾಡಿಕೊಳ್ಳದೇ ಇರುವುದು. 'ಯಾವಾಗಲೋ, ಅಮಾವಾಸ್ಯೆಗೊಮ್ಮೆ, ಹುಣ್ಣಿಮೆಗೊಮ್ಮೆ ಬರುತ್ತಾರೆ; ಹತ್ತಿರಕ್ಕೆ. 'ಕೆಲ

ತಿಂಗಳಲ್ಲಿ ಏನೂ ಕೆಲಸವಿರುವುದಿಲ್ಲ. ತೋಟದಲ್ಲಿ' ಇಲ್ಲಿ 'ಹತ್ತೀರಕ್ಕೆ' ಮತ್ತು 'ತೋಟದಲ್ಲಿ' ಎಂಬುದು ಬಳಕೆಯಿರುವುದನ್ನು ರವಿ ಬೆಳಗೆರೆಯವರ ಬರಹಗಳಲ್ಲಿ ಕಂಡುಬರುತ್ತದೆ. ಅವುಗಳನ್ನು ಓದುವವರು ಅದರ ಪ್ರಭಾವಕ್ಕೊಳಗಾಗಿರುವ ಸಾಧ್ಯತೆ ಇರಬಹುದು. ಅದರಂತೆಯೇ ಶೀರ್ಷಿಕೆ ನೀಡುವಲ್ಲಿಯೂ ಅವರ ಪ್ರಭಾವವನ್ನು ಕಾಣಬಹುದು. ಇವರನ್ನು ಅನುಸರಿಸಿ ಬಂದ ಕನ್ನಡದ ಅನೇಕ ಪತ್ರಿಕೆಗಳಲ್ಲಿಯೂ ಇದನ್ನು ಕಾಣಬಹುದಾಗಿದೆ. ಆದರೆ 'ಹಾಯ್ ಬೆಂಗಳೂರ್!' ಮತ್ತು 'ಓ ಮನಸ್ಸೇ...' ಕಂಡ ಯಶಸ್ಸು ಮತ್ತು ಜನಪ್ರಿಯತೆ ಇವುಗಳನ್ನು ಅನುಸರಿಸಿ ಬಂದ ಯಾವುದೇ ಪತ್ರಿಕೆಗೂ ಸಿಗಲಿಲ್ಲವೆಂಬುದು ವಿಧಿತ.

ಒಟ್ಟಾರೆಯಾಗಿ ರವಿ ಬೆಳಗೆರೆಯವರು ತಮ್ಮ ವಿಶಿಷ್ಟ ಶೈಲಿಯಿಂದ, ಹೊಸ ಹೊಸ ಪ್ರಯೋಗ ಭಾಷಾ ಬಳಕೆಯಿಂದ, ಕನ್ನಡ ಭಾಷೆಯ ಮೇಲೆ ಸ್ವಲ್ಪ ಮಟ್ಟಿಗಿನ ಪ್ರಭಾವವನ್ನು ಬೀರಿರುವುದು ಕಂಡುಬರುತ್ತದೆ. ಬರವಣಿಗೆಯ ಭಾಷೆಗೆ ತಿಳಿಸಿ ಹೇಳುವುದಷ್ಟೇ ಗುರಿಯಲ್ಲ. ಅದಕ್ಕಿಂತ ಹೆಚ್ಚಿನ ಕೆಲಸವನ್ನು ಆ ಬರವಣಿಗೆಯ ಭಾಷೆಯೇ ಮಾಡುತ್ತಿರುತ್ತದೆ. ಇದು ಪದಗಳ ಆಯ್ಕೆಯಿಂದ, ಪದಗಳನ್ನು ಜೋಡಿಸುವ ಬಗೆಯಿಂದ ಮತ್ತು ವಾಕ್ಯ ರಚನೆಯ ಕೆಲವು ಹುನ್ನಾರಗಳನ್ನು/ತಂತ್ರಗಳನ್ನು ಬಳಸುವುದರಿಂದ ಆಗುವ ಕೆಲಸ. ಇಂಥ ಪ್ರಯೋಗಗಳನ್ನು ಭಾಷೆಯ ನೆಲೆಯಿಂದ ಇನ್ನಷ್ಟು ವಿವರವಾಗಿ ಅಧ್ಯಯನವನ್ನು ಬಯಸುವುದು ಈ ಕ್ಷೇತ್ರ. ಅಂತಹ ಅಧ್ಯಯನಗಳನ್ನು ಮಾಡುವ ಅಗತ್ಯತೆ ಪ್ರಸ್ತುತ ದಿನಮಾನಗಳಲ್ಲಿ ಭಾಷಾ ಕ್ಷೇತ್ರದಲ್ಲಿದೆ ಎಂದು ಹೇಳಬಹುದು.

**ಅಡಿಟಿಪ್ಪಣಿ**

೧. ತೊಂಡು ಮೇವು ಕಂತೆ ಆರು ನಾರಾಯಣ ಕೆ.ವಿ. ಬರಹ ಪಬ್ಲಿಷಿಗ್ ಹೌಸ್ ಬೆಂಗಳೂರು. ೨೦೧೦ ಪು. ೨೨೩

## ಅಧ್ಯಾಯ ಆರು

# ಸಮಾರೋಪ

ಕನ್ನಡ ಪ್ರತಿಕೋದ್ಯಮ ಹಾಗೂ ಕನ್ನಡ ಸಾಹಿತ್ಯ ಲೋಕದಲ್ಲಿ ತಮ್ಮದೇ ಆದ ವಿಶಿಷ್ಟ ಛಾಪನ್ನು ಮೂಡಿಸಿರುವ ರವಿ ಬೆಳಗೆರೆಯವರು, ತಮ್ಮ ಬರಹಗಳ ಮೂಲಕ ತಮ್ಮದೇ ಆದ ಓದುಗ ಮತ್ತು ಅವರ ಮುಖ ಕಂಡರಾಗದವರ ಸಮೂಹವನ್ನು ಸೃಷ್ಟಿಸಿಕೊಂಡಿದ್ದಾರೆ ಎಂದರೆ ಅತಿಶಯೋಕ್ತಿಯೇನಲ್ಲ. ರವಿಯವರು ಏನನ್ನು ಆಗಲೂ ಬಯಸುವುದಿಲ್ಲ; ಬದಲು ಸಾಗಲು ಬಯಸುತ್ತಾರೆ. ಆಗುವಿಕೆಯೇ ಅಂತ್ಯ ಸಾಗುವಿಕೆಯೇ ಜೀವಂತ ಎನ್ನುವ ಧೋರಣೆ ಅವರದು. ಅವರು ನಡೆದ ಹಾದಿಯನ್ನು ಗಮನಿಸಿದಾಗ ಇದು ಮತ್ತಷ್ಟು ಸ್ಪಷ್ಟವಾಗುತ್ತದೆ. ಬರಿಗೈಯಲ್ಲಿ ಬಂದವನು ಬರೆದು ತುಂಬಿಕೊಂಡದ್ದು ಬದುಕಿನ ಜೋಳಿಗೆ. ಮಾತು ಮಾತು ಮಥಿಸಿ ಬಂದದ್ದು ನಿನಾದ. ಪ್ರೀತಿ, ಸಿಟ್ಟು, ಸೆಡವು, ಗತ್ತು ಗೈರತ್ತು, ತನ್ನ ರೂಪಿನ ಮೇಲೆ ತನಗೊಂದಿಷ್ಟು ಪ್ರೀತಿ, ತನ್ನ ಅಕ್ಷರದ ಕುರಿತು ಅಕ್ಕರೆ, ಬೆಳಕು ಎಲ್ಲಿದ್ದರೂ ಕದ್ದಾದರೂ ತರುವ ಹುಮ್ಮಸ್ಸು, ಕತ್ತಲೆಯಲ್ಲಿ ಕಂಡದ್ದನ್ನು ಕತೆಯಾಗಿಸುವ, ಬೆಳಕಲ್ಲಿ ಕಾಣದ್ದನ್ನು ಮಾತಾಗಿಸುವ ರವಿಯೆಂಬ ರವಿಯನ್ನು ಸುಮ್ಮನೆ ಕೂತು ನೋಡಿದರೆ, ಅಚ್ಚರಿಯ ಮೂಟೆ, ಕ್ಷಣಕ್ಷಣಕ್ಕೊಂದು ಆಟಿಕೆ, ಚಿತ್ರ ವಿಚಿತ್ರ ಚಿತ್ತ ಎಲ್ಲ ಅನುಭವಗಳ ಮೊತ್ತ. ಬಡತನ ಕೊಟ್ಟ ಉಡುಗೊರೆ, ಅವಮಾನ ಕೊಟ್ಟ ಚಾಟಿಯೇಟು, ಸಂಬಂಧವೇ ಇಲ್ಲದವನು ಅನಾವಶ್ಯಕ ಎಸೆದ ಕಲ್ಲುಗಳನ್ನೇ ಮೆಟ್ಟಿಲಾಗಿಸಿ ಮೇಲೆ ಬಂದ ರವಿಯವರ ಬದುಕು ಅಚ್ಚರಿ ಹುಟ್ಟಿಸುತ್ತದೆ.

ರಸವತ್ತಾದ ಮಾತಿನ ಅಭಿವ್ಯಕ್ತಿಯೇ ಸಾಹಿತ್ಯ ಎನ್ನುವುದಾದರೆ, ಮಾತು ಬರುವುದು ಮನಸ್ಸಿನ ಮೂಲಕ. ಮನುಷ್ಯನ ಮನಸ್ಸು ಭಾವನೆಗೂ ಸಂಬಂಧ ಕಲ್ಪಿಸುವುದು ಸಾಹಿತ್ಯ ಎಂಬುದನ್ನು ಯಾರೂ ಮರೆಯುವಂತಿಲ್ಲ. ಹೊರ ಜಗತ್ತಿನ ಎಲ್ಲ ಅನುಭವಗಳು ಮನಸ್ಸಿನಲ್ಲಿ ಸಾಕಾರಗೊಂಡು ಭಾಷೆಯೊಂದಿಗೆ ವ್ಯಕ್ತಗೊಂಡಾಗ ಅದು ಸಾಹಿತ್ಯವೆನಿಸಿಕೊಳ್ಳುತ್ತದೆ. ಬರಹಗಾರ/ ಸಾಹಿತಿ ಚಿತ್ರಿಸ ಹೊರಡುವುದು ಇಡೀ ಜೀವನದ ವಾಸ್ತವವನ್ನಲ್ಲ; ಅದರ ಬಿಡಿ ಬಿಡಿ ಮುಖಗಳನ್ನು

ಮಾತ್ರ. ಅಂಥ ಒಂದು ಸಮಗ್ರ ಮುಖವನ್ನು, ಆಯಾಮವನ್ನು ಚಿತ್ರಿಸುವ ಜೀವನದ ಬಗೆಗಿನ ಪೂರ್ವನಿಯೋಜನೆಗಳ ವಿನ್ಯಾಸಕ್ಕೆ ಒಳಪಟ್ಟಿರುತ್ತದೆ. ಸಾಹಿತ್ಯ ತನ್ನ ಈ ವಿಶಿಷ್ಟ ಗುಣಧರ್ಮದಿಂದಾಗಿ ಜೀವನದ ವೈವಿಧ್ಯಪೂರ್ಣ ಅನುಭವಗಳಾದ ನೋವು, ಗೆಲುವು, ಅಸಹಾಯಕತೆ, ಅವಮಾನ, ತಿರಸ್ಕಾರ, ಬಡತನ, ಬಂಧಾನುಬಂಧ, ಸಾಮಾಜಿಕ ಮೌಲ್ಯ ಮೊದಲಾದ ಅಂಶಗಳನ್ನು ಒಳಗೊಂಡಿರುತ್ತದೆ. ಜೀವನ ಹೀಗಿದೆ ಎಂದು ಭಾವಿಸುವ ಸಾಹಿತಿ ಈ ಪ್ರಕಾರವನ್ನು ಅಭಿವ್ಯಕ್ತಿಗಾಗಿ ಆಯ್ದುಕೊಳ್ಳುತ್ತಾನೆ.

ಮಾನವ ಜೀವನದ ಎಲ್ಲಾ ಸಾಧ್ಯತೆಗಳನ್ನು ಹುಡುಕಾಟ, ನಂಬಿಕೆ ಮುಂತಾದವುಗಳನ್ನೆಲ್ಲಾ ಸಾಹಿತ್ಯವು ಶೋಧಿಸುತ್ತದೆ. ಜೀವನದ ನಿಗೂಢತೆಯ ದ್ವಂದ್ವಗಳನ್ನು ತನ್ನ ಉತ್ಕೃಷ್ಟ ಭಾಷೆಯಲ್ಲಿ ಮಂಡಿಸುತ್ತದೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪ್ರಧಾನವಾಗಿ ವಸ್ತು, ಭಾಷೆ, ತಂತ್ರ ಮುಂತಾದವುಗಳು ಅಭಿವ್ಯಕ್ತಿಯಲ್ಲಿ ಪರಿಣಾಮಕಾರಿಯಾಗಿ ಮಂಡಿತವಾಗುತ್ತವೆ. ಕೇವಲ ಮನಸ್ಸಿನ ಓತಪ್ರೋತ ಭಾವನೆಗಳನ್ನು ಕೃತಕವೆನಿಸದ ಹಾಗೆ ಚಿತ್ರಿಸಲಾಗಿದೆ. ಸಮಕಾಲೀನ ವಸ್ತುಗಳು, ಸತ್ಯಗಳು ಸರ್ವಕಾಲಿಕವಾಗಿಯೂ ಪ್ರಸ್ತುತವಾಗುತ್ತವೆಂಬುದನ್ನು ಸಾಹಿತ್ಯದಲ್ಲಿ ಗಮನಿಸಬಹುದು. ರಾಜಕೀಯ, ಧಾರ್ಮಿಕ, ಪರಕೀಯ, ಆಧುನಿಕ, ದಾಂಪತ್ಯ, ಪ್ರೇಮ, ಸಂಘರ್ಷ, ಹಳ್ಳಿಯ ಸಂಕಷ್ಟಗಳು ಹೀಗೆ ಹಲವಾರು ವಿಧದ ವಸ್ತುಗಳನ್ನು ಶೋಧಿಸುವಲ್ಲಿ ಪ್ರಮುಖವೆನಿಸಿದೆ. ಬಹುಮುಖ್ಯವಾಗಿ ಕೇಂದ್ರ ಪಾತ್ರವೊಂದರಲ್ಲಿನ ತೀವ್ರ ಪರಕೀಯ ಸ್ಥಿತಿಯನ್ನು ಹಳ್ಳಿ, ನಗರಗಳ ಸಂಬಂಧ ಇವೆರಡೂ ಸಮಾಜದಲ್ಲಿ ಹಿಂಸೆ, ಕ್ರೌರ್ಯ, ದೌರ್ಜನ್ಯ, ಶೋಷಣೆಯ ವಿವಿಧ ಬಗೆಯ ಸಮಸ್ಯೆಗಳನ್ನು ಹಿಡಿದಿಟ್ಟಿವೆ. ಹಾಗೆಯೇ ಆಧುನಿಕತೆಯು ತೀವ್ರವಾಗಿ ಎದುರಾದಾಗ ಅದನ್ನು ಎದುರಿಸುವ ದೇಶಿ ಮಾದರಿಯ ಒಳನೋಟಗಳನ್ನು ಜಾತಿರಹಿತ ಮುಕ್ತ ಸಮಾಜವನ್ನು ಬಯಸುವ ಪಾತ್ರಗಳು, ವಸ್ತುಗಳನ್ನು ಕಾಣಬಹುದು.

ಸಾಹಿತ್ಯದ ಮೂಲಭೂತ ಧೋರಣೆ ಭಾಷೆಯ ಉಪಯೋಗಕ್ಕೆ ಸಂಬಂಧಿಸಿದ್ದಾಗಿದೆ. ಆದರೆ ಈ ಧೋರಣೆಯ ಪ್ರಕಾರ ಸಾಹಿತ್ಯದಲ್ಲಿ ಪ್ರತಿಪಾದನೆಗೆಂದು ಉಪಯೋಗಿಸಿದ ಭಾಷೆಗಿಂತ ಶೋಧನೆಗೆಂದು ತೊಡಗಿಸಿದ ಭಾಷೆ ಹೆಚ್ಚು ಮಹತ್ವವುಳ್ಳದೆಂದು ಬಗೆಯುವುದರಿಂದ ಸಾಹಿತಿ ಜೀವನವನ್ನು ಪರಿಭಾವಿಸುವ ರೀತಿಯೂ ಹಿಂದಿನದಕ್ಕಿಂತ ಬೇರೆಯಾಗಿದೆ. ಈ ಮಾತಿನ ಧೋರಣೆಯೂ ಭಾಷೆಯಾಗಿದೆ. ಕನ್ನಡ ಸಾಹಿತ್ಯದಲ್ಲಿ ಕನ್ನಡ ಭಾಷೆಯನ್ನು ಹೆಚ್ಚು ಸೃಜನಶೀಲವಾಗಿ ಬಳಸಿಕೊಂಡವರೆಂದರೆ ಯು.ಆರ್. ಅನಂತಮೂರ್ತಿ, ಪಿ. ಲಂಕೇಶ್, ಪೂರ್ಣಚಂದ್ರ ತೇಜಸ್ವಿ ಮುಂತಾದವರು. ತಮ್ಮ ವಸ್ತುಗಳಿಗೆ ತಕ್ಕಂತೆ ಭಾಷೆಯನ್ನು ಹೊಸ ಸಂವೇದನೆಗೆ ಒಗ್ಗಿಸುವುದರ ಮೂಲಕ ಭಾಷೆಯನ್ನು ಹೆಚ್ಚು ಜೀವಂತಿಕೆಯಿಂದಿರಿಸಿದ್ದಾರೆ. ನಂತರ ಭಾಷಾ ಮಡಿವಂತಿಕೆಯ ಬಗೆಯನ್ನು ಕಳಚಿ ಹೊಸ ಹೊಸ ಪ್ರಯೋಗಗಳ ಮೂಲಕ ಮತ್ತಷ್ಟು ಭಾಷಾ ಬಳಕೆಯ ಸಾಧ್ಯತೆಗಳನ್ನು ತೋರಿಸಿಕೊಟ್ಟವರು ರವಿ ಬೆಳಗೆರೆ.

ನಾಗರೀಕನ ನಯಗೊಂಡ ಭಾಷೆಗಿಂತ ಭಿನ್ನ ಸ್ವರೂಪದ ಭಾಷೆಯೇ ಗ್ರಾಮೀಣರ ಭಾಷೆ. ಹೆಚ್ಚು ಜೀವಂತವಾದ, ಶಕ್ತಿಯುತವಾದ ಭಾಷೆಯೆಂದರೆ ಇದೆ. ವಾಸ್ತವತೆಯೇ ಇದರ ಮೂಲನಾಡಿ:

ಅಸ್ವಾಭಾವಿಕತೆ ಇದಕ್ಕೆ ವಿರುದ್ಧವಾದ ವಿಷಯ. ಆದ್ದರಿಂದ ಭಾಷೆಯ ನಿಜವಾದ ಜೀವಾಳವನ್ನು ಕಾಣಬೇಕಾದರೆ ಗ್ರಾಮ್ಯ ಭಾಷೆಗೆ ತೆರಳಬೇಕು. ನಾಗರಿಕ ಭಾಷಾ ಜಗತ್ತಿನಲ್ಲಿ ಕಾಣದ, ಬಳಸದ ಎಷ್ಟೋ ಅಪೂರ್ವ ಪದಗಳು ಗ್ರಾಮ್ಯ ಭಾಷೆಯಲ್ಲಿ ಇಂದಿಗೂ ಜೀವಂತವಾಗಿದೆ. ಸಂಸ್ಕೃತಿಯ ಸೂಕ್ಷ್ಮಗಳನ್ನು ಹೊಂದಿ ರೂಪಗೊಳ್ಳದ ಯಾವ ಸಾಲೂ ಸಾಹಿತ್ಯ ಭಾಷೆಯಲ್ಲಿ ಮಜಾ ನೀಡಲಾರದು. ಇಂತಹ ಬದುಕಿನ ಎಲ್ಲ ಮಗ್ಗಲುಗಳನ್ನು ಸೃಷ್ಟಿಸುವ, ಒಳಗೊಳ್ಳುವ, ವಿಸ್ತರಿಸುವ, ದಾಖಲಿಸುವ ರವಿಯವರ ಶೈಲಿ ನಿಜಕ್ಕೂ ವಿಶೇಷವಾದದ್ದು. ಅವರ ಗದ್ಯ ಕಸಿ ಗದ್ಯ, ಇದು ಕನ್ನಡ ಗದ್ಯ ಬರಹಕ್ಕೆ ಹೊಸತನವನ್ನು ತಂದುಕೊಟ್ಟಿದೆ. ಬಯಲು ಸೀಮೆಯ ಗ್ರಾಮೀಣ ಪರಿಸರದಿಂದ ಬೆಂಗಳೂರಿನ ಸಂಕೀರ್ಣ ನಾಗರಿಕ ಬದುಕಿನ ದಾರಿಯಲ್ಲಿ ಕಂಡ ವಿಭಿನ್ನ ಮುಖವಾಡಗಳನ್ನು ಅನಾವರಣಗೊಳಿಸುತ್ತಲೇ ಪ್ರಸ್ತುತ ಜಗತ್ತಿನ ವಿದ್ಯಮಾನಗಳನ್ನು ಯಥಾರ್ಥವಾಗಿ ಇಲ್ಲಿ ದಾಖಲಿಸುತ್ತ ಹೋಗುತ್ತಾರೆ. ಮಾಹಿತಿ ಪೂರ್ಣ ಗಂಭೀರ ಬರಹ, ವ್ಯಂಗ್ಯ ವಿಷಾದಗಳನ್ನೊಳಗೊಂಡ ವಿಡಂಬನೆ, ತಿಳಿ ಹಾಸ್ಯ ಲೇಪಿತ ಹರಟೆಗಳೆಲ್ಲವನ್ನು ಏಕಕಾಲಕ್ಕೆ ಸ್ಫುರಿಸುವ ಶಕ್ತಿ ರವಿಯವರ ಬರಹಕ್ಕಿರುವುದರಿಂದಲೇ ತಲಸ್ಪರ್ಶಿಯಾದ ಬರವಣಿಗೆ ಅವರಿಗೆ ಸಾಧ್ಯವಾಗಿದೆ.

ಈ ಅಧ್ಯಯನ ಆಯ್ಕೆಯ ಪ್ರಮುಖ ಪ್ರೇರಕ ಮತ್ತು ಕುತೂಹಲವೆಂದರೆ ರವಿಯವರ ಅಫಿಡವಿಟ್ಟು, ಬರವಣಿಗೆ, ಮಾತಿನ ಶೈಲಿ ಮತ್ತು ಇವುಗಳಿಂದ ಪಡೆದುಕೊಂಡ ಯಶಸ್ಸಿನ ಜನಪ್ರಿಯತೆ. ಬರವಣಿಗೆಯನ್ನೇ ಉಸಿರಾಗಿಸಿಕೊಂಡು ಸಾಹಿತ್ಯದ ಅಷ್ಟೂ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ತಮ್ಮ ಪತ್ರಿಕೆಗೆ ವಿನಿಯೋಗ ಕ್ರಮ ಸಾಲದೆಂಬಂತೆ ಇತರ ಪತ್ರಿಕೆಗಳಿಗೂ ಬರೆಯುತ್ತಾ, ಜೊತೆಗೆ ಸಿನೆಮಾ, ರೇಡಿಯೋ, ದೂರದರ್ಶನ, ಕಥೆ, ಚಿತ್ರಕಥೆ, ಸಂಭಾಷಣೆ, ಸಿಡಿ, 'ಪ್ರಾರ್ಥನಾ ಎಜುಕೇಶನ್ ಸೊಸೈಟಿ', ಓ ಮನಸ್ಸೇ, ಭಾವನಾ ಪ್ರಕಾಶನ ಹೀಗೆ ರವಿಯವರು ದೈತ್ಯ ಬರಹಗಾರ; ಕೆಲಸಗಾರ. ಅಷ್ಟೇ ಪ್ರಾಮಾಣಿಕ ನಿಷ್ಠುರ ಬರವಣಿಗೆಯ ಬದುಕಿನ ಅನ್ವೇಷಕ. ಜನಸಾಮಾನ್ಯರ ಅಂತರಂಗದ ಚಡಪಡಿಕೆಯ ಪ್ರತಿಬಿಂಬ ಎಂಬಂತಾಗಿದ್ದು ಅವರ ಬರಹ ಮತ್ತು ಮಾತಿನ ಶೈಲಿಯಿಂದ ಎಂಬುದನ್ನು ಮರೆಯುವಂತಿಲ್ಲ.

ಇವುಗಳ ಬೆನ್ನು ಬಿದ್ದ ಕುತೂಹಲವೇ ಈ ಅಧ್ಯಯನಕ್ಕೆ ಪ್ರೇರೇಪಿಸಿತು. ರವಿ ಬೆಳಗೆರೆಯವರನ್ನು ಕೇವಲ ಒಬ್ಬ ಪತ್ರಕರ್ತ, ಜನಪ್ರಿಯ ಬರಹಗಾರನನ್ನಾಗಿ ನೋಡಿದರೆ ಅವರ ಬರಹದ ಆಳ ವಿಸ್ತಾರಗಳು ಗೋಚರಿಸುವುದಿಲ್ಲ. ಇವೆರಡರ ಜೊತೆಗೆ ಅವರ ಬರಹಗಳಲ್ಲಿ ಒಬ್ಬ ದಾರ್ಶನಿಕ, ಮನಶಾಸ್ತ್ರಜ್ಞ, ತತ್ವಜ್ಞಾನಿ, ಭಾವುಕ ಇವೆಲ್ಲವುಗಳಿಗಿಂತ ಮುಖ್ಯವಾದ ಪ್ರಮುಖವಾಗಿ ಅವರು ಯಶಸ್ವಿಗೆ ಕಾರಣವಾದದ್ದು ಅತ್ಯುತ್ತಮ ಆಪ್ತ ಸಲಹೆಗಾರ, ಗೆಳೆಯ, ಬಂಧು-ಬಳಗ ಎಲ್ಲವೂ ಅವರಲ್ಲಿ ಕಾಣಿಸಿಕೊಂಡದ್ದಕ್ಕಾಗಿ. ಕನ್ನಡ ಸಾಹಿತ್ಯದಲ್ಲಿ ಇಲ್ಲಿಯವರೆಗೆ ಎಷ್ಟೋ ಬರಹಗಾರರು, ಪಂಡಿತರು, ಸಾಹಿತಿಗಳು ಆಗಿ ಹೋಗಿದ್ದಾರೆ ನಿಜ. ಆದರೆ ಅವರೆಲ್ಲರ ಬರಹಗಳಲ್ಲಿ ಎಲ್ಲವೂ ಇದ್ದರೂ ಸರಳತೆ ಮತ್ತು ಆಪ್ತತೆ ಇರಲಿಲ್ಲ. ದಾರ್ಶನಿಕರಂತೆ, ಮೇಧಾವಿಗಳಂತೆ, ಭಾಷಾ

ವಿದ್ವಾಂಸರಂತೆ ಘನ ಪಂಡಿತರಂತೆ ಹೇಳಿದರು, ಬರೆದರು; ಆಳವಾಗಿ, ಗಂಭೀರವಾಗಿ ಸಾಮಾನ್ಯರಿಗೆ ಅರ್ಥವಾಗದಂತೆ ಬರೆದರು. ಆ ಮೂಲಕ ಅವರ ಬರವಣಿಗೆ ಕೇವಲ ಒಂದು ವರ್ಗದ ವಲಯಕ್ಕಷ್ಟೇ ಸಿಮೀತವಾಯಿತು. ಅವರೆಲ್ಲ ಸಂಗ್ರಹಶೀಲರು. ಆದರೆ ರವಿ ಬೆಳಗೆರೆಯವರು ವಿಸ್ತರಣಶೀಲರು. ಸರಳವಾಗಿ ಬರೆದರೂ ತಮ್ಮ ನೋವು, ನಿರಾಶೆ, ಗೆಲುವು, ಸೋಲು, ಅವಮಾನ, ಒಂಟಿತನ, ಬಡತನ ಮುಂತಾದವೆಲ್ಲವುಗಳ ಬಗೆಗೆ ಬರೆದರು. ಎಲ್ಲರವೂ ತನ್ನವೂ ಎನ್ನುವಂತೆ ಬರೆದರು. ಎಲ್ಲರಿಗೂ ತಲುಪುವಂತೆ ಬರೆದರು. ಬಹುಶಃ ಕನ್ನಡದ ಯಾವ ಬರಹಗಾರ, ಸಾಹಿತಿಯಲ್ಲಿಯೂ ಈ ಮನೋಧರ್ಮ ಕಂಡುಬರುವುದಿಲ್ಲ. ಅವರ ಯಶಸ್ವಿಗೆ ಇದು ಒಂದು ಕಾರಣ.

ಕನ್ನಡ ಭಾಷೆಯಲ್ಲಿ ಅವರು ಮಾಡಿದ ಮತ್ತೊಂದು ನೂತನ ಪ್ರಯೋಗವೆಂದರೆ, ಕ್ರೈಮ್ ಬರಹಗಳು. ಭಾರತೀಯ ಭಾಷೆಗಳ ವಿಷಯದಲ್ಲಿ ನಿಖರವಾಗಿ ಹೇಳದಿದ್ದರೂ ಕನ್ನಡಕ್ಕಂತೂ ಇದು ಹೊಸದು. ಈ ಪ್ರಕಾರಕ್ಕೆ ಸಂಬಂಧಿಸಿದಂತೆ ಅಪರಾಧವನ್ನು ವೈಭವೀಕರಿಸಿ ಬರೆಯುತ್ತಾರೆ ಎಂಬ ಅಪವಾದ ರವಿಯವರ ಮೇಲಿದ್ದರೂ, ಅವರು 'ಕ್ರೈಮ್ ಬರಹಗಳ' ಮೂಲಕ ಅಪರಾಧಿಗಳ ಮನಸ್ಸಿನಲ್ಲಿ ಮನುಷ್ಯತ್ವದ ಸೆಳಕನ್ನು ಹುಡುಕಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಅವುಗಳ ಮೂಲಕ ಅವರು ಹೇಳಹೊರಟಿರುವುದಾದರೂ ಏನು? ಸಮಾಜ ಕಂಟಕವಾದ ಭೂಗತ ಜಗತ್ತಿನಲ್ಲಿ ಯಾರೂ ನೆಮ್ಮದಿಯಾಗಿಲ್ಲ, ಇರುವುದಿಲ್ಲ. ಅಸಲಿಗೆ ಅಲ್ಲಿ ಜೀವನವೇ ಇಲ್ಲವೆಂದು ಹೇಳುವ ಪ್ರಯತ್ನವೇ ಕ್ರೈಮ್ ಬರಹಗಳು. ಅವರ 'ಖಾಸ್‌ಬಾತ್' ಅಂತೂ ಪ್ರತಿಯೊಬ್ಬ ಓದುಗನಿಗೂ ಸ್ಫೂರ್ತಿ, ನಂಬಿಕೆ, ಪ್ರೋತ್ಸಾಹ, ಪ್ರೇರಕವೆಂದು ಹೇಳಬಹುದು. ಅವರ ಬದುಕಿನ ಕಥನವನ್ನು ಓದಿದ ಓದುಗರು ಅದರಲ್ಲಿ ತಮ್ಮನ್ನೂ ತಾವು ಕಂಡುಕೊಂಡಿದ್ದಾರೆ. ರವಿಯವರ ನೋವು, ಕಷ್ಟ, ಒಂಟಿತನ, ಅವಮಾನ, ನಿರಾಶೆ, ಬಡತನ ಎಲ್ಲವೂ ಅವರವೇ. ಅಷ್ಟು ಶಕ್ತಿಯುತ ಮತ್ತು ಮೌಲ್ಯಯುತವಾದ 'ಖಾಸ್‌ಬಾತ್'. ನಂತರದ ದಿನಮಾನಗಳಲ್ಲಿ ಅಂದರೆ ಅವರ ಬೆಳವಣಿಗೆಯಾದಂತೆ ಆ ಶಕ್ತಿ, ಮೌಲ್ಯ ಅಷ್ಟಾಗಿ ಕಾಣಿಸಿಕೊಳ್ಳುವುದಿಲ್ಲವೆಂಬುದು ವಿಷಾದನೀಯ. ಇದರ ಜೊತೆಯ ಪೈಪೋಟಿಯ ಬರಹವೆಂದರೆ 'ಬಾಟಮ್ ಐಟಮ್'.

ಓದಿದ ಪುಸ್ತಕ, ತೋಚಿದ, ಕಾಡಿದ, ಎದುರಾದ, ಅನುಭವಿಸಿದ ಭಾವ ಅನಿಸಿಕೆಗಳನ್ನೆಲ್ಲ ಓದುಗರೊಂದಿಗೆ ಹಂಚಿಕೊಳ್ಳಬೇಕು ಅಂದುಕೊಂಡ ಪ್ರಯತ್ನ ಬಾಟಮ್ ಐಟಮ್ ಬರಹ. ಪ್ರತಿಯೊಬ್ಬರ ವ್ಯಕ್ತಿತ್ವ, ಚಿಂತನೆ, ವರ್ತನೆಗಳು ಪ್ರತಿನಿತ್ಯ ಸ್ವಲ್ಪ ಸ್ವಲ್ಪ ತಿದ್ದುಪಡಿಗೊಳಗಾಗಬೇಕಾಗಿರುತ್ತವೆ. ಅದನ್ನು ಕೊನೆತನಕ ಸರಿಪಡಿಸಿಕೊಳ್ಳುತ್ತ, ದಿನ ದಿನಕ್ಕೆ ಪರಿಪೂರ್ಣತೆಯತ್ತ ಸಾಗುವುದೇ ಜೀವನ. ಬದುಕಿನ ಬಹುತೇಕ ಎಲ್ಲ ವಿವರಗಳನ್ನು ಈ ಬರಹ ಒಳಗೊಂಡಿದೆ. ಸಣ್ಣ ವಿಷಯಗಳಿಂದ ಹಿಡಿದು ಗಂಭೀರ ವಿಷಯಗಳ ಸಮಸ್ಯೆಗೆ ಇದರಲ್ಲಿ ಪರಿಹಾರಗಳಿವೆ. ಒಂದರ್ಥದಲ್ಲಿ ಇವೆರಡು ಖಾಸ್‌ಬಾತ್ ಮತ್ತು ಬಾಟಮ್ ಐಟಮ್ ಬರಹಗಳು ಮಾನವ ಬದುಕಿನ ದೈನಂದಿನ ತತ್ವಜ್ಞಾನ ಎಂದ್ಹೇಳಬಹುದು.

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃಷಿ ಮಾಡಿರುವ ರವಿ ಬೆಳಗೆರೆಯವರು ಅತ್ಯುತ್ತಮ ಕೃತಿಗಳನ್ನು, ಬರಹಗಳನ್ನು ನೀಡಿದ್ದಾರೆ. ಸಮಕಾಲೀನ ರಾಜಕೀಯ ವ್ಯಕ್ತಿಗಳ, ಘಟನೆಗಳ ಬಗ್ಗೆ ಕಟುವಾದ ವಿಷಯಗಳ ಕುರಿತು ಬರೆದಿದ್ದಾರೆ. ಅದು ವೃತ್ತಿಧರ್ಮ. ಕೆಲವು ಕೃತಿಗಳು ಸಾಹಿತ್ಯದ ಮಟ್ಟಿಗಂತೂ ಉಪಯುಕ್ತವಾದ ಬರಹಗಳು. ಇಷ್ಟು ವ್ಯಾಪಕವಾಗಿ ಹಾಗೂ ವೈವಿಧ್ಯಮಯವಾಗಿ ಬರೆದಿರುವ ರವಿ ಬೆಳಗೆರೆಯವರ ಬರಹಗಳು(ಕಥೆಗಳನ್ನು ಹೊರತುಪಡಿಸಿ) ವಿಮರ್ಶಕರ ನಿರ್ಲಕ್ಷ್ಯಕ್ಕೆ ಒಳಗಾಗಿರುವುದು ವಿಷಾದನೀಯ ಸಂಗತಿ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರವಿ ಬೆಳಗೆರೆಯವರ ಸ್ಥಾನಮಾನ ಮತ್ತು ಅವರ ಬರಹಗಳ ಬಗೆಗೆ ಲೇಖಕರಾದ 'ಜೋಗಿ'(ಗಿರೀಶ್ ರಾವ್) ಅವರು ಹೇಳುವುದು ಹೀಗೆ.

'ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರವಿ ಬೆಳಗೆರೆ ಸ್ಥಾನಮಾನವೇನು ಅನ್ನುವ ಪ್ರಶ್ನೆಗೆ ಉತ್ತರಿಸುವ ಅಗತ್ಯವಿಲ್ಲ. ಯಾಕೆಂದರೆ ಚರಿತ್ರೆಯ ನಿರ್ಮಾಪಕರು ಯಾರು? ಎಂಬ ಪ್ರಶ್ನೆಗೆ ತುಂಬಾ ಅಸಮರ್ಪಕವಾದ ಉತ್ತರ ಸಿಗುತ್ತದೆ. ಇವತ್ತು ಕನ್ನಡದಲ್ಲಿ ಅತ್ಯಂತ ಹೆಚ್ಚು ಮಾರಾಟವಾಗುವುದು ರವಿ ಬೆಳಗೆರೆಯವರ ಕೃತಿ. ಎರಡನೆಯ ಸ್ಥಾನ ಡಾ. ಎಸ್.ಎಲ್. ಭೈರಪ್ಪ, ಮೂರನೆಯ ಸ್ಥಾನದಲ್ಲಿ ತೇಜಸ್ವಿ ಇದ್ದಾರೆ.

ಸಂತೋಷದ ಸಂಗತಿಯೆಂದರೆ ಈ ಮೂವರು ವಿಮರ್ಶಕರನ್ನು, ವಿಮರ್ಶೆಯನ್ನು ಮೀರಿದವರು. ಕನ್ನಡ ಓದುಗ ಬಳಗವನ್ನು ಹೆಚ್ಚಿಸಿದವರು. ಇವರ ಪುಸ್ತಕ ಹೀಗಿದೆ ಎಂದು ಯಾರು ಸರ್ಟಿಫಿಕೇಟು ಕೊಡಬೇಕಾಗಿಲ್ಲ. ಯುಟಿಲಿಟಿ ಬಯಸುವ ಲೆಕ್ಕಾಚಾರದ ಓದುಗನಿಗೂ ಕೇವಲ ಆನಂದವನ್ನಷ್ಟೇ ಬಯಸುವ ನಿಜದ ಓದುಗರಿಗೂ ಏಕಕಾಲಕ್ಕೆ ಸಂತೋಷ ಕೊಡುವಂತೆ ಬರೆಯಬಲ್ಲವರು ಈ ಮೂವರು. ಕನ್ನಡದ ಮಾತಿಗೆ ಬಂದರೆ ಪಾಪ್ಯುಲಾರಿಟಿ ಶತ್ರು ಎಂದು ಭಾವಿಸುವ ಬಹುದೊಡ್ಡ ಲೇಖಕರ ಬಳಗ ನಮ್ಮಲ್ಲಿದೆ. ಅವರು ಜನಪ್ರಿಯತೆಯ ಕಡು ವಿರೋಧಿಗಳು. ಹೆಚ್ಚು ಮಂದಿ ಓದಿದರೆ ಅದು ಒಳ್ಳೆಯ ಕೃತಿಯಲ್ಲ ಎಂಬ ಗುಮಾನಿ. ಹತ್ತು ವರುಷಗಳಲ್ಲಿ ಸಾವಿರ ಪ್ರತಿ ಖರ್ಚಾದರೆ ಅದು ಯಶಸ್ವಿ ಕಾದಂಬರಿ. ಅಂಥದ್ದರ ನಡುವೆ ಗೆದ್ದು ನಿಂತವರು ರವಿ ಬೆಳಗೆರೆ.

ಕನ್ನಡ ಸಾಹಿತ್ಯ ಚರಿತ್ರೆ ಅನೇಕರನ್ನು ಸಾಹಿತ್ಯ ಚರಿತ್ರೆಯ ಯಾವುದೇ ಕಾಲಘಟ್ಟಕ್ಕಾಗಲೀ, ಪಂಥಕ್ಕಾಗಲೀ ಸೇರಿಸುವಲ್ಲಿ ಸೋತು ಕುಂತಿದೆ. ಅ.ನ.ಕೃ, ರಾಮಮೂರ್ತಿ, ತರಾಸು, ಬೀಚಿ, ಟಿ.ಕೆ. ರಾಮರಾವ್, ತೇಜಸ್ವಿ, ಭೈರಪ್ಪ ಇವರೆಲ್ಲ ನವ್ಯವೂ ಅಲ್ಲದ, ನವ್ಯೋತ್ತರವೂ ಅಲ್ಲದ, ಪ್ರಗತಿಶೀಲರೂ ಅಲ್ಲದ ಕನ್ನಡದ ಓದುಗರನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆಯುತ್ತಾ ಹೋದವರು. ಕನ್ನಡ ಕಣ್ತೆರೆಸಿದ ಲೇಖಕರು ಎಂದು ಕರೆಯಬಹುದಾದವರು. ಆ ಸಾಲಿನಲ್ಲೇ ರವಿ ಬೆಳಗೆರೆ ಕೂಡ ಬರುತ್ತಾರೆ.'[೧] ಇಂತಿಂಥಾ ಲೇಖಕರ ಕೃತಿಗಳಲ್ಲಿ ಜೀವನ ದೃಷ್ಟಿ, ಮಾನವ ಸಂಬಂಧಗಳು, ಅಸಮಾನತೆಯ ನೆಲೆ, ಶೋಷಣೆ, ಬಡತನ, ಮಹಿಳೆ ಎಂಬಿತ್ಯಾದಿ ಸಿದ್ಧ ಸೂತ್ರಗಳನ್ನು ಇಟ್ಟುಕೊಂಡ ವಿಮರ್ಶೆಯ ಮಾನದಂಡಗಳಿಗೆ ರವಿಯವರ ಕೃತಿಗಳು ಹೊಂದುವುದಿಲ್ಲ. ಆ ಪರಿಭಾಷೆಗಳನ್ನು, ಮಾನದಂಡಗಳನ್ನು ದಾಟಿ ಇನ್ನೂ ವಿಮರ್ಶೆ ಹೊರಬಂದಿಲ್ಲ. ಹೀಗಾಗಿ ಜನ ಓದುವ ಕೃತಿಗಳಿಗೂ

ಕೆಲವೇ ಜನ ಓದುವ ಕೃತಿಗಳಿಗೂ ಇರುವ ವ್ಯತ್ಯಾಸವನ್ನೂ ಗುರುತಿಸಲು ಪ್ರಯತ್ನಿಸುವುದಿಲ್ಲ ವಿಮರ್ಶೆ. ಇಷ್ಟಕ್ಕೂ ವಿಮರ್ಶೆ ಎಂಬುದು ಒಂದು ಕೃತಿಗೆ ಯಾಕೆ ಬೇಕು. ಬರಹಗಾರರನ್ನು ವಿಮರ್ಶೆ ಮತ್ತಷ್ಟು ಗಟ್ಟಿಗೊಳಿಸುತ್ತದೆ ಎನ್ನುವುದಾದರೆ, ಅದು ಒಂದು ರೀತಿಯಲ್ಲಿ ಸೃಜನಶೀಲ ಬರಹಗಾರನ ಮೇಲೆ ನಿರ್ಬಂಧ ಹೇರಿದಂತಾಗುವುದಿಲ್ಲವೆ? ವಿಮರ್ಶೆ ಬೇಕು ಎನ್ನುವುದಾದರೆ ಅದು ಕೃತಿಯೊಳಗಿನಿಂದ ಹುಟ್ಟಬೇಕು. ಅಂದರೆ ಕೃತಿಯ ವಸ್ತು ವಿಷಯಕ್ಕೆ ಅನುಗುಣವಾಗಿ ಸೂತ್ರಗಳು, ಮಾನದಂಡಗಳು ಸಿದ್ಧಗೊಳ್ಳಬೇಕು. ಅಲ್ಲದೇ ಈಗಾಗಲೇ ಹುಟ್ಟಿಕೊಂಡಿರುವ ಸಿದ್ಧಾಂತ, ಮಾನದಂಡಗಳ ವ್ಯಾಪ್ತಿಯೊಳಗೆ ಕೃತಿ ಬಂದು ನಿಲ್ಲಬೇಕು. ಅಂದರೆ ಎಷ್ಟರಮಟ್ಟಿಗಿನ ನ್ಯಾಯ? ಎಂಬಂಥ ಪ್ರಶ್ನೆಗಳು ಉತ್ತರ ಕಾಣದೆ ಉಳಿಯುತ್ತವೆ.

'ಮನುಷ್ಯ ಬೆತ್ತಲೆಯಾದಷ್ಟೂ ಮಾನವಂತನಾಗುತ್ತಾನೆ'. ಇದು ರವಿ ಬೆಳಗೆರೆಯವರ ಬದುಕಿನ ನಿಲುವು ಹೌದು, ಸಾಹಿತ್ಯಿಕ ನಿಲುವು ಹೌದು. ಅವರ ಸಾಹಿತ್ಯ ಮತ್ತು ಬದುಕನ್ನು ತೀರ ದೂರವಿಟ್ಟು ನೋಡುವುದು ಕಷ್ಟದ ಕೆಲಸ. ಹಾಗೆ ನೋಡಲೂಬಾರದೂ ಸಹ. ಲಂಕೇಶ್‌ರು ಪತ್ರಿಕೆ ಆರಂಭಿಸಿದ ನಂತರದ ದಿನಗಳಲ್ಲಿ ಅವರನ್ನು ಹಾಗೆ ಪ್ರತ್ಯೇಕವಾಗಿ ನೋಡುವುದು ಸಾಧ್ಯವಾಗುತ್ತಿರಲಿಲ್ಲ. ಖುಷ್‌ವಂತ್‌ಸಿಂಗ್ ವಿಚಾರದಲ್ಲೂ ಅಷ್ಟೇ. ಅದಕ್ಕೆ ಕಾರಣ ಅವರ ವೃತ್ತಿ ಪತ್ರಕರ್ತನ ಬದುಕು, ಸಾಹಿತಿಯ ಬದುಕಿನಷ್ಟು ಖಾಸಗಿಯಲ್ಲ. ಸಾಹಿತಿ ಎಲ್ಲವನ್ನೂ ದೂರ ಕುಳಿತು ನೋಡುತ್ತಾನೆ. ಆತ ನಿಲುವುಗಳನ್ನು ತಾಳಬೇಕಾಗಿಲ್ಲ, ತಕ್ಷಣ ಪ್ರತಿಕ್ರಿಯಿಸಬೇಕಾಗಿಲ್ಲ. ಕಂಡದ್ದು, ಅನಿಸಿದ್ದು, ಅನುಭವಿಸಿದ್ದು ಎಲ್ಲವೂ ಹೆಪ್ಪುಗಟ್ಟುವ, ಮಾಗುವ, ಹಣ್ಣಾಗುವತನಕ ಕಾಯುವ ವ್ಯವಧಾನ ಮತ್ತು ಅನುಕೂಲ ಎರಡೂ ಸಾಹಿತಿಗಳಿಗೆ ಇರುತ್ತದೆ. ಆದರೆ ಇದು ಪತ್ರಕರ್ತನಿಗೆ ಇರುವುದಿಲ್ಲ. ಅದೇ ಕಾರಣಕ್ಕೆ ಪತ್ರಕರ್ತನೊಬ್ಬ ಬರೆದ ಸಾಹಿತ್ಯವನ್ನು ಇತರೇ ಸಾಹಿತಿಗಳ ಬರಹಗಳಿಂದ ಬೇರ್ಪಡಿಸಿ ನೋಡಬೇಕಾ? ರವಿ ಬೆಳಗೆರೆಯವರ ವಿಷಯದಲ್ಲಿ ಆಗಿರುವುದು ಅದೇ.

ರವಿಯವರ ಬರಹಕ್ಕೊಂದು ಶೈಲಿಯಿದೆ. ಅದು ಅವರೇ ರೂಢಿಸಿಕೊಂಡ ನಿರೂಪಣಾ ಶೈಲಿ. ಅದು ಅವರ ಬರಹಗಳ ಶಕ್ತಿಯೂ ಆಗಿ ಪರಿಣಮಿಸಿದೆ. ನಿರೂಪಣಾ ಶೈಲಿಯಲ್ಲಾಗಲೀ, ಅಭಿವ್ಯಕ್ತಿಯ ಸ್ವರೂಪದಲ್ಲಾಗಲೀ, ಅನುಸಂಧಾನದಲ್ಲಾಗಲೀ ರವಿಯವರು ಯಾವುದನ್ನೂ ಸೂಚ್ಯವಾಗಿ ಹೇಳಲು ಹೊರಡುವುದಿಲ್ಲ. ಹೇಳಬೇಕು ಅಂದುಕೊಂಡದ್ದನ್ನು ಸ್ಪಷ್ಟವಾಗಿ ಎತ್ತರದ ದನಿಯಲ್ಲಿ ಹೇಳುತ್ತಾರೆ. ಈ ಎತ್ತರದ ದನಿಯನ್ನು ಸಾಹಿತ್ಯ ಲೋಕ ಗುಮಾನಿಯಿಂದ ನೋಡುತ್ತದೆ. ಪಿಸುಮಾತಾನಾಡುವವರ ಬಗ್ಗೆಯೇ ಅದಕ್ಕೆ ಅನುಪಮ ಪ್ರೀತಿ. ಒಟ್ಟಾರೆಯಾಗಿ ತನ್ನ ಪ್ರತಿಭೆಯ ಬಗ್ಗೆ ಅಗಾಧವಾದ ನಂಬಿಕೆಯಿಟ್ಟುಕೊಂಡು ಬರೆಯಬಲ್ಲ ಲೇಖಕ ರವಿ ಬೆಳಗೆರೆಯಂತಹವರ, ಮತ್ತು ಬರೆದೇ ಬದುಕುತ್ತೇನೆ ಎಂದು ಹೊರಟವರ ಎದುರಿರುವ ಸವಾಲು ಅದು. ಅದರಲ್ಲಿ ರವಿಯವರು ಯಶಸ್ವಿಯಾಗಿದ್ದಾರೆ ಎಂಬುದು ಈ ಅಧ್ಯಯನದ ಮುಖ್ಯ ತಿರುಳಾಗಿದೆ.

**ಅಧ್ಯಯನ ಫಲಿತಗಳು**

ರವಿ ಬೆಳಗೆರೆಯವರ ಸಾಹಿತ್ಯ ಮತ್ತು ಭಾಷೆಯನ್ನು ಕುರಿತಂತೆ ಮಾಡಿದ ಅಧ್ಯಯನದಲ್ಲಿ ಅನೇಕ ಮಹತ್ವದ ಅಂಶಗಳನ್ನು ಕಂಡುಕೊಳ್ಳಲಾಗಿದೆ. ಬಹುಮುಖ್ಯವಾಗಿ ಎಲ್ಲಾ ಕಾಲಘಟ್ಟದಲ್ಲಿ ಜರುಗುವ ಸಾಹಿತ್ಯಿಕ ಸಂಘರ್ಷಣೆಗಳು ಕೇವಲ ಅಂದಿನ ಕಾಲಮಾನದ ಪದ್ಧತಿಗನುಗುಣವಾಗಿ ಭಿನ್ನ ವಿಚಾರ ಮತ್ತು ಚರ್ಚೆಗಳಿಗೆ ಎಂದು ಭಾವಿಸಿಕೊಳ್ಳಲಾಗುತ್ತಿರುವ ಇಂದಿನ ಸಂದರ್ಭದಲ್ಲಿ ಇಂತಹ ಅಧ್ಯಯನವು ಮಹತ್ವದ್ದಾಗಿದೆ. ನನ್ನ ಅಧ್ಯಯನದ ಸಂದರ್ಭದಲ್ಲಿ ಸಾಹಿತ್ಯವು ಹೊಂದಿರುವ ಪರ ಮತ್ತು ವಿರೋಧದ ಮಧ್ಯದಲ್ಲಿನ ಘರ್ಷಣೆಯನ್ನು ನೋಡುವಾಗ ಅವುಗಳಿಗೆ ಇನ್ನೂ ಭಿನ್ನವಾದ ಕಾರಣಗಳಿವೆ ಎಂದು ಅನಿಸುತ್ತದೆ. ಸದ್ಯಕ್ಕೆ ಅಧ್ಯಯನದಿಂದ ಕಂಡುಕೊಂಡ ಅಂಶಗಳೇಂದರೆ:

೦೧. ರವಿ ಬೆಳಗೆರೆಯವರ ಬರಹಗಳಲ್ಲಿ ಪ್ರಗತಿಶೀಲ ಪಂಥದ ಲಕ್ಷಣಗಳನ್ನು ಕಾಣಬಹುದಾದರೂ ಯಾವುದೇ ಒಂದು ಪಂಥಕ್ಕೆ ನಿರ್ದಿಷ್ಟಗೊಳಿಸಲು ಆಗದು. ಶೈಲಿ ಮತ್ತು ನಿರೂಪಣಾ ಕ್ರಮ, ವಸ್ತು ಮುಂತಾದ ಕೆಲವು ಲಕ್ಷಣಗಳಿಂದ ಪ್ರಗತಿಶೀಲ ಬರಹಗಾರರ ಧೋರಣೆಗಳು ಅವರ ಬರಹಗಳಲ್ಲಿ ಗೋಚರಿಸಿದರೂ ಗೆರೆ ಎಳೆದಂತೆಯೇ ಸರಿ. ಇದೇ ಪಂಥಕ್ಕೆ ಸೀಮಿತವೆಂದು ಹೇಳಲಾಗದು. ಯಾಕೆಂದರೆ ಎಲ್ಲಾ ಕಾಲಕ್ಕೂ, ಪಂಥಕ್ಕೂ ಸಲ್ಲುವ ಬರವಣಿಗೆಯನ್ನು ಅವರು ಮಾಡಿದ್ದಾರೆ.

೦೨. ಕಾರ್ಮಿಕರ ಬಗ್ಗೆ, ಬಡತನದ ಬಗ್ಗೆ ಬರೆಯುತ್ತಿರುವಾಗ ರವಿಯವರಲ್ಲಿ ಮಾರ್ಕ್ಸವಾದದ ಪ್ರಭಾವ ಕಂಡುಬರುತ್ತದೆ. ಅಲ್ಲದೆ ಅವರ ಕೆಲವು ಕಥೆಗಳಲ್ಲಿ ಎಡಪಂಥೀಯ ಧೋರಣೆ ಕಂಡುಬರುತ್ತದೆಯಾದರೂ ಸಾರ್ವತ್ರಿಕ(ಯುನಿವರ್ಸಲ್)ವಾದಂಥ ಪ್ರೀತಿ–ಪ್ರೇಮಗಳ ಬಗ್ಗೆ, ಅಪರಾಧಿ(ಕ್ರೈಮ್) ಸಂಬಂಧಿತ ವಿಷಯಗಳೇ ಹೆಚ್ಚಿನದಾಗಿರುವುದಿಂದ ಅಲ್ಲಿ ಈ ಪಂಥೀಗಳ ಹುಡುಕಾಟ ಕಷ್ಟಸಾಧ್ಯ. ಆದರೂ ಕೆಲವು ಕಥೆಗಳು ಮತ್ತು ಅಂಕಣಗಳಲ್ಲಿನ ವಿಷಯಗಳಲ್ಲಿ ಬಡತನ, ಅಸಹಾಯಕತೆ, ಅವಮಾನ ಮುಂತಾದ ಅನೇಕ ಅಂಶಗಳು ಕಂಡುಬರುವುದರಿಂದ ಎಡಪಂಥೀಯ ಒಲವಿರುವ ಬರಹಗಾರ ಎಂದು ಹೇಳಬಹುದು.

೦೩. ಕನ್ನಡ ಪತ್ರಿಕಾ ಪ್ರಪಂಚಕ್ಕೆ ಮತ್ತು ಗದ್ಯ ಪ್ರಕಾರಕ್ಕೆ ಹೊಸ ಶೈಲಿಯನ್ನು ನೀಡುವುದರ ಮೂಲಕ ಟ್ಯಾಬ್ಲೊಲಾಯ್ಡ್ ಪತ್ರಿಕೆಯಲ್ಲಿ ಹೊಸ ಭಾಷೆಯನ್ನು ಬರೆದಿದ್ದಾರೆ. ಆ ಮೂಲಕ ಪತ್ರಿಕಾ ಭಾಷೆಗೆ ಹೊಸತನವನ್ನು ತಂದುಕೊಟ್ಟಿದ್ದಾರೆ. ಅವುಗಳಲ್ಲಿ ಕೆಲವೆಂದರೆ ಭಾಷಾ ಮಡಿವಂತಿಕೆಯನ್ನು ಮುರಿದಿರುವುದು, ವ್ಯಾಕರಣ ನಿಯಮಗಳನ್ನು ಮೀರುವಂತಹದು(ಅರ್ಥ ವ್ಯತ್ಯಾಸವಾಗದಂತೆ). ಮತ್ತು ಗದ್ಯ ಬರಹಕ್ಕೆ ಒಂದು ವಿಶೇಷ ಸ್ವರೂಪವನ್ನು ನೀಡಿರುವುದು ಇದಕ್ಕೆ ನಿದರ್ಶನ.

೦೪. ರವಿಯವರು ಜನಪ್ರಿಯ ಬರಹಗಾರರು. ಆ ಕಾರಣಕ್ಕಾಗಿಯೋ ಅಥವಾ ಭೂಗತ ಲೋಕದ ವಿಷಯಗಳನ್ನು ವಿಜೃಂಭಿಸಿ ಬರೆಯುತ್ತಾರೆ ಎಂಬ ಕಾರಣಕ್ಕೊ ಕನ್ನಡ ವಿಮರ್ಶಾ ಲೋಕ ಅವರ ಬರಹಗಳೆಡೆಗೆ ಜಾಣಗುರುಡು ತೋರುತಿದೆ. ರವಿಯವರು ಆಯ್ಕೆ ಮಾಡಿಕೊಳ್ಳುವ

ವಸ್ತು-ವಿಷಯಗಳ ಬಗ್ಗೆ ಮತ್ತು ಕನ್ನಡ ಸಾಹಿತ್ಯ ಲೋಕ ಜನಪ್ರಿಯ ಸಾಹಿತ್ಯದೆಡೆಗೆ ತೋರುತ್ತಿರುವ ತಾತ್ಸರ ಸಲ್ಲದು. ಜನಪ್ರಿಯತೆ ಓದುಗರ ಆಯ್ಕೆ. ಭೂಗತದ ವಿಷಯಗಳು ವಾಸ್ತವ ಬದುಕಿನ ನೈಜ ಘಟನೆಗಳಾದರೂ ಅದರಲ್ಲಿಯೂ ಸಾಮಾಜಿಕ ಮೌಲ್ಯಗಳ, ಮನುಷ್ಯತ್ವದ ಹುಡುಕಾಟವಿದೆ. ಒಂದು ಸಾಹಿತ್ಯ ಕೃತಿಯಲ್ಲಿ ಇರುವಂತೆ ಅನೇಕ ಅಂಶಗಳು ಕಾಣಬರುತ್ತವೆ.

೦೫. ರವಿಯವರ ಕಥೆ-ಕಾದಂಬರಿಗಳಲ್ಲಿ ಬರುವ ಪಾತ್ರಗಳು, ಕಥೆಯ ವಿವಿಧ ಭಾಗಗಳನ್ನು ಬೇರೆ ಬೇರೆಯಾಗಿ ಹೇಳಿದಂತೆ ಇರುವ ನಿರೂಪಣೆ ಇದೆ. ಕಥೆಯ ಘಟನೆಗಳು ಅನುಕ್ರಮವಾಗಿ ಬರದೆ ಎಲ್ಲಿಂದಲೋ ಆರಂಭವಾಗಿ ಅತ್ತ ಇತ್ತ ಸಾಗಿ ಕೊನೆ ಮುಟ್ಟುತ್ತವೆ. ಒಟ್ಟು ಅವರ ಬರಹಗಳ ನಿರೂಪಣೆಯನ್ನು ನಾಲ್ಕು ಕ್ರಮಗಳಲ್ಲಿ ನೋಡಬಹುದು. ಒಂದು: ಪಾತ್ರಗಳು ಕಥೆಯನ್ನು ಹೇಳಿಕೊಂಡು ಕಥೆಯನ್ನು ಮುಂದುವರೆಸುವುದು. ಎರಡು: ಲೇಖಕರೆ, ಕಥೆಯನ್ನು ನಿರೂಪಿಸುವುದು. ಮೂರು: ಲೇಖಕರೂ ಕಥೆಯೊಳಗೆ ಒಂದು ಪಾತ್ರವಾಗಿ ಕಥೆ ಹೇಳುವುದು. ನಾಲ್ಕು: ಪಾತ್ರವೂ ಅಲ್ಲದ, ಲೇಖಕರೆ ಅಲ್ಲದ ವ್ಯಕ್ತಿ ಕಥೆಯನ್ನು ಹೇಳುತ್ತಿರುವ ನಿರೂಪಣೆಯನ್ನು ಕಾಣಬಹುದು.

೦೬. ರವಿಯವರು ತಮ್ಮ ಬರಹಗಳಲ್ಲಿ ಅನೇಕ ತಂತ್ರಗಳನ್ನು ಪ್ರಯೋಗಿಸುತ್ತಾರೆ. ಅವು ಓದುಗರನ್ನು ಆಕರ್ಷಿಸುವಲ್ಲಿ ಯಶಸ್ವಿ ಆಗಿವೆ. 'ಒಂದು ಮುಖ್ಯವಾದ ಎಳೆ ತಪ್ಪಿತ್ತು!', 'ವಿಷಾದ ತುಂಬಿದ ಅಧ್ಯಾಯ ಪ್ರಾರಂಭವಾಗಲಿತ್ತು', 'ಪೊದೆಯಲ್ಲಿ ನಿಂತು ಎರಡು ಕಣ್ಣುಗಳು ಆತಂಕದಿಂದ ನೋಡುತ್ತಿದ್ದವು', 'ಆಗ ಸಂಭವಿಸಿತು ಒಂದು ವಿಚಿತ್ರ' ಇಂತಹ ಅನೇಕ ರೀತಿಯಲ್ಲಿ ಸಂಭವನೀಯ(ಕಥೆಯಲ್ಲಿನ) ವಿಷಯಗಳನ್ನು ಮುಂಚೆಯೇ ಹೇಳುವುದು ಮತ್ತು ನಿಗೂಢತೆಯನ್ನು ಸೃಷ್ಟಿಸುವಂತಹ ಹಲವು ಅಂಶಗಳನ್ನು ತಂತ್ರವಾಗಿ ಪ್ರಯೋಗಿಸುತ್ತಾರೆ.

೦೭. ಅವರು ತಮ್ಮ ಬರಹಗಳಲ್ಲಿ ಹೇರಳವಾಗಿ ಭಾವ ಸೂಚಕ(!) ಚಿಹ್ನೆಯನ್ನೂ ಬಳಸುತ್ತಾರೆ. ಕನ್ನಡ ಮತ್ತು ಅನ್ಯಭಾಷೆಯ ಅನೇಕ ದ್ವಿರುಕ್ತಿಯನ್ನು ಹೆಚ್ಚಾಗಿ ಬಳಸುತ್ತಾರೆ. ಅಲ್ಲದೆ ಅವರು 'ವಿಪರೀತ', 'ಅಸಲಿಗೆ', ಆದಮ್ಯ, 'ಇಷ್ಟಕ್ಕೂ', 'Of course', 'Ones again', 'At least', 'One fine day', 'ಕರಾರುವಕ್ಕಾಗಿ', 'ಚಿಲ್ಲರೆ', 'ವಿನಾಕಾರಣ' ಮುಂತಾದ ಪದಗಳು ಯಥೇಚ್ಛವಾಗಿ ಬಳಸುವರು. ಇವು ಶೈಲಿಯ ದೃಷ್ಟಿಯಿಂದಲೂ ಮತ್ತು ಇತರರಿಂದ ಪ್ರತ್ಯೇಕವಾಗಿ ಗುರುತ್ತಿಸುವಲ್ಲಿಯೂ ಸಹಾಯಕವಾಗಿವೆ. ಅಲ್ಲದೇ ಬರಹ ಆಪ್ತತೆ, ಭಾವುಕತೆಯನ್ನು ಒಳಗೊಂಡಿರುವುದು ವಿಶೇಷ ಮತ್ತು ಇದೇ ಅವರ ಬರಹದ ಯಶಸ್ಸಿನ ಕಾರಣಗಳಲ್ಲಿ ಒಂದು ಎಂದು ಹೇಳಬಹುದು.

೦೮. ಇವರ ಬರಹಗಳಲ್ಲಿನ ವಾಕ್ಯ ಕನ್ನಡ ವಾಕ್ಯ ನಿಯಮಕ್ಕಿಂತ ಭಿನ್ನವಾಗಿರುವುದನ್ನು ಕಾಣಬಹುದು. ಕ್ರಿಯೆಯನ್ನು ಆರಂಭದಲ್ಲಿ ಪ್ರಸ್ತಾಪಿಸಿ ನಂತರ ಕರ್ತೃ, ಕರ್ಮಗಳನ್ನು ತರುವುದು. ಮತ್ತು ರವಿಯವರ ಬರಹಗಳಲ್ಲಿ ದೀರ್ಘ ವಾಕ್ಯಗಳಂತೆ ಚಿಕ್ಕ ಚಿಕ್ಕ ವಾಕ್ಯಗಳ ಬಳಕೆಯೂ ಇದೆ. ಅದು ಎಷ್ಟು ಚಿಕ್ಕ ವಾಕ್ಯವೆಂದರೆ ಒಂದೇ ಒಂದು ಪದ ಒಂದು ವಾಕ್ಯವನ್ನಾಗಿ ಮಾಡುವುದು. ಆದರೆ ಅರ್ಥಕ್ಕೆ ಯಾವುದೇ ತೊಂದರೆಯಾಗದಂತೆ. ಈ ರೀತಿಯ ರಚನೆಯನ್ನು ಅವರು ಹೇರಳವಾಗಿ ಮಾಡುತ್ತಾರೆ. ಇದು ತಂತ್ರವೂ ಹೌದು, ಶೈಲಿಯೂ ಹೌದು.

೦೯. ರವಿ ಬೆಳಗೆರೆಯವರ ಮಾತೃಭಾಷೆ ತೆಲುಗು. ಶಿಕ್ಷಣ ಮಾಧ್ಯಮ ಹಿಂದಿ ಮತ್ತು ಇಂಗ್ಲೀಶ್. ಕನ್ನಡವೆನಿದ್ದರೂ ಅವರು ಆಸಕ್ತಿಯಿಂದ ಕಲಿತದ್ದು. ಆದರೆ ಬರವಣಿಗೆಯೆಲ್ಲವೂ ಕನ್ನಡದಲ್ಲಿ ಇರುವುದು ವಿಶೇಷ. ಕನ್ನಡ ಭಾಷೆಯ ಜೊತೆಗೆ ಹೇರಳವಾಗಿ ಇಂಗ್ಲೀಶ್ ಪದಗಳನ್ನು ಬಳಸುತ್ತಾರೆ. ಈ ಆಂಗ್ಲೋ-ಕನ್ನಡ ಜನಸಾಮಾನ್ಯರ ಮಾತಿಗೆ ಹತ್ತಿರವಾಯಿತೆಂಬುದು ನಿಜ. ಬರಿ ಇಂಗ್ಲೀಶ್ ಭಾಷೆಯೊಂದನ್ನೇ ಬಳಸದೆ ಹಿಂದಿ, ಉರ್ದು, ತೆಲುಗು ಭಾಷೆಯನ್ನು ತಮ್ಮ ಬರಹಗಳಲ್ಲಿ ಬಳಸುತ್ತಾರೆ. ಆ ಮೂಲಕ ಕನ್ನಡ ಬರಹವನ್ನು ಸಾಂಪ್ರದಾಯಿಕ ಕಟ್ಟುಪಾಡುಗಳಿಂದ ಬಿಡುಗಡೆ ಮಾಡಿ, ಆಧುನಿಕತೆಯ ಮಾರ್ಗಕ್ಕೆ ತಂದು ಹೊಸ ತಿರುವು, ಹೊಸ ಆಯಾಮ ಕೊಡುತ್ತಾರೆ.

೧೦. ನುಡಿ ಬೆರಕೆ, ನುಡಿ ಪಲ್ಲಟ, ಭೂಗತ ಲೋಕದಲ್ಲಿ ಬಳಕೆಯಲ್ಲಿರುವ ಪದಗಳನ್ನು ದಾಖಲಿಸಿರುವುದು ಇವರ ಬರವಣಿಗೆಯ ವಿಶೇಷವೆಂದು ಹೇಳಬಹುದು. ಇಲ್ಲಿ ಪದಗಳ ವಲಸೆ ಪ್ರಕ್ರಿಯೆಯಿಂದ ಭಾಷೆ ವೈಶಿಷ್ಟ್ಯವನ್ನು ತಿಳಿಯಬಹುದಾಗಿದೆ. ಹೊಸ ಪದಗಳ ಸೃಷ್ಟಿ, ಜೋಡು ವಾಕ್ಯಗಳು ರವಿಯವರ ಭಾಷಾ ಬಳಕೆಯ ವೈಶಿಷ್ಟ್ಯ.

೧೧. ಒಮರ್ಟಾ, ಕವಿರಾಜ ಮಾರ್ಗವಲ್ಲ ಇದು ಕಾಮರಾಜ ಮಾರ್ಗ, ಅರ್ತಿ ಮಾಟಗಾತಿ, ಸರ್ಪ ಸಂಬಂಧ ಇತ್ಯಾದಿ ತಲೆ ಬರಹಗಳು ಭಿನ್ನವಾಗಿ ಕಂಡುಬರುತ್ತವೆ. ಅಲ್ಲದೆ ಬರಹಗಳಲ್ಲಿ ಕಾಣುವ ಮತ್ತೊಂದು ವಿಶೇಷವೆಂದರೆ, ಉಪಮೆ, ರೂಪಕಗಳು. ಬೇರೆ ಯಾರಲ್ಲಿಯೂ ಕಾಣದ ಈ ರೀತಿಯ ವರ್ಣನೆಯನ್ನು ರವಿಯವರ ಬರಹಗಳಲ್ಲಿ ಕಾಣಬಹುದು. 'ಕಡೆದಿಟ್ಟ ಮೂರ್ತಿಯಂತಿದ್ದಾನೆ', 'ಕಂಚಿಗೆ ಕಂಚು ತಾಕಿದಂತಿತ್ತು', 'ಅವಳು ಓದಿ ಮುಗಿಸಿದ ಪುಸ್ತಕ', 'ಕತ್ತಲಿಗಿಂತ ಕಪ್ಪನೆಯ ನೋವಿನಲ್ಲಿ ಬಿಕ್ಕಿದಳು', 'ಒಲ್ಲದ ಮಗುವನ್ನು ಊಟ ಮಾಡೆಂದು ಅಂಗಲಾಚುವ ತಾಯಿಯಂತೆ' ಮುಂತಾಗಿ ಅವರಲ್ಲಿ ಅಲಂಕಾರಗಳನ್ನು ಕಾಣಬಹುದು.

೧೨. ರವಿಯವರ ಬರಹಗಳ ಭಾಷಾ ಸ್ವರೂಪ ಪ್ರಾದೇಶಿಕತೆಯಿಂದ ಕೂಡಿದೆ. ಅನೇಕ ಪ್ರಾದೇಶಿಕ ಪದಗಳನ್ನು ಬರಹಗಳಲ್ಲಿ ದಾಖಲಿಸುತ್ತಾರೆ. ಸಂಭಾಷಣೆಯ ರೂಪದ ಬರಹವನ್ನು ಬಳಕೆ ಮಾಡುವುದು ಮತ್ತು ಒಂದು ವಿಷಯವನ್ನು ಅನೇಕ ಸಾಮರ್ಥ್ಯಗಳಿಂದ, ಭಿನ್ನತೆಗಳಿಂದ ಹೇಳುವುದು ಅವರ ಭಾಷಾ ಸ್ವರೂಪದ ಪ್ರಧಾನ ಅಂಶವಾಗಿದೆ.

**ಅಡಿ ಟಿಪ್ಪಣಿ**

೦೧. ಫಸ್ಟ್ ಹಾಫ್, ಸಂ. ಶರತ್ ಕಲ್ಕೋಡ್, ಪು. ೨೩೧

೧

# ಅಫಿಡವಿಟ್ಟುಗಳು

## i ಅಫಿಡವಿಟ್ಟು

ಹುಟ್ಟಿದ್ದು ೧೯೫೮ರ ಮಾರ್ಚ್ ೧೫ರಂದು ಇನ್ನೂ ಜೀವಿಸುತ್ತಿದ್ದೇನೆ! ಓದಿದ್ದು ಬಳ್ಳಾರಿ, ತುಮಕೂರು, ಧಾರವಾಡಗಳಲ್ಲಿ. ಎಸೆಸ್ಸೆಲ್ಸಿ ಒಂದು ಸಲ ಫೇಲಾಗಿ ಮತ್ತೆ ಪಾಸಾಗಿ ಕಡೆಗೆ ಎಂ.ಎ ಪಾಸು ಮಾಡಿಕೊಂಡೆ.

ಹೊಟ್ಟೆಪಾಡಿಗಾಗಿ-ಪೇಪರು ಹಂಚುವ ಹುಡುಗ, ಮನೆಪಾಠದ ಮೇಸ್ಟ್ರು, ಹೈಸ್ಕೂಲು ಶಿಕ್ಷಕ, ಹೋಟೆಲು ಮಾಣಿ, ಬಾರ್ ಬಾಯ್, ರಿಸೆಪ್ಷನಿಸ್ಟ್, ಕಾಲೇಜುಗಳಲ್ಲಿ ಉಪನ್ಯಾಸಕ, ಹಾಲು ಮಾರುವ ಗೌಳಿ, ಮುದ್ರಣಾಲಯದ ಮಾಲೀಕ, ಮೆಡಿಕಲ್ ರೆಪ್ರೆಸೆಂಟೇಟಿವ್, ಪತ್ರಿಕಾ ಸಂಪಾದಕ, ಈಗ ಉಪಸಂಪಾದಕ, ಮತ್ತೊಮ್ಮೆ ಉಪನ್ಯಾಸಕ-ಇದೆಲ್ಲ ಆಗಿದ್ದು ಹೌದು. ಈಗ ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕದಲ್ಲಿದ್ದೇನೆ.

ದಾರಿ, ಗೋಲಿಬಾರ್, ಅಗ್ನಿಕಾವ್ಯ, ಅರ್ತಿ-ನನ್ನ ಸ್ವತಂತ್ರ ಕೃತಿಗಳು. ಯಂಡಮೂರಿ ವೀರೇಂದ್ರನಾಥರ ಕಾದಂಬರಿಯನ್ನು ಕನ್ನಡಕ್ಕೆ ತಂದ ಮೊದಲ ಪಾಪಿ ನಾನು!(೧೯೮೦-'ಯುಗಾಂತಂ'). ತೆಲುಗಿನಿಂದ ತಾಪೀ ಧರ್ಮಾರಾವು ಅವರನ್ನು ಕನ್ನಡಿಸಿದ್ದು ೧೯೮೫ರಲ್ಲಿ, ಅದಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿಯವರು ಪ್ರಶಸ್ತಿ ಕೊಟ್ಟರು. ಮೊನ್ನೆ ದಿ. ಮಾಸ್ತಿ ಶತಮಾನೋತ್ಸವ ಕಥಾ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಬಂತು.

ಸುಜುಕಿ ಹತ್ತಿ ಅಲೆಯುವುದು, ಕಾಡು ಸುತ್ತುವುದು ಮತ್ತು ಸಿಗರೇಟು ಸೇದುವುದು-ಸದ್ಯದ ಹವ್ಯಾಸಗಳು.

ಹೆಂಡತಿ, ಲಲಿತೆ. ಮಕ್ಕಳು-ಚೇತನಾ, ಭಾವನಾ ಮತ್ತು ಆದಿತ್ಯೋದಯ ಕರ್ಣ.

-ರವೀ

## ii ಅಫಿಡವಿಟ್ಟು

ಬರವಣಿಗೆಯೊಂದರಿಂದಲೇ ಅನ್ನ ಮತ್ತು ಆತ್ಮ ಸಂತೋಷ ದುಡಿದುಕೊಳ್ಳಲು ತೀರ್ಮಾನಿಸಿದಂತೆ ಬದುಕುತ್ತಿರುವವನು ನಾನು. ಬರವಣಿಗೆ ಬಿಟ್ಟು ಬೇರೆ ಏನನ್ನೂ ಮಾಡಲು ನನಗೆ ಬಾರದು ಅಂತ ತೀರ್ಮಾನಿಸಿ ಆಗಿದೆ.

ನನಗೀಗ ಐವತ್ತೊಂದು ವರ್ಷ ವಯಸ್ಸು. ಹುಟ್ಟಿದ್ದು ೧೯೫೮ರ ಮಾರ್ಚ್ ೧೫ರಂದು, ಬಳ್ಳಾರಿಯಲ್ಲಿ. ಎರಡು ವರ್ಷ ತುಮಕೂರಿನ ಸಿದ್ಧಗಂಗಾ ಹೈಸ್ಕೂಲಿನಲ್ಲಿ ಓದಿದ್ದನ್ನು ಬಿಟ್ಟರೆ ಬಿ.ಎ.ವರೆಗಿನ ವ್ಯಾಸಂಗ ನಡೆದದ್ದು ಬಳ್ಳಾರಿಯಲ್ಲಿ. ನಂತರ ಓದಿದ್ದು ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗದಲ್ಲಿ ಸ್ನಾತಕೋತ್ತರ ಪದವಿಗಾಗಿ; ಧಾರವಾಡದಲ್ಲಿ. ಕೆಲಕಾಲ ಬಳ್ಳಾರಿ, ಹಾಸನ ಮತ್ತು ಹುಬ್ಬಳ್ಳಿಯ ಕಾಲೇಜುಗಳಲ್ಲಿ ಇತಿಹಾಸ ಉಪನ್ಯಾಸಕನಾಗಿ ಕೆಲಸ ಮಾಡಿದೆ. ಅದಕ್ಕೆ ಮುಂಚೆ ಮತ್ತು ಅದರ ನಂತರ ಸರಿಸುಮಾರು ಒಂಬತ್ತು ವೃತ್ತಿ ಬದಲಿಸಿದೆ. ಹೈಸ್ಕೂಲು ಮೇಸ್ಟ್ರು, ಹೊಟೇಲ್ ಮಾಣಿ, ರೂಮ್ ಬಾಯ್, ರಿಸೆಪ್ಶನಿಸ್ಟ್, ಹಾಲು ಮಾರುವ ಗೌಳಿ, ದಿನಪತ್ರಿಕೆ ಹಂಚುವ ಹುಡುಗ, ಮೆಡಿಕಲ್ ರೆಪ್ರೆಸೆಂಟೇಟಿವ್, ಪ್ರಿಂಟಿಂಗ್ ಪ್ರೆಸ್‌ನ ಮಾಲಿಕ, ಥೇಟರಿನಲ್ಲಿ ಗೇಟ್ ಕೀಪರ್, ಕಾಲೇಜಿನ ಉಪನ್ಯಾಸಕ, ಮನೆಪಾಠದ ಮೇಸ್ಟ್ರು– ಹೀಗೆ ನಾನಾ ಕಡೆ ಮೈಕೈ ಮೆತ್ತಗಾಗಿಸಿಕೊಂಡು ದುಡಿದೆ. ಕರ್ನಾಟಕದ ಅಷ್ಟೂ ಪತ್ರಿಕೆಗಳಿಗೆ ಬರೆದೆ. ಅನೇಕ ಪತ್ರಿಕೆಗಳಿಗೆ ಕೆಲಸ ಮಾಡಿದೆ. ತುಂಬ ಚಿಕ್ಕ ವಯಸ್ಸಿಗೇ ನನಗಿಂತ ಜಾಸ್ತಿ ವಯಸ್ಸಾದ ಪತ್ರಿಕೆಗಳಿಗೆ ಸಂಪಾದಕನಾದೆ. ಈತನಕ ಸರಿಸುಮಾರು ಮೂವತ್ತು ಪುಸ್ತಕಗಳು ಪ್ರಕಟವಾಗಿವೆ. ಖುಷ್‌ವಂತ್‌ಸಿಂಗ್, ಚಲಂ, ಪ್ರೊತಿಮಾ ಬೇಡಿ, ಬ್ರಿಗೇಡಿಯರ್ ಜಾನ್.ಪಿ. ದಳವಿ, ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್, ವಿನೋದ್ ಮೆಹ್ತಾ ಮುಂತಾದವರ ಬರಹಗಳನ್ನು ಕನ್ನಡಕ್ಕೆ ಅನುವಾದಿಸಿದ್ದೇನೆ. ಎರಡು ಬಾರಿ ಕರ್ನಾಟಕ ಸಾಹಿತ್ಯ ಅಕಾಡೆಮಿಯವರು ಪ್ರಶಸ್ತಿ ಕೊಟ್ಟಿದ್ದಾರೆ. ಸಣ್ಣ ಕತೆ ನನ್ನ ಅತಿ ಇಷ್ಟದ ಪ್ರಕಾರ. ಅದರಲ್ಲೂ ಪ್ರಶಸ್ತಿ, ಬಹುಮಾನಗಳು ಬಂದಿವೆ.

ಸದ್ಯಕ್ಕೆ ನಾನು 'ಹಾಯ್ ಬೆಂಗಳೂರ್!' ಕನ್ನಡ ವಾರಪತ್ರಿಕೆಯ ಹಾಗೂ 'ಓ ಮನಸ್ಸೇ...' ಪಾಕ್ಷಿಕದ ಸಂಪಾದಕ. ಪ್ರಾರ್ಥನಾ ಎಜುಕೇಶನ್ ಸೊಸೈಟಿಯ ಸಂಸ್ಥಾಪಕ ಕಾರ್ಯದರ್ಶಿ. ಟೀವಿ ಮತ್ತು ರೇಡಿಯೋಗಳಿಗೆ ಪ್ರತಿನಿತ್ಯದ ಕಾರ್ಯಕ್ರಮ ಮಾಡಿಕೊಡುತ್ತೇನೆ. ಸಿನೆಮಾ ನಿರ್ಮಾಣ, ನಿರ್ದೇಶನ ಮತ್ತು ನಟನೆಯಲ್ಲಿ ತೊಡಗಿಕೊಂಡಿದ್ದೇನೆ. ಒಬ್ಬ ಹೆಂಡತಿ, ಮೂವರು ಮಕ್ಕಳ ತಂದೆ. ನನ್ನ ಬಗೆಗಿನ ಉಳಿದ ವಿವರಗಳು ಅನ್ ಇಂಟರೆಸ್ಟಿಂಗ್!

–ರವಿ ಬೆಳಗೆರೆ

## iii ಅಫಿಡವಿಟ್ಟು

ಹೆಸರು ರವಿ ಬೆಳಗೆರೆ. ವಯಸ್ಸು, ಈಗಷ್ಟೆ ಐವತ್ನಾಲ್ಕು. ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರದಲ್ಲಿ ಎಂ.ಎ ಮಾಡಿದ್ದೇನೆ. ಪತ್ರಿಕೋದ್ಯಮ ನನ್ನ ಹೊಟ್ಟೆ ತುಂಬಿಸುತ್ತಿದೆ. 'ಪ್ರಾರ್ಥನಾ' ನಾನು ಕಟ್ಟಿದ ಶಾಲೆ. ಈಗ ನೀವು ಓದುತ್ತಿರುವುದು ನನ್ನ ಅರವತ್ತೊಂದನೆಯ ಪುಸ್ತಕ. ಎರಡು ಬಾರಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಬಂದಿವೆ. ಹಿರಿಯರಾದ ಶಿವರಾಮ ಕಾರಂತರ ಹೆಸರಿನ ಎರಡು ಪ್ರಶಸ್ತಿಗಳನ್ನು ಪಡೆದಿದ್ದೇನೆ. ಕರ್ನಾಟಕ ಮಾಧ್ಯಮ ಅಕಾಡೆಮಿಯವರು ಪತ್ರಿಕೋದ್ಯಮದಲ್ಲಿ ನಾನು ಮಾಡಿದ್ದು ಸಾಧನೆ ಅಂದುಕೊಂಡು ಪ್ರಶಸ್ತಿ ನೀಡಿದ್ದಾರೆ. ಕರ್ನಾಟಕ ರಾಜ್ಯ ಅನುವಾದ ಅಕಾಡೆಮಿ ನನ್ನ 'ಚಲಂ' ಕೃತಿಗೆ ೨೦೧೦ನೇ ಸಾಲಿನ ಅತ್ಯುತ್ತಮ ಅನುವಾದ ಎಂಬ ಪ್ರಶಸ್ತಿ ನೀಡಿದೆ. ಓದು, ತಿರುಗಾಟ ನನ್ನ ಹವ್ಯಾಸಗಳು. ಬರವಣಿಗೆ ನನ್ನ ಆತ್ಮ ಸಮಾಧಾನದ ಸಂಗತಿ. ಎಡಪಂಥೀಯ ವಿಚಾರಧಾರೆ ನನ್ನನ್ನು ಆಕರ್ಷಿಸಿದೆ. ಚಳವಳಿಗಳಿಂದ ನಿರಾಶನಾಗಿ ದೂರ ಸರಿದಿದ್ದೇನೆ. ಪ್ರತಿಭಟನೆಗೆ ಬೇರೆ ವಿಧಾನಗಳೂ ಇವೆ ಎಂಬ ನಂಬಿಕೆ ಉಳಿದುಕೊಂಡಿದೆ. ನಲವತ್ತು ವರ್ಷದಿಂದ ನನ್ನೊಂದಿಗೆ ಸಿಗರೇಟು ಉಳಿದುಕೊಂಡಂತೆ. ನನ್ನ ಬಗೆಗಿನ ಉಳಿದ ವಿವರಗಳು ಅಂಥ ಕುತೂಹಲಕಾರಿಯಲ್ಲ.

**–ರವಿ ಬೆಳಗೆರೆ**

## iv ಅಫಿಡವಿಟ್ಟು

ಸರಿಯಾಗಿ ಒಂದುನೂರಾ ಆರು ಕೇಜಿ ತೂಕವಿದ್ದ ನಾನು ಎಪ್ಪತ್ತು ಕೇಜಿಗೆ ಇಳಿದಿದ್ದೇನೆ. ಈಗ ದೇಶವಿದೇಶ ತಿರುಗುತ್ತೇನೆ. ಶಿವಾಜಿನಗರದ ಹಂತಕ ಕೋಳಿ ಫಯಾಜ್‌ನ ಸಂದರ್ಶನದಿಂದ ಆರಂಭವಾದ ಪತ್ರಿಕೋದ್ಯಮ, ಕಾದಂಬರಿ, ಬರಹದ ಹುಚ್ಚು ನನ್ನನ್ನು ಇಟಲಿಯ ದುರ್ಭರ ಮಾಫಿಯಾದ ತನಕ ಕರೆದೊಯ್ದಿದೆ. ತನಿಖೆ, ಸಂಶೋಧನೆ ಮತ್ತು ಭಾವುಕತೆ ಇಲ್ಲದೆ ಬರೆಯಬಾರದು ಎಂದು ತೀರ್ಮಾನಿಸಲಿಕ್ಕೆ ಇಷ್ಟು ವರ್ಷ ಬೇಕಾಯಿತು.

ಈತನಕ ಸರಿಸುಮಾರು ಇಪ್ಪತ್ನಾಲ್ಕು ದೇಶಗಳನ್ನು ನೋಡಿದ್ದೇನೆ : ಅವುಗಳಿಂದ ಜನ ಓಡಿ ಬರುತ್ತಿದ್ದ ಸಂದರ್ಭದಲ್ಲಿ. ನೀವು ಓದುತ್ತಿರುವುದು, ಇದು ನನ್ನ ಎಪ್ಪತ್ತೊಂದನೆಯ ಪುಸ್ತಕ. ಪ್ರೇಮ, ಇತಿಹಾಸ, ಕಾಮ, ಯುದ್ಧ, ಅಂಡರ್‌ವರ್ಲ್ಡ್, ಭಯೋತ್ಪಾದನೆ, ಸಿನೆಮಾ, ಅಮ್ಮ–ಹೀಗೆ ನಾನು ಅನೇಕ ಸಂಗತಿಗಳ ಬಗ್ಗೆ ಬರೆಯಬಲ್ಲೆ. ನನಗೆ ಅಕ್ಷರ ಅನ್ನ ಕೊಟ್ಟಿದೆ. ನಾನು ತೃಪ್ತ.

ನನಗೆ ಮೊದಲು ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದಾಗ ಇಪ್ಪತ್ಮೂರು ವರ್ಷ–ಆಮೇಲೆ ಎರಡು ಸಲ ಬಂತು. ಶಿವರಾಮ ಕಾರಂತರ ಹೆಸರಿನಲ್ಲಿ ಶಿವರಾಮ ಕಾರಂತ ಪ್ರತಿಷ್ಠಾನದ ಪ್ರಶಸ್ತಿ ಹಾಗೂ ಅವರ ಹುಟ್ಟೂರಿನ ಪ್ರಶಸ್ತಿ ಬಂದವು. ಮಾಸ್ತಿ ಕಥಾ ಸ್ಪರ್ಧೆಯಲ್ಲಿ ನನಗೆ ಬಹುಮಾನ ಬಂತು. ಮಾಡಿದ ಹೊಟ್ಟೆಪಾಡಿನ ಪತ್ರಿಕೋದ್ಯಮಕ್ಕೆ 'ಜೀವಮಾನದ ಸಾಧನೆ' ಅಂತ ಪ್ರಶಸ್ತಿ ಕೊಟ್ಟರು. 'ಚಲಂ' ಎಂಬ ತೆಲುಗು ಲೇಖಕನ ಆತ್ಮಚರಿತ್ರೆಯ ಅನುವಾದಕ್ಕೆ ನನಗೆ ಕುವೆಂಪು ಭಾಷಾ ಭಾರತಿ ಅಕಾಡೆಮಿ ಪ್ರಶಸ್ತಿ ನೀಡಿದೆ.

'ಸಕತ್ತಾಗಿ ಬರೀತಾನೆ ನನ್ಮಗ' ಎಂಬುದು ಬೆಂಗಳೂರು ಸೇರಿದಂತೆ ಅನೇಕ ಊರುಗಳ ಆಟೋ ಡ್ರೈವರುಗಳು ನನಗೆ ಕೊಟ್ಟ ಅತಿ ದೊಡ್ಡ ಪ್ರಶಸ್ತಿಗಳು.

'ಹಾಯ್ ಬೆಂಗಳೂರ್!' ನನಗೆ ಅನ್ನವಿಟ್ಟ ತಾಯಿ. 'ಓ ಮನಸ್ಸೇ...' ನನ್ನ ಅಬ್ಸೆಷನ್. ಟೀವಿಗಳಲ್ಲಿ ಕಾಣಿಸಿಕೊಳ್ಳುವುದು ನನ್ನ ಚಟ. ಸಿನೆಮಾಗಳಲ್ಲಿ ನಟಿಸಿದ್ದು, ಕನ್ನಡಿಗರಷ್ಟೇ ಕ್ಷಮಿಸಬೇಕು. ಸರಿಸುಮಾರು ಏಳು ಸಾವಿರ ಮಕ್ಕಳು ಡೊನೇಷನ್ ಮತ್ತು ಜಾತಿಯ ಪ್ರಸ್ತಾಪವಿಲ್ಲದೆ ಓದಲು ಸಾಧ್ಯವಾಗಿರುವ 'ಪ್ರಾರ್ಥನಾ' ಶಾಲೆ ನನ್ನ ನಿಜವಾದ ಸಾಧನೆ. ಕೆಲವು ಸಿ.ಡಿ.ಗಳನ್ನು ಮಾಡಿದ್ದೇನೆ. ನನಗೆ ಸಮಾನ ಸಂಖ್ಯೆಯಲ್ಲಿ ಅಭಿಮಾನಿಗಳು ಮತ್ತು ನನ್ನ ಮುಖ ಕಂಡರಾಗದವರೂ ಇದ್ದಾರೆ.

ನನಗೆ ಎರಡು ಹೆಣ್ಣು, ಎರಡು ಗಂಡು ಮಕ್ಕಳಿದ್ದಾರೆ. ಸಿಗರೇಟು, ತಿರುಗಾಟ, ಓದು, ಬರವಣಿಗೆ, ಸಂಗೀತ, ಇತಿಹಾಸ ನನ್ನ ಬಲಹೀನತೆಗಳು. ಜಗತ್ತು ನನ್ನ ಮನೆ, ಸದ್ಯಕ್ಕೆ ಬೆಂಗಳೂರಿನಲ್ಲಿದ್ದೇನೆ.

ಉಳಿದದ್ದು ತಗೊಂಡು ಏನು ಮಾಡುತ್ತೀರಿ?

ನಾನೂ ನಿಮ್ಮಂತೆಯೇ ಮನುಷ್ಯ : ಕೊಂಚ ಚಿಲ್ರೆ, ಕೊಂಚ ಗಟ್ಟಿ.

–ರವಿ ಬೆಳಗೆರೆ

## ೨
## ರವಿ ಬೆಳಗೆರೆಯವರ ಕೃತಿಗಳು

**ಕಾವ್ಯ ಮತ್ತು ಕಥಾ ಸಂಕಲನಗಳು**

೦೧. ಅಗ್ನಿ ಕಾವ್ಯ (ಕವನ ಸಂಕಲನ)
೦೨. ದಾರಿ (ಕಥಾ ಸಂಕಲನ) ೧೯೮೦
೦೩. ಪಾ.ವೆಂ. ಹೇಳಿದ ಕಥೆ (ಕಥಾ ಸಂಕಲನ) ೧೯೯೫
೦೪. ಒಟ್ಟಾರೆ ಕಥೆಗಳು (೧೯೯೮ರ ವರೆಗೆ ಬರೆದ ಕಥೆಗಳ ಸಂಕಲನ) ೧೯೯೮

**ಕಾದಂಬರಿಗಳು**

೦೫. ಅರ್ತಿ
೦೬. ಗೋಲಿಬಾರ್
೦೭. ಹೇಳಿ ಹೋಗು ಕಾರಣ
೦೮. ನೀ ಹಿಂಗ ನೋಡಬ್ಯಾಡ ನನ್ನ
೦೯. ಮಾಟಗಾತಿ
೧೦. ಸರ್ಪ ಸಂಬಂಧ
೧೧. ಒಮರ್ಟಾ
೧೨. ಕವಿರಾಜ ಮಾರ್ಗವಲ್ಲ ಇದು ಕಾಮರಾಜ ಮಾರ್ಗ
೧೩. ಹಿಮಾಗ್ನಿ
೧೪. ಯಂತ್ರ ತಂತ್ರ ಮಂತ್ರ*
೧೫. ಆಂಟಿ ನಿನ್ನೊಲುಮೆಯಿಂದಲೇ*
೧೬. ಜೊತೆ ಜೊತೆಯಲಿ*
೧೭. ಮಧ್ಯ ರಾತ್ರಿಯ ಆ ಮಗ್ಗಲು*
೧೮. ಯೌವ್ವನ ಜೋಪಾನ*
೧೯. ಕಾಲ್ ಸೆಂಟರ್ ಕಿಲ್ಲಿಂಗ್*
೨೦. ಆತ್ಮ*
೨೧. ಪ್ರದೋಷ್*
೨೨. ಭವಲಾದ ಭೈರಾಗಿ*
೨೩. ದಿ ಸೆಟ್ಲ್‌ಮೆಂಟ್*
೨೪. ಕೊಳ್ಳೇಗಾಲದ ಮಾಂತ್ರಿಕರು*

**ಅಪರಾಧ(ಕ್ರೈಮ್) ಸಂಬಂಧಿತ ಬರಹಗಳು**

೨೫. ಪಾಪಿಗಳ ಲೋಕದಲ್ಲಿ ೦೧

೨೬. ಪಾಪಿಗಳ ಲೋಕದಲ್ಲಿ ೦೨

೨೭. ಭೀಮಾತೀರದ ಹಂತಕರು (ವಿಜಯಪುರ ಜಿಲ್ಲೆಯ ಪಾತಕಗಳ ಬಗೆಗೆ)

೨೮. ಮೈಸೂರಿನ ಸೀರಿಯಲ್ ಕಿಲ್ಲರ್ ರವೀಂದ್ರ ಪ್ರಸಾದ್

೨೯. ಡಿ ಕಂಪೆನಿ (ಮುಂಬೈ ಭೂಗತ ಜಗತ್ತಿನ ಬಗೆಗೆ)

೩೦. ರಂಗವಿಲಾಸ ಬಂಗಲೆಯ ಕೊಲೆಗಳು

೩೧. ಮಧುಮಿತಾ ಶುಕ್ಲಾ ಹತ್ಯೆ

೩೨. ಏನಾಯ್ತು ಮಗಳೇ?

**ಜೀವನ ಕಥನಗಳು**

೩೩. ಸಂಜಯ(ಕೆ. ಶಾಮರಾಯರ ವ್ಯಕ್ತಿ ಚಿತ್ರ)

೩೪. ಪ್ಯಾಸಾ(ಸಾಹಿರ್ ಲೂದಿವಿಯಾನ ಜೀವನ ಕಥನ)

೩೫. ಪಾಪದ ಹೂವು ಫೂಲನ್ (ಫೂಲನ್ ದೇವಿ ಜೀವನಾಧಾರಿತ)

೩೬. ಡಯಾನಾ (ಬ್ರಿಟನ್ ರಾಜಕುಮಾರಿ ಜೀವನಾಧಾರಿತ)

೩೭. ಇದು ಜೀವ ಇದುವೇ ಜೀವನ (ಬೆಳಗೆರೆ ಕೃಷ್ಣಶಾಸ್ತ್ರಿಗಳ ಜೀವನ ಕಥನ)

೩೮. ಕಲ್ಪನ ವಿಲಾಸ (ಚಿತ್ರನಟಿ ಕಲ್ಪನಾರವರ ಜೀವನಾಧಾರಿತ)

೩೯. ರಜನೀಶನ ಹುಡುಗಿಯರು*

೪೦. ಜೀನಾ ಯಹಾಂ, ಮರ್‌ನಾ ಯಹಾಂ*

೪೧. ಸುಭಾಸ್‌ಚಂದ್ರ ಬೋಸ್*

೪೨. ಕೊಂಡಪಲ್ಲಿ ಸೀತಾರಾಮಯ್ಯ*

**ಅನುವಾದಗಳು/ಮರುಸೃಷ್ಟಿಗಳು**

೪೩. ವಿವಾಹ: ಹುಟ್ಟು ಮತ್ತು ಪೂರ್ವೋತ್ತರ
ಮೂಲ: ತಾಪಿ ಧರ್ಮರಾವ್ ಅವರ 'ಪೆಳ್ಳಿ ದಾನಿ ಪುಟ್ಟು ಪೂರ್ವೋತ್ತರಾಲು'

೪೪. ನಕ್ಷತ್ರ ಜಾರಿದಾಗ (ಕಾದಂಬರಿ)
ಮೂಲ: ಯಂಡಮೂರಿ ವಿರೇಂದ್ರನಾಥ ಅವರ 'ಯುಗಾಂತಂ"

೪೫. ಚಲಂ (ಆತ್ಮ ಕಥೆ)
ಮೂಲ: ಗುಡಿಪಾಟು ವೆಂಕಟಾಚಲಂ

೪೬. ಹಿಮಾಲಯನ್ ಬ್ಲಂಡರ್ (೧೯೬೨ರ ಭಾರತ-ಚೀನಾ ಯುದ್ಧ ಬಗೆಗೆ)
ಮೂಲ: ಬ್ರಿಗೇಡಿಯರ್ ಜಾನ್.ಪಿ. ದಳವಿ

೪೭. ರಾಜ ರಹಸ್ಯ (ರಾಜಕೀಯ-ತನಿಖೆ, ನಟ ರಾಜಕುಮಾರ್ ಅಪಹರಣ ವಿಷಯಾಧಾರಿತ)
ಮೂಲ: ಸಿ. ದಿನಕರ್ ಅವರ 'Veerappan Prize Catch Rajkumar'

೪೮. ಟೈಮ್‌ಪಾಸ್ (ಆತ್ಮ ಕಥೆ)
ಮೂಲ: ಪ್ರೊತಿಮಾ ಬೇಡಿ

೪೯. ದಿ ಗಾಡ್ ಫಾದರ್ (ಕಾದಂಬರಿ)
ಮೂಲ: ಮಾರಿಯೋ ಪ್ಯೂಜೋ

೫೦. ಬ್ಲಾಕ್ ಫ್ರೈಡೇ (೧೯೯೩ರ ಮುಂಬೈ ಸರಣಿ ಸ್ಫೋಟ ಕುರಿತ ಕೃತಿ)

ಮೂಲ: ಹುಸೇನ್ ಜೈದಿ

೫೧. ಮಾಂಡೋವಿ (ಕಾದಂಬರಿ)

ಮೂಲ: ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್‌ನ 'Love in Time of Cholera'

೫೨. ದಿ ಕಂಪೆನಿ ಆಫ್ ವಿಮೆನ್ (ಕಾದಂಬರಿ)

ಮೂಲ: ಖುಷ್‌ವಂತ್ ಸಿಂಗ್

೫೩. ಹಂತಕಿ ಐ ಲವ್ ಯು (ಕಾದಂಬರಿ)

ಪ್ರೇರಿತ: Basic Instinct ಇಂಗ್ಲೀಶ್ ಚಲನಚಿತ್ರ ಸ್ಕ್ರಿನ್ ಪ್ಲೇ ಆಧಾರಿತ

೫೪. ನೀನಾ ಪಾಕಿಸಾನ?(ಪಾಕಿಸಾನ ರಾಜಕೀಯ, ಉಗ್ರಗಾಮಿ ಭಯೋತ್ಪಾದನೆ ಸಂಘಟನ ಬಗ್ಗೆ)

ಮೂಲ: ಅಮೀರ್ ಮೀರ್ ಅವರ 'The true face of Jehadees; Inside Pakistan's network of terror'

೫೫. ದಂಗೆಯ ದಿನಗಳು(೧೮೫೭ರ ಸ್ವಾತಂತ್ರ್ಯ ಸಂಗ್ರಾಮವನ್ನು ಕುರಿತು)

ಮೂಲ: ಮನೋಹರ ಮಳಗಾಂವಕರ್ ಅವರ 'Devils wind'

೫೬. ಅವನೊಬ್ಬನಿದ್ದ ಗೋಡ್ಸೆ(ಗಾಂಧಿ ಹತ್ಯೆ ಮತ್ತು ನಾಥೂರಾಮ್ ಗೋಡ್ಸೆಯ ಬಗ್ಗೆ)

ಮೂಲ: ಮನೋಹರ ಮಳಗಾಂವಕರ್ ಅವರ 'The men Who Killed Gandhi'

೫೭. ಮೇಜರ್ ಸಂದೀಪ್ ಹತ್ಯೆ(26/11 ಮುಂಬೈ ಮಾರಣಹೋಮದ ವಿಷಯಾಧಾರಿತ)

ಮೂಲ: ಹರೀಂದರ್ ಬವೇಜಾ(ಸಂಪಾದಕಿ) ಅವರ '26/11 ಮುಂಬೈ ಅಟ್ಯಾಕ್'

೫೮. ರೇಷ್ಮೆ ರುಮಾಲು (ಇತಿಹಾಸಕ್ಕೆ ಸಂಬಂಧಿತ ವಿಷಯಾಧರಿತ ಕಾದಂಬರಿ)

ಮೂಲ: ಫಿಲಿಪ್ ಮೆಡೋಸ್ ಟೇಲರ್ ಅವರ 'Confessions of A Thug'

೫೯. ಅಮ್ಮ ಸಿಕ್ಕಿದ್ಲು (ಕಾದಂಬರಿ)

ಪ್ರೇರಿತ: ಮಿಚ್ ಆಲ್ಬಮ್‌ನ 'For one more day'

೬೦. ದೆಲ್ಲಿ* (ಕಾದಂಬರಿ)

ಮೂಲ: ಖುಷ್‌ವಂತ್ ಸಿಂಗ್

೬೧. ನಿಜ ಪ್ರೀತಿಸ್ತೀಯಾ?* (ಕಾದಂಬರಿ)

ಮೂಲ: ಆ್ಯನ್‌ರೂಲ್ ಅವರ 'If you really love me'

**ತನಿಖಾ ವರದಿಗಳು**

೬೨. ರಾಜೀವ್ ಗಾಂಧಿ ಹತ್ಯೆ ಏಕಾಯಿತು? ಹೇಗಾಯಿತು?

೬೩ ಗಾಂಧಿ ಹತ್ಯೆ ಮತ್ತು ಗೋಡ್ಸೆ (ಮಹಾತ್ಮ ಗಾಂಧಿ, ಇಂದಿರಾ ಗಾಂಧಿ, ರಾಜೀವ್ ಗಾಂಧಿ ಮತ್ತು ಗೋಡ್ಸೆ ಕುರಿತು)

೬೪. ಬಾಬಾ ಬೆಡ್ ರೂಮ್ ಹತ್ಯಾಕಾಂಡ

೬೫. ಅನಿಲ್ ಲಾಡ್ ಮತ್ತು ನಲವತ್ತು ಕಳ್ಳರು

೬೬. ಆಶ್ರಮದ ರಾತ್ರಿಗಳು* (ಸ್ವಾಮಿ ಪ್ರೇಮಾನಂದನ ಆಶ್ರಮ ಕುರಿತು)

೬೭. ಒಂದು ಸಿ.ಬಿ.ಐ ಛಾರ್ಜ್‌ಶೀಟ್*

**ಪ್ರವಾಸ ಕಥನಗಳು**

೬೮ ಕಾರ್ಗಿಲ್‌ನಲ್ಲಿ ಹದಿನೇಳು ದಿನ (ಕಾರ್ಗಿಲ್ ಯುದ್ಧ ಕಥನ)
೬೯. ಮುಸ್ಲಿಂ (ಅಫಘಾನಿಸ್ತಾನ್ ಯುದ್ಧ ಭೂಮಿಯ ಅನುಭವ ಕಥನ)
೭೦. ಹಿಮಗರ್ಭ* (ಅರುಣಾಚಲ ಪ್ರದೇಶ ಯಾತ್ರೆಯ ಅನುಭವ ಕಥನ)

**ಅಂಕಣ ಬರಹಗಳು**

೭೧. ಬಾಟಮ್ ಐಟಮ್ ಭಾಗ–೧
೭೨. ಬಾಟಮ್ ಐಟಮ್ ಭಾಗ–೨
೭೩. ಬಾಟಮ್ ಐಟಮ್ ಭಾಗ–೩
೭೪. ಬಾಟಮ್ ಐಟಮ್ ಭಾಗ–೪ — ೬ ಸಂಪುಟಗಳು
೭೫. ಬಾಟಮ್ ಐಟಮ್ ಭಾಗ–೫ — ಜೀವನ ಕುರಿತ ಘಟನೆ, ಅನುಭವಗಳ ಬರಹಗಳು
೭೬. ಬಾಟಮ್ ಐಟಮ್ ಭಾಗ–೬
೭೭. ಕೇಳಿ (ಪ್ರಶ್ನೋತ್ತರ ಸಂಕಲನ)
೭೮. ಲವ್‌ಲವಿಕೆ ಭಾಗ–೧
೭೯. ಲವ್‌ಲವಿಕೆ ಭಾಗ–೨ — ೪ ಸಂಪುಟಗಳು
೮೦. ಲವ್‌ಲವಿಕೆ ಭಾಗ–೩ — ಪ್ರೇಮ ಪತ್ರಗಳ ಸಂಕಲನಗಳು
೮೧. ಲವ್‌ಲವಿಕೆ ಭಾಗ–೪
೮೨. ರವಿ ಕಂಡದ್ದು ರವಿ ಕಾಣದ್ದು (ಸಹ ಲೇಖಕ ಜೋಗಿಯೊಂದಿಗೆ)

**ಆತ್ಮ ಕಥನ**

೮೩. ಖಾಸ್‌ಬಾತ್‌೯೬
೮೪. ಖಾಸ್‌ಬಾತ್‌೯೭
೮೫. ಖಾಸ್‌ಬಾತ್‌೯೮
೮೬. ಖಾಸ್‌ಬಾತ್‌೯೯
೮೭. ಖಾಸ್‌ಬಾತ್‌೨೦೦೦
೮೮. ಖಾಸ್‌ಬಾತ್‌೨೦೦೧ — ೧೦ ಸಂಪುಟಗಳು
೮೯. ಖಾಸ್‌ಬಾತ್‌೨೦೦೨ — 'ಹಾಯ್ ಬೆಂಗಳೂರ್!' ಪತ್ರಿಕೆಯಲ್ಲಿ ಅಂಕಣ ರೂಪದಲ್ಲಿ
೯೦. ಖಾಸ್‌ಬಾತ್‌೨೦೦೩ — ಪ್ರಕಟವಾಗಿ ನಂತದ ಪುಸ್ತಕ ರೂಪದಲ್ಲಿ ಹೊರತರಲಾಗಿದೆ.
೯೧. ಖಾಸ್‌ಬಾತ್‌೨೦೦೪
೯೨. ಖಾಸ್‌ಬಾತ್‌೨೦೦೫

**ಇತರೆ**

೯೩. ಮನಸ್ಸೇ...(ಆಡಿಯೋ ಸಿ.ಡಿ)
೯೪. ಕನಸೇ...(ಆಡಿಯೋ ಸಿ.ಡಿ)
೯೫. ಒಲವೇ...(ಆಡಿಯೋ ಸಿ.ಡಿ)
೯೬. ಬಯಲು ಬಾಗಿಲಿಗೆ ನಿಂತ ಕಸಾಯಿ*
೯೭. ಉಡುಗೊರೆ (ರವಿ ಬೆಳಗೆರೆ ಬರಹದ ಕೆಲ ಸಾಲುಗಳ ಸಂಕಲನ)

**ಪುಸ್ತಕವಾಗಿ ಪ್ರಕಟವಾಗದೆ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಮಾತ್ರ ಪ್ರಕಟಗೊಂಡ ಕೃತಿಗಳು**

೦೧. ಕ್ರಮ ಸಂಖ್ಯೆ– ೬೦ ಮತ್ತು ೭೦ ಈ ಕೃತಿಗಳು ಕರ್ಮವೀರ ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿವೆ.

೦೨. ಕ್ರಮ ಸಂಖ್ಯೆ– ೧೫ ಇದು ಓ ಮನಸ್ಸೇ... ಪಾಕ್ಷಿಕದಲ್ಲಿ ಪ್ರಕಟಗೊಂಡ ಕೃತಿ.

೦೩. ಕ್ರಮ ಸಂಖ್ಯೆ– ೧೪, ೧೬, ೧೭, ೧೮, ೧೯, ೨೦, ೨೧, ೨೨, ೨೩, ೪೦, ೪೧, ೪೨, ೬೧, ೬೬, ೬೭, ೮೮ ಇವುಗಳು ಹಾಯ್ ಬೆಂಗಳೂರ್! ವಾರ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿವೆ.

೩

## ಪ್ರಶಸ್ತಿಗಳು

೦೧. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ವಿವಾಹ ಹುಟ್ಟು ಮತ್ತು ಪೂರ್ವೋತ್ತರ(ಸೃಜನೇತರ) ೧೯೮೪

೦೨. ಮಾಸ್ತಿ ಕಥಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ, ವಂಧ್ಯಾ(ಕಥೆ), ೧೯೯೦

೦೩. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಾ.ವೆಂ. ಹೇಳಿದ ಕಥೆ(ಕಥಾ ಸಂಕಲನ), ೧೯೯೭

೦೪. ಶಿವರಾಮ ಕಾರಂತ ಪುರಸ್ಕಾರ, ನೀ ಹಿಂಗ ನೋಡಬ್ಯಾಡ ನನ್ನ(ಕಾದಂಬರಿ), ೨೦೦೪

೦೫. ಕಂಪ್ಯೂಟರ್ ಎಕ್ಸಲೆನ್ಸಿ ಅವಾರ್ಡ್, ಕೇಂದ್ರ ಸರ್ಕಾರ, ಪ್ರಾರ್ಥನಾ ಶಾಲೆ, ೨೦೦೫

೦೬. ಕರ್ನಾಟಕ ಮಾಧ್ಯಮ ಅಕಾಡೆಮಿ ಪ್ರಶಸ್ತಿ, ಜೀವಮಾನದ ಸಾಧನೆ, ೨೦೦೮

೦೭. ಶಿವರಾಮ ಕಾರಂತ ಹುಟ್ಟೂರು ಪ್ರಶಸ್ತಿ, ಸಾಹಿತ್ಯ ಮತ್ತು ಪತ್ರಿಕೋದ್ಯಮದಲ್ಲಿನ ಸಾಧನೆ, ೨೦೦೭

೦೮. ರಾಜ್ಯೋತ್ಸವ ಪ್ರಶಸ್ತಿ, ಸಾಹಿತ್ಯ ಹಾಗೂ ಪತ್ರಿಕೋದ್ಯಮದಲ್ಲಿನ ಸಾಧನೆ, ೨೦೧೦

೦೯. ಕೆಂಪೇಗೌಡ ಪ್ರಶಸ್ತಿ, ೨೦೧೦

೧೦. ಮಾತಿನ ಮಾಂತ್ರಿಕ, ಈ ಟಿ.ವಿ ಕನ್ನಡ ವಾಹಿನಿ, ೨೦೧೩

೪

# ಆಕರ ಗ್ರಂಥಗಳು


೦೧. ಕೃಷ್ಣಮೂರ್ತಿ ಹನೂರು, ೨೦೧೦, *ಕನ್ನಡದಲ್ಲಿ ಅನ್ಯದೇಶಿ ಪದಗಳು,* ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಮೈಸೂರು

೦೨. *ಕೃಷಿಪದ ಕೋಶ,* ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೩. ಕೆಂಪೇಗೌಡ.ಕೆ, ೨೦೦೯, *ಭಾಷೆ ಸಮಾಜ ಸಂಸ್ಕೃತಿ,* ಲೇಖಕ ಪ್ರಕಾಶನ, ಮೈಸೂರು

೦೪. ಗಂಗಾಧರ ಕುಷ್ಟಗಿ (ಸಂ), ೧೯೯೭, *ತಲೆಮಾರಿನ ತಳಮಳ,* ಕವಿತಾ ಪ್ರಕಾಶನ, ರಾಯಚೂರು

೦೫. ಚಂದ್ರಶೇಖರ ಪಾಟೀಲ, ೨೦೦೬, *ಚಂಪಾಂಕಣ ಸಂ-೦೧,* ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು

೦೬. ಜಯಪ್ರಕಾಶ ಬಂಜಗೆರೆ, ೨೦೦೫, *ಉಲಿಯ ಉಯ್ಯಾಲೆ,* ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು

೦೭. ದಿನಕರ್.ಸಿ: ಮೂಲ, ರವಿ ಬೆಳಗೆರೆ: ಅನು, ೨೦೦೨, *ರಾಜ ರಹಸ್ಯ,* ಭಾವನಾ ಪ್ರಕಾಶನ, ಬೆಂಗಳೂರು

೦೮. ನಾಯಕ.ಜಿ.ಎಚ್ (ಸಂ), ೨೦೦೯, *ಶತಮಾನದ ಕನ್ನಡ ಸಾಹಿತ್ಯ ಸಂ-೨,* ಶ್ರೀ ರಾಘವೇಂದ್ರ, ಪ್ರಕಾಶನ, ಅಂಕೋಲಾ

೦೯. ನಾಯಕ. ಹಾ.ಮಾ, ೧೯೯೧, *ಸಿಂಚನ,* ಸುವಿದ್ಯಾ ಪ್ರಕಾಶನ, ಬೆಂಗಳೂರು

೧೦. ನಾರಾಯಣ.ಕೆ.ವಿ, ೨೦೧೦, *ತೊಂಡು ಮೇವು ಕಂತೆ-೧.೬.೭,* ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು

೧೧. ಪ್ರಧಾನ್ ಗುರುದತ್ತ್, ೨೦೦೪, *ಅನಾವರಣ,* ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೨. ಪ್ರಸಾದಸ್ವಾಮಿ. ಎಸ್, ೨೦೦೭, *ಕಥೆ-ಕಥನ,* ಧಾತ್ರಿ ಪುಸ್ತಕ, ಬೆಂಗಳೂರು

೧೩. ಭೈರಪ್ಪ.ಎಸ್.ಎಲ್, ಲಕ್ಷ್ಮಣರಾವ್.ಜೆ.ಆರ್, ಪ್ರಧಾನ್ ಗುರುದತ್ತ್ (ಸಂ), ೧೯೯೨, *ಮಾನ,* ಗೀತಾ ಬುಕ್ ಹೌಸ್ ಪ್ರಕಾಶಕರು, ಮೈಸೂರು

೧೪. ಮರುಳಸಿದ್ದಪ್ಪ.ಕೆ, ೨೦೦೮, *ಪಿ. ಲಂಕೇಶ್,* ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೫. ಮಹೇಶ್ವರಪ್ಪ, ೨೦೦೭, *ಭಾಷಾಂತರ ಪ್ರವೇಶಿಕೆ,* ಧಾತ್ರಿ ಪುಸ್ತಕ, ಬೆಂಗಳೂರು

೧೬. ಮೆಡೋಸ್ ಟೇಲರ್: ಮೂಲ, ಶಂಕರನಾರಾಯಣರಾವ್ ಎನ್.ಪಿ: ಅನು, ೨೦೦೦, *ಠಕ್ಕನೊಬ್ಬನ ಆತ್ಮಚರಿತ್ರೆ,* ಅಂಕಿತ ಪುಸ್ತಕ, ಬೆಂಗಳೂರು

೧೭. ಯುಧಿಷ್ಠರ(ಸಂ), ೨೦೧೨, *ಉಡುಗೊರೆ,* ಭಾವನಾ ಪ್ರಕಾಶನ, ಬೆಂಗಳೂರು

೧೮. ರವೀಂದ್ರನಾಥ್.ಕೆ, ೨೦೦೦, *ಕನ್ನಡ ದಾಖಲು ಸಾಹಿತ್ಯ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೯. ರವಿ ಬೆಳಗೆರೆ, ೨೦೧೩, *ಡಯಾನಾ,* ಭಾವನಾ ಪ್ರಕಾಶನ, ಬೆಂಗಳೂರು

೨೦. ರವಿ ಬೆಳಗೆರೆ, ೨೦೦೦, *ಅನಿಲ್ ಲಾಡ್ ಮತ್ತು ನಲವತ್ತು ಕಳ್ಳರು,* ಭಾವನಾ ಪ್ರಕಾಶನ, ಬೆಂಗಳೂರು

೨೧. ರವಿ ಬೆಳಗೆರೆ, ೨೦೧೨, *ಅಮ್ಮ ಸಿಕ್ಕಿದ್ಲು,* ಭಾವನಾ ಪ್ರಕಾಶನ, ಬೆಂಗಳೂರು

೨೨. ರವಿ ಬೆಳಗೆರೆ, ೧೯೯೦ *ಅರ್ತಿ,* ಸಿಂಚನ ಗ್ರಂಥಮಾಲೆ, ಧಾರವಾಡ

೨೩. ರವಿ ಬೆಳಗೆರೆ, ೨೦೦೯, *ಅವನೊಬ್ಬನಿದ್ದ ಗೋಡ್ಸೆ,* ಭಾವನಾ ಪ್ರಕಾಶನ, ಬೆಂಗಳೂರು

೨೪. ರವಿ ಬೆಳಗೆರೆ, ೨೦೧೨, *ಇಂದಿರೆಯ ಮಗ ಸಂಜಯ,* ಭಾವನಾ ಪ್ರಕಾಶನ, ಬೆಂಗಳೂರು

೨೫. ರವಿ ಬೆಳಗೆರೆ, ೨೦೧೨, *ಇದು ಜೀವ ಇದುವೇ ಜೀವನ,* ರವಿ ಬೆಳಗೆರೆ, ಭಾವನಾ ಪ್ರಕಾಶನ, ಬೆಂಗಳೂರು

೨೬. ರವಿ ಬೆಳಗೆರೆ, ೨೦೧೩, *ಏನಾಯ್ತು ಮಗಳೇ?,* ಭಾವನಾ ಪ್ರಕಾಶನ, ಬೆಂಗಳೂರು

೨೭. ರವಿ ಬೆಳಗೆರೆ, ೧೯೯೮, *ಒಟ್ಟಾರೆ ಕಥೆಗಳು,* ಭಾವನಾ ಪ್ರಕಾಶನ, ಬೆಂಗಳೂರು

೨೮. ರವಿ ಬೆಳಗೆರೆ, ೧೯೯೯, *ಒಮರ್ಟಾ,* ಭಾವನಾ ಪ್ರಕಾಶನ, ಬೆಂಗಳೂರು

೨೯. ರವಿ ಬೆಳಗೆರೆ, (ವರ್ಷ ಮುದ್ರಣಗೊಂಡಿಲ್ಲ), *ಕಾರ್ಗಿಲ್‌ನಲ್ಲಿ ಹದಿನೇಳು ದಿನ,* ಭಾವನಾ ಪ್ರಕಾಶನ, ಬೆಂಗಳೂರು

೩೦. ರವಿ ಬೆಳಗೆರೆ, ೨೦೧೨, *ಕಲ್ಪನಾ ವಿಲಾಸ,* ಭಾವನಾ ಪ್ರಕಾಶನ, ಬೆಂಗಳೂರು

೩೧. ರವಿ ಬೆಳಗೆರೆ, ೨೦೧೦, *ಕವಿರಾಜ ಮಾರ್ಗವಲ್ಲ ಇದು ಕಾಮರಾಜ ಮಾರ್ಗ,* ಭಾವನಾ ಪ್ರಕಾಶನ, ಬೆಂಗಳೂರು

೩೨. ರವಿ ಬೆಳಗೆರೆ, ೨೦೧೧, *ಕೇಳಿ–ಪ್ರಶ್ನೋತ್ತರ ಮಾಲಿಕೆ,* ಭಾವನಾ ಪ್ರಕಾಶನ, ಬೆಂಗಳೂರು

೩೩. ರವಿ ಬೆಳಗೆರೆ, ೧೯೯೬, *ಖಾಸ್‌ಬಾತ್‌೯೬,* ಅಭಿನವ ಪ್ರಕಾಶನ, ಬೆಂಗಳೂರು

೩೪. ರವಿ ಬೆಳಗೆರೆ, ೧೯೯೭, *ಖಾಸ್‌ಬಾತ್‌೯೭,* ಭಾವನಾ ಪ್ರಕಾಶನ, ಬೆಂಗಳೂರು

೩೫. ರವಿ ಬೆಳಗೆರೆ, ೧೯೯೮, *ಖಾಸ್‌ಬಾತ್‌೯೮,* ಭಾವನಾ ಪ್ರಕಾಶನ, ಬೆಂಗಳೂರು

೩೬. ರವಿ ಬೆಳಗೆರೆ, ೨೦೦೩, *ಖಾಸ್‌ಬಾತ್‌೯೯,* ಭಾವನಾ ಪ್ರಕಾಶನ, ಬೆಂಗಳೂರು

೩೭. ರವಿ ಬೆಳಗೆರೆ, ೨೦೦೩, *ಖಾಸ್‌ಬಾತ್‌೨೦೦೦,* ಭಾವನಾ ಪ್ರಕಾಶನ, ಬೆಂಗಳೂರು

೩೮. ರವಿ ಬೆಳಗೆರೆ, ೨೦೦೭, *ಖಾಸ್‌ಬಾತ್‌೨೦೦೧,* ಭಾವನಾ ಪ್ರಕಾಶನ, ಬೆಂಗಳೂರು

೩೯. ರವಿ ಬೆಳಗೆರೆ, ೨೦೦೮, *ಖಾಸ್‌ಬಾತ್‌೨೦೦೨,* ಭಾವನಾ ಪ್ರಕಾಶನ, ಬೆಂಗಳೂರು

೪೦. ರವಿ ಬೆಳಗೆರೆ, ೨೦೦೯, *ಖಾಸ್‌ಬಾತ್‌೨೦೦೩,* ಭಾವನಾ ಪ್ರಕಾಶನ, ಬೆಂಗಳೂರು

೪೧. ರವಿ ಬೆಳಗೆರೆ, ೨೦೧೧, *ಖಾಸ್‌ಬಾತ್‌೨೦೦೪,* ಭಾವನಾ ಪ್ರಕಾಶನ, ಬೆಂಗಳೂರು

೪೨. ರವಿ ಬೆಳಗೆರೆ, ೨೦೧೨, *ಖಾಸ್‌ಬಾತ್‌೨೦೦೫,* ಭಾವನಾ ಪ್ರಕಾಶನ, ಬೆಂಗಳೂರು

೪೩. ರವಿ ಬೆಳಗೆರೆ, ೨೦೧೦, *ಗಾಂಧೀ ಹತ್ಯೆ ಮತ್ತು ಗೋಡ್ಸೆ,* ಭಾವನಾ ಪ್ರಕಾಶನ, ಬೆಂಗಳೂರು

೪೪. ರವಿ ಬೆಳಗೆರೆ, ೧೯೮೪, *ಗೋಲಿಬಾರ್,* ಚಾರು ಪ್ರಕಾಶನ, ಬಳ್ಳಾರಿ

೪೫. ರವಿ ಬೆಳಗೆರೆ, ೨೦೦೮, *ಚಲಂ,* ಭಾವನಾ ಪ್ರಕಾಶನ, ಬೆಂಗಳೂರು

೪೬. ರವಿ ಬೆಳಗೆರೆ, ೨೦೦೧, *ಟೈಮ್ ಪಾಸ್,* ಭಾವನಾ ಪ್ರಕಾಶನ, ಬೆಂಗಳೂರು

೪೭. ರವಿ ಬೆಳಗೆರೆ, ೨೦೦೮, *ಡಿ ಕಂಪನಿ,* ಭಾವನಾ ಪ್ರಕಾಶನ, ಬೆಂಗಳೂರು

೪೮. ರವಿ ಬೆಳಗೆರೆ, ೨೦೦೮, *ದಂಗೆಯ ದಿನಗಳು,* ಭಾವನಾ ಪ್ರಕಾಶನ, ಬೆಂಗಳೂರು

೪೯. ರವಿ ಬೆಳಗೆರೆ, ೧೯೮೦, *ದಾರಿ,* ಪ್ರದೀಪ ಪ್ರಕಾಶನ, ಬಳ್ಳಾರಿ

೫೦. ರವಿ ಬೆಳಗೆರೆ, ೨೦೦೦, *ದಿ ಕಂಪೆನಿ ಆಫ್ ವಿಮೆನ್,* ಭಾವನಾ ಪ್ರಕಾಶನ, ಬೆಂಗಳೂರು

೫೧. ರವಿ ಬೆಳಗೆರೆ, ೨೦೦೫, *ದಿ ಗಾಡ್ ಫಾದರ್,* ಭಾವನಾ ಪ್ರಕಾಶನ, ಬೆಂಗಳೂರು

೫೨. ರವಿ ಬೆಳಗೆರೆ, ೧೯೯೫, *ನಕ್ಷತ್ರ ಜಾರಿದಾಗ,* ಚೆಂಡೂರ್ ಪ್ರಕಾಶನ, ಬೆಂಗಳೂರು

೫೩. ರವಿ ಬೆಳಗೆರೆ, ೨೦೦೯, *ನೀನಾ ಪಾಕಿಸ್ತಾನ?,* ಭಾವನಾ ಪ್ರಕಾಶನ, ಬೆಂಗಳೂರು

೫೪. ರವಿ ಬೆಳಗೆರೆ, ೨೦೦೩, *ನೀ ಹಿಂಗ ನೋಡಬ್ಯಾಡ ನನ್ನ,* ಭಾವನಾ ಪ್ರಕಾಶನ, ಬೆಂಗಳೂರು

೫೫. ರವಿ ಬೆಳಗೆರೆ, ೨೦೦೧, *ಪಾಪದ ಹೂವು ಪೂಲನ್,* ಭಾವನಾ ಪ್ರಕಾಶನ, ಬೆಂಗಳೂರು

೫೬. ರವಿ ಬೆಳಗೆರೆ, ೧೯೯೫, *ಪಾಪಿಗಳ ಲೋಕದಲ್ಲಿ ೦೧,* ಭಾವನಾ ಪ್ರಕಾಶನ, ಬೆಂಗಳೂರು

೫೭. ರವಿ ಬೆಳಗೆರೆ, ೧೯೯೭, *ಪಾಪಿಗಳ ಲೋಕದಲ್ಲಿ ೦೨,* ಧಾರಿಣಿ ಗ್ರಾಫಿಕ್ಸ್, ಬೆಂಗಳೂರು

೫೮. ರವಿ ಬೆಳಗೆರೆ, *ಪ್ಯಾಸಾ,* PDF Copy(ಪ್ರಕಟಣೆ ಅಲಭ್ಯವಿದ್ದ ಕಾರಣ PDF Copy ಬಳಸಿಕೊಳ್ಳಲಾಗಿದೆ)

೫೯. ರವಿ ಬೆಳಗೆರೆ, ೨೦೧೨, *ಪ್ರಮೋದ್ ಮಹಾಜನ್ ಹತ್ಯೆ,* ಭಾವನಾ ಪ್ರಕಾಶನ, ಬೆಂಗಳೂರು

೬೦. ರವಿ ಬೆಳಗೆರೆ, ೨೦೧೨, *ಪಾ.ವೆಂ. ಹೇಳಿದ ಕಥೆ,* ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು

೬೧. ರವಿ ಬೆಳಗೆರೆ, ೨೦೦೨, *ಬಾಟಮ್ ಐಟಮ್ ೦೧*, ಭಾವನಾ ಪ್ರಕಾಶನ, ಬೆಂಗಳೂರು
೬೨. ರವಿ ಬೆಳಗೆರೆ, ೨೦೦೩, *ಬಾಟಮ್ ಐಟಮ್ ೦೨*, ಭಾವನಾ ಪ್ರಕಾಶನ, ಬೆಂಗಳೂರು
೬೩. ರವಿ ಬೆಳಗೆರೆ, ೨೦೦೬, *ಬಾಟಮ್ ಐಟಮ್ ೦೩*, ಭಾವನಾ ಪ್ರಕಾಶನ, ಬೆಂಗಳೂರು
೬೪. ರವಿ ಬೆಳಗೆರೆ, ೨೦೧೨, *ಬಾಟಮ್ ಐಟಮ್ ೦೪*, ಭಾವನಾ ಪ್ರಕಾಶನ, ಬೆಂಗಳೂರು
೬೫. ರವಿ ಬೆಳಗೆರೆ, ೨೦೧೧, *ಬಾಟಮ್ ಐಟಮ್ ೦೫*, ಭಾವನಾ ಪ್ರಕಾಶನ, ಬೆಂಗಳೂರು
೬೬. ರವಿ ಬೆಳಗೆರೆ, ೨೦೧೧, *ಬಾಟಮ್ ಐಟಮ್ ೦೬*, ಭಾವನಾ ಪ್ರಕಾಶನ, ಬೆಂಗಳೂರು
೬೭. ರವಿ ಬೆಳಗೆರೆ, ೨೦೧೨, *ಬಾಬಾ ಬೆಡ್ ರೂಮ್ ಹತ್ಯಾಕಾಂಡ*, ಭಾವನಾ ಪ್ರಕಾಶನ, ಬೆಂಗಳೂರು
೬೮. ರವಿ ಬೆಳಗೆರೆ, ೨೦೧೨, *ಭೀಮಾ ತೀರದ ಹಂತಕರು*, ಭಾವನಾ ಪ್ರಕಾಶನ, ಬೆಂಗಳೂರು
೬೯. ರವಿ ಬೆಳಗೆರೆ, ೨೦೦೫, *ಬ್ಲ್ಯಾಕ್ ಫ್ರೈಡೇ*, ಭಾವನಾ ಪ್ರಕಾಶನ, ಬೆಂಗಳೂರು
೭೦. ರವಿ ಬೆಳಗೆರೆ, ೨೦೧೩, *ಮಧುಮೀತಾ ಶುಕ್ಲಾ ಹತ್ಯೆ*, ಬಿ.ಬಿ.ಸಿ. ಪಬ್ಲಿಕೇಷನ್ಸ್, ಬೆಂಗಳೂರು
೭೧. ರವಿ ಬೆಳಗೆರೆ, ೨೦೧೨, *ಮಾಟಗಾತಿ*, ಭಾವನಾ ಪ್ರಕಾಶನ, ಬೆಂಗಳೂರು
೭೨. ರವಿ ಬೆಳಗೆರೆ, ೨೦೦೧, *ಮಾಂಡೋವಿ*, ಭಾವನಾ ಪ್ರಕಾಶನ, ಬೆಂಗಳೂರು
೭೩. ರವಿ ಬೆಳಗೆರೆ, ೨೦೧೨, *ಮುಸ್ಲಿಂ*, ಭಾವನಾ ಪ್ರಕಾಶನ, ಬೆಂಗಳೂರು
೭೪. ರವಿ ಬೆಳಗೆರೆ, ೨೦೦೯, *ಮೇಜರ್ ಸಂದೀಪ್ ಹತ್ಯೆ*, ಭಾವನಾ ಪ್ರಕಾಶನ, ಬೆಂಗಳೂರು
೭೫. ರವಿ ಬೆಳಗೆರೆ, ೧೯೯೮, *ಮೈಸೂರಿನ ಸೀರಿಯಲ್ ಕಿಲ್ಲರ್ ರವೀಂದ್ರಪ್ರಸಾದ್*, ನೆಮ್ಮದಿ ಪ್ರಕಾಶನ, ಬೆಂಗಳೂರು
೭೬. ರವಿ ಬೆಳಗೆರೆ, ೨೦೧೨, *ರಂಗವಿಲಾಸ ಬಂಗಲೆಯ ಕೊಲೆಗಳು*, ಭಾವನಾ ಪ್ರಕಾಶನ, ಬೆಂಗಳೂರು
೭೭. ರವಿ ಬೆಳಗೆರೆ, ೨೦೧೩, *ರೇಷ್ಮೆ ರುಮಾಲು*, ಭಾವನಾ ಪ್ರಕಾಶನ, ಬೆಂಗಳೂರು
೭೮. ರವಿ ಬೆಳಗೆರೆ, ೧೯೯೮, *ಲವ್‌ಲವಿಕೆ ೦೧*, ಭಾವನಾ ಪ್ರಕಾಶನ, ಬೆಂಗಳೂರು
೭೯. ರವಿ ಬೆಳಗೆರೆ, *ಲವ್‌ಲವಿಕೆ ೦೨*, PDF Copy(ಪ್ರಕಟಣೆ ಅಲಭ್ಯವಿದ್ದ ಕಾರಣ PDF Copy ಬಳಸಿಕೊಳ್ಳಲಾಗಿದೆ)
೮೦. ರವಿ ಬೆಳಗೆರೆ, *ಲವ್‌ಲವಿಕೆ ೦೩*, PDF Copy(ಪ್ರಕಟಣೆ ಅಲಭ್ಯವಿದ್ದ ಕಾರಣ PDF Copy ಬಳಸಿಕೊಳ್ಳಲಾಗಿದೆ)
೮೧. ರವಿ ಬೆಳಗೆರೆ, ೨೦೧೧, *ಲವ್‌ಲವಿಕೆ ೦೪*, ಭಾವನಾ ಪ್ರಕಾಶನ, ಬೆಂಗಳೂರು
೮೨. ರವಿ ಬೆಳಗೆರೆ, ೧೯೮೯, *ವಿವಾಹ ಹುಟ್ಟು ಮತ್ತು ಪೂರ್ವೋತ್ತರ*, ನವಕರ್ನಾಟಕ ಪ್ರಕಾಶನ, ಬೆಂಗಳೂರು
೮೩. ರವಿ ಬೆಳಗೆರೆ, ೧೯೯೯, *ಸಂಜಯ*, ವಾರ್ತಾ ಮತ್ತು ಪ್ರಸಾರ ಇಲಾಖೆ, ಬೆಂಗಳೂರು
೮೪. ರವಿ ಬೆಳಗೆರೆ, ೨೦೧೨, *ಸರ್ಪ ಸಂಬಂಧ*, ಭಾವನಾ ಪ್ರಕಾಶನ, ಬೆಂಗಳೂರು
೮೫. ರವಿ ಬೆಳಗೆರೆ, ೨೦೧೨, *ಹಂತಕಿ ಐ ಲವ್ ಯೂ*, ಭಾವನಾ ಪ್ರಕಾಶನ, ಬೆಂಗಳೂರು
೮೬. ರವಿ ಬೆಳಗೆರೆ, ೨೦೧೧, *ಹಿಮಾಲಯನ್ ಬ್ಲಂಡರ್*, ಭಾವನಾ ಪ್ರಕಾಶನ, ಬೆಂಗಳೂರು
೮೭. ರವಿ ಬೆಳಗೆರೆ, ೨೦೧೨, *ಹಿಮಾಗ್ನಿ*, ಭಾವನಾ ಪ್ರಕಾಶನ, ಬೆಂಗಳೂರು
೮೮. ರವಿ ಬೆಳಗೆರೆ, ೨೦೦೩, *ಹೇಳಿ ಹೋಗು ಕಾರಣ*, ಭಾವನಾ ಪ್ರಕಾಶನ, ಬೆಂಗಳೂರು
೮೯. ರವಿ ಬೆಳಗೆರೆ, *ಮನಸ್ಸೇ...*, ಆಡಿಯೋ, ಭಾವನಾ ಆಡಿಯೋ ರಿಚ್
೯೦. ರವಿ ಬೆಳಗೆರೆ, *ಕನಸ್ಸೇ...*, ಆಡಿಯೋ, ಭಾವನಾ ಆಡಿಯೋ ರಿಚ್
೯೧. ರವಿ ಬೆಳಗೆರೆ, *ಒಲವೇ...*, ಆಡಿಯೋ, ಭಾವನಾ ಆಡಿಯೋ ರಿಚ್
೯೨. ರಾಘವೇಂದ್ರ ಪಾಟೀಲ(ಸಂ), ೨೦೦೧, *ಬೋದಿಲೇರನ ಸಖ*, ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ
೯೩. ಲಂಕೇಶ್.ಪಿ, ೨೦೦೪, *ಕಂಡದ್ದು ಕಂಡಹಾಗೆ*, ಪತ್ರಿಕೆ ಪ್ರಕಾಶನ, ಬೆಂಗಳೂರು
೯೪. ಲತಾ ಗುತ್ತಿ, ೨೦೦೭, *ಪ್ರವಾಸ ಸಾಹಿತ್ಯ : ವಿಶ್ವ ಸಂಸ್ಕೃತಿಗಳು*, ಸಚಿನ್ ಪಬ್ಲಿಷರ್ಸ್, ಬೆಂಗಳೂರು

೯೫. ವಿವಿಧ ಲೇಖಕರು, ೧೯೯೬, *ಆಧುನಿಕ ಕನ್ನಡ ಸಾಹಿತ್ಯ ರೂಪಗಳು*, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೯೬. ವಿವಿಧ ಲೇಖಕರು, ೧೯೯೩, *ಕನ್ನಡ ಸಾಹಿತ್ಯ ವಾಹಿನಿ*, ಸುವಿದ್ಯಾ ಪ್ರಕಾಶನ, ಬೆಂಗಳೂರು
೯೭. ವೆಂಕಟಸುಬ್ಬಯ್ಯ.ಜಿ, ೨೦೦೪, *ಎರವಲು ಪದಕೋಶ*, ನವಕರ್ನಾಟಕ ಪ್ರಕಾಶನ, ಬೆಂಗಳೂರು
೯೮. ಶರಣಮ್ಮ ಅ. ಗೊರೇಬಾಳ, ೨೦೦೨, *ಕನ್ನಡ ಸಾಹಿತ್ಯದಲ್ಲಿ ಆತ್ಮಚರಿತ್ರೆ*, ದಲಿತ ಸಾಹಿತ್ಯ ಪರಿಷತ್, ಗದಗ
೯೯. ಶರತ್ ಕಲ್ಕೋಡ್(ಸಂ), ೨೦೦೮, *ಫಸ್ಟ್ ಹಾಫ್*, ಭಾವನಾ ಪ್ರಕಾಶನ, ಬೆಂಗಳೂರು
೧೦೦. ಶ್ರೀಧರ್.ಎಸ್.ಎನ್, ೨೦೧೧, *ಇಂದಿನ ಕನ್ನಡ : ರಚನೆ ಮತ್ತು ಬಳಕೆ*, ಅಭಿನವ ಪ್ರಕಾಶನ, ಬೆಂಗಳೂರು
೧೦೧. ಹಳ್ಳಿಕೇರಿ.ಎಫ್.ಟಿ, ರವೀಂದ್ರನಾಥ್.ಕೆ.(ಸಂ), ೨೦೦೨, *ದಶಕದ ಕನ್ನಡ ಸಾಹಿತ್ಯ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ
೧೦೨. ಹಾಲತಿ ಸೋಮಶೇಖರ್(ಸಂ), ೨೦೦೬, *ಪಿ. ಲಂಕೇಶ್*, ನವಕರ್ನಾಟಕ ಪ್ರಕಾಶನ, ಬೆಂಗಳೂರು

೫
## ಪರಾಮರ್ಶನ ಗ್ರಂಥಗಳು


೦೧. ಅಂಗಡಿ.ಎಸ್.ಎಸ್, ೨೦೦೮, *ಕರ್ನಾಟಕ ಬುಡಕಟ್ಟು ಭಾಷೆ*, ಸೃಷ್ಟಿ ಪಬ್ಲಿಕೇಷನ್ಸ್, ಬೆಂಗಳೂರು

೦೨. ಅಗ್ನಿ ಶ್ರೀಧರ, ೨೦೦೪, *ದಾದಾಗಿರಿಯ ದಿನಗಳು*, ಅಗ್ನಿ ಪ್ರಕಾಶನ, ಬೆಂಗಳೂರು

೦೩. ಅಗ್ನಿ ಶ್ರೀಧರ, ೨೦೦೭, *ದಾದಾಗಿರಿಯ ದಿನಗಳು ಭಾಗ-೨*, ಅಗ್ನಿ ಪ್ರಕಾಶನ, ಬೆಂಗಳೂರು

೦೪. ಅಗ್ನಿ ಶ್ರೀಧರ, ೨೦೦೭, *ದಾದಾಗಿರಿಯ ದಿನಗಳು ಭಾಗ-೩*, ಅಗ್ನಿ ಪ್ರಕಾಶನ, ಬೆಂಗಳೂರು

೦೫. ಅಗ್ನಿ ಶ್ರೀಧರ, ೨೦೧೧, *ಆಧುನಿಕ ಮಾಂತ್ರಿಕರ ಜಾಡಿನಲ್ಲಿ*, ಅಂಕಿತ ಪುಸ್ತಕ, ಬೆಂಗಳೂರು

೦೬. ಅ.ನ.ಕೃ, ೧೯೬೧, *ಸಾಹಿತ್ಯ ಮತ್ತು ಕಾಮ ಪ್ರಚೋದನೆ*, ಸಾಗರ್ ಪ್ರಕಾಶನ, ಬೆಂಗಳೂರು

೦೭. ಅಮರೇಶ ನುಗಡೋಣಿ(ಸಂ), ೨೦೧೩, *ಸರ್ವಜ್ಞನ ತ್ರಿಪದಿಗಳು ಅನುಸಂಧಾನದ ನೆಲೆಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೮. ಆಮೂರ.ಜಿ.ಎಸ್, ೨೦೦೦, *ಕನ್ನಡ ಕಥನ ಸಾಹಿತ್ಯ : ಸಣ್ಣ ಕಥೆ*, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು

೦೯. ಆಮೂರ.ಜಿ.ಎಸ್, ೨೦೦೬, *ಕನ್ನಡ ಕಥನ ಸಾಹಿತ್ಯ : ಕಾದಂಬರಿ*, ಸಪ್ನ ಬುಕ್ ಹೌಸ್, ಬೆಂಗಳೂರು

೧೦. ಆಮೂರ.ಜಿ.ಎಸ್, ೨೦೦೧, *ಕಥನ ಶಾಸ್ತ್ರ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೧. ಎಚ್ಚೆಸ್ಕೆ, ೨೦೦೪, *ಬಳಕೆಯ ಭಾಷೆ*, ಚೇತನ ಬುಕ್ ಹೌಸ್, ಮೈಸೂರು

೧೨. *ಕನ್ನಡ ರತ್ನಕೋಶ*, ೨೦೧೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೩. *ಕನ್ನಡ ಸಂಕ್ಷಿಪ್ತ ನಿಘಂಟು*, ೨೦೧೩, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೪. ಕರೀಗೌಡ ಬೀಚನಹಳ್ಳಿ, ೧೯೯೧, *ವ್ಯಷ್ಟಿ ಸಮಷ್ಟಿ*, ಅಜಂತ ಪ್ರಕಾಶನ, ಬೆಂಗಳೂರು

೧೫. ಕೀರ್ತಿನಾಥ ಕುರ್ತುಕೋಟಿ, ೧೯೯೨, *ಬಯಲು-ಆಲಯ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬. ಕುಸುಮಾಕರ ದೇವರಗೆಣ್ಣೂರು, ೧೯೯೩, *ನಿರೀಂದ್ರಿಯ*, ದಿವಾಣಜಿ ಪ್ರಕಾಶನ ಡೊಂಬಿವಿಲಿ ಠಾಣೆ ಮಹಾರಾಷ್ಟ್ರ

೧೭. ಕೃಷ್ಣಪರಮೇಶ್ವರ ಭಟ್ಟ, ೨೦೧೩, *ಭಾಷೆ ಮತ್ತು ಸಾಮಾಜಿಕ ಸಂದರ್ಭ*, ಅಭಿನವ ಪ್ರಕಾಶನ, ಬೆಂಗಳೂರು

೧೮. ಗೋಪಾಲಕೃಷ್ಣಯ್ಯ.ಕೆ.ಎನ್, ೨೦೦೩, *ಭಾಷೆಯ ಬೆಳಕು*, ನವಕರ್ನಾಟಕ ಪ್ರಕಾಶನ, ಬೆಂಗಳೂರು

೧೯. ಚಂದ್ರಶೇಖರ ಆಲೂರು, ೨೦೧೦, *ಸೂರ್ಯ ಸಮುದ್ರದಲ್ಲಿ ಮುಳುಗುವುದಿಲ್ಲ*, ಪಲ್ಲವ ಪ್ರಕಾಶನ, ಚನ್ನಪಟ್ಟಣ

೨೦. ಚಂದ್ರಶೇಖರ ಪಾಟೀಲ(ಸಂ), ೧೯೯೨, *ಸಂಕ್ರಮಣ ಸಾಹಿತ್ಯ ಸಂ-೦೧*, ಸಂಕ್ರಮಣ ಪ್ರಕಾಶನ, ಧಾರವಾಡ

೨೧. ಚಂದ್ರಿಕಾ. ಪಿ(ಸಂ), ೧೯೯೯, *ಯಾರ ಜಪ್ತಿಗೂ ಸಿಗದ ನವಿಲುಗಳು*, ಅಭಿನವ ಪ್ರಕಾಶನ, ಬೆಂಗಳೂರು

೨೨. ಚಲಂ: ಮೂಲ, ವೀರಭದ್ರ: ಅನು, ೧೯೮೯, *ಮೈದಾನ*, ಸಂವಹನ ಪ್ರಕಾಶನ, ಮೈಸೂರು

೨೩. ಜಾನಕಿ, ೨೦೦೬, *ಜಾನಕಿ ಕಾಲಂ*, ಛಂದ ಪುಸ್ತಕ, ಬೆಂಗಳೂರು

೨೪. ಜೋಗಿ, ೨೦೧೦, *ರವಿ ಕಾಣದ್ದು,* ಅಂಕಿತ ಪುಸ್ತಕ, ಬೆಂಗಳೂರು
೨೫. ಜೋಗಿ, ೨೦೧೦, *ಜೋಗಿ ಮನೆ,* ಅಂಕಿತ ಪುಸ್ತಕ, ಬೆಂಗಳೂರು
೨೬. ತಿರುಮಲೇಶ್.ಕೆ.ವಿ, ೨೦೦೭, *ಉಲ್ಲೇಖ,* ಅಭಿನವ ಪ್ರಕಾಶನ, ಬೆಂಗಳೂರು
೨೭. ತಿರುಮಲೇಶ್.ಕೆ.ವಿ, ೨೦೧೧, *ಇನ್ನಷ್ಟು ಕನ್ನಡ,* ಅಭಿನವ ಪ್ರಕಾಶನ, ಬೆಂಗಳೂರು
೨೮. ತಿರುಮಲೇಶ್.ಕೆ.ವಿ, ೧೯೯೯, *ಅಸ್ತಿತ್ವವಾದ,* ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೨೯. ತಿರುಮಲೇಶ್.ಕೆ.ವಿ, ೨೦೦೬, *ನಮ್ಮ ಕನ್ನಡ,* ಅಭಿನವ ಪ್ರಕಾಶನ, ಬೆಂಗಳೂರು
೩೦. ತಿರುಮಲೇಶ್.ಕೆ.ವಿ, ೨೦೦೯, *ಆಳ-ನಿರಾಳ,೧-೨,* ಅಭಿನವ ಪ್ರಕಾಶನ, ಬೆಂಗಳೂರು
೩೧. ನಟರಾಜ.ಮೈ.ಶ್ರೀ(ಸಂ), ೨೦೦೯, *ಕನ್ನಡ ಕಾದಂಬರಿ ಲೋಕದಲದಲಿ..ಹೀಗೆ ಹಲವು,* ಕನ್ನಡ ಸಾಹಿತ್ಯ ರಂಗ ನ್ಯೂಜೆರ್ಸಿ, ಅಭಿನವ ಪ್ರಕಾಶನ, ಬೆಂಗಳೂರು
೩೨. ನಾಗಭೂಷಣಸ್ವಾಮಿ.ಓ.ಎಲ್, ೧೯೯೩, *ಭಾಷಾಂತರ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ
೩೩. ನಾಗಭೂಷಣ.ಡಿ.ಎಸ್, ೨೦೦೫, *ಅನೇಕ,* ಲೋಹಿಯಾ ಪ್ರಕಾಶನ, ಬಳ್ಳಾರಿ
೩೪. ನಾಗರಾಜ್.ಡಿ.ಆರ್, ೨೦೦೯, *ಅಮೃತ ಮತ್ತು ಗರುಡ,* ಅಕ್ಷರ ಪ್ರಕಾಶನ, ಹೆಗ್ಗೋಡು
೩೫. ನಾಯಕ.ಜಿ.ಎಚ್, ೨೦೧೦, *ಶತಮಾನದ ಕನ್ನಡ ಸಾಹಿತ್ಯ ಸಂ-೦೧,* ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ
೩೬. ನಾರಾಯಣ.ಕೆ.ವಿ, ೧೯೯೦, *ಶೈಲಿ ಶಾಸ್ತ್ರ,* ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೩೭. ನಾರಾಯಣ.ಕೆ.ವಿ(ಸಂ), ೨೦೦೯, *ಭಾಷೆ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೩೮. ನಾರಾಯಣ.ಕೆ.ವಿ, ೨೦೦೫, *ನಮ್ಮೊಡನೆ ನಮ್ಮನುಡಿ,* ಲೋಹಿಯಾ ಪ್ರಕಾಶನ, ಬಳ್ಳಾರಿ
೩೯. ನಾರಾಯಣ.ಕೆ.ವಿ(ಸಂ), ೨೦೦೬, *ಕನ್ನಡ ಶೈಲಿ ಕೈಪಿಡಿ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೪೦. ನಾರಾಯಣ.ಕೆ.ವಿ(ಸಂ), ೧೯೮೩, *ಸಾಹಿತ್ಯ ವಿಮರ್ಶೆ-೧೯೮೧,* ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೪೧. ಪ್ರಧಾನ್ ಗುರುದತ್ತ್, ೨೦೦೭, *ಭಾಷಾಂತರ ಕಲೆ,* ಸಪ್ನ ಬುಕ್ ಹೌಸ್, ಬೆಂಗಳೂರು
೪೨. ಪೂರ್ಣಚಂದ್ರ ತೇಜಸ್ವಿ, ೨೦೦೭, *ಹುಲಿಯೂರಿನ ಸರಹದ್ದು,* ಪುಸ್ತಕ ಪ್ರಕಾಶನ, ಮೈಸೂರು
೪೩. ಭೈರಪ್ಪ.ಎಸ್.ಎಲ್, ೨೦೦೩, *ಕಥೆ ಮತ್ತು ಕಥಾವಸ್ತು,* ಸಾಹಿತ್ಯ ಭಂಡಾರ, ಬೆಂಗಳೂರು
೪೪. ಮಾರ್ಕ್ವೆಜ್: ಮೂಲ, ಪ್ರಸನ್ನ.ಎ.ಎನ್: ಅನು, ೨೦೦೫, *ನೂರು ವರ್ಷದ ಏಕಾಂತ,* ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ
೪೫. ಮೂರ್ತಿರಾವ್.ಎ.ಎನ್, ೧೯೮೨, *ಸಾಹಿತ್ಯ ಮತ್ತು ಸತ್ಯ,* ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು
೪೬. ಯರವಿನತೆಲಿಮಠ.ಸಿ.ಆರ್, ೨೦೧೧, *ಪ್ರಚಲಿತ ವಿಮರ್ಶೆ ಮತ್ತು ಸಿದ್ಧಾಂತಗಳು,* ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ, ಗುಲಬರ್ಗಾ
೪೭. ಯಶವಂತ ಚಿತ್ತಾಲ, ೧೯೯೦, *ಸಾಹಿತ್ಯ ಸೃಜನಶೀಲತೆ ಮತ್ತು ನಾನು,* ಗೀತಾ ಬುಕ್ ಹೌಸ್ : ಪ್ರಕಾಶಕರು, ಮೈಸೂರು
೪೮. ರಂಗನಾಥ ರಾವ್.ಜಿ.ಎನ್, ೨೦೦೬, *ಪತ್ರಿಕೋದ್ಯಮ,* ಕಾಮಧೇನು, ಬೆಂಗಳೂರು
೪೯. ರಹಮತ್ ತರೀಕೆರೆ, ೨೦೧೨, *ಕನ್ನಡ ಸಾಹಿತ್ಯದ ವಾಗ್ವಾದಗಳು,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೫೦. ರಾಜಪುರೋಹಿತ.ಬಿ.ಬಿ, ೨೦೦೫, *ಭಾಷೆ ಮತ್ತು ಅರ್ಥಗಳ ಗುಟ್ಟು,* ಪ್ರಕಾಶಕರು, ಡಾ.ಬಿ.ಬಿ. ರಾಜಪುರೋಹಿತ, ಮೈಸೂರು
೫೧. ರಾಜೇಂದ್ರ ಚೆನ್ನಿ, ೨೦೦೪, *ನಡು ಹಗಲಿನಲ್ಲಿ ಕಂದಿಲುಗಳು,* ಲೋಹಿಯಾ ಪ್ರಕಾಶನ, ಬಳ್ಳಾರಿ

೫೨. ರಾಮಚಂದ್ರನ್.ಸಿ.ಎನ್, ೨೦೧೩, *ಸಾಹಿತ್ಯ ವಿಮರ್ಶೆ ಮತ್ತು ವಸಾಹತೋತ್ತರ ಚಿಂತನೆ,* ಅಂಕಿತ ಪುಸ್ತಕ, ಬೆಂಗಳೂರು

೫೩. ರಾಮಚಂದ್ರನ್.ಸಿ.ಎನ್, ೨೦೦೬, *ಬಯಲು-ರೂಪ,* ಸಪ್ನ ಬುಕ್ ಹೌಸ್, ಬೆಂಗಳೂರು

೫೪. ಲಕ್ಷ್ಮಣ.ಎಂ. ೨೦೧೧, *ಡಾ. ಬಸವರಾಜ ಮಲಶೆಟ್ಟಿ : ಬದುಕು ಬರಹ,* ಕರಿಭೀಮಣ್ಣನವರ, ಸಿಂಧು ಸಿದ್ಧಾರ್ಥ ಪ್ರಕಾಶನ, ಬಳ್ಳಾರಿ

೫೫. ಶಿವರಾಮ ಪಡಿಕ್ಕಲ್, ೨೦೦೧, *ನಾಡು-ನುಡಿಯ ರೂಪಕ,* ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ

೫೬. ಲಂಕೇಶ್.ಪಿ, ೧೯೯೬, *ಬಿರುಕು,* ಪತ್ರಿಕೆ ಪ್ರಕಾಶನ, ಬೆಂಗಳೂರು

೫೭. ಲಂಕೇಶ್.ಪಿ, ೨೦೦೩, *ಮುಸ್ಸಂಜೆ ಕಥಾ ಪ್ರಸಂಗ,* ಪತ್ರಿಕೆ ಪ್ರಕಾಶನ, ಬೆಂಗಳೂರು

೫೮. ಲಂಕೇಶ್.ಪಿ, ೨೦೦೬, *ಪ್ರಸ್ತುತ,* ಲಂಕೇಶ್ ಪ್ರಕಾಶನ, ಬೆಂಗಳೂರು

೫೯. ಲಂಕೇಶ್.ಪಿ, ೨೦೦೭, *ಅಕ್ಕ,* ಲಂಕೇಶ್ ಪ್ರಕಾಶನ, ಬೆಂಗಳೂರು

೬೦. ಲಕ್ಷ್ಮೀನಾರಾಯಣ.ಎ.ಎನ್, ೧೯೯೯, *ನಿರಂತರ,* ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ

೬೧. ಲಿಂಗದೇವರು ಹಳೆಮನೆ(ಸಂ), ೨೦೧೦, *ಕನ್ನಡ ಭಾಷಾ ಅಧ್ಯಯನ,* ಅರುಹು ಕುರುಹು ಪ್ರಕಾಶಕರು, ಮೈಸೂರು

೬೨. ವಾಮದೇವ ತಳವಾರ, ೨೦೧೧, *ಸಾಹಿತ್ಯ-ಸಂಸ್ಕೃತಿ,* ಸೃಷ್ಟಿ ಪಬ್ಲಿಕೇಷನ್ಸ್ ಬೆಂಗಳೂರು

೬೩. ವಿಜಯ ಕುಮಾರ್ ಅವರೇಕಾಡು, ೨೦೦೪, *ಭಾಷಾ ಸೌಜನ್ಯ,* ತಳಗವಾದಿ ಪ್ರಕಾಶನ, ಮೈಸೂರು

೬೪. ವಿದ್ಯಾಶಂಕರ.ಎಸ್, ೨೦೦೬, *ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ,* ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೬೫. ವಿವಿಧ ಲೇಖಕರು, (ಪ್ರ.ಸಂ) ರಾಮಚಂದ್ರಪ್ಪ ಬರಗೂರು, ೧೯೯೨, *ನಿರಂಜನರ ಸಾಹಿತ್ಯ ಮತ್ತು ಸಮಕಾಲೀನತೆ,* ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೬೬. ಶಿವರಾಮ್.ಬಿ.ಕೆ, ೨೦೧೨, *ಪೊಲೀಸ್ ಕಂಡ ಕಥೆಗಳು,* ವಸಂತ ಪ್ರಕಾಶನ, ಬೆಂಗಳೂರು

೬೭. ಶಿವರುದ್ರಪ್ಪ.ಜಿ.ಎಸ್, ೧೯೯೦, *ಕನ್ನಡ ಸಾಹಿತ್ಯ ಸಂದರ್ಭ,* ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು

೬೮. ಶ್ರೀನಿವಾಸಮೂರ್ತಿ.ಕಾ.ವೆಂ(ಸಂ), ೧೯೯೮, *ಕನ್ನಡ ಸಾಹಿತ್ಯ ಮತ್ತು ಕರ್ನಾಟಕತ್ವ,* ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೬೯. ಶೈಲಜ.ಎಚ್.ಟಿ(ಸಂ), ೨೦೧೦, *ಸಾಹಿತ್ಯ ವಿಮರ್ಶೆಯ ತತ್ವಗಳು,* ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೭೦. ಸಂಗಮೇಶ ಸವದತ್ತಿಮಠ, ೧೯೯೯, *ಭಾಷಾಲೇಖ,* ರೂಪರಶ್ಮಿ ಪ್ರಕಾಶನ, ಗುಲಬರ್ಗಾ

೭೧. ಸತ್ಯಕಾಮ, ೨೦೦೬, *ಪಂಚಮಗಳ ನಡುವೆ,* ಐ.ಬಿ.ಎಚ್, ಪ್ರಕಾಶನ, ಬೆಂಗಳೂರು

೭೨. ಸಿದ್ದಣ್ಣ.ಬಿ.ಉತ್ನಾಳ, ೧೯೯೦, *ಕನ್ನಡ ಕಾದಂಬರಿಗಲ್ಲಿ ಪ್ರಾದೇಶಿಕತೆ,* ಅನುಪಮ ಪ್ರಕಾಶನ, ಅಥಣಿ

೭೩. ಸುರೇಶ್ ಸೋಮಪುರ: ಮೂಲ, ನಾಗರಾಜ ರಾವ್.ಎಂ.ವಿ: ಅನು, ೨೦೦೫, *ಅಘೋರಿಗಳ ನಡುವೆ,* ಅಂಕಿತ ಪುಸ್ತಕ, ಬೆಂಗಳೂರು

೭೪. ಸೋಮಶೇಖರಗೌಡ, ೨೦೧೦, *ಭಾಷೆ ರಚನೆ ಬಳಕೆ,* ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೭೫. ಹೆನ್ರಿ ಹಡ್ಸನ್: ಮೂಲ, ಸಿ.ಪಿ.ಕೆ: ಅನು, ೨೦೦೯, *ಸಾಹಿತ್ಯ ಪ್ರವೇಶ,* ಚೇತನ ಬುಕ್ ಹೌಸ್, ಮೈಸೂರು

76. BHaradwaj's.D.K, 2003, *GEM Dictionary,* RamaShraya Publications, Dharwad

**ಎಂ.ಫಿಲ್ ಮತ್ತು ಪಿಎಚ್.ಡಿ ಪ್ರಬಂಧಗಳು**

೦೧. ಗಂಗಪ್ಪ ಕೆ, ೨೦೦೮, *ಮಹಿಳಾ ಪುರವಣಿಗಳ ಭಾಷಿಕ ಅಧ್ಯಯನ*, ಕನ್ನಡ ವಿಶ್ವವಿದ್ಯಾಲಯ, ಹಂಪಿ (ಎಂ.ಫಿಲ್)

೦೨. ನಿಂಗಪ್ಪ.ಬ. ಸಂಗ್ರೇಜಿಕೊಪ್ಪ, ೨೦೧೧-೧೨, *ರವಿ ಬೆಳಗೆರೆಯವರ ಪ್ರಾತಿನಿಧೀಕ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರ ಚಿತ್ರಣದ ಸ್ವರೂಪ*, ಕನ್ನಡ ವಿಶ್ವವಿದ್ಯಾಲಯ, ಹಂಪಿ (ಎಂ.ಫಿಲ್)

೦೩. ಮತೋಳಿ.ಎಸ್.ಬಿ, ೨೦೦೭, *ದು.ನಿಂ. ಬೆಳಗಲಿ ಬದುಕು-ಬರಹ : ಒಂದು ಅಧ್ಯಯನ*, ವಿಮೋಚನ ಪ್ರಕಾಶನ, ಅಥಣಿ

೦೪. ಮೋಹನ್ ರಾವ್.ಸಿ.ಎನ್, ೨೦೧೦, *ಪಿ. ಲಂಕೇಶ್‌ರವರ ಕಥೆಗಳು- ಒಂದು ಅಧ್ಯಯನ*, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಂಶೋಧನ ಕೇಂದ್ರ, ಬೆಂಗಳೂರು (ಎಂ.ಫಿಲ್)

೦೫. ರಂಗನಾಥ ಕಂಟನಕುಂಟೆ, ೨೦೦೯, *ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ*, ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ

೦೬. ರತ್ನಮ್ಮ.ಕೆ.ಎಸ್, ೧೯೯೭, *ಗೋಕಾಕರ ಗದ್ಯ ಸಾಹಿತ್ಯ*, ಕಾವ್ಯಶ್ರೀ ಪ್ರಕಾಶನ, ಮೈಸೂರು

೦೭. ರಾಜೇಂದ್ರ, ೨೦೦೯-೧೦, *ರವಿ ಬೆಳಗೆರೆ ಅವರ ಕಥೆಗಳು : ಸಾಹಿತಿಕ ವಿಶ್ಲೇಷಣೆ*, ಕನ್ನಡ ವಿಶ್ವವಿದ್ಯಾಲಯ, ಹಂಪಿ (ಎಂ.ಫಿಲ್)

೦೮. ಶಂಕ್ರಪ್ಪ, ೨೦೦೮, *ಕನ್ನಡ ದಿನಪತ್ರಿಕೆಗಳಲ್ಲಿ ಅನ್ಯಭಾಷಾ ಬಳಕೆ*, ಕನ್ನಡ ವಿಶ್ವವಿದ್ಯಾಲಯ, ಹಂಪಿ (ಎಂ.ಫಿಲ್)

೦೯. ಶಿವಾನಂದ ಗಾಳಿ, ೧೯೯೫, *ಮಿರ್ಜಿ ಅಣ್ಣಾರಾಯರು- ಒಂದು ಅಧ್ಯಯನ*, ಸುಂದರ ಪ್ರಕಾಶನ, ಧಾರವಾಡ

೧೦. ಸುಜಾತ.ಬಿ, ೨೦೦೯, *ವೈದೇಹಿಯವರ ಕಥಾ ಸಾಹಿತ್ಯ*, ಎಂ.ಎಲ್.ಶ್ರೀಕಂಠೇಗೌಡ ಸಂಶೋನ ಕೇಂದ್ರ, ಮಂಡ್ಯ (ಎಂ.ಫಿಲ್)

೧೧. ಹೂಲೆಪ್ಪ ಸಂಡೂರ, ೨೦೦೬, *ದೂರದರ್ಶನದಲ್ಲಿ ಕ್ರೈಮ್ ನ್ಯೂಸ್: ಭಾಷಿಕ ಅಧ್ಯಯನ*, ಕನ್ನಡ ವಿಶ್ವವಿದ್ಯಾಲಯ, ಹಂಪಿ (ಎಂ.ಫಿಲ್)

**ಪತ್ರಿಕೆಗಳು**

೦೧. ಅಗ್ನಿ

೦೨. ಅಚ್ಚರಿ

೦೩. ಈ ಭಾನುವಾರ

೦೪. ಓ ಮನಸ್ಸೇ...

೦೫. ಗೌರಿ ಲಂಕೇಶ್

೦೬. ಲಂಕೇಶ್ ಪತ್ರಿಕೆ

೦೭. ಹಾಯ್ ಬೆಂಗಳೂರ್

೦೮. ಹಿಮಾಗ್ನಿ

**ಅಂತರ್ಜಾಲ ತಾಣಗಳು**

http://ravibelagere.com

http://ravibelagere.wordpress.com

http://thatskannada.oneinda.in/column/ravibelagere/

www.kendasampige.com/articale.php?id=307

www.en.wikipedia.org/wiki/Ravi-Belagere

www.in.com/ravi-belagere/profile-229673.html

http://ravibelgere.wordpress.com/ಓ-ಮನಸೇ/

